ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ ೩೮

# ಶ್ರೀಮದ್ವಾಯುಮಹಾಪುರಾಣಂ

(ಕನ್ನಡ ಅನುವಾದ ಸಹಿತ)

**ಸಂಚಿಕೆ ೫**

---

ಅನುವಾದಕ :

ಸಾಹಿತ್ಯ, ವೇದಾಂತ, ಕರ್ಣಾಟಕ, ಆಸ್ಥಾನ, ವಿದ್ವಾನ್

**ಆರ್. ಸೇತುಮಾಧವಾಚಾರ್**

ಪಂಡಿತ, ಗೌ॥ ಟ್ರೈನಿಂಗ್ ಕಾಲೇಜ್, ಮೈಸೂರು.

ಮೈಸೂರು.

ಶ್ರೀ ಶಾರದಾ ಎಲೆಕ್ಟ್ರಿಕ್ ಪ್ರೆಸ್

೧೯೪೮

# ಪೀಠಿಕೆ

ಈಗ ಶ್ರೀಮದ್ವಾಯುಮಹಾಪುರಾಣದಲ್ಲಿ ಐದನೆಯ ಸಂಚಿಕೆಯು ಮುದ್ರಿತವಾಗಿದೆ. ಇದರಲ್ಲಿ ದಾನಫಲಗಳು ವಿಶೇಷವಾಗಿ ವರ್ಣಿತವಾಗಿವೆ. ಈ ಲೋಕದಲ್ಲಿ ಸಕಲೈಶ್ವರ್ಯಸಂಪನ್ನರಾದ ಮಹಾರಾಜರೂ, ಶ್ರೀಮಂತರೂ ಮತ್ತು ದರಿದ್ರರೂ ಇರುವ ವಿಷಯವು ಸರ್ವರಿಗೂ ವಿದಿತವಾಗಿಯೇ ಇರುತ್ತದೆ. ಹೀಗೆ ಶ್ರೀಮಂತರು ಮಹದೈಶ್ವರ್ಯಗಳಿಂದ ಸಕಲ ಭೋಗಗಳನ್ನು ಅನುಭವಿಸುವುದಕ್ಕೂ (ದರಿದ್ರರು, ಬಡತನದಿಂದ ಮಹಾದುಃಖಗಳನ್ನು ಪಡೆಯುವುದಕ್ಕೂ) ಕಾರಣಗಳು ಇದ್ದೇ ಇರಬೇಕು. ಇಲ್ಲದಿದ್ದರೆ ಸೃಷ್ಟಿಕರ್ತನಿಗೆ (ಪಕ್ಷಪಾತವು) ವೈಷಮ್ಯವು ಬರಬೇಕಾಗುವುದು. ಆದುದರಿಂದ ಇದಕ್ಕೆ ಬೇರೇ ಕಾರಣಗಳಿರಲೇಬೇಕು. ಅಂತಹ ಕಾರಣಗಳನ್ನು ವಿಚಾರಮಾಡುವುದು ಸೂಕ್ತವಾಗಿದೆ. ಅದು ಯಾವುದೆಂದರೆ "ನಾದತ್ತಮುಪತಿಷ್ಠತೇ" ಎಂಬ ಪ್ರಮಾಣಾನುಗುಣವಾಗಿ, ಮನುಷ್ಯರು ಪೂರ್ವಜನ್ಮದಲ್ಲಿ ಮಾಡಿದ ಪುಣ್ಯಪಾಪಕರ್ಮಗಳೇ ಆಗಿರುತ್ತವೆ. ಅಂದರೆ ಯಾವ ಪುರುಷರು ಪೂರ್ವದಲ್ಲಿ ಯೋಗ್ಯರಾದ ಸತ್ಪಾತ್ರರಿಗೆ ಭಕ್ತಿಯಿಂದ ಸಕಲ ವಸ್ತುಗಳನ್ನೂ ದಾನಮಾಡಿರುವರೋ, ಅವರು ಈ ಜನ್ಮದಲ್ಲಿ ಸಕಲಸುಖಗಳನ್ನೂ ಅನುಭವಿಸುವರು. ಯಾವ ಪುರುಷರು ಗೋದಾನ, ಭೂದಾನ ಇವೇ ಮೊದಲಾದ ಸಕಲವಸ್ತುಗಳನ್ನೂ ಶ್ರದ್ಧೆಯಿಂದ ಸತ್ಪಾತ್ರರಿಗೆ ದಾನಮಾಡಿರುವರೋ ಅವರು ಈ ಲೋಕದಲ್ಲಿ ಮಹಾರಾಜರಾಗಿ ಜನಿಸಿ, ಸರ್ವಸುಖಗಳನ್ನೂ ಅನುಭವಿಸುವರು. ಯಾವನು ಕೆಲವು ದಾನಗಳನ್ನು ಮಾತ್ರ ಮಾಡಿರುವನೋ, ಅವನು ಶ್ರೀಮಂತನಾಗಿ ಜನಿಸಿ, ಗ್ರಾಮನಗರಾದಿಗಳಿಗೆ ಯಜಮಾನನಾಗಿ ಯೋಗ್ಯಸುಖವನ್ನು ಪಡೆಯುವನು. ಯಾವನು ಯೋಗ್ಯತೆಯಿದ್ದರೂ ಪಿತೃಕಾರ್ಯಾದಿಗಳಲ್ಲಿ ಶ್ರದ್ಧೆಯಿಲ್ಲದೆ ಯಾವ ದಾನಾದಿಗಳನ್ನೂ ಮಾಡಿರುವುದಿಲ್ಲವೋ ಅವನು ದರಿದ್ರನಾಗಿ ಹುಟ್ಟಿ ಮನೆಮಠಗಳಿಲ್ಲದೇ ಭಿಕ್ಷುಕನಾಗಿ ತಿಂಡಿಗಿಲ್ಲದೆ ಬೀದಿಕೇರಿಗಳಲ್ಲಿ ಅಲೆದಾಡುವನು. ಆದುದರಿಂದ ಸಿರಿತನಕ್ಕೂ, ಬಡತನಕ್ಕೂ ದಾನಾದಿಗಳು ಕಾರಣಗಳೇ ಹೊರತು ಬೇರೆ ಯಾವ ಕಾರಣವೂ ಇಲ್ಲವೆಂದು ಪುರಾಣಗಳಲ್ಲಿ ಉಕ್ತವಾಗಿದೆ. ಮತ್ತು ಊಷರಭೂಮಿಯಲ್ಲಿ ಅಕಾಲದಲ್ಲಿ ಬಿತ್ತಿದ ಬೀಜಗಳು ಫಲಕೊಡದೇ ವ್ಯರ್ಥವಾಗುವಂತೆ, ಅಯೋಗ್ಯರಿಗೆ ಅಕಾಲದಲ್ಲಿ ಕೊಟ್ಟ ದಾನವು ನಿರರ್ಥಕವಾಗುವುದು. ಉತ್ತಮವಾದ ಭೂಮಿಯಲ್ಲಿ ಸಕಾಲದಲ್ಲಿ ಬಿತ್ತಿದ ಬೀಜಗಳಂತೆ, ಸತ್ಪಾತ್ರರಿಗೆ ಕಾಲವಿಶೇಷದಲ್ಲಿ ಕೊಟ್ಟ ದಾನವು ಮಹಾಫಲಪ್ರದವಾಗುವುದು. ಸತ್ಪಾತ್ರರಿಗೆ ಕೊಟ್ಟ ದಾನದಿಂದ ದೇವತೆಗಳು ತೃಪ್ತರಾಗುವರು. ಅಯೋಗ್ಯರ ದಾನದಿಂದ ರಾಕ್ಷಸರು ತೃಪ್ತರಾಗಿ, ಉಪಕಾರಕ್ಕೆ ಪ್ರತಿಯಾಗಿ ಅಪಕಾರವನ್ನೇ ಮಾಡುವರು. ಆದುದರಿಂದ ಸಿರಿತನಕ್ಕೆ ದಾನವೂ, ಬಡತನಕ್ಕೆ ಲೋಭವೂ, ಕಾರಣಗಳೆಂದು ವ್ಯಕ್ತವಾಗುತ್ತವೆ.

ಈ ಸಂಚಿಕೆಯಲ್ಲಿ ಯಯಾತಿರಾಜನ ಕಥೆಯು ಉಕ್ತವಾಗಿದೆ. ಆ ರಾಯನಿಗೆ ದೇವಯಾನಿ, ಶರ್ಮಿಷ್ಠೆಯೆಂಬ ಇಬ್ಬರು ಪತ್ನಿಯರಿದ್ದರು. ದೇವಯಾನಿಯು ಶುಕ್ರಾಚಾರ್ಯನ ಕುಮಾರಿಯು. ರಾಜನು ಮಾಡಿದ ಅಪಚಾರದಿಂದ ಶುಕ್ರಾಚಾರ್ಯನು ವೃದ್ಧನಾಗುವಂತೆ ರಾಜನಿಗೆ ಶಾಪವನ್ನು ಕೊಟ್ಟನು. ಆಗ ರಾಜನು ಪ್ರಾರ್ಥಿಸಲು, ಬೇಕಾದರೆ ಯಾರಿಂದಲಾದರೂ ತಾರುಣ್ಯವನ್ನು ಪಡೆಯಬಹುದೆಂದು ಅನುಗ್ರಹಿಸಿದನು. ಅದರಂತೆ ರಾಯನು ಪೂರುವಿನಿಂದ ಯೌವನವನ್ನು ಪಡೆದು ಬಹುಕಾಲ ವಿಷಯಗಳನ್ನನುಭವಿಸಿ, ಕೊನೆಗೂ ತೃಪ್ತಿಯಿಲ್ಲದೆ, ಇದು ಅಶಾಶ್ವತವೆಂದು ಭಾವಿಸಿ ವಿರಕ್ತನಾಗಿ, ಮುಪ್ಪನ್ನು ಸ್ವೀಕರಿಸಿ ವೈರಾಗ್ಯದಿಂದ ಪರಮಪದವಿಯನ್ನು ಪಡೆದನು.

ಈ ಕಥೆಯನ್ನು ಕೇಳಿದ ಕೂಡಲೇ ಆಶ್ಚರ್ಯದಿಂದ ರೋಮಾಂಚವಾಗುವುದು. ಏಕೆಂದರೆ ಮುದಿತನವನ್ನು ಬದಲಾಯಿಸಿ ಯೌವನವನ್ನು ಹೊಂದುವುದು ಸಾಮಾನ್ಯವಾದ ಕಾರ್ಯವೇ ? ಇಂತಹ ಮಹಾಶಕ್ತಿಯು ಮಹರ್ಷಿಗಳಲ್ಲಿದ್ದುದರಿಂದ ಅವರು ಪೂಜ್ಯತೆಗೂ, ಗೌರವಕ್ಕೂ ಪಾತ್ರರಾಗಿದ್ದರು. ಅಂತಹ ಮುನಿಗಳ ವಂಶಸಂಭೂತರಾದ ಮಹನೀಯರು ಆ ಶಕ್ತಿಯನ್ನು ಕಳೆದುಕೊಂಡಿರುವರು. ಅಂತಹ ಶಕ್ತಿಯನ್ನು ಪಡೆಯಲು ಯತ್ನಿಸಬೇಕು. ಮತ್ತು ಲೋಕದಲ್ಲಿ ವಿಷಯಾನುಭವದಿಂದ ಕಾಮವು, ಆಹುತಿಗಳಿಂದ ಅಗ್ನಿಯಂತೆ ವೃದ್ಧಿಯಾಗುವುದೇ ವಿನಾ ಎಂದಿಗೂ ಶಾಂತವಾಗುವುದಿಲ್ಲ.

ತರುವಾಯ ಕಾರ್ತವೀರ್ಯಾರ್ಜುನನ ಕಥೆಯು ಉಕ್ತವಾಗಿದೆ. ಈ ರಾಯನು ಧರ್ಮಾತ್ಮನಾಗಿದ್ದರೂ, ವಸಿಷ್ಠಮುನಿಗಳ ಆಶ್ರಮ ನಾಶಕ್ಕೆ ಕಾರಣನಾದುದರಿಂದ ಅವರ ಶಾಪಕ್ಕೆ ವಿಷಯನಾದನು. ಇದರಿಂದ ಎಂತಹವರಾದರೂ ಮಹಾತ್ಮರ ಆಗ್ರಹಕ್ಕೆ ವಿಷಯರಾದರೆ ನಷ್ಟರಾಗುವರು. ಆ ಅರ್ಜುನನು ಭೃಗುಮುನಿಗೆ ಹಿಂಸೆಯನ್ನು ಮಾಡಿದ್ದರಿಂದ ಕುಪಿತನಾದ ಪರಶುರಾಮನು ಅವನನ್ನೂ ಅವನ ಅನುಯಾಯಿಗಳನ್ನೂ ನಿರ್ಮೂಲಮಾಡಿದನು. ಹೀಗೆ ಲೋಕಕ್ಕೆ ಉಪದ್ರವವು ಸಂಭವಿಸಿದರೆ, ಶ್ರೀಭಗವಂತನು ಅವತರಿಸಿ, ದುಷ್ಟನಿಗ್ರಹ, ಶಿಷ್ಟಪರಿಪಾಲನೆಗಳನ್ನು ಮಾಡುವನು.

ಹೀಗೆ ಹತಾವಶಿಷ್ಟರಾದ ದೈತ್ಯರು, ತಮ್ಮ ಗುರುಗಳಾದ ಶುಕ್ರಾಚಾರ್ಯರನ್ನು ಮೊರೆಹೊಕ್ಕರು. ಅವರು ಶಿಷ್ಯರಿಗಾಗಿ ಈಶ್ವರನನ್ನು ಕುರಿತು ತಪಸ್ಸುಮಾಡಿದರು. ಆಗ ದೇವತೆಗಳು ಈ ರಹಸ್ಯವನ್ನರಿತು ದೈತ್ಯರ ಸಂಗಡ ಹೋರಾಡಿ ಅವರನ್ನು ಹೊಡೆದಟ್ಟಿದರು. ಅವರು ತಮ್ಮ ಗುರುಗಳ ಮಾತೆಯನ್ನು ಮೊರೆಹೊಕ್ಕರು. ಅವಳು ಅವರಿಗೆ ಅಭಯದಾನಮಾಡಿ ತನ್ನ ಪಾತಿವ್ರತ್ಯದಿಂದ ಇಂದ್ರನನ್ನು ಸೆರೆಹಿಡಿದಳು.

ಆಗ ಇಂದ್ರನು ಹರಿಯನ್ನು ಪ್ರಾರ್ಥಿಸಲು ಹರಿಯು ಉಪೇಂದ್ರಾವತಾರವಾಡಿ ಇಂದ್ರನನ್ನು ಬಂಧನದಿಂದ ಬಿಡಿಸಿದನು. ಆಗ ಭೃಗುಪತ್ನಿಯು ಇಬ್ಬರನ್ನೂ ಬಂಧಿಸಿ ದಹಿಸಲು ಯತ್ನಿಸಿದಳು. ತರುವಾಯ ಇಂದ್ರನ ಪ್ರಾರ್ಥನೆಯಂತೆ ಹರಿಯು ಅವಳ ಶಿರಸ್ಸನ್ನು ಛೇದಿಸಿದನು. ತರುವಾಯ ಭೃಗುಮುನಿಯು ಕುಪಿತನಾಗಿ, ಸ್ತ್ರೀಹತ್ಯವನ್ನು ಮಾಡಿದ್ದರಿಂದ ಈ ಭೂಮಿಯಲ್ಲಿ ಅನೇಕ ಸಲ ಅವತರಿಸುವಂತೆ ಶ್ರೀಹರಿಗೆ ಶಾಪವನ್ನು ಕೊಟ್ಟು, ತನ್ನ ತಪಃಪ್ರಭಾವದಿಂದ ತನ್ನ ಪತ್ನಿಯನ್ನು ಬದುಕಿಸಿದನು ಇದರಿಂದ ಸ್ತ್ರೀಯರೂ ಸಹ ತಮ್ಮ ಪತಿವ್ರತಾಧರ್ಮದಿಂದ ಲೋಕಗಳನ್ನೂ ಕೂಡ ದಹಿಸಿಬಿಡುವ ಶಕ್ತಿಯನ್ನು ಪಡೆದಿದ್ದರೆಂದು ವ್ಯಕ್ತವಾಗುತ್ತದೆ ಮತ್ತು ಭೃಗ್ವಾದಿಮುನಿಗಳಿಗೆ ಇಂದ್ರಾದಿಗಳನ್ನೂ ನಿಗ್ರಹಮಾಡುವ ಶಕ್ತಿಯು ಇದ್ದಿತೆಂದು ವ್ಯಕ್ತವಾಗುತ್ತದೆ.

ಈ ಸಂಚಿಕೆಯಲ್ಲಿ ಶ್ಯಮಂತಕೋಪಾಖ್ಯಾನವೂ ಸೇರಿಕ್ತವಾಗಿದೆ. ಇದರಿಂದ ದುಷ್ಟರಾದ ಪುರುಷರು ಸಜ್ಜನರ ಮೇಲೆ ಇಲ್ಲದಸಲ್ಲದ ದೋಷಗಳನ್ನು ಆರೋಪಿಸಿ, ಅವರನ್ನು ನಿಂದೆಗೂ, ಅಪವಾದಕ್ಕೂ, ಗುರಿಮಾಡುವರು. ಆದರೆ ಆ ಅಪವಾದಗಳು ಸ್ಥಿರವಾಗಿ ನಿಲ್ಲದೇ ಕಣಗಳಂತೆ ಹಾರಿಹೋಗುವುವು. ಶ್ರೀಕೃಷ್ಣನು ತನಗೆ ಬಂದ ಅಪವಾದವನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಕಾಡಿಗೆ ಹೋಗಿ ಜಾಂಬವಂತನ ಸಂಗಡ ಹೋರಾಡಿ ಶ್ಯಮಂತಕರತ್ನವನ್ನು ತಂದುಕೊಟ್ಟು, ತನ್ನ ಯಾದವ ವಂಶಕ್ಕೆ ಬಂದ ಕಳಂಕವನ್ನು ಪರಿಹರಿಸಿ, ದಿವ್ಯಕೀರ್ತಿಯಿಂದ ಬೆಳಗಿದನು

ಅಂತಹ ಯದುಕುಲೋತ್ಪನ್ನರೂ, ರಾಜರ್ಷಿಗಳೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ.,** ಮಹಾಪ್ರಭುಗಳವರು ಪುತ್ರಮಿತ್ರಕಳತ್ರಾದಿಗಳೊಡನೆ ಚಿರಕಾಲ ಸುಖಿಯಾಗಿ ರಾಜ್ಯವನ್ನು ಪಾಲಿಸಲೆಂದು ಶ್ರೀಭಗವಂತನನ್ನು ಪ್ರಾರ್ಥಿಸುವ,

**ಆರ್. ಸೇತುಮಾಧವಾಚಾರ್.**



# ವಿಷಯಾನುಕ್ರಮಣಿಕೆ



—: ಹರಿಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀ ಮ ದ್ವಾ ಯು ಪು ರಾ ಣಂ

## ಸಪ್ತದಶೋಽಧ್ಯಾಯಃ

|| ಋಷಯ ಊಚುಃ ||

ಅಹೋ ಧೀಮಂಸ್ತ್ವಯಾ ಸೂತ ಶ್ರಾದ್ಧಕಲ್ಪಸ್ತು ಕೀರ್ತಿತಃ |
ಶ್ರುತೋ ನಃ ಶ್ರಾದ್ಧಕಲ್ಪೋ ವೈ ಋಷಿಭಿಃ ಪರಿಕೀರ್ತಿತಃ || ೧ ||

ಅತೀವ ವಿಸ್ತರೋ ಯಸ್ಯ ವಿಶೇಷೇಣ ಪ್ರಕೀರ್ತಿತಃ |
ವದ ಶೇಷಂ ಮಹಾಪ್ರಾಜ್ಞ ಋಷೇಸ್ತಸ್ಯ ಯಥಾಮತಂ || ೨ ||

|| ಸೂತ ಉವಾಚ ||

ಕೀರ್ತಯಿಷ್ಯಾಮಿ ತೇ ವಿಪ್ರಾ ಋಷೇಸ್ತಸ್ಯ ಮತಂ ತು ತತ್ |
ಶ್ರಾದ್ಧಂ ಪ್ರತಿ ಮಹಾಭಾಗಾಸ್ತನ್ಮೇ ಶೃಣುತ ವಿಸ್ತರಾತ್ || ೩ ||

---

## ಹದಿನೇಳನೆಯ ಅಧ್ಯಾಯವು

೧-೨. ಮುನಿಗಳು ಹೇಳಿದರು :—ಎಲೈ ಜ್ಞಾನಿಗಳಾದ ಸೂತರೇ, ತಾವು ವಿಶ್ವಾಸದಿಂದ ನಿರೂಪಿಸಿದ ಋಷಿಗಳಿಗಭಿಮತವಾದ ಶ್ರಾದ್ಧದ ವಿಚಾರಗಳನ್ನು ಸಾವಧಾನವಾಗಿ ಕೇಳಿ ಬಹಳ ಆನಂದವಾಗಿದೆ. ಮಹಾಪ್ರಾಜ್ಞರಾದ ತಾವು ಮಿಕ್ಕ ವಿಷಯಗಳನ್ನು ಹೀಗೆಯೇ ದಯವಿಟ್ಟು ವಿಸ್ತಾರವಾಗಿ ಹೇಳಬೇಕೆಂದು ಕೇಳಿಕೊಂಡರು.

೩. ಸೂತಮುನಿಯು ಹೇಳಿದನು :—ಎಲೈ ಮುನಿವರ್ಯರೇ, ದೇವತೆಗಳಿಗೆ ಸಮ್ಮತವೂ, ಋಷಿಕಲ್ಪಿತವೂ ಆದ ಶ್ರಾದ್ಧದ ಉಳಿದ ವಿಚಾರವನ್ನು ವಿಸ್ತಾರವಾಗಿ ಹೇಳುವೆನು. ಭಾಗ್ಯಶಾಲಿಗಳಾದ ನೀವು ಸಾವಧಾನದಿಂದ ಕೇಳಿರೆಂದು ಹೇಳಿದನು.

**ಉಕ್ತಂ ಶ್ರಾದ್ಧಂ ಮಯಾ ಪೂರ್ವಂ ವಿಧಿಶ್ಚ ಶ್ರಾದ್ಧಕರ್ಮಣಿ |**
**ಪರಿಶಿಷ್ಟಂ ಪ್ರವಕ್ಷ್ಯಾಮಿ ಬ್ರಾಹ್ಮಣಾನಾಂ ಯಥಾಕ್ರಮಂ || ೪ ||**

**ನ ಮೀಮಾಂಸ್ಯಾಃ ಸದಾ ವಿಪ್ರಾಃ ಪವಿತ್ರಂ ಹ್ಯೇತದುತ್ತಮಂ |**
**ದೈವೇ ಪಿತ್ರ್ಯೇ ಚ ಸತತಂ ಶ್ರೂಯತೇ ವೈ ಪರೀಕ್ಷಣಂ || ೫ ||**

**ಯಸ್ಮಿನ್ ದೋಷಾಃ ಪ್ರದೃಶ್ಯೇರನ್ ಸದ್ಭಿರ್ವಾ ವರ್ಜಿತಸ್ತು ಯಃ |**
**ಜಾನೀಯಾದ್ವಾಪಿ ಸಂವಾಸಾದ್ವರ್ಜಯೇತ್ತಂ ಪ್ರಯತ್ನತಃ || ೬ ||**

**ಅವಿಜ್ಞಾತಂ ದ್ವಿಜಂ ಶ್ರಾದ್ಧೇ ಪರೀಕ್ಷೇತ ಸದಾ ಬುಧಃ |**
**ಸಿದ್ಧಾ ಹಿ ವಿಪ್ರರೂಪೇಣ ಚರಂತಿ ಪೃಥಿವೀಮಿಮಾಂ || ೭ ||**

---

೪. ಎಲೈ ಮಹರ್ಷಿಗಳಿರಾ, ನಾನು ನಿಮಗೆ ಶ್ರಾದ್ಧಕರ್ಮದ ವಿಚಾರಗಳನ್ನು ಸಾಂಗವಾಗಿ ನಿರೂಪಿಸಿರುವೆನು. ಅವಶಿಷ್ಟವೂ, ಬ್ರಾಹ್ಮಣರಿಗೆ ಪ್ರಿಯವೂ ಆದ ವಿಷಯಗಳನ್ನು ಈಗ ಕ್ರಮವಾಗಿ ನಿರೂಪಿಸುವೆನು ಕೇಳಿರೆಂದನು.

೫. ಬ್ರಾಹ್ಮಣರು ಶ್ರಾದ್ಧದ ವಿಷಯದಲ್ಲಿ ವಿಚಾರವಾಡಬಾರದು. ಈ ಶ್ರಾದ್ಧವು ಪವಿತ್ರವೂ ಉತ್ತಮವೂ ಆಗಿದೆ. ದೇವತೆಗಳು ಮತ್ತು ಪಿತೃಗಳು ಇವರ ಕಾರ್ಯಗಳಲ್ಲಿ ವಿಶೇಷ ಚರ್ಚೆಯನ್ನು ಮಾಡದೆ ಪರೀಕ್ಷೆಯನ್ನು ಮಾತ್ರ ಮಾಡಬೇಕು.

೬. ಯಾವನಲ್ಲಿ ದೋಷಗಳು ದೃಷ್ಟವಾಗಿವೆಯೋ, ಸತ್ಪುರುಷರು ಯಾರನ್ನು ತ್ಯಾಗಮಾಡಿರುವರೋ, ಯಾವನು ತ್ಯಾಗಕ್ಕೆ ಅರ್ಹನೋ ಅಂತಹವನನ್ನು ಪ್ರಯತ್ನ ಪೂರ್ವಕವಾಗಿ ಬಿಡಬೇಕು.

೭. ಜ್ಞಾನಿಯಾದ ಪುರುಷನು ಶ್ರಾದ್ಧದ ವಿಷಯದಲ್ಲಿ ಅಜ್ಞಾತನಾದ ಬ್ರಾಹ್ಮಣನನ್ನು ಚೆನ್ನಾಗಿ ಪರೀಕ್ಷಿಸಬೇಕು. ಸಿದ್ಧಪುರುಷರು ಬ್ರಾಹ್ಮಣರ ರೂಪಗಳನ್ನು ಧರಿಸಿ ಈ ಭೂಮಂಡಲದಲ್ಲಿ ಸಂಚರಿಸುತ್ತಿರುವರು.

**ತಸ್ಮಾದತಿಥಿಮಾಯಾಂತಮಭಿಗಚ್ಛೇತ್ ಕೃತಾಂಜಲಿಃ ।**
**ಪೂಜಯೇಚ್ಚಾಪಿ ಪಾದ್ಯೇನ ಪಾದಾಭ್ಯಂಜನಭೋಜನೈಃ ॥ ೮ ॥**

**ಉರ್ವೀಂ ಸಾಗರಪರ್ಯಂತಾಂ ದೇವಾ ಯೋಗೇಶ್ವರಾಸ್ತಥಾ ।**
**ನಾನಾರೂಪೈಶ್ಚರಂತ್ಯೇತೇ ಪ್ರಜಾ ಧರ್ಮೇಣ ಪಾಲಯನ್ ॥ ೯ ॥**

**ಅರ್ಚಯಿತ್ವಾ ತತೋ ದದ್ಯಾದ್ವಿಪ್ರಾಯಾತಿಥಯೇ ನರಃ ।**
**ವ್ಯಂಜನಾನಿ ಚ ಭಕ್ಷ್ಯಾಣಿ ಫಲಂ ತೇಷಾಂ ತಥೈವ ಚ ॥ ೧೦ ॥**

**ಆಗ್ನಿಷ್ಟೋಮಂ ತು ಪಯಸಾ ಪ್ರಾಪ್ನುಯಾದ್ವೈ ತಥಾಶ್ರುತಂ ।**
**ಸರ್ಪಿಷಾ ತು ಶುಭಂ ಚಕ್ಷುಃ ಷೋಡಶಾಹಫಲಂ ಲಭೇತ್ ॥**
**ಮಧುನಾ ತ್ವತಿರಾತ್ರಸ್ಯ ಫಲಂ ಚ ಸಮವಾಪ್ನುಯಾತ್ ॥ ೧೧ ॥**

---

೮. ಆದುದರಿಂದ ಯಾರಾದರೂ ಅತಿಥಿಗಳು ಮನೆಗೆ ಬಂದರೆ, ಯಜಮಾನರು ಮರ್ಯಾದೆಯಿಂದ ಅಂಜಲಿಬದ್ಧರಾಗಿ ಎದುರುಗೊಳ್ಳಬೇಕು. ತರುವಾಯ ಅರ್ಘ್ಯ ಪಾದ್ಯಾದಿಗಳಿಂದಲೂ, ಭೋಜನಾದಿಗಳಿಂದಲೂ ಅವರನ್ನು ಉಪಚರಿಸಬೇಕು.

೯. ದೇವತೆಗಳೂ ಯೋಗೀಶ್ವರರೂ ಕೂಡ ಸಾಗರಪರ್ಯಂತವಾದ ಈ ಭೂಮಂಡಲದಲ್ಲಿ ನಾನಾ ರೂಪಧಾರಿಗಳೂ. ಪ್ರಜೆಗಳನ್ನು ಧರ್ಮದಿಂದ ಪಾಲಿಸುವವರೂ ಆಗಿ ಸಂಚರಿಸುವರು.

೧೦. ಆದುದರಿಂದ ಪುರುಷರು, ಮನೆಗೆ ಅತಿಥಿಯಾಗಿ ಬಂದ ಬ್ರಾಹ್ಮಣನಿಗೆ ಪೂಜೆಯನ್ನು ಮಾಡಿ, ಭಕ್ಷ್ಯ, ಭೋಜ್ಯ, ಫಲ, ವ್ಯಂಜನಾದಿಗಳನ್ನು ಕೊಟ್ಟು, ಮರ್ಯಾದೆಯನ್ನು ಮಾಡಬೇಕು.

೧೧. ಅಂತಹ ಯೋಗ್ಯನಾದ ಅತಿಥಿಗೆ ಕ್ಷೀರವನ್ನು ಕೊಟ್ಟರೆ ಅಗ್ನಿಷ್ಟೋಮ ಯಾಗ ಮಾಡಿದ ಫಲವು ಲಭಿಸುವುದು. ಘೃತದಿಂದ ಪೂಜಿಸಿದರೆ ದಿವ್ಯಚಕ್ಷುಸ್ಸನ್ನೂ, ಹದಿನಾರು ದಿವಸಗಳಲ್ಲಿ ಮಾಡಿದ ಯಜ್ಞದ ಫಲವನ್ನೂ, ಮತ್ತು ಜೇನುತುಪ್ಪದಿಂದ ಅತಿಥಿ ಪೂಜೆಯನ್ನು ಮಾಡಿದರೆ ಅತಿರಾತ್ರರೂಪವಾದ ಯಾಗದ ಫಲಗಳನ್ನೂ, ಹೊಂದುವರು.

ತತ್ರಾಪ್ಯುಯಾಚ್ಛ್ರದ್ದಧಾನೋ ನರೋ ವೈ
ಸರ್ವೈಃ ಕಾಮೈರ್ಭೋಜಯೇದ್ಯಸ್ತು ವಿಪ್ರಾನ್ ।
ಸರ್ವಾರ್ಥದಃ ಸರ್ವವಿಪ್ರಾತಿಥೌ ಯಃ
ಫಲಂ ಭುಂಕ್ತೇ ಸರ್ವಮೇಧಸ್ಯ ನಿತ್ಯಂ ॥ ೧೨ ॥

ಯಸ್ತು ಶ್ರಾದ್ಧೇಽತಿಥಿಂ ಪ್ರಾಪ್ಯ ದೈವೇ ವಾಪ್ಯವಮನ್ಯತೇ ।
ತಂ ವೈ ದೇವಾ ನಿರಸ್ಯಂತಿ ಹೋತಾ ಯದ್ವತ್ ಪರಾಂ ವಸುಂ ॥ ೧೩ ॥

ದೇವಾಶ್ಚ ಪಿತರಶ್ಚೈವ ವಹ್ನಿಶ್ಚೈವ ಹಿ ತಾನ್ ದ್ವಿಜಾನ್ ।
ಆವಿಶ್ಯ ಭುಂಜತೇ ತದ್ವೈ ಲೋಕಾನುಗ್ರಹಕಾರಣಾತ್ ॥ ೧೪ ॥

---

೧೨. ಯಾವ ಪುರುಷನು ನಂಬಿಕೆಯಿಂದ ಶ್ರೋತ್ರಿಯನಾದ ಅತಿಥಿಯನ್ನು ಸಕಲವಿಧೋಪಚಾರಗಳಿಂದ ಪೂಜಿಸುವನೋ, ಅವನು ಸಕಲರಾದ ಯೋಗಬ್ರಾಹ್ಮಣರಿಗೆ ಸರ್ವದಾನಗಳನ್ನು ಮಾಡಿದರೆ ಯಾವ ಫಲಗಳು ಸಂಭವಿಸುವುವೋ, ಅಂತಹ ಸಕಲ ಯಾಗಗಳನ್ನು ಮಾಡಿದ ಫಲವನ್ನು ನಿರಂತರವೂ ಹೊಂದುವನು.

೧೩. ಯಾವ ಪುರುಷನು, ಶ್ರಾದ್ಧದ ದಿವಸದಲ್ಲಿ ಬಂದ ಉತ್ತಮನಾದ ಅತಿಥಿಯನ್ನೂ ಮತ್ತು ದೇವತೆಗಳನ್ನೂ ಅಪಮಾನಮಾಡುವನೋ, ಅಂತಹ ಪುರುಷನನ್ನು ದೇವತೆಗಳು, (ಹೋತನು) ಹೋಮಮಾಡುವನು ಉತ್ತಮವಾದ ಪರರ ಹವಿರ್ದ್ರವ್ಯಗಳನ್ನು ತಿರಸ್ಕರಿಸುವಂತೆ, ತಿರಸ್ಕಾರಮಾಡುವರು.

೧೪. ದೇವತೆಗಳು, ಪಿತೃಗಳು, ಅಗ್ನಿಗಳು ಸದ್ಬ್ರಾಹ್ಮಣರಲ್ಲಿ ಆವಿಷ್ಟರಾಗಿ, ಲೋಕಾನುಗ್ರಹವನ್ನು ಮಾಡುವುದಕ್ಕಾಗಿ ಸಂಚರಿಸುತ್ತಾ, ಅತಿಥಿಗಳಾಗಿ ಬಂದು ಶ್ರಾದ್ಧದಲ್ಲಿ ಭೋಜನವನ್ನು ಮಾಡುವರು. ಆದುದರಿಂದ ಅತಿಥಿಗಳನ್ನು ಮರ್ಯಾದೆಯಿಂದ ಕಾಣಬೇಕು.

ಅಪೂಜಿತಾ ದಹಂತ್ಯೇತೇ ದದ್ಯುಃ ಕಾಮಾಂಶ್ಚ ಪೂಜಿತಾಃ ।
ಸರ್ವಸ್ವೇನಾಪಿ ತಸ್ಮಾದ್ವೈ ಪೂಜಯೇದತಿಥೀನ್ ಸದಾ ॥ ೧೫ ॥

ವಾನಪ್ರಸ್ಥೋ ಗೃಹಸ್ಥಶ್ಚ ಗೃಹಮಭ್ಯಾಗತೋಽಥವಾ ।
ಬಾಲಾಃ ಖಿನ್ನಾ ಯತಿಶ್ಚೈವ ಜಾನೀಯಾದತಿಥೀನ್ ಸದಾ ॥ ೧೬ ॥

ಅಭ್ಯಾಗತೋ ಯಾಚಕಃ ಸ್ಯಾದತಿಥಿಃ ಸ್ಯಾದಯಾಚಕಃ ।
ಅತಿಥೇರತಿಥಿಃ ಶ್ರೇಷ್ಠಃ ಸೋಽತಿಥಿರ್ಯೋಗ ಉಚ್ಯತೇ ॥ ೧೭ ॥

ನ ಘೋರೋ ನಾಪಿ ಸಂಕೀರ್ಣೋ ನಾವಿದ್ಯೋ ನ ವಿಶೇಷವಿತ್ ।
ನ ಚ ಸಂತೋ ನ ಸಮೃದ್ಧೋ ನ ಸೇವೀ ನಾಚರೋಽತಿಥಿಃ ॥ ೧೮ ॥

---

೧೫. ಆದುದರಿಂದ ಅಂತಹ ಅತಿಥಿಗಳನ್ನು ಪೂಜೆ ಮಾಡದಿದ್ದರೆ ಯಜಮಾನನನ್ನು ದಹಿಸಿಬಿಡುವರು. ಆ ದೇವಾದಿಗಳು ಪೂಜಿತರಾದರೆ ಸಕಲವಾದ ಪುರುಷಾರ್ಥಗಳನ್ನೂ ಕೊಡುವರು. ಆದುದರಿಂದ ಸರ್ವಕಾಲದಲ್ಲಿಯೂ ಅಂತಹ ಅತಿಥಿಗಳನ್ನು ಪೂಜಿಸಬೇಕು.

೧೬. ವಾನಪ್ರಸ್ಥರು, ಗೃಹಸ್ಥರು, ಗೃಹಕ್ಕೆ ಅಕಸ್ಮಾತ್ತಾಗಿ ಬಂದವರು, ಖಿನ್ನರಾದ ಬಾಲಕರು, ಯತಿಗಳು ಇವರನ್ನು ಅತಿಥಿಗಳೆಂದು ತಿಳಿಯಬೇಕು.

೧೭. ಯಾಚಕನು, ಅಭ್ಯಾಗತನಾಗಿರುವನು, ಅಯಾಚಕರು ಅತಿಥಿಗಳಾಗಿರುವರು. ಅಭ್ಯಾಗತನಿಗಿಂತಲೂ ಅತಿಥಿಯು ಉತ್ತಮನಾಗಿರುವನು. ಅತಿಥಿಗಿಂತಲೂ ಯೋಗಿಯು ಉತ್ತಮನಾಗಿರುವನು.

೧೮. ಘೋರಪುರುಷರು, ಸಂಕರಜಾತಿಯವರು, ಅವಿದ್ಯಾವಂತರು, ವಿಶೇಷವನ್ನು ತಿಳಿದವರು, ಸತ್ಪುರುಷರು, ಧನಿಕರು, ಸದಾ ಸೇವಾನಿರತರು, ಅನಾಚಾರಿಯು ಇವರು ಅತಿಥಿಗಳಾಗುವುದಿಲ್ಲ

**ಪಿಪಾಸಿತಾಯ ಶ್ರಾಂತಾಯ ಭ್ರಾಂತಾಯಾತಿಬುಭುಕ್ಷತೇ ।**
**ತಸ್ಮೈ ಸತ್ಕೃತ್ಯ ದಾತವ್ಯಂ ಯಜ್ಞಸ್ಯ ಫಲಮಿಚ್ಛತಾ ॥ ೧೯ ॥**

**ಆರುಹ್ಯ ಭೃಗುತುಂಗೇಷು ಗತ್ವಾ ಪುಣ್ಯಾಂ ಸರಸ್ವತೀಂ ।**
**ಆಪಗಾಂ ತು ನದೀಪುಣ್ಯಾಂ ಗಂಗಾ ದೇವೀ ಮಹಾನದೀ ॥ ೨೦ ॥**

**ಹಿಮವತ್ಪ್ರಭವಾ ನದ್ಯೋ ಯಾಶ್ಚಾನ್ಯಾ ಋಷಿಪೂಜಿತಾಃ ।**
**ಸರಸ್ತೀರ್ಥಾಭಿಸಂವೇದ್ಯಾ ನದೀ ನವವಹಾಸ್ತಥಾ ॥ ೨೧ ॥**

**ಗತ್ವೈತಾನ್ ಮುಚ್ಯತೇ ಪಾಪೈಃ ಸ್ವರ್ಗೇ ನಿತ್ಯಂ ಮಹೀಯತೇ ।**
**ದಶರಾತ್ರಮಶೌಚಂ ತು ಪ್ರೋಕ್ತಂ ವೈ ಮೃತಸೂತಕೇ ॥ ೨೨ ॥**

---

೧೯. ಬಾಯಾರಿದವನು, ಶ್ರಾಂತನು, ಭ್ರಾಂತನು, ಹಸಿದವನು ಇವರಿಗೆ ಮರ್ಯಾದೆಯನ್ನು ಮಾಡಿ ಅನ್ನದಾನವನ್ನು ಮಾಡಿದರೆ, ಯಜ್ಞಯಾಗಾದಿಗಳನ್ನು ಮಾಡಿದ ಫಲವು ಸಂಭವಿಸುವುದು.

೨೦. ಭೃಗುತುಂಗವನ್ನು ಹತ್ತಿ, ಪವಿತ್ರವಾದ ಸರಸ್ವತೀ ನದಿಗಳಲ್ಲಿ ಅತ್ಯುತ್ತಮವೂ, ಪುಣ್ಯಪ್ರದವೂ, ಶ್ರೇಷ್ಠವೂ, ಮಹಾನದಿಯೂ ಆದ ಗಂಗಾನದಿ ಇವುಗಳಲ್ಲಿ ಸ್ನಾನಪಾನಾದಿಗಳನ್ನು ಮಾಡಿದರೆ ಮಹಾಫಲ ಪ್ರಾಪ್ತಿಯಾಗುವುದು.

೨೧. ಹಿಮಾಲಯಗಳಲ್ಲಿ ಜನ್ಯವಾದ ನದಿಗಳು, ಋಷಿಗಳಿಂದ ಮಂಡಿತವಾದ ನದಿಗಳು, ಹೊಸದಾಗಿ ಹುಟ್ಟಿ ಹರಿಯುವ ಇತರ ನದಿಗಳು, ಸುಪ್ರಸಿದ್ಧಗಳಾದ ಸರೋವರಗಳು ಇವುಗಳಿಗೆ ಹೋಗಿ ಸ್ನಾನಜಪತಪಾದಿಗಳನ್ನು ಮಾಡಿದರೆ ಮಹಾಫಲ ಪ್ರಾಪ್ತಿಯಾಗುವುದು.

೨೨. ಮೇಲೆ ಹೇಳಿದ ಗಂಗಾದಿ ಮಹಾಕ್ಷೇತ್ರಗಳಿಗೆ ಹೋಗಿ ಸ್ನಾನಪಾನಾದಿಗಳಿಂದ ಸಕಲ ಪಾಪಗಳೂ ಪರಿಹಾರವಾಗುವುದು. ಮತ್ತು ಸ್ವರ್ಗಲೋಕದಲ್ಲಿ ಸುಖಿಯಾಗಿರುವನು.

ಬ್ರಾಹ್ಮಣಸ್ಯ ವಿಶೇಷೇಣ ಕ್ಷತ್ರಿಯೇ ದ್ವಾದಶ ಸ್ಮೃತಂ ।
ಅರ್ಧ್ವರ್ಮಾಸಂ ತು ವೈಶ್ಯಸ್ಯ ಮಾಸಾಚ್ಛೂದ್ರಸ್ತು ಶುಧ್ಯತಿ ॥ ೨೩ ।

ಉದಕ್ಯಾ ಸರ್ವವರ್ಣಾನಾಂ ತ್ರಿರಾತ್ರೇಣ ತು ಶುಧ್ಯತಿ ।
ಉದಕ್ಯಾಂ ಸೂತಿಕಾಂ ಚೈವ ಶ್ವಾನಮಂತ್ಯಾವಸಾಯಿನಂ ॥ ೨೪ ॥

ನಗ್ನಾದೀನ್ ಮೃತಹಾರಾಂಶ್ಚ ಸ್ಪೃಷ್ಟ್ವಾಽಶೌಚಂ ವಿಧೀಯತೇ ।
ಸ್ನಾತ್ವಾ ಸಚೈಲೋ ಮೃದ್ಭಿಸ್ತು ದ್ವಾದಶಭಿಸ್ತು ಶುಧ್ಯತಿ ॥ ೨೫ ॥

ಏತದೇವ ಭವೇಚ್ಛೌಚಂ ಮೈಥುನೇ ನವಭಿಸ್ತಥಾ ।
ಮೃದಾ ಪ್ರಕ್ಷಾಲ್ಯ ಹಸ್ತೌ ತು ಕುರ್ಯಾಚ್ಛೌಚವಿಧಿಂ ನರಃ ॥ ೨೬ ॥

---

೨೩. ಬಂಧುಗಳು ಯಾರಾದರೂ ಮೃತರಾದರೇ ಅಥವಾ ಜಜನಿಸಿದರೆ ಜಾತಾಶೌಚ ಮೃತಾಶೌಚಗಳು ಬ್ರಾಹ್ಮಣರಿಗೆ ಹತ್ತು ದಿವಸಗಳಿರುವುವು. ಅವು ಕ್ಷತ್ರಿಯರಿಗೆ ಹನ್ನೆರಡು ದಿವಸಗಳೂ, ವೈಶ್ಯರಿಗೆ ಹದಿನೈದು ದಿವಸಗಳೂ, ಶೂದ್ರರಿಗೆ ಒಂದು ಮಾಸವೂ ಕ್ರಮವಾಗಿ ಇರುವುವು.

೨೪-೨೫. ಸರ್ವವರ್ಣಗಳ ರಜಸ್ವಲೆಯರು, ಮೂರು ದಿವಸಗಳ ತರುವಾಯ ಶುದ್ಧಿಯಾಗುವರು ಇಂತಹ ರಜಸ್ವಲೆಯರನ್ನೂ ಹೆರಿಗೆಯಾದ ಬಾಣಂತಿಯನ್ನೂ, ನಾಯಿಯನ್ನೂ, ಮುಮೂರ್ಷುವಾದ ಪುರುಷನನ್ನೂ, ನಗ್ನಾದಿಗಳನ್ನೂ, ಮೃತ ಪುರುಷರ ಹಾರಾದಿಗಳನ್ನೂ, ಸ್ಪರ್ಶಮಾಡಿದರೆ ಆಶೌಚವು ಸಂಭವಿಸುವುದು. ಅಂತಹ ಅಶುದ್ಧಿಪರಿಹಾರಕ್ಕಾಗಿ ಹನ್ನೆರಡುಸಲ ಸಚೇಲಸ್ನಾನವನ್ನೂ, ಮೃತ್ತಿಕಾ ಸ್ನಾನವನ್ನೂ ಮಾಡಬೇಕು. ಇದರಿಂದ ಶುದ್ಧಿಯಾಗುವುದು.

೨೬. ಸುರತವಿಧಿಯಲ್ಲಿಯೂ ಹೀಗೆಯೇ ಒಂಭತ್ತುಸಲ ಲಿಂಗಶುದ್ಧಿಯನ್ನು ಮಾಡಿಕೊಂಡು, ಮೃತ್ತಿನಿಂದ ಕೈಗಳನ್ನು ತೊಳದುಕೊಳ್ಳಬೇಕು. ಅನಂತರ ಶೌಚ ವಿಧಿಯನ್ನು ಆಚರಿಸಬೇಕು.

ಪ್ರಕ್ಷಾಲ್ಯ ಚಾದ್ಭಿಹಸ್ತೌ ಚ ಸ್ನಾತ್ವಾ ಚೈವ ಮೃದಾ ಪುನಃ ।
ಮೃದಂ ಗುಹ್ಯೇ ತತೋ ದ್ವಿಸ್ತು ಪುನರೇವ ಮೃದಂ ಬುಧಃ ॥ ೨೭ ॥

ಏವಂ ಶೌಚವಿಧಿರ್ದೃಷ್ಟಃ ಸರ್ವವರ್ಣೇಷು ನಿತ್ಯದಾ ।
ಪರಿದದ್ಯಾನ್ಮೃದಸ್ತಿಸ್ರೋ ಹಸ್ತಪಾದಾವಸೇಚನಂ ॥ ೨೮ ॥

ಆರಣ್ಯಂ ಶೌಚಮೇತತ್ತು ಗ್ರಾಮ್ಯಂ ವಕ್ಷ್ಯಾಮ್ಯತಃ ಪರಂ ।
ಮೃದಸ್ತಿಸ್ರಃ ಪಾದಯೋಸ್ತು ಹಸ್ತಯೋಸ್ತಿಸ್ರ ಏವ ಚ ॥ ೨೯ ॥

ಮೃದಃ ಪಂಚದಶಾಮೇಧ್ಯೇ ಹಸ್ತಾದೀನಾಂ ವಿಭಾಗಶಃ ।
ಅನಿರ್ಣಿಕ್ತೇ ಮೃದಂ ದದ್ಯಾನ್ಮೃದಂತೇ ತ್ವದ್ಭಿರೇವ ತು ॥ ೩೦ ॥

ಕಂಠಂ ಶಿರೋ ವಾ ಪ್ರಾವೃತ್ಯ ರಥ್ಯಾಪಾದಗತಸ್ತು ವಾ ।
ಅಕೃತ್ವಾ ಪಾದಯೋಃ ಶೌಚಮಾಚಾಂತೋಽಪ್ಯಶುಚಿರ್ಭವೇತ್ ॥ ೩೧ ॥

---

೨೭. ಜಲದಿಂದ ಎರಡು ಕೈಗಳನ್ನು ತೊಳೆದುಕೊಂಡು (ಮೃತ್ಸ್ನಾನವನ್ನು) ಮೃತ್ತಿಕಾಸ್ನಾನವನ್ನು ಮಾಡಿ, ಎರಡುಸಲ ಗುಹ್ಯಸ್ಥಾನವನ್ನು ಶುದ್ಧಿಮಾಡಿ, ಪುನಃ ಮೃತ್ತಿಕಾಸ್ನಾನವನ್ನು ಮಾಡಿದರೆ ಶೌಚವಿಧಿಯಾಗುವುದು.

೨೮. ಈ ಶೌಚಕ್ರಮವನ್ನು ಸರ್ವವರ್ಣದವರೂ ಮಾಡಬೇಕು. ಮೂರುಸಲ ವಾದರೂ ಕೈಕಾಲುಗಳನ್ನು ತೊಳೆದುಕೊಂಡು ಸ್ನಾನವನ್ನು ಮಾಡಬೇಕು.

೨೯–೩೦. ಮೇಲೆ ನಿರೂಪಿಸಿರುವುದು ಅರಣ್ಯಶೌಚವಾಗಿದೆ. ಈಗ ಗ್ರಾಮ್ಯ ಶೌಚವನ್ನು ವಿವರಿಸುವೆನು. ಅದು ಹೇಗೆಂದರೆ—ಪ್ರಥಮತಃ ಕೈಕಾಲುಗಳನ್ನು ಮೂರುಮೂರು ಸಲ ಮಣ್ಣನ್ನು ಹಚ್ಚಿಕೊಂಡು, ಕ್ರಮವಾಗಿ ಹದಿನೈದುಸಲವಾದರೂ ಬೇರೆಬೇರೆಯಾಗಿ ಪ್ರಕ್ಷಾಳನೆಯನ್ನು ಮಾಡಿಕೊಳ್ಳಬೇಕು. ಮಲವು ಹೋಗದಿದ್ದರೆ ಮಣ್ಣುಗಳಿಂದಲೂ, ಜಲದಿಂದಲೂ, ಪುನಃ ಪುನಃ ಶುದ್ಧಿಮಾಡಿಕೊಳ್ಳಬೇಕು.

೩೧. ಪುರುಷನು ಬೀದಿಯಲ್ಲಿ ಸಂಚಾರವಮಾಡಿ ಬಂದರೆ ವಸ್ತ್ರದಿಂದ ತಲೆಯನ್ನು ಅಥವಾ ಕತ್ತನ್ನು ಸುತ್ತಿಕೊಂಡು ಕೈಕಾಲುಗಳನ್ನು ತೊಳೆದುಕೊಳ್ಳಬೇಕು. ಹಾಗೆ ತೊಳೆದುಕೊಳ್ಳದೆಯೇ ಆಚಮನವನ್ನು ಮಾಡಿದರೂ ಶುದ್ಧನಾಗಲಾರನು.

**ಪ್ರಕ್ಷಾಲ್ಯ ಪಾತ್ರಂ ನಿಃಕ್ಷಿಪ್ಯ ಆಚಮ್ಯಾಭ್ಯುಕ್ಷಣಂ ಪುನಃ ।**
**ದ್ರವ್ಯಸ್ಯಾನ್ಯಸ್ಯ ತು ತಥಾ ಕುರ್ಯಾದಭ್ಯುಕ್ಷಣಂ ಪುನಃ ॥ ೩೨ ॥**

**ಪುಷ್ಪಾದೀನಾಂ ತೃಣಾನಾಂ ಚ ಪ್ರೋಕ್ಷಣಂ ಹವಿಷಾಂ ತಥಾ ।**
**ಪರಾಹೃತಾನಾಂ ದ್ರವ್ಯಾಣಾಂ ನಿಧಾಯಾಭ್ಯುಕ್ಷಣಂ ತಥಾ ॥ ೩೩ ॥**

**ಪ್ರೋಕ್ಷಿತಂ ತು ಹರೇತ್ ಕಿಂಚಿಚ್ಛ್ರಾದ್ಧೇ ದೈವೇ ತಥಾ ಪುನಃ ।**
**ಉತ್ತರೇಣ ಹರೇದ್ವೇದ್ಯಾಂ ದಕ್ಷಿಣೇನ ವಿಸರ್ಜಯೇತ್ ॥ ೩೪ ॥**

**ವಿಚ್ಛಿನ್ನಂ ಸ್ಯಾದ್ವಿಪರ್ಯಾಸೇ ದೈವೇ ಪಿತ್ರ್ಯೇ ತಥೈವ ಚ ।**
**ದಕ್ಷಿಣೇನ ತು ಹಸ್ತೇನ ದಕ್ಷಿಣಾಂ ವೇದಮಾಲಿಖೇತ್ ॥ ೩೫ ॥**

---

೩೨. ಮನುಷ್ಯನು ಹೊರಗಿನಿಂದ ಮನೆಗೆ ಬಂದ ಕೂಡಲೆ ಕೈಕಾಲುಗಳನ್ನು ತೊಳೆದುಕೊಂಡು, ಆ ಪಾತ್ರೆಯನ್ನು ಕೆಳಗೆ ಇಟ್ಟು, ಆಚಮನವನ್ನು ಮಾಡಿ, ಪ್ರೋಕ್ಷಣಮಾಡಿಕೊಳ್ಳಬೇಕು. ಪುನಃ ತಾನು ಉಪಯೋಗಿಸುವ ವಸ್ತುಗಳನ್ನು ಪ್ರೋಕ್ಷಣಮಾಡಬೇಕು.

೩೩. ಪರರು ತಂದ ಹೂ, ಕಾಯಿಪಲ್ಯ, ಹಣ್ಣುಹಂಪಲು, ಹಾಲು, ಮೊಸರು ಮೊದಲಾದ ಹವಿರ್ದ್ರವ್ಯಗಳನ್ನು ಅಭ್ಯುಕ್ಷಣಪ್ರೋಕ್ಷಣಗಳಿಂದ ಶುದ್ಧಿಮಾಡಬೇಕು. ಪ್ರೋಕ್ಷಣವೆಂದರೆ ಉತ್ತಾನಹಸ್ತದಿಂದ ನೀರನ್ನು ಸಿಂಪಡಿಸುವುದು. ಅಭ್ಯುಕ್ಷಣ ಎಂದರೆ ಆಕುಂಚಿತಹಸ್ತದಿಂದ ನೀರನ್ನು ಎರಚುವುದು.

೩೪. ದೇವಕಾರ್ಯ, ಪಿತೃಕಾರ್ಯಗಳಲ್ಲಿ ಪ್ರತಿಯೊಂದು ವಸ್ತುಗಳನ್ನೂ ಪ್ರೋಕ್ಷಣಮಾಡಿ ಉಪಯೋಗಿಸಬೇಕು. ಆ ವಸ್ತುಗಳನ್ನು ಉತ್ತರಭಾಗದಿಂದ ವಿಸರ್ಜನೆಮಾಡಬೇಕು.

೩೫. ದೇವಪಿತೃಕಾರ್ಯಗಳಲ್ಲಿ ವ್ಯತ್ಯಾಸವಾದರೆ ಕಾರ್ಯವು ಭಂಗವಾಗುವುದು. ಆದುದರಿಂದ ಬಲಗೈಯ್ಯಿಂದ ದಕ್ಷಿಣ ಜಗುಲಿಯಲ್ಲಿ ಗೆರೆಗಳನ್ನು ಎಳೆದು ಶುದ್ಧಿಮಾಡಬೇಕು.

**ಕರಾಭ್ಯಾಮೇವ ದೇವಾನಾಂ ಪಿತೄಣಾಂ ವಿಕರಂ ಶುಭಂ ।**
**ಕ್ಷುಭಿತಸ್ವಪ್ನಯೋಶ್ಚೈವ ತಥಾ ಮೂತ್ರಪುರೀಷಯೋಃ ॥ ೩೬ ॥**

**ನಿಷ್ಠೀವಿತೇ ಯಥಾವ್ಯಕ್ತೇ ಭುಕ್ತ್ವಾ ವಿಪರಿಧಾಯ ಚ ।**
**ಉಚ್ಛಿಷ್ಟಸ್ಯ ಚ ಸಂಸ್ಪರ್ಶೇ ತಥಾ ಪಾದಾವಸೇಚನೇ ॥ ೩೭ ॥**

**ಉತ್ಸೃಷ್ಟಸ್ಯ ಸುಸಂಭಾಷೇ ಹ್ಯಶುಚಿಂ ಪ್ರಯುತಸ್ಯ ಚ ।**
**ಸಂದೇಹೇಷು ಚ ಸರ್ವೇಷು ಶಿಖಾಂ ಮುಕ್ತ್ವಾ ತಥೈವ ಚ ॥ ೩೮ ॥**

**ವಿನಾ ಯಜ್ಞೋಪವೀತೇನ ಮೋಹಾತ್ತು ಯದ್ಯುಪಸ್ಪೃಶೇತ್ ।**
**ಓಷ್ಠಸ್ಯ ದಂತಸಂಸ್ಪರ್ಶೇ ದರ್ಶನೇ ಚಾಂತ್ಯವಾಸಿನಾಂ ॥ ೩೯ ॥**

---

೩೬. ದೇವಪಿತೃಗಳಿಗೋಸ್ಕರ ಹಸ್ತದಿಂದಲೇ (ವಿಕರವನ್ನು) ಅಂದರೆ ಅನ್ನವನ್ನು ಎರಚಿದರೆ ಮಂಗಳವಾಗುವುದು. ಪುರುಷನು ಕ್ಷುಭಿತನಾದರೂ, ಸ್ವಪ್ನವನ್ನು ಹೊಂದಿದ್ದರೂ, ಮೂತ್ರಪುರೀಷೋತ್ಸರ್ಗಗಳನ್ನು ಮಾಡಿದ್ದರೂ ಹಸ್ತಪಾದಪ್ರಕ್ಷಾಳನ ಆಚಮನಗಳಿಂದ ಶುದ್ಧನಾಗುವನು.

೩೭. ಪುರುಷನು ಉಗಿದರೂ, ವಮನವಾಡಿದರೂ ಭೋಜನಾನಂತರ ವ್ಯತ್ಯಸ್ತವಾದರೂ, ಉಚ್ಛಿಷ್ಟಸ್ಪರ್ಶಮಾಡಿದರೂ ಕೈಕಾಲುಗಳನ್ನು ತೊಳೆದುಕೊಂಡು ಬಾಯಿಮುಕ್ಕಳಿಸುವುದರಿಂದ ಶುದ್ಧನಾಗುವನು.

೩೮. ಅಯೋಗ್ಯಪುರುಷರು, ಅಶುಚಿಯಾದ ಮನುಜ ಇವರ ಸಂಪರ್ಕ ವಾದರೂ, ಅನೇಕ ವಿಧವಾದ ಸಂದೇಹಗಳು ಬಂದರೂ ಶಿರಃಸ್ನಾನದಿಂದ ಶುದ್ಧನಾಗಿ ನಿರ್ಮಲನಾಗುವನು.

೩೯. ಯಜ್ಞೋಪವೀತವಿಲ್ಲದೆ ಮೋಹಂದ ವಸ್ತುಗಳನ್ನು ಸ್ಪರ್ಶಮಾಡಿದರೆ ಶುದ್ಧಿಯಾಗುವುದಿಲ್ಲ. ಬೆರಳಿನಿಂದ ತುಟಿ, ದಂತ, ನಾಲಿಗೆ ಇವುಗಳನ್ನೂ, ಅಂತ್ಯಜನರನ್ನೂ ಸ್ಪರ್ಶಮಾಡಿದರೆ, ಕೈಕಾಲುಗಳನ್ನು ತೊಳೆದುಕೊಂಡರೆ, ಶುದ್ಧಿ ಯಾಗುವನು.

ಜಿಹ್ವಯಾ ಚೈವ ಸಂಸ್ಪೃಶ್ಯ ದಂತಾಸಕ್ತಂ ತಥೈವ ಚ ।
ಸಶಬ್ದಮಂಗುಲೀಭಿಶ್ಚ ಪ್ರಣತಶ್ಚಾವಲೋಕಯನ್ ॥ ೪೦ ॥

ಯಶ್ಚಾಧರ್ಮೇ ಸ್ಥಿತೋ ಮೋಹಾದಾಚಾಂತೋಽಪ್ಯಶುಚಿರ್ಭವೇತ್ ।
ಉಪವಿಶ್ಯ ಶುಚೌ ದೇಶೇ ಪ್ರಣತಃ ಪ್ರಾಗುದಂಙ್ಮುಖಃ ॥ ೪೧ ॥

ಪಾದೌ ಪ್ರಕ್ಷಾಲ್ಯ ಹಸ್ತೌ ತು ಅಂತರ್ಜಾನುರುಪಸ್ಪೃಶೇತ್ ।
ಪ್ರಸನ್ನಾಸ್ತ್ರಿಃ ಪಿಬೇಚ್ಚಾಪಃ ಪ್ರಯತಃ ಸುಸಮಾಹಿತಃ ॥ ೪೨ ॥

ದ್ವಿರೇವ ಮಾರ್ಜನಂ ಕುರ್ಯಾತ್ಸಕೃದಭ್ಯುಕ್ಷಣಂ ತತಃ ।
ಖಾನಿ ಮೂರ್ಧಾನಮಾತ್ಮಾನಂ ಹಸ್ತೌ ಪಾದೌ ತಥೈವ ಚ ॥ ೪೩ ॥

---

೪೦. ನಾಲಿಗೆಯಿಂದ ಸ್ಪರ್ಶಮಾಡಿದರೂ, ಹಲ್ಲುಗಳಲ್ಲಿ ಸಿಕ್ಕಿರುವ ವಸ್ತುಗಳನ್ನು ತೆಗೆದರೂ ಶಬ್ದಸಹಿತವಾಗಿ ಬೆರಳುಗಳಿಂದ ಸ್ಪರ್ಶಮಾಡುವುದರಿಂದಲೂ, ನಮ್ರನಾದ ಪುರುಷನನ್ನು ಆದರಿಸದಿರುವುದರಿಂದಲೂ ಪುರುಷರು ಅಶುಚಿಯಾಗುವರು.

೪೧. ಯಾವನು ಅಜ್ಞಾನದಿಂದ ಅಧರ್ಮದಲ್ಲಿ ಆಸಕ್ತನಾಗಿದ್ದುಕೊಂಡು ಸ್ನಾನಾಚಮನಾದಿಗಳನ್ನು ಮಾಡಿದರೂ ಶುದ್ಧನಾಗುವುದಿಲ್ಲ. ಅವನು ಶುದ್ಧನಾಗ ಬೇಕಾದರೆ ಶುಚಿಯಾದ ಸ್ಥಳದಲ್ಲಿ ಉತ್ತರಾಭಿಮುಖನಾಗಿ ಕುಳಿತುಕೊಂಡು ಧ್ಯಾನ ಮಾಡಿದರೆ ಶುದ್ಧನಾಗುವನು.

೪೨. ಪುರುಷನು ಕೈಕಾಲುಗಳನ್ನು ತೊಳೆದುಕೊಂಡು ಮೊಣಕಾಲನ್ನು ಸ್ಪರ್ಶಿಸಿ ಸ್ವಚ್ಛವಾದ ಜಲವನ್ನು ಮೂರುಸಲ ಆಚಮನ ಮಾಡಿ ಶುದ್ಧನೂ ಸಮಾಹಿತ ಚಿತ್ತನೂ ಆಗಿ ಧ್ಯಾನಮಾಡಿದರೆ ಶುದ್ಧನಾಗುವನು.

೪೩. ಪುರುಷನು ಮೊದಲು ಎರಡುಸಲ ಮಾರ್ಜನವನ್ನು ಮಾಡಿ ತರುವಾಯ ಒಂದಾವರ್ತಿ ಅಭ್ಯುಕ್ಷಣವನ್ನೂ ಮಾಡಿ ಇಂದ್ರಿಯಗಳು, ಶಿರಸ್ಸು, ಹೃದಯ, ಹಸ್ತಗಳು, ಪಾದಗಳು, ಇವುಗಳನ್ನು ಸ್ಪರ್ಶಮಾಡಿ ಧ್ಯಾನಿಸಬೇಕು.

ಅಭ್ಯುಕ್ಷಣಂ ತಥಾ ತಸ್ಯ ಯದ್ಯಮೀಮಾಂಸಿತಂ ಭವೇತ್ ।
ಏವಮಾಚಮನಂ ತಸ್ಯ ವೇದಾ ಯಜ್ಞಾಸ್ತಪಾಂಸಿ ಚ ॥ ೪೪ ॥

ದಾನಾನಿ ಬ್ರಹ್ಮಚರ್ಯಂ ಚ ಭವಂತಿ ಸಫಲಾಸ್ತಥಾ ।
ಕ್ರಿಯಾಂ ಯಃ ಕುರುತೇ ಮೋಹಾದನಾಚಮ್ಯೈವ ನಾಸ್ತಿಕಃ ॥ ೪೫ ॥

ಭವಂತಿ ಚ ವೃಥಾ ತಸ್ಯ ಕ್ರಿಯಾ ಹ್ಯೇತಾ ನ ಸಂಶಯಃ ।
ವಾಗ್ಭಾವಶುದ್ಧನಿರ್ಣಿಕ್ತಮದುಷ್ಟಂ ವಾಪ್ಯನಿಂದಿತಂ ॥ ೪೬ ॥

ಮೇಧ್ಯಾನ್ಯೇತಾನಿ ಜ್ಞೇಯಾನಿ ದುಷ್ಟಮೇಭ್ಯೋ ವಿಪರ್ಯಯಃ ।
ನ ವಕ್ತವ್ಯಂ ಸದಾ ವಿಪ್ರಃ ಕ್ಷುಧಿತೋ ನಾಸ್ತಿ ಕಿಂಚನ ॥ ೪೭ ॥

ತಸ್ಮೈ ಸತ್ಕೃತ್ಯ ಯೋ ದದ್ಯಾದಯೂಪೋ ಯಜ್ಞ ಉಚ್ಯತೇ ।
ಅಪ್ಲುಷ್ಟಾನ್ನಂ ಶೃತಾನ್ನಂ ತು ಕೃಶವೃತ್ತಿಮಯಾಚಕಂ ॥ ೪೮ ॥

---

೪೪–೪೬. ಪುರುಷನು ಅಭ್ಯುಕ್ಷಣಾದಿಗಳಿಂದ ಪರಿಶುದ್ಧನಾಗಿ ಆಚಮನ, ವೇದಾಧ್ಯಯನ, ಯಜ್ಞಯಾಗಾದಿಗಳು, ತಪಸ್ಸು, ದಾನ, ಬ್ರಹ್ಮಚರ್ಯ ಇವುಗಳನ್ನು ಮಾಡಿದರೆ ಸಫಲನಾಗುವುವು. ಯಾವ ನಾಸ್ತಿಕನು ಅಜ್ಞಾನದಿಂದ ಸ್ನಾನಾಚಮನಾದಿಗಳನ್ನು ಮಾಡದೆ ಕಾರ್ಯವನ್ನು ಮಾಡುವನೋ ಅವನು ಮಾಡಿದ ಕಾರ್ಯಗಳೆಲ್ಲವೂ ವ್ಯರ್ಥವಾಗುವುವು. ಇದರಲ್ಲಿ ಲೇಶಮಾತ್ರವೂ ಸಂದೇಹವಿಲ್ಲ. ಮನೋವಾಕ್ಕಾಯಕರ್ಮಗಳಿಂದ ಶುದ್ಧಿಯಾದ ಕಾರ್ಯವು ಸಾಧುವಾಗಿಯೂ, ಅದೂಷ್ಯವಾಗಿಯೂ ಇರುವುದು.

೪೭. ಮೇಲೆ ಹೇಳಿದ ಕಾರ್ಯಗಳು ಪವಿತ್ರವಾಗಿರುವುವು. ಇದಕ್ಕೆ ವ್ಯತಿರಿಕ್ತವಾದ ಕಾರ್ಯಗಳೆಲ್ಲ ದೂಷ್ಯಗಳಾಗಿವೆ. ಶ್ರಾದ್ಧದಲ್ಲಿ ಹೊಟ್ಟೆಬಾಕನಿಗೂ, ನಾಸ್ತಿಕನಿಗೂ, ಭೋಜನಕ್ಕೆ ಹೇಳಬಾರದು.

೪೮–೪೯. ಮೇಲೆ ಹೇಳಿದ ಪುರುಷನಿಗೆ ಅನ್ನದಾನಾದಿಗಳನ್ನು ಮಾಡಿದರೆ ಯೂಪಸ್ತಂಭವಿಲ್ಲದ ಯಜ್ಞದಂತೆ ನಿಷ್ಫಲವಾಗುವುದು. ಎಂತಹವನನ್ನು ಭೋಜನ ಮಾಡಿಸಬೇಕೆಂದರೆ ಅಪಕ್ವವಾದ ಪದಾರ್ಥಗಳನ್ನು ಭಕ್ಷಿಸುವವನೂ, ಸಕಾಲದಲ್ಲಿ ಸಿಕ್ಕಿದ ಪದಾರ್ಥಗಳನ್ನು ಭಕ್ಷಿಸುವವನೂ, ದರಿದ್ರನೂ, ಪರರನ್ನು ಯಾಚಿಸಿದವನೂ,

**ಏಕಾಂತಶೀಲಂ ಹ್ರೀಮಂತಂ ಸದಾ ಶ್ರಾದ್ಧೇಷು ಭೋಜಯೇತ್ ।**
**ಯೋ ದದಾತ್ಯಂತಿಮೇಭ್ಯಶ್ಚ ಸಬ್ರಹ್ಮಘ್ನೋ ದುರಾತ್ಮವಾನ್ ॥ ೪೯ ॥**

**ಅಪಿ ಜಾತಿಶತಂಗತ್ವಾ ನ ಸ ಮುಚ್ಯೇತ ಕಿಲ್ಬಿಷಾತ್ ।**
**ವಿಷಮಂ ಭೋಜಯೇದ್ವಿಪ್ರಾನೇಕಪಂಕ್ತ್ಯಾಂ ಚ ಯೋ ನರಃ ॥ ೫೦ ॥**

**ನಿಯುಕ್ತೌ ವಾಽನಿಯುಕ್ತೋ ವಾ ಪಂಕ್ತ್ಯಾ ಹರತಿ ದುಷ್ಕೃತಂ ।**
**ಪಾಪೇನ ಗೃಹ್ಯತೇ ಕ್ಷಿಪ್ರಮಿಷ್ಟಾಪೂರ್ತಂ ಚ ನಶ್ಯತಿ ॥ ೫೧ ॥**

**ಯತಿಸ್ತು ಸರ್ವವಿಪ್ರಾಣಾಂ ಸರ್ವೇಷಾಮಗ್ರ್ಯ ಉತ್ಸವೇ ।**
**ಇತಿಹಾಸಪಂಚಮಾನ್ ವೇದಾನ್ ಯಃ ಪಠೇತ್ತು ದ್ವಿಜೋತ್ತಮಃ ॥ ೫೨ ॥**

---

ಸತ್ಸ್ವಭಾವವಂತನೂ, ಶ್ರೀಮಂತನೂ, ಆದ ಸದ್ಬ್ರಾಹ್ಮಣನಿಗೆ ಶ್ರಾದ್ಧದಲ್ಲಿ ಭೋಜನ ಮಾಡಿಸಿದರೆ ಮಹಾಫಲಗಳು ಸಂಭವಿಸುವುವು. ಯಾವ ಪುರುಷನು ದೌರ್ಜನ್ಯದಿಂದ ಕೀಳುಜಾತಿಯವನಿಗೆ ಶ್ರಾದ್ಧದಲ್ಲಿ ಭೋಜನಮಾಡಿಸುವನೋ ಅವನು ಬ್ರಹ್ಮಘಾತುಕನಾಗುವನು. ಅವನಿಗೆ ಮಹಾಪಾಪಗಳು ಉಂಟಾಗುವುವು.

೫೦. ಯಾವನು ಶ್ರಾದ್ಧದಲ್ಲಿ ಬ್ರಾಹ್ಮಣರ ಪಂಕ್ತಿಯಲ್ಲಿ ವಿಜಾತೀಯರಿಗೆ ಭೋಜನವನ್ನು ಮಾಡಿಸುವನೋ ಅವನು ನೂರಾರು ಕೀಳುಜಾತಿಗಳಲ್ಲಿ ಹುಟ್ಟಿ ಅನೇಕ ದುಃಖಗಳನ್ನು ಅನುಭವಿಸುವನು. ಆ ಪಾಪಗಳು ಮಾತ್ರ ಪರಿಹಾರವಾಗುವುದಿಲ್ಲ.

೫೧. ದುಷ್ಟನು ಸಾಕ್ಷಾತ್ತಾಗಿ ಪಾಪವನ್ನು ಮಾಡಲಿ, ಮಾಡದಿರಲಿ, ಅಂತಹ ದುಷ್ಟರ ಪಂಕ್ತಿಯಲ್ಲಿ ಭೋಜನಮಾಡಿದರೆ ಅವನ ಪಾಪಗಳು ಇತರರಿಗೆ ಸಂಭವಿಸುವುದಲ್ಲದೇ ಸಜ್ಜನರು ಮಾಡಿದ ಯಾಗಾದಿ (ಫಲಗಳು) ಪುಣ್ಯಗಳು ನಷ್ಟವಾಗುವುವು.

೫೨. ಸಮಸ್ತವಾದ ಉತ್ಸವಗಳಲ್ಲಿಯೂ, ಯತಿಗಳು ಸಮಸ್ತ ಬ್ರಾಹ್ಮಣರಿಗಿಂತಲೂ ಅಗ್ರಪೂಜೆಗೆ ಅರ್ಹರಾಗಿರುವರು.

ಅನಂತರಂ ಯಥಾಯೋಗ್ಯಂ ನಿಯೋಕ್ತವ್ಯೋ ವಿಜಾನತಾ ।
ತ್ರಿವೇದೋಽನಂತರಸ್ತಸ್ಯ ದ್ವಿವೇದಸ್ತದನಂತರಃ || ೫೩ ||

ಏಕವೇದಸ್ತಥಾ ಪಶ್ಚಾನ್ನ್ಯಾಯಾಧ್ಯಾಯೀ ತತಃ ಪರಂ ।
ಪಾವನಾಯೈವ ಪಂಕ್ತ್ಯಾ ವೈ ತಾನ್ ಪ್ರವಕ್ಷ್ಯೇ ನಿಬೋಧತ || ೫೪ ||

ಯ ಏತೇ ಪೂರ್ವನಿರ್ದಿಷ್ಟಾಃ ಸರ್ವೇ ತೇ ಹ್ಯನುಪೂರ್ವಶಃ ।
ಷಡಂಗೀ ವಿನಯೀ ಯೋಗೀ ಸರ್ವತಂತ್ರಸ್ತಥೈವ ಚ || ೫೫ ||

ಯಾಯಾವರಶ್ಚ ಪಂಚೈತೇ ವಿಜ್ಞೇಯಾಃ ಪಂಕ್ತಿಪಾವನಾಃ ।
ಅಷ್ಟಾದಶಾನಾಂ ವಿದ್ಯಾನಾಮೇಕಸ್ಮಿನ್ ಪಾರಗೋಽಪಿ ಯಃ || ೫೬ ||

---

೫೩. ಯಾವನು ನಾಲ್ಕು ವೇದಗಳನ್ನೂ, ಐದನೆಯದಾದ ಇತಿಹಾಸ ಪುರಾಣವೆಂಬ ವೇದವನ್ನೂ ತಿಳಿದಿರುವನೋ ಅಂತಹವನನ್ನು ಪೂಜಿಸಬೇಕು. ತರುವಾಯ ತ್ರಿವೇದಿಗಳನ್ನೂ, ಅನಂತರ ದ್ವಿವೇದಿಗಳನ್ನೂ, ಆಮೇಲೆ ಏಕವೇದಿಗಳನ್ನೂ ಕ್ರಮವಾಗಿ ಯೋಗ್ಯತಾನುಸಾರವಾಗಿ ಪೂಜಿಸಬೇಕು.

೫೪. ಏಕವೇದವನ್ನು ತಿಳಿದವನ ಪೂಜೆಯನ್ನು ಮಾಡಿದ ತರುವಾಯ ನ್ಯಾಯಾದಿ ಶಾಸ್ತ್ರಜ್ಞರನ್ನು ಕ್ರಮವಾಗಿ ಪೂಜಿಸಬೇಕು. ಯಾರು ಪಂಕ್ತಿಪಾವನರಾಗಿರುವರೋ ಅವರನ್ನು ಹೇಳುವೆನು ಕೇಳಿರೆಂದನು.

೫೫–೫೬. ಪೂರ್ವದಲ್ಲಿ ನಿರೂಪಿಸಿರುವ ವೇದಾಧ್ಯಯನಸಂಪನ್ನರೂ, ವೇದಾಂಗಗಳನ್ನು ತಿಳಿದವರೂ, ವಿನಯೋಪೇತನೂ, ಯೋಗೀಶ್ವರನೂ, ಸಕಲ ಶಾಸ್ತ್ರಗಳನ್ನು ಬಲ್ಲವನೂ, ಯಜ್ಞಯಾಗಾದಿಗಳಿಗೆ ಸಾಧಕನೂ, ಅಷ್ಟಾದಶವಿದ್ಯೆಗಳಲ್ಲಿ ಯಾವುದಾದರೂ ಒಂದು ವಿದ್ಯೆಯನ್ನು ಕಲಿತವನೂ ಇವರೆಲ್ಲರೂ ಮುಖ್ಯವಾಗಿ ಪಂಕ್ತಿಪಾವನರಾಗಿರುವರು.

ಯಥಾವಧ್ವರ್ತಮಾನಶ್ಚ ಸರ್ವೇ ತೇ ಪಂಕ್ತಿಪಾವನಾಃ ।
ತ್ರಿಣಾಚಿಕೇತಾಸ್ತ್ರೈವಿದ್ಯೋ ಯಶ್ಚ ಧರ್ಮಾನ್ ಪಠೇದ್ದ್ವಿಜಃ ॥ ೫೭ ॥

ಬಾರ್ಹಸ್ಪತ್ಯೇ ತಥಾ ಶಾಸ್ತ್ರೇ ಪಾರಂ ಯಶ್ಚ ದ್ವಿಜೋ ಗತಃ ।
ಸರ್ವೇ ತೇ ಪಾವನಾ ವಿಪ್ರಾಃ ಪಂಕ್ತೀನಾಂ ಸಮುದಾಹೃತಾಃ ॥ ೫೮ ॥

ಆಮಂತ್ರಿತಸ್ತು ಯಃ ಶ್ರಾದ್ಧೇ ಯೋಷಿತಂ ಸೇವತೇ ದ್ವಿಜಃ ।
ಪಿತರಸ್ತಸ್ಯ ತಂ ಮಾಸಂ ತಸ್ಯ ರೇತಸಿ ಶೇರತೇ ॥ ೫೯ ॥

ಶ್ರಾದ್ಧಂ ದತ್ವಾ ಚ ಭುಕ್ತ್ವಾ ಚ ಮೈಥುನಂ ಯೋ ನಿಷೇವತೇ ।
ಪಿತರಸ್ತಸ್ಯ ತಂ ಮಾಸಂ ರೇತಸ್ಥಾಃ ನಾತ್ರ ಸಂಶಯಃ ॥ ೬೦ ॥

---

೫೭. ಸ್ವವರ್ಣಾಶ್ರಮಧರ್ಮಗಳನ್ನು ರಕ್ಷಣೆಮಾಡುವ ಸರ್ವರೂ ಪಂಕ್ತಿಪಾವನರಾಗಿರುವರು. ಯಾವನು ಕಠಾದ್ಯುಪನಿಷತ್ತುಗಳನ್ನು ಪಠನಮಾಡುವನೋ, ಯಾವನು ತ್ರೈವಿದ್ಯೆಗಳನ್ನೂ, ಧರ್ಮಶಾಸ್ತ್ರಗಳನ್ನೂ ಓದಿರುವನೋ ಅವರೆಲ್ಲರೂ ಪಂಕ್ತಿಪಾವನರಾಗಿರುವರು.

೫೮. ಯಾವನು ನೀತಿಶಾಸ್ತ್ರಪಾರಂಗತನೋ ಅವನೂ, ಮತ್ತು ಹಿಂದೆ ನಿರೂಪಿಸಿದ ವೇದಾದಿಶಾಸ್ತ್ರಸಂಪನ್ನರೂ ಆದ ಸಮಸ್ತ ಬ್ರಾಹ್ಮಣರೂ ಪಂಕ್ತಿಪಾವನರು.

೫೯. ಯಾವ ಪುರುಷನು ಶ್ರಾದ್ಧದಲ್ಲಿ ಬ್ರಾಹ್ಮಣರಿಗೆ ಔತಣವನ್ನು ಮಾಡಿಸಿ ಸ್ತ್ರೀಸಂಗಮವನ್ನು ಮಾಡುವನೋ ಅವನ ಪಿತೃಗಳು ಮಾಂಸಭಕ್ಷಕರಾಗಿ ಅವರ ವೀರ್ಯದಲ್ಲಿ ಬಿದ್ದು ಮುಳುಗಿ ದುಃಪಡುವರು.

೬೦. ಶ್ರಾದ್ಧವನ್ನು ಮಾಡುವ ಯಜಮಾನನೂ, ಅಥವಾ ಭೋಜನವನ್ನು ಮಾಡಿದ ಬ್ರಾಹ್ಮಣರೂ, ಇವರು ಆ ದಿವಸ ಸ್ತ್ರೀಸಂಬಂಧವನ್ನು ಮಾಡಿದರೆ ಅವರ ಪಿತೃಗಳು ಅವರ ರೇತಸ್ಸಿನಲ್ಲಿ ಬಿದ್ದು ಮಾಂಸಭಕ್ಷಕರಾಗಿ ಶಪಿಸುವರು.

ತಸ್ಮಾದತಿಥಯೇ ದೇಯಂ ಭೋಜಯೇದ್ಬ್ರಹ್ಮಚಾರಿಣಂ ।
ಧ್ಯಾನನಿಷ್ಠಾಯ ದಾತವ್ಯಂ ಸಾನುಕ್ರೋಶಾಯ ಧಾರ್ಮಿಕಂ ॥ ೬೧ ॥

ಯತಿಂ ವಾ ವಾಲಖಿಲ್ಯಾನ್ವಾ ಭೋಜಯೇಚ್ಛ್ರಾದ್ಧಕರ್ಮಣಿ ।
ವಾನಪ್ರಸ್ಥೋಪಕುರ್ವಾಣಃ ಪೂಜಾಮಾತ್ರೇಣ ತೋಷಿತಃ ॥ ೬೨ ॥

ಗೃಹಸ್ಥಂ ಭೋಜಯೇದ್ಯಸ್ತು ವಿಶ್ವೇ ದೇವಾಸ್ತು ಪೂಜಿತಾಃ ।
ವಾನಪ್ರಸ್ಥೇನ ಋಷಯೋ ವಾಲಖಿಲ್ಯೈಃ ಪುರಂದರಃ ॥ ೬೩ ॥

ಯತೀನಾಂ ಪೂಜನೇ ಚಾಪಿ ಸಾಕ್ಷಾದ್ಬ್ರಹ್ಮಾ ತು ಪೂಜಿತಃ ।
ಆಶ್ರಮಾಃ ಪಾವನಾಃ ಪಂಚ ಉಪಧಾಭಿರನಾಶ್ರಮಾಃ ॥ ೬೪ ॥

---

೬೧. ಆದುದರಿಂದ ಅತಿಥಿಗಳಿಗೆ ಬೇಕಾದ ವಸ್ತುಗಳನ್ನು ಕೊಡಬಹುದು. ಆದರೆ ಶ್ರಾದ್ಧದಲ್ಲಿ ಯೋಗ್ಯನಾದ ಬ್ರಹ್ಮಚಾರಿಗೆ ಭೋಜನವನ್ನು ಮಾಡಿಸುವುದು ಉತ್ತಮವಾಗಿದೆ. ಧ್ಯಾನಾಸಕ್ತನೂ, ದಯಾಪರನೂ, ಧಾರ್ಮಿಕನೂ ಆದವನಿಗೆ ದಾನವನ್ನು ಕೊಡಬೇಕು.

೬೨. ಶ್ರಾದ್ಧಕರ್ಮದಲ್ಲಿ ಯತಿಗಳಿಗೂ, ವಾಲಿಖಿಲ್ಯರಿಗೂ ಭೋಜನವನ್ನು ಮಾಡಿಸಿದರೆ ಮಹಾಫಲವು ಬರುವುದು. ವಾನಪ್ರಸ್ಥರಿಗೆ ಭೋಜನವನ್ನು ಮಾಡಿಸಿ ಉಪಕಾರ ಮಾಡಿದರೆ ಸತ್ಸಂತಾನವಾಗಿ ಸುಖವನ್ನು ಪಡೆಯುವನು.

೬೩. ಗೃಹಸ್ಥರಿಗೆ ಭೋಜನಮಾಡಿಸಿದರೆ ವಿಶ್ವೇದೇವತೆಗಳು ಪ್ರೀತರಾಗುವರು. ವಾನಪ್ರಸ್ಥರ ಭೋಜನದಿಂದ ಋಷಿಗಳೂ, ವಾಲಿಖಿಲ್ಯರ ಭೋಜನದಿಂದ ದೇವೇಂದ್ರನೂ, ಪ್ರೀತರಾಗುವರು.

೬೪. ಯತಿಗಳ ಪೂಜೆಯಿಂದ ಸಾಕ್ಷಾದ್ಬ್ರಹ್ಮದೇವನು ಪ್ರೀತನಾಗುವನು. ಆದುದರಿಂದ ಬ್ರಹ್ಮಚರ್ಯಾದ್ಯಾಶ್ರಮಗಳು ಪೂಜಾರ್ಹಗಳಾಗಿವೆ. ಐದನೆಯ ಆಶ್ರಮವು ಯಾವುದೂ ಇಲ್ಲ. ಐದನೆಯ ಆಶ್ರಮಕ್ಕೆ ಯಾವ ಉಪಾಧಿಯೂ, ಕಾರಣವೂ ಇಲ್ಲ.

**ಚತ್ವಾರ ಆಶ್ರಮಾಃ ಪೂಜ್ಯಾಃ ಶ್ರಾದ್ಧೇ ದೈವೇ ತಥೈವ ಚ ।**
**ಚತುರಾಶ್ರಮಬಾಹ್ಯೇಭ್ಯಃ ಶ್ರಾದ್ಧಂ ನೈವ ಪ್ರದಾಪಯೇತ್ ॥ ೬೫ ॥**

**ಸ ತಿಷ್ಠೇದ್ವಾ ಬುಭುಕ್ಷುಸ್ತು ಚತುರಾಶ್ರಮಬಾಹ್ಯತಃ ।**
**ಅಯತಿರ್ಮೋಕ್ಷವಾದೀ ಚ ಉಭೌ ತೌ ಪಂಕ್ತಿದೂಷಕೌ ॥ ೬೬ ॥**

**ವೃಥಾಮುಂಡಾಶ್ಚ ಜಟಿಲಾಃ ಸರ್ವೇ ಕಾರ್ಪಟಿಕಾಸ್ತಥಾ ।**
**ನಿರ್ಘೃಣಾನ್ ಭಿನ್ನವೃತ್ತಾಂಶ್ಚ ಸರ್ವಭಕ್ಷ್ಯಾಂ ವಿವರ್ಜಯೇತ್ ॥ ೬೭ ॥**

**ಕಾರುಕಾದೀನನಾಚಾರಾನ್ ಸರ್ವವೇದಬಹಿಷ್ಕೃತಾನ್ ।**
**ಗಾಯನಾನ್ ದೇವವೃತ್ತಾಂಶ್ಚ ಹವ್ಯಕವ್ಯೇಷು ವರ್ಜಯೇತ್ ॥ ೬೮ ॥**

**ದ್ವಿಜೇಷ್ವಪಿ ಕೃತಂ ನಿತ್ಯಂ ಶ್ರಾದ್ಧಕರ್ಮಣಿ ವರ್ಜಯೇತ್ ॥ ೬೯ ॥**

---

೬೫. ದೈವಕಾರ್ಯ, ಪಿತೃಕಾರ್ಯಗಳಲ್ಲಿ ನಾಲ್ಕು ಆಶ್ರಮದವರೂ ಪೂಜ್ಯರಾಗಿರುವರು. ನಾಲ್ಕು ಆಶ್ರಮಗಳನ್ನು ಬಿಟ್ಟು ಐದನೆಯ ಮಾರ್ಗವನ್ನು ಹೊಂದಿದವರಿಗೆ ಶ್ರಾದ್ಧದಲ್ಲಿ ಭೋಜನವನ್ನು ಮಾಡಿಸಬಾರದು. ಅದು ವಿಫಲವಾಗುವುದು.

೬೬. ನಾಲ್ಕು ಆಶ್ರಮಗಳಿಗೂ, ಸೇರದ ಮನುಷ್ಯನು ಒಂದು ವೇಳೆ ಹಸಿದಿರಬಹುದು. ಇದರಿಂದ ಅವನು ಶ್ರಾದ್ಧಕ್ಕೆ ಅರ್ಹನಲ್ಲ. ಯತಿಗಳನ್ನು ಮತ್ತು ಮೋಕ್ಷವನ್ನು ದೂಷಣೆಮಾಡುವರೂ ಸಹ ಪಂಕ್ತಿದೂಷಕರಾಗಿರುವರು.

೬೭. ನಿರರ್ಥಕವಾಗಿ ತಲೆಬೋಳಿಸಿಕೊಂಡವರೂ, ವ್ಯರ್ಥವಾಗಿ ಜಟೆಯನ್ನು ಧರಿಸಿದವರೂ, ಕಪಟಿಗಳೂ, ದಯಾಶೂನ್ಯರೂ, ಸ್ವಜಾತಿ ವೃತ್ತಿಯನ್ನು ಬಿಟ್ಟು ಬೇರೆ ವೃತ್ತಿಯನ್ನು ಆಶ್ರಯಿಸಿದವರೂ, ಸರ್ವಭಕ್ಷರೂ, ಇವರು ಪಂಕ್ತಿಬಾಹಿರರಾಗಿರುವರು.

೬೮. ಅಕ್ಕಸಾಲಿಯೇ ಮೊದಲಾದ ಅನಾಚಾರಿಗಳನ್ನೂ, ಸರ್ವವೇದಬಾಹ್ಯರಾದವರನ್ನೂ, ಗಾಯಕವೃತ್ತಿಗಳನ್ನೂ, ದೇವಪೂಜಕರನ್ನೂ, ಹವ್ಯಕವ್ಯಗಳಲ್ಲಿ ಬಿಡಬೇಕು. ಇವರು ದೇವಪಿತೃಕಾರ್ಯಗಳಿಗೆ ಅನರ್ಹರಾಗಿರುವರು.

೬೯. ಬ್ರಾಹ್ಮಣರಲ್ಲಿ ಯಾರಾದರೂ ಶಿಲ್ಪಾದಿವೃತ್ತಿಗಳಿಂದ ಜೀವನವನ್ನು ಮಾಡುತ್ತಿದ್ದರೆ ಅವರೂ ಸಹ ಶ್ರಾದ್ಧಕರ್ಮದಲ್ಲಿ ತ್ಯಾಜ್ಯರಾಗಿರುವರು.

ಏತೇಷು ವರ್ತತೇ ಯಶ್ಚ ಕೃತ್ಸ್ನವರ್ಣಂ ಸ ಗಚ್ಛತಿ ।
ಯೋಽಶ್ನಾತಿ ಸಹ ಶೂದ್ರೇಣ ಸರ್ವೇ ತೇ ಪಂಕ್ತಿದೂಷಕಾಃ ॥ ೭೦ ॥

ವ್ಯಾಪಾದನಂ ಶಕ್ತಿನಿಬರ್ಹಣಂ ಕೃಷಿ
ವಾಣಿಜ್ಯಕಾರ್ಯಂ ಪಶುಪಾಲನಂ ಚ ।
ಶುಶ್ರೂಷಣಂ ವಾಪ್ಯಗುರೋ ರಹೋ ವಾ
ಕಾರ್ಯಂ ನೈತದ್ವಿದ್ಯತೇ ಬ್ರಾಹ್ಮಣಸ್ಯ ॥ ೭೧ ॥

ಯೇ ತು ವಿಪ್ರಾಃ ಸ್ಥಿತಾ ನಿತ್ಯಂ ಜ್ಞಾನಿನೋ ಧ್ಯಾನಿನಸ್ತಥಾ ।
ಮಿಥ್ಯಾಸಂಕಲ್ಪಿನಃ ಸರ್ವೇ ದುರ್ವೃತ್ತಾ ವಾ ದ್ವಿಜಾತಯಃ ॥ ೭೨ ॥

ಮಿಥ್ಯಾತತ್ವವಿದೋ ವರ್ಜ್ಯಾ ಸ್ತಥಾ ದಂಬವಿಷೂಚಕಾಃ ।
ಉಪಪಾತಕಸಂಯುಕ್ತಾಃ ಪಾತಕೈಶ್ಚ ವಿಶೇಷತಃ ॥ ೭೩ ॥

ವೇದೇ ನಿಯೋಗದಾತಾರೋ ಲೋಭಮೋಹಫಲಾರ್ಥಿನಃ ।
ಬ್ರಹ್ಮವಿಕ್ರಯಿಣಶ್ಚೈವ ಶ್ರಾದ್ಧಕರ್ಮಣಿ ವರ್ಜಿತಾಃ ॥ ೭೪ ॥

---

೭೦. ಯಾವನು ಭಿನ್ನ ಜಾತಿಯವರೊಡನೆ ಸಹವಾಸವಾಡಿರುವನೋ ಮತ್ತು ಅವರ್ಣದವರ ಸಂಪರ್ಕದಲ್ಲೇ ನಿರತನಾಗಿರುವನೋ, ಯಾವನು ಶೂದ್ರಾದಿಗಳೊಡನೆ ಭೋಜನಾದಿಗಳನ್ನು ಮಾಡುವನೋ, ಅವರೆಲ್ಲರೂ ಪಂಕ್ತಿದೂಷ್ಯರಾಗಿರುವರು.

೭೧. ಬ್ರಾಹ್ಮಣನು ಪ್ರಾಣಿಹಿಂಸೆ, ಶಕ್ತಿನಾಶನ, ಕರ್ಷಕವೃತ್ತಿ (ಕೃಷಿ) ವ್ಯಾಪಾರ, ಪಶುರಕ್ಷಣೆ, ಪರರ ಸೇವೆಯು ಇವುಗಳನ್ನು ಮಾಡಬಾರದು.

೭೨–೭೪. ಯಾವ ಬ್ರಾಹ್ಮಣನು ಮಿಥ್ಯಾಜ್ಞಾನಿಗಳಾಗಿಯೂ, ಮಿಥ್ಯಾಧ್ಯಾನಿಗಳಾಗಿಯೂ, ಮಿಥ್ಯಾಸಂಕಲ್ಪಿಗಳಾಗಿಯೂ, ದುರ್ವೃತ್ತರಾಗಿಯೂ, ಮಿಥ್ಯಾತತ್ವಜ್ಞರಾಗಿಯೂ, ದಾಂಭಿಕರಾಗಿಯೂ, ಪಾಪಿಗಳಾಗಿಯೂ, ಮಹಾಪಾತಕಯುಕ್ತರಾಗಿಯೂ, ಇರುವರೋ ಅವರು ಪಂಕ್ತಿದೂಷ್ಯರಾಗಿ ಶ್ರಾದ್ಧಕರ್ಮಕ್ಕೆ ಅನರ್ಹರಾಗಿರುವರು. ಮತ್ತು ಯಾವನು ಅನಧಿಕಾರಿಗಳಿಗೆ ವೇದಾಧಿಕಾರವಿದೆಯೆಂದು ಹೇಳುವನೋ ಲೋಭಮೋಹಗಳಿಂದ ಫಲಾಕಾಂಕ್ಷಿತರಾಗಿರುವರೋ, ವೇದವಿಕ್ರಯವನ್ನು ಮಾಡುವರೋ, ಅವರೆಲ್ಲರೂ ಶ್ರಾದ್ಧಕರ್ಮಗಳಿಗೆ ಅನರ್ಹರಾಗಿರುವರು.

ನ ನಿಯೋಗೋಽಸ್ತಿ ವೇದಾನಾಂ ಯೋ ನಿಯುಂಕ್ತೇ ಸ ಪಾಪಕೃತ್ ।
ಭೋಕ್ತಾ ವೇದಫಲಾದ್ಭ್ರಶ್ಯೇದ್ದಾತಾ ದಾನಫಲಾತ್ತಥಾ ॥ ೭೫ ॥

ಭೃತೋಽಧ್ಯಾಪಯತೇ ಯಸ್ತು ಭೃತಕಾಧ್ಯಾಪಿತಸ್ತು ಯಃ ।
ನಾರ್ಹತಸ್ತಾವಪಿ ಶ್ರಾದ್ಧಂ ಬ್ರಹ್ಮಣಃ ಕ್ರಯವಿಕ್ರಯೀ ॥ ೭೬ ॥

ಕ್ರಯವಿಕ್ರಯಿಣೌ ಚೈವ ಜೀವತಾರ್ಥಂ ವಿಗರ್ಹಿತೌ ।
ವೃತ್ತಿರೇಷಾ ತು ವೈಶ್ಯಸ್ಯ ಬ್ರಾಹ್ಮಣಸ್ಯ ತು ಪಾತಕಂ ॥ ೭೭ ॥

ಪ್ರಾಹುರ್ವೇದಾನ್ ವೇದವಿದೋ ವೇದಾನ್ ಯಶ್ಚೋಪಜೀವತಿ ।
ಉಭೌ ತೌ ನಾರ್ಹತಃ ಶ್ರಾದ್ಧಂ ಪುತ್ರಿಕಾಪತಿರೇವ ಚ ॥ ೭೮ ॥

---

೭೫. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಈ ತ್ರೈವರ್ಣ್ಯವಲ್ಲದವರಿಗೆ ವೇದಾಧಿಕಾರವಿಲ್ಲ. ಅವರಿಗೂ ಕೂಡ ವೇದಾಧಿಕಾರವಿದೆಯೆಂದು ಹೇಳುವನೇ ಪಾಪಿಯಾಗಿರುವನು. ಇಂತಹವರ ಮನೆಗಳಲ್ಲಿ ಯಾವನು ಭೋಜನಮಾಡುವನೋ ಅವನು ವೇದಬಾಹ್ಯನಾಗುವನು. ಭೋಜನಮಾಡಿಸಿದವನಿಗೂ ಕೂಡ ಯಾವ ಫಲವೂ ಉಂಟಾಗುವುದಿಲ್ಲ.

೭೬. ಯಾವನು ವೇತನಕ್ಕಾಗಿ ವೇದಗಳನ್ನು ಉಪದೇಶಮಾಡುತ್ತಾನೋ ಮತ್ತು ವೇತನಕ್ಕಾಗಿ ಕಲಿಯುತ್ತಾನೋ ಕ್ರಯವಿಕ್ರಯಗಳನ್ನು ಮಾಡುವವರಿಂದ ಅಂತಹ ಬ್ರಾಹ್ಮಣರಿಬ್ಬರೂ ಶ್ರಾದ್ಧಕರ್ಮಕ್ಕೆ ಅನರ್ಹರಾಗಿರುವರು.

೭೭. ಜೀವನಕ್ಕಾಗಿ ಕ್ರಯವಿಕ್ರಯಗಳನ್ನು ಮಾಡುವುದು ನಿಂದಿತವಾಗಿರುವುದು. ಈ ಕ್ರಯವಿಕ್ರಯವು ವೈಶ್ಯವೃತ್ತಿಯು. ಈ ವೃತ್ತಿಯು ಬ್ರಾಹ್ಮಣನಿಗೆ ದೂಷ್ಯವಾಗಿದೆ.

೭೮. ವೇತನಕ್ಕಾಗಿ ವೇದವನ್ನು ಹೇಳಿಕೊಡುವ ಮತ್ತು ಓದುವ ಇಬ್ಬರೂ ಶ್ರಾದ್ಧಕ್ಕೆ ಅನರ್ಹರಾಗಿರುವರು. ಇದರಂತೆ ದತ್ತಪುತ್ರಿಕಾಪತಿಯೂ ಸಹ ಅನರ್ಹನೆಂದು ವೇದಗಳನ್ನು ತಿಳಿದವರೇ ಹೇಳುವರು.

**ವೃಥಾ ದಾರಾಂಶ್ಚ ಯೋ ಗಚ್ಛೇದ್ಯೋ ಯಜೇತ ವೃಥಾಧ್ವರೇ ।**
**ನಾರ್ಹತಸ್ತಾವಪಿ ಶ್ರಾದ್ಧಂ ದ್ವಿಜೋ ಯಶ್ಚೈವ ನಾಸ್ತಿಕಃ ॥ ೭೯ ॥**

**ಆತ್ಮಾರ್ಥಂ ಯಃ ಪಚೇದನ್ನಂ ನ ದೇವಾತಿಥಿಕಾರಕಃ ।**
**ನಾರ್ಹತಸ್ತಾವಪಿ ಶ್ರಾದ್ಧಂ ಪತಿತೌ ಬ್ರಹ್ಮರಾಕ್ಷಸೌ ॥ ೮೦ ॥**

**ಸ್ತ್ರಿಯೋ ನಕ್ತಂಪರಾ ಯೇಷಾಂ ಪರದಾರರತಾಶ್ಚ ಯೇ ।**
**ಅರ್ಥಕಾಮರತಾಶ್ಚೈವ ನ ತಾಚ್ಛ್ರಾದ್ಧೇಷು ಭೋಜಯೇತ್ ॥ ೮೧ ॥**

**ವರ್ಣಾಶ್ರಮಾಣಾಂ ಧರ್ಮೇಷು ವಿರುದ್ಧಾಃ ಶ್ರಾದ್ಧಕರ್ಮಣಿ ।**
**ಸ್ತೇನಶ್ಚ ಸರ್ವಯಾಜೀ ಚ ಸರ್ವೇ ತೇ ಪಂಕ್ತಿದೂಷಕಾಃ ॥ ೮೨ ॥**

---

೭೯. ಯಾವನು ಕೇವಲ ಕಾಮಾತುರನಾಗಿ ಸ್ತ್ರೀ ಸಂಗಮವನ್ನು ಮಾಡುವನೋ, ಅದರಂತೆ ದಂಭಕ್ಕಾಗಿ ಯಾಗಾದಿಗಳನ್ನು ಮಾಡುವನೋ ಮತ್ತು ನಾಸ್ತಿಕನಾಗಿರುವನೋ ಇವರೆಲ್ಲರೂ ಶ್ರಾದ್ಧಬಾಹ್ಯರಾಗಿರುವರು.

೮೦. ಯಾವ ಪುರುಷನು ತನಗಾಗಿಯೇ ಪಾಕವನ್ನು ಮಾಡಿಕೊಳ್ಳುವನೋ ದೇವತೆಗಳಿಗೂ, ಅತಿಥ್ಯಭ್ಯಾಗತರಿಗೂ ಅನ್ನವನ್ನು ಹಾಕುವುದಿಲ್ಲವೋ ಇವರಿಬ್ಬರೂ ಶ್ರಾದ್ಧಕ್ಕೆ ಅನರ್ಹರಾಗಿರುವರು. ಮತ್ತು ಅವರು ಪತಿತರೂ ಬ್ರಹ್ಮರಾಕ್ಷಸರೂ ಆಗುವರು.

೮೧. ಯಾವ ಪುರುಷರ ಸ್ತ್ರೀಯರು ವ್ಯಭಿಚಾರಿಣಿಯರಾಗಿ ರಾತ್ರಿ ವೇಳೆಯಲ್ಲಿ ಸಂಚರಿಸುವರೋ, ಯಾರು ಪರಸ್ತ್ರೀ ನಿರತರೋ, ಯಾರು ಅರ್ಥಕಾಮಗಳಲ್ಲಿ ಆಸಕ್ತರಾಗಿರುವರೋ ಅವರು ಶ್ರಾದ್ಧಕ್ಕೆ ಅನರ್ಹರಾಗಿರುವರು. ಅವರನ್ನು ತ್ಯಾಗಮಾಡಬೇಕು.

೮೨. ವರ್ಣಾಶ್ರಮಧರ್ಮಗಳಿಗೆ ವಿರೋಧಿಗಳೂ, ಶ್ರಾದ್ಧಕರ್ಮಗಳಲ್ಲಿ ದ್ವೇಷಿಗಳೂ, ಚೋರರೂ, ಸರ್ವರಿಂದಲೂ ಯಾಗವನ್ನು ಮಾಡಿಸುವವರೂ ಅಂದರೆ ಕೇವಲ ದ್ರವ್ಯಾಪೇಕ್ಷಿಗಳೂ ಇವರೆಲ್ಲರೂ ಪಂಕ್ತಿಬಾಹ್ಯರಾಗಿರುವರು

ಯಶ್ಚ ಸೂಕರವದ್ಭುಂಕ್ತೇ ಯಶ್ಚ ಪಾಣಿತಲೇ ದ್ವಿಜಃ ।
ನ ತದಶ್ನಂತಿ ಪಿತರೋ ಯಶ್ಚ ವಾಮಂ ಸಮಶ್ನುತೇ ॥ ೮೩ ॥

ಸ್ತ್ರೀಶೂದ್ರಾಯಾನುಪೇತಾಯ ಶ್ರಾದ್ಧೋಚ್ಛಿಷ್ಟಂ ನ ದಾಪಯೇತ್ ।
ಯೋ ದದ್ಯಾದ್ರಾಗಮೋಹಾತ್ತು ನ ತದ್ಗಚ್ಛೇತ್ಪಿತೄನ್ ಸದಾ ॥ ೮೪ ॥

ತಸ್ಮಾನ್ನ ದೇಯಮುಚ್ಛಿಷ್ಟಮನ್ನಾದ್ಯಂ ಶ್ರಾದ್ಧಕರ್ಮಣಿ ।
ಅನ್ಯತ್ರ ದಧಿಸರ್ಪಿರ್ಭ್ಯಾಂ ಶಿಷ್ಯೇ ಪುತ್ರಾಯ ನಾನ್ಯಥಾ ॥ ೮೫ ॥

ಅನುಚ್ಛಿಷ್ಟಂ ತು ದಾತವ್ಯಂ ಅನ್ನಾದ್ಯಂ ವೈ ವಿಶೇಷತಃ ।
ಪುಷ್ಪಮೂಲಫಲೈರ್ವಾಪಿ ತುಷ್ಟಿಂ ಗಚ್ಛಂತಿ ಚಾನ್ನತಃ ॥ ೮೬ ॥

---

೮೩. ಯಾವ ವಿಪ್ರನು ಹಂದಿಯ ಹಾಗೆ ಕೈಯಲ್ಲಿ ಅನ್ನವನ್ನು ಇಟ್ಟು ಕೊಂಡು ಭಕ್ಷಿಸುವನೋ ಮತ್ತು ಎಡಗೈಯಿಂದ ಭೋಜನವನ್ನು ಮಾಡುವನೋ ಅವನು ಮಾಡಿದ ಶ್ರಾದ್ಧವನ್ನು ಪಿತೃಗಳು ಸ್ವೀಕರಿಸುವುದಿಲ್ಲ.

೮೪. ಯಾವನು ಮೋಹದಿಂದ ಶ್ರಾದ್ಧದಲ್ಲಿ ಉಪಯೋಗಿಸಿ ಉಳಿದಿರುವ ಭಕ್ಷ್ಯಭೋಜ್ಯಗಂಧಪುಷ್ಪಾದಿಗಳನ್ನು ಶೂದ್ರಸ್ತ್ರೀಯರಿಗೆ ಕೊಡುತ್ತಾನೆಯೋ ಅವನು ಮಾಡುವ ಶ್ರಾದ್ಧದಿಂದ ಪಿತೃಗಳು ತೃಪ್ತರಾಗುವುದಿಲ್ಲ.

೮೫. ಆದುದರಿಂದ ಶ್ರಾದ್ಧದಲ್ಲಿ ಉಪಯೋಗಿಸಿರುವ ಭಕ್ಷ್ಯಭೋಜ್ಯ ಅನ್ನಾದಿಗಳನ್ನು ಶಿಷ್ಯರು, ಪುತ್ರರು, ಹೊರತು ಶೂದ್ರಾದಿಗಳಿಗೆ ಕೊಡಬಾರದು. ಆದರೆ ಮೊಸರು, ತುಪ್ಪ, ಇವನ್ನು ಯಾರಿಗಾದರೂ ಕೊಡಬಹುದು,

೮೬. ಶ್ರಾದ್ಧದಲ್ಲಿ ಉಪಯೋಗಿಸದ ಅನ್ನಾದಿಗಳನ್ನೂ, ಫಲಪುಷ್ಪಾದಿಗಳನ್ನೂ ಯಾರಿಗಾದರೂ ಕೊಡಬಹುದು. ಮನುಷ್ಯರು ಅನ್ನದಾನದಿಂದ ವಿಶೇಷವಾಗಿ ಪ್ರೀತರಾಗುವರು. ಜಗತ್ತೇ ಅನ್ನಮಯವಾಗಿರುವುದು.

ಯಾವಂತ್ಯನ್ನಾನಿ ಪೂತಾನಿ ಯಾವದುಷ್ಣಂ ನ ಮುಂಚತಿ ।
ತಾವದಶ್ನಂತಿ ಪಿತರೋ ಯಾವದಶ್ನಂತಿ ವಾಗ್ಯತಾಃ ॥ ೮೭ ॥

ದಾನಂ ಪ್ರತಿಗ್ರಹೋ ಹೋಮೋ ಭೋಜನಂ ಬಲಿರೇವ ಚ ।
ಸಾಂಗುಷ್ಠೇನ ತಥಾ ಕಾರ್ಯಂ ನಾಸುರೇಭ್ಯೋ ಯಥಾ ಭವೇತ್ ॥ ೮೮ ॥

ಏತಾನ್ಯೇವ ಚ ಸರ್ವಾಣಿ ದಾನಾದೀನಿ ವಿಶೇಷತಃ ।
ಅಂತರ್ಜಾನ್ವವಿಶೇಷೇಣ ತದ್ವದಾಚಮನಂ ಭವೇತ್ ॥ ೮೯ ॥

ಮುಂಡಾಂಜಟಿಲಕಾಷಾಯಾನ್ ಶ್ರಾದ್ಧಕಾಲೇಪಿ ವರ್ಜಯೇತ್ ।
ಶಿಖಿಭ್ಯೋ ವಾ ತ್ರಿದಂಡಿಭ್ಯಃ ಶ್ರಾದ್ಧಂ ಯತ್ನಾತ್ ಪ್ರದಾಪಯೇತ್ ॥ ೯೦ ॥

---

೮೭. ಶ್ರಾದ್ಧದಲ್ಲಿ ಅನ್ನಾದಿಗಳು ಎಲ್ಲಿಯವರೆಗೂ ಪವಿತ್ರವಾಗಿಯೂ, ಉಷ್ಣವಾಗಿಯೂ, ವಾಙ್ನಿಯಮವಾಗಿಯೂ ಇರುತ್ತವೆಯೋ ಅಲ್ಲಿಯವರೆಗೂ ಪಿತೃಗಳು ತೃಪ್ತಿಯನ್ನು ಹೊಂದುವರು.

೮೮. ದಾನ, ಪ್ರತಿಗ್ರಹ, ಹೋಮ, ಭೋಜನ, ಬಲಿ ಇವುಗಳನ್ನು ಹೆಬ್ಬೆರಳಿನಿಂದ ಕೊಟ್ಟರೆ ಪಿತೃದೇವತೆಗಳಿಗೆ ಸೇರುತ್ತವೆ. ಇಲ್ಲದಿದ್ದರೆ ಅಸುರರಿಗೆ ಸೇರುವುದು, ಅಸುರರಿಗೆ ಹೋಗದ ಹಾಗೆ ದೇವತೆಗಳಿಗೆ ಸೇರುವಂತೆ ಮಾಡಬೇಕು.

೮೯. ಮೇಲೆ ಹೇಳಿರುವ ಸಮಸ್ತವಾದ ದಾನಗಳನ್ನೂ ವಿಶೇಷವಾಗಿ ಪದ್ಮಾಸನಾದಿಗಳನ್ನು ಹಾಕಿಕೊಂಡು ಕೊಡಬೇಕು. ಇದರಂತೆ ಪದ್ಮಾಸನದಿಂದಲೇ ಆಚಮನ ಜಪತಪಾದಿಗಳನ್ನು ಮಾಡಬೇಕು.

೯೦. ಶ್ರಾದ್ಧವನ್ನು ಮಾಡುವ ಕಾಲದಲ್ಲಿ ಮುಂಡರೂ, ತಲೆಬೋಳಿಸಿಕೊಂಡವರೂ, ಜಟಾಧಾರಿಗಳೂ, ಕಾಷಾಯವಸ್ತ್ರಧಾರಿಗಳೂ ಇವರನ್ನು ಸೇರಿಸಬಾರದು. ಅವರಿಗೆ ಅವಕಾಶವನ್ನೇ ಕೊಡಬಾರದು. ಮುಖ್ಯವಾಗಿ ಶಿಖಾವಂತರಿಗೂ ತ್ರಿದಂಡಿಗಳಿಗೂ ಕೂಡ ಪ್ರಯತ್ನಪೂರ್ವಕವಾಗಿ ಅನ್ನೋದಕಗಳನ್ನು ಕೊಡಬೇಕು.

ಯೇ ತು ವ್ರತೇ ಸ್ಥಿತಾ ನಿತ್ಯಂ ಜ್ಞಾನಿನೋ ಧ್ಯಾನಿನಸ್ತಥಾ ।
ದೇವಭಕ್ತಾ ಮಹಾತ್ಮಾನಃ ಪುನೀಯುರ್ದರ್ಶನಾದಪಿ ॥ ೯೧ ॥

ಸರ್ವಂ ಯೋಗೇಶ್ವರೈರ್ವ್ಯಾಪ್ತಂ ತ್ರೈಲೋಕ್ಯಂ ವೈ ನಿರಂತರಂ ।
ತಸ್ಮಾತ್ ಪಶ್ಯಂತಿ ತೇ ಸರ್ವಂ ಯತ್ಕಿಂಚಿಜ್ಜಗತೀಗತಂ ॥ ೯೨ ॥

ವ್ಯಕ್ತಾವ್ಯಕ್ತಂ ವಶೀಕೃತ್ಯ ಸರ್ವಸ್ಯಾಪಿ ಚ ಯತ್ಪರಂ ।
ಸದಸಚ್ಚೇತಿ ಯೈರ್ದೃಷ್ಟಂ ಸದಸಚ್ಚ ಮಹಾತ್ಮನಾಂ ॥ ೯೩ ॥

ಸರ್ವಜ್ಞಾನಾನಿ ದೃಷ್ಟಾನಿ ಮೋಕ್ಷಾದೀನಿ ಮಹಾತ್ಮನಾಂ ।
ತಸ್ಮಾತ್ತೇಷು ಸದಾಸಕ್ತಃ ಪ್ರಾಪ್ನೋತ್ಯನುತ್ತಮಂ ಶುಭಂ ॥ ೯೪ ॥

---

೯೧. ಯಾವ ಪುರುಷರು ನಿತ್ಯವ್ರತಿಗಳೂ, ಜ್ಞಾನಿಗಳೂ, ಧ್ಯಾನಿಗಳೂ, ದೇವಭಕ್ತರೂ, ಮಹಾತ್ಮರೂ ಆಗಿರುವರೋ ಅಂತಹ ಮಹಾತ್ಮರ ದರ್ಶನಭೋಜನಾದಿಗಳು ಪವಿತ್ರತೆಯನ್ನು ಕೊಡುವುದು.

೯೨. ಚರಾಚರಾತ್ಮಕವಾದ ಮೂರು ಲೋಕಗಳೂ ಯೋಗೀಶ್ವರರಿಂದ ಸರ್ವದಾ ವ್ಯಾಪ್ತವಾಗಿರುತ್ತವೆ. ಆದುದರಿಂದ ಅಂತಹ ಯೋಗೀಶ್ವರರು ಈ ಮೂರು ಲೋಕಗಳಲ್ಲಿಯೂ ನಡೆಯುವ ಸಮಸ್ತಕಾರ್ಯಗಳನ್ನೂ ಪ್ರತ್ಯಕ್ಷವಾಗಿ ನೋಡುತ್ತಿರುವರು.

೯೩. ಅಂತಹ ಮಹಾತ್ಮರು ವ್ಯಕ್ತಗಳಾದ ಪಂಚಭೂತಾದಿಗಳನ್ನೂ ಅವ್ಯಕ್ತಗಳಾದ ಮಹತ್ತತ್ವಾದಿಗಳನ್ನೂ ವಶಪಡಿಸಿಕೊಂಡು ಈ ಸಮಸ್ತವಸ್ತುಗಳಿಗಿಂತಲೂ ಯಾವುದು ಉತ್ತಮವಾಗಿದೆಯೋ ಮತ್ತು ಸದಸದ್ರೂಪವಾಗಿಯೂ ಮಹಾತ್ಮರಿಂದ ದೃಷ್ಟವಾಗಿಯೂ ಇರುವುದೋ ಅಂತಹ ಪರಾಪರವಸ್ತುಗಳನ್ನು ತಿಳಿದಿರುವರು.

೯೪. ಮಹಾತ್ಮರು, ಸರ್ವಜ್ಞರೂ ಮೋಕ್ಷಾದಿಸ್ವರೂಪವನ್ನು ತಿಳಿದಿವರೂ ಆಗಿರುವರು. ಆದುದರಿಂದ ಸದಾ ಅವರಲ್ಲಿ ಭಕ್ತಿಯಿಂದಿರಬೇಕು. ಹೀಗೆ ಮಹಾತ್ಮರು ಭಕ್ತಿಯಿಂದ ಪೂಜಿತರಾದರೆ ಮೋಕ್ಷಾದಿ ಮಹಾಫಲವನ್ನು ಕೊಡುವರು.

**ಋಚೋ ಹಿ ಯೋ ವೇದ ಸ ವೇದ ವೇದಾನ್**
**ಯಜೂಂಷಿ ಯೋ ವೇದ ಸ ವೇದ ಯಜ್ಞಂ ।**
**ಸಾಮಾನಿ ಯೋ ವೇದ ಸ ವೇದ ಬ್ರಹ್ಮ**
**ಯೋ ಮಾನಸಂ ವೇದ ಸ ವೇದ ಸರ್ವಂ || ೯೫ ||**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಶ್ರಾದ್ಧಕಲ್ಪೇ "**
**ನಾಮ ಸಪ್ತದಶೋಽಧ್ಯಾಯಃ**

---

೯೫. ಯಾವನು ಋಗ್ವೇದವನ್ನು ಚೆನ್ನಾಗಿ ತಿಳಿಯುವನೋ ಅವನು ಸಕಲ ವೇದಗಳನ್ನೂ ತಿಳಿದಿರುವನು. ಯಾವನು ಯಜುರ್ವೇದವನ್ನು ಸರಿಯಾಗಿ (ಸಂಪೂರ್ಣವಾಗಿ) ತಿಳಿಯುತ್ತಾನೆಯೋ ಅವನು ಯಜ್ಞಯಾಗಾದಿಗಳನ್ನು ಚೆನ್ನಾಗಿ ತಿಳಿಯಬಲ್ಲನು. ಯಾವನು ಸಾಮವೇದವನ್ನು ಚೆನ್ನಾಗಿ ತಿಳಿದಿರುವನೋ, ಅವನು ಬ್ರಹ್ಮಸ್ವರೂಪವನ್ನು ಸಂಪೂರ್ಣವಾಗಿ ತಿಳಿಯಬಲ್ಲನು. ಯಾವನು ಮನಸ್ತತ್ವವನ್ನು ತಿಳಿಯುವನೋ ಅವನು ಎಲ್ಲವನ್ನೂ ತಿಳಿಯುವನು ಮತ್ತು ಸರ್ವಜ್ಞಾನಿಯಾಗುವನು ಎಂದು ಮುನಿಯು ಮಹರ್ಷಿಗಳಿಗೆ ತಿಳಿಸಿದನು.

ಇಲ್ಲಿಗೆ ವಾಯುಪ್ರೋಕ್ತವಾದ ಮಹಾಪುರಾಣದ " ಶ್ರಾದ್ಧಪ್ರಕರಣದಲ್ಲಿ
ಬ್ರಾಹ್ಮಣರ ಪರೀಕ್ಷೆ "ಯೆಂಬ ಹದಿನೇಳನೆಯ ಅಧ್ಯಾಯವು
ಮುಗಿದುದು.

ಅಧ್ಯಾಯ ೧೭

## ಹದಿನೇಳನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ಬ್ರಾಹ್ಮಣಾದಿ ಪರೀಕ್ಷಾವಿಚಾರಗಳು ವರ್ಣಿತವಾಗಿವೆ. ಬ್ರಾಹ್ಮಣರ ಪರಿಚಯವಿಲ್ಲದಿದ್ದರೆ ಅಭ್ಯಾಗತನಾದ ಅತಿಥಿಯನ್ನು ಪರೀಕ್ಷಿಸಿ ಸ್ವೀಕರಿಸಬೇಕು. ಏಕೆಂದರೆ ಸಿದ್ಧಪುರುಷರೇ ಬ್ರಾಹ್ಮಣರ ವೇಷದಿಂದ ಲೋಕಕಲ್ಯಾಣಕ್ಕಾಗಿ ಲೋಕದಲ್ಲಿ ಸಂಚರಿಸುವರು. ಇವರಂತೆ ಪಿತೃದೇವತೆಗಳೂ, ಯೋಗೀಶ್ವರರೂ, ಸಹ ಲೋಕಹಿತಕ್ಕಾಗಿ ಸಂಚರಿಸುವರು. ಆದುದರಿಂದ ಯೋಗ್ಯರಾದ ಅತಿಥಿಗಳು ಮನೆಗೆ ಬಂದರೆ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಬೇಕು. ದೇವತೆಗಳು, ಪಿತೃಗಳು, ಅಗ್ನಿಗಳು, ಇಂತಹ ಬ್ರಾಹ್ಮಣರಲ್ಲಿ ಆವಿಷ್ಟರಾಗಿರುವರು. ಅವರಿಂದ [illegible] ಕಲ್ಯಾಣಗಳೂ ಉಂಟಾಗುವುವು.

ಬ್ರಾಹ್ಮಣಾದಿಗಳು ಜಲಮಲವಿಸರ್ಜನೆಗಾಗಿ ಊರ ಹೊರಗೆ ಹೋಗಬೇಕು. ಹಾಗೆ ವಿಸರ್ಜಿಸಿದ ತರುವಾಯ ಕೈಕಾಲುಗಳನ್ನು ಮೃತ್ತಿಕಾದಿಗಳಿಂದ ಶುದ್ಧಮಾಡಬೇಕು. ಶ್ರಾದ್ಧದಲ್ಲಿ ಕರ್ತೃ, ಭೋಕ್ತೃಗಳಿಬ್ಬರೂ ನಿಯಮಿತರಾಗಿರಬೇಕು. ಮುಂಡರು ಪಾಷಂಡಾದಿಗಳಿಗೆ ಶ್ರಾದ್ಧದಲ್ಲಿ ಭೋಜನಮಾಡಿಸಿದರೆ ಅದು ರಾಕ್ಷಸರಿಗೆ ಸೇರುವುದು. ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಯತಿ, ಇವರಿಗೆ ಶ್ರಾದ್ಧದಲ್ಲಿ ಉಪಚರಿಸಿದರೆ ಉತ್ತರೋತ್ತರವಾಗಿ ಮಹಾಫಲವು ಸಂಭವಿಸುವುದು. ಇವರಿಗೆ ಕೊಟ್ಟ ದಾನವು ಅನಂತಫಲದಾಯಕವಾಗುವುದು. ವೇದವೇತ್ತೃಗಳಿಗೆ ಕೊಟ್ಟರೂ ಅನಂತಫಲವು ಸಂಭವಿಸುವುದು ಎಂಬ ವಿಷಯಗಳು ಉಕ್ತವಾಗಿವೆ.



—: ಹರಿಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ಅಷ್ಟಾದಶೋಽಧ್ಯಾಯಃ

**॥ ಬೃಹಸ್ಪತಿರುವಾಚ ॥**

**ಅತಃ ಪರಂ ಪ್ರವಕ್ಷ್ಯಾಮಿ ದಾನಾನಿ ಚ ಫಲಾನಿ ಚ ।**
**ತಾರಣಂ ಸರ್ವಭೂತಾನಾಂ ಸ್ವರ್ಗಮಾರ್ಗಂ ಸುಖಾವಹಂ ॥ ೧ ॥**

**ಲೋಕೇ ಶ್ರೇಷ್ಠತಮಂ ಸ್ವರ್ಗ್ಯಂ ಆತ್ಮನಶ್ಚಾಪಿ ಯತ್ ಪ್ರಿಯಂ ।**
**ಸರ್ವಂ ಪಿತೄಣಾಂ ದಾತವ್ಯಂ ತೇಷಾಮೇವಾಕ್ಷಯಾರ್ಥಿನಾ ॥ ೨ ॥**

---

## ಹದಿನೆಂಟನೆಯ ಅಧ್ಯಾಯವು

೧. ಬೃಹಸ್ಪತ್ಯಾಚಾರ್ಯನು ಹೇಳಿದನು :—ಈಗ ಈ ಅಧ್ಯಾಯದಲ್ಲಿ ದಾನಮಾಡಬೇಕಾದ ವಸ್ತುಗಳು ಆವುವು. ಅವುಗಳಿಂದ ಯಾವ ಯಾವ ಫಲಗಳು ಉಂಟಾಗುವುವು. ಸ್ವರ್ಗಲೋಕವು ಸರ್ವಭೂತಗಳಿಗೂ, ಮಹಾಸುಖಗಳನ್ನು ಕೊಡುತ್ತದೆ.

೨. ಲೋಕಗಳಲ್ಲಿ ಶ್ರೇಷ್ಠವಾದದ್ದು ಸ್ವರ್ಗಲೋಕವು. ತನಗೆ ಯಾವ ವಸ್ತುಗಳು ಅತಿಪ್ರಿಯವಾಗಿವೆಯೋ ಅಂತಹ ವಸ್ತುಗಳನ್ನೂ ಪಿತೃಗಳಿಗೆ ಅಕ್ಷಯವಾದ ಶಾಶ್ವತವಾದ ಪದವಿಯನ್ನು ಕೊಡಿಸುವುದಕ್ಕಾಗಿ ಎಲ್ಲವನ್ನೂ ದಾನಮಾಡಬೇಕು. ಇದರಿಂದ ಮಹಾಫಲವು ಸಂಭವಿಸುವುದು.

ಜಾಂಬೂನದಮಯಂ ದಿವ್ಯಂ ವಿಮಾನಂ ಸೂರ್ಯಸನ್ನಿಭಂ |
ದಿವ್ಯಾಪ್ಸರೋಭಿಃ ಸಂಕೀರ್ಣಮನ್ನದೋ ಲಭತೇ ಫಲಂ || ೩ ||

ಆಚ್ಛಾದನಂ ತು ಯೋ ದದ್ಯಾದಾಹತಂ ಶ್ರಾದ್ಧಕರ್ಮಣಿ |
ಆಯುಃ ಪ್ರಕಾಮಮೈಶ್ವರ್ಯಂ ರೂಪಂ ಚ ಲಭತೇ ಸುತಂ || ೪ ||

ಉಪವೀತಂ ತು ಯೋ ದದ್ಯಾಚ್ಛ್ರಾದ್ಧಕಾಲೇಷು ಧರ್ಮವಿತ್ |
ಪಾನಂ ಚ ಸರ್ವವಿಪ್ರಾಣಾಂ ಬ್ರಹ್ಮದಾನಸ್ಯ ಯತ್ ಫಲಂ || ೫ ||

ಕೃತಂ ವಿಪ್ರೇಷು ಯೋ ದದ್ಯಾಚ್ಛ್ರಾದ್ಧಕಾಲೇ ಕಮಂಡಲುಂ |
ಮಧುಕ್ಷೀರಸ್ರವಾ ಧೇನುರ್ದಾತಾರಮುಪತಿಷ್ಠತಿ || ೬ ||

---

೩. ಯಾವನು ಶ್ರಾದ್ಧದಲ್ಲಿ ಪಿತೃಗಳ ಉದ್ದೇಶ್ಯಕವಾಗಿ ಅನ್ನದಾನವನ್ನು ಮಾಡುವನೋ ಅವನು ಸುವರ್ಣಮಯವೂ ಸೂರ್ಯನಂತೆ ಪ್ರಕಾಶಮಾನವೂ ಆದ ದಿವ್ಯವಿಮಾನದಲ್ಲಿ ಸುಂದರಿಯರಾದ ಅಪ್ಸರಸ್ತ್ರೀಯರ ಸಂಗಡ ದಿವ್ಯಸುಖವನ್ನು ಹೊಂದುವನು.

೪. ಯಾವ ಪುರುಷನು ಶ್ರಾದ್ಧಕರ್ಮದಲ್ಲಿ ಪಿತೃಗಳಿಗೋಸ್ಕರ ಭಕ್ತಿಯಿಂದ ಹರಿದುಹೋಗದ ನೂತನ ವಸ್ತ್ರಗಳನ್ನು ದಾನಮಾಡುವನೋ ಅವನು ಮಹದಾಯುಷ್ಯ ಮಹದೈಶ್ವರ್ಯ, ದಿವ್ಯರೂಪ, ಯೋಗ್ಯನಾದ ಸುತ ಇವರನ್ನು ಹೊಂದುವನು.

೫. ಯಾವನು ಶ್ರಾದ್ಧದಲ್ಲಿ ಬ್ರಾಹ್ಮಣರಿಗೆ ಯಜ್ಞೋಪವೀತಉದಕಾದಿಗಳನ್ನು ದಾನಮಾಡುವನೋ, ಅಂತಹ ಧರ್ಮಾತ್ಮನು ವೇದಾಧ್ಯಯನವನ್ನು ಮಾಡಿಸಿದ ಮಹಾಫಲವನ್ನು ಹೊಂದುವನು.

೬. ಯಾವ ಪುರುಷನು ಶ್ರಾದ್ಧಕಾಲದಲ್ಲಿ (ಕಮಂಡಲು) ಝಾರಿಯೇ ಮೊದಲಾದ ಉದಕುಂಭಾದಿ ದಾನವನ್ನು ಮಾಡವನೋ ಅವನು ರುಚಿಯಾದ ಹಾಲನ್ನು ಕರೆಯುವ ಹಸುಗಳನ್ನು ಪಡೆಯುವನು. ಅವನಿಗೆ ಅನೇಕ ಗೋವುಗಳು ಲಭಿಸುವುವು.

ಚಕ್ರಾವಿದ್ಧಂ ತು ಯೋ ದದ್ಯಾಚ್ಛ್ರಾದ್ಧಕಾಲೇ ಕಮಂಡಲುಂ ।
ಧೇನುಂ ಸ ಲಭತೇ ದಿವ್ಯಾಂ ಪಯೋದಾಂ ಕಾಮ್ಯದೋಹಿನೀಂ ॥ ೭ ॥

ಪರ್ಣಶಯ್ಯಾಂ ತು ದದ್ಯಾತ್ ಪುಷ್ಪಮಾಲಾವಿಭೂಷಿತಾಂ ।
ಪ್ರಾಸಾದೋ ಹ್ಯುತ್ತಮೋ ಭೂತ್ವಾ ಗಚ್ಛಂತಮನುಗಚ್ಛತಿ ॥ ೮ ॥

ಭವನಂ ರತ್ನಸಂಪೂರ್ಣಂ ಸಶಯ್ಯಾಸನಭೋಜನಂ ।
ಶ್ರಾದ್ಧೇ ದತ್ವಾ ಯತಿಭ್ಯಸ್ತು ನಾಕಪೃಷ್ಠೇ ಸ ಮೋದತೇ ॥ ೯ ॥

ಮುಕ್ತಾವೈದೂರ್ಯವಾಸಾಂಸಿ ರತ್ನಾನಿ ವಿವಿಧಾನಿ ಚ ।
ವಾಹನಾನಿ ಚ ದಿವ್ಯಾನಿ ಅಯುತಾನ್ಯರ್ಬುದಾನಿ ಚ ॥ ೧೦ ॥

---

೭. ಯಾವನು ಚಕ್ರದಿಂದ ಕಡಿದ ಸುಂದರವಾದ ಕಮಂಡಲುವನ್ನು ಬ್ರಾಹ್ಮಣರಿಗೆ ದಾನಮಾಡುವನೋ ಅವನು ಸಮೃದ್ಧವಾದ ಕ್ಷೀರವನ್ನು ಕೊಡುವ ದಿವ್ಯವಾದ ಕಾಮಧೇನುವಂತಿರುವ ಗೋವುಗಳನ್ನು ಹೊಂದುವನು.

೮. ಶ್ರಾದ್ಧಕಾಲದಲ್ಲಿ ಉತ್ತಮವಾದ ಶಯ್ಯಾದಾನವನ್ನು ಮಾಡಿದರೆ, ಆ ದಾನವು ದಿವ್ಯವಾದ ಅರಮನೆಯಂತೆ ವಿಕಾರವಾಗಿ ಯಜಮಾನನು ಎಲ್ಲಿ ಹೋದರೂ ಅಲ್ಲಿ ಸಿದ್ಧವಾಗುವದು. ಅಂದರೆ ಶಯ್ಯಾದಾನವನ್ನು ಮಾಡಿದರೆ ದಿವ್ಯವಾದ ಅರಮನೆಯು ಪ್ರಾಪ್ತವಾಗುವುದು.

೯. ಯಾವನು ಶ್ರಾದ್ಧಕಾಲದಲ್ಲಿ ರತ್ನಗಳಿಂದ ಭರಿತವೂ ಶಯ್ಯಾ ಆಸನ ಭೋಜನಸಾಮಗ್ರಿಗಳಿಂದ ಪೂರ್ಣವೂ ಆದ ಗೃಹದಾನವನ್ನು ಯತಿಗಳಿಗೆ ಕೊಡುತ್ತಾನೆಯೋ ಅಂತಹ ಮಹಾತ್ಮನು ಸ್ವರ್ಗಲೋಕದಲ್ಲಿ ಮಹಾಸೌಖ್ಯವನ್ನು ಅನುಭವಿಸುವನು.

೧೦–೧೧. ಮುತ್ತು ರತ್ನ ವೈಡೂರ್ಯ ಇವುಗಳಿಂದ ಅಲಂಕೃತವೂ ವಿವಿಧ ರತ್ನಗಳಿಂದಲೂ ವಸ್ತ್ರಗಳಿಂದಲೂ ಅಲಂಕೃತವೂ ನಾನಾ ವಿಧಗಳೂ ದಿವ್ಯವೂ ಅಸಂಖ್ಯಾಕವೂ ಆದ ವಾಹನಗಳನ್ನು ದಾನಮಾಡಿದರೆ, ಮಹಾತೇಜೋಯುತವೂ

**ಸುಮಹಜ್ವಲನಪ್ರಖ್ಯಂ ರತ್ನಕಾಮುಸಮನ್ವಿತಂ ।**
**ಸೂರ್ಯಚಂದ್ರಪ್ರಭಂ ದಿವ್ಯಂ ವಿಮಾನಂ ಲಭತೇಕ್ಷಯಂ ॥ ೧೧ ॥**

**ಅಪ್ಸರೋಭಿಃ ಪರಿವೃತಂ ಕಾಮುಗಂ ತು ಮನೋಜವಂ ।**
**ವಸತೇ ಸ ವಿಮಾನಾಗ್ರೇ ಸ್ತೂಯಮಾನಃ ಸಮಂತತಃ ॥ ೧೨ ॥**

**ದಿವ್ಯೈರ್ಗಂಧೈಃ ಪ್ರಸಿಂಚಂತಿ ಪುಷ್ಪವೃಷ್ಟಿಭಿರೇವ ಚ ।**
**ಗಂಧರ್ವಾಪ್ಸರಸಸ್ತತ್ರ ಗಾಯಂತೇ ವಾದಯಂತಿ ಚ ॥ ೧೩ ॥**

**ಕನ್ಯಾ ಯುವತಯೋ ಮುಖ್ಯಾಃ ಸಹಿತಾಶ್ಚಾಪ್ಸರೋಗಣೈಃ ।**
**ಸುಸ್ವರೈಸ್ತಂ ವಿಬುಧ್ಯಂತೇ ಸತತಂ ಹಿ ಮನೋರಮೈಃ ॥ ೧೪ ॥**

---

ನಾನಾ ರತ್ನಗಳಿಂದ ಮಂಡಿತವೂ ಸೂರ್ಯಚಂದ್ರರಂತೆ ಕಾಂತಿಯುಕ್ತವೂ ದಿವ್ಯವೂ ನಾಶರಹಿತವೂ ಸಕಲಾಭೀಷ್ಟದಾಯಕವೂ ಆದ ವಿಮಾನವನ್ನು ಪಡೆದು ದಿವ್ಯಸುಖವನ್ನು ಹೊಂದುವನು.

೧೨. ಮತ್ತು ಅಪ್ಸರಸ್ತ್ರೀಯರಿಂದ ವ್ಯಾಪ್ತವೂ, ಸ್ವೇಚ್ಛಾಚಾರಿಯೂ, ಮನೋವೇಗವುಳ್ಳದ್ದೂ ಆದ ದಿವ್ಯವಿಮಾನದಲ್ಲಿ ಅಲಂಕೃತನಾಗಿ ಗಂಧರ್ವರಿಂದ ಹೊಗಳಲ್ಪಡುತ್ತಾ ಪ್ರಕಾಶಿಸುವನು.

೧೩. ಗಂಧರ್ವರು ಅತ್ಯಂತ ಸುವಾಸನೆಯಾಗಿರುವ ಪುಷ್ಪಗಳಿಂದ ವೃಷ್ಟಿಯನ್ನು ಕರೆಯುವರು. ಗಂಧರ್ವರು ಮತ್ತು ಅಪ್ಸರಸ್ತ್ರೀಯರು ವಿಮಾನದಲ್ಲಿ ಕುಳಿತು ಗಾನವನ್ನು ಮಾಡುವರು, ಮತ್ತು ದಿವ್ಯವಾದ್ಯಗಳನ್ನು ಬಾರಿಸುವರು.

೧೪. ದೇವಕನ್ನಿಕೆಯರೂ, ತರುಣೀಮಣಿಗಳೂ, ಸಹ ಅಪ್ಸರಸ್ತ್ರೀಯರಿಂದ ಸಹಿತರಾಗಿ ಮನೋಹರವೂ, ಸುಸ್ವರವೂ, ಆದ ದಿವ್ಯಗಾನದಿಂದ ಸಂತೋಷಗೊಳಿಸುವರು.

**ಅಶ್ವದಾನಸಹಸ್ರೇಣ ರಥದಾನಶತೇನ ಚ |**
**ದಂತಿನಾಂ ಚ ಸಹಸ್ರೇಣ ಯೋಗಿನ್ಯಾ ವಸತೇ ನರಃ || ೧೫ ||**

**ದದ್ಯಾತ್ ಪಿತೃಭ್ಯೋ ಯೋಗಿಭ್ಯೋ ಯುಸ್ತೂಜ್ಜ್ವಲನಮಂಭಸಿ |**
**ಅಥ ನಿಷ್ಕಸಹಸ್ರಾಣಾಂ ಫಲಂ ಪ್ರಾಪ್ನೋತಿ ಮಾನವಃ || ೧೬ ||**

**ಜೀವಿತಸ್ಯ ಪ್ರದಾನಾದ್ಧಿ ನಾನ್ಯದ್ದಾನಂ ವಿಶಿಷ್ಯತೇ |**
**ತಸ್ಮಾತ್ ಸರ್ವಪ್ರಯತ್ನೇನ ದೇಯಂ ಪ್ರಾಣಾಭಿರಕ್ಷಣಂ || ೧೭ ||**

**ಅಹಿಂಸಾ ಸರ್ವದೇವೇಭ್ಯಃ ಪವಿತ್ರಾ ಸರ್ವದಾಯಿನೀ |**
**ದಾನಂ ಹಿ ಜೀವತಸ್ಯಾಹುಃ ಪ್ರಾಣಿನಾಂ ಪರಮಂ ಬುಧಾಃ || ೧೮ ||**

---

೧೫. ಪುರುಷರು ಸಹಸ್ರಾರು ಅಶ್ವದಾನದಿಂದಲೂ, ನೂರಾರು ರಥಗಳ ದಾನಗಳಿಂದಲೂ, ಸಾವಿರಾರು ಗಜಗಳ ದಾನಗಳಿಂದಲೂ, ಉಂಟಾದ ಸುಕೃತದಿಂದ ಯೋಗಿನಿಯರೊಡನೆ ವಾಸಮಾಡುವರು.

೧೬ ಯಾವನು ಶ್ರಾದ್ಧಕರ್ಮದಲ್ಲಿ ಪಿತೃಗಳ ಉದ್ದೇಶ್ಯವಾಗಿ ಪಿತೃಗಳಿಗೂ ಯೋಗಿಗಳಿಗೂ ದಿವ್ಯವಾಗಿ ಪ್ರಕಾಶಿಸುವ ಅಗ್ನಿಯುಳ್ಳ ಅಗ್ಗಿಷ್ಟಿಕೆ ಮೊದಲಾದವುಗಳನ್ನೂ ಜಲಭರಿತವಾದ ಕುಂಭವನ್ನೂ ದಾನಮಾಡುವನೋ, ಅವನು ಸಹಸ್ರ ಸುವರ್ಣ ದಾನವನ್ನು ಮಾಡಿದ ಫಲವನ್ನು ಹೊಂದಿ ಸುಖಿಯಾಗುವನು.

೧೭. ಪರರು ಕೇವಲ ದುಃಖಿಸುತ್ತಿರುವಾಗ ಅಂತಹವರಿಗೆ ಸಹಾಯವನ್ನು ಮಾಡಿ ಜೀವದಾನವನ್ನು ಮಾಡುವುದು ಎಲ್ಲಾ ದಾನಕ್ಕಿಂತಲೂ ಶ್ರೇಷ್ಠವಾಗಿರುವುದು. ಆದುದರಿಂದ ಸರ್ವಪ್ರಯತ್ನದಿಂದಲೂ ಪ್ರಾಣದಾನವನ್ನು ಮಾಡುವುದು ಅತ್ಯುತ್ತಮವಾಗಿರುವುದು.

೧೮. ಅಹಿಂಸಾರೂಪವಾದ ದಾನವು ಸಮಸ್ತ ದೇವತೆಗಳಿಗೆ ಪ್ರಿಯವಾಗಿಯೂ, ಪವಿತ್ರವಾಗಿಯೂ, ಸರ್ವಾರ್ಥದಾಯಕವಾಗಿಯೂ ಇರುವುದು. ಜ್ಞಾನಿಗಳು ಸರ್ವ ದಾನಕ್ಕಿಂತಲೂ ಜೀವಿತ ದಾನವೇ ಉತ್ತಮವಾದುದೆಂದು ಹೇಳುವರು.

ಲಕ್ಷಣಾನಿ ಸುವರ್ಣಾನಿ ಶ್ರಾದ್ಧೇ ಪಾತ್ರಾಣಿ ದಾಪಯೇತ್ ।
ರಸಾಸ್ತಮುಪತಿಷ್ಠಂತಿ ಭಕ್ಷ್ಯಾಃ ಸೌಭಾಗ್ಯಮೇವ ಚ ॥ ೧೯ ॥

ಪಾತ್ರಂ ವೈ ತೈಜಸಂದದ್ಯಾನ್ಮನೋಜ್ಞಂ ಶ್ರಾದ್ಧಭೋಜನೇ ।
ಪಾತ್ರಂ ಭವತಿ ಕಾಮಾನಾಂ ರೂಪಸ್ಯ ಚ ಧನಸ್ಯ ಚ ॥ ೨೦ ॥

ರಾಜತಂ ಕಾಂಚನಂ ವಾಪಿ ದದ್ಯಾಚ್ಛ್ರಾದ್ಧೇ ತು ಕರ್ಮಣಿ ।
ದತ್ವಾ ತು ಲಭತೇ ದಾತಾ ಪ್ರಕಾಮಂ ಧರ್ಮಮೇವ ಚ ॥ ೨೧ ॥

ಧೇನುಂ ಶ್ರಾದ್ಧೇ ತು ಯೋದದ್ಯಾದ್ವೃಷ್ಟಿಕುಂಭೋಪದೋಹನಾಂ ।
ಗಾವಸ್ತಮುಪತಿಷ್ಠಂತಿ ಗವಾಂ ಪುಷ್ಟಿಸ್ತಥೈವ ಚ ॥ ೨೨ ॥

---

೧೯. ಪುರುಷರು ಶ್ರಾದ್ದದಲ್ಲಿ ಸುಲಕ್ಷಣಗಳಾದ ಸುವರ್ಣಮಯವಾದ ಪಾತ್ರೆಗಳನ್ನು ದಾನಮಾಡಬೇಕು. ಅಂತಹ ಪುರುಷನಿಗೆ ನಾನಾ ರಸವತ್ತಾದ ವಸ್ತುಗಳೂ ಭಕ್ಷ್ಯಭೋಜ್ಯಗಳೂ ಸೌಭಾಗ್ಯಗಳೂ ಉಂಟಾಗುವುವು.

೨೦. ಶ್ರಾದ್ಧಭೋಜನದಲ್ಲಿ ಉತ್ತಮವಾದ ಪಾತ್ರದಾನವನ್ನು ಮಾಡಿದರೆ ದಿವ್ಯತೇಜಸ್ಸುಂಟಾಗುವುದು. ಇಂತಹ ಪಾತ್ರದಾನದಿಂದ ಮನೋರಥಸಿದ್ಧಿಗಳೂ ದಿವ್ಯಸೌಂದರ್ಯವೂ, ಮಹದೈಶ್ವರ್ಯವೂ ಉಂಟಾಗುವುವು.

೨೧. ಶ್ರಾದ್ಧಕಾಲದಲ್ಲಿ ಪುರುಷರು ಯೋಗ್ಯತಾನುಗುಣವಾಗಿ ಸುವರ್ಣದ ಪಾತ್ರೆ, ಬೆಳ್ಳಿಯಪಾತ್ರೆ ಮೊದಲಾದುವುಗಳನ್ನು ದಾನಮಾಡಬೇಕು. ಹೀಗೆ ದಾನ ಮಾಡಿದರೆ ಮಹಾಧರ್ಮದ ಫಲವನ್ನು ಪಡೆಯುವರು

೨೨. ಯಾವನು ಶ್ರಾದ್ಧಕಾಲದಲ್ಲಿ ಗೋದಾನವನ್ನು ಮಾಡುತ್ತಾನೆಯೋ ಮತ್ತು ಹಾಲುಕರೆಯಲು ಯೋಗ್ಯವಾದ ಪಾತ್ರೆಯನ್ನೂ ಕೊಡುವನೋ ಅವನಿಗೆ ಗೋಸಮೃದ್ಧಿಗಳುಂಟಾಗುವುವು. ಅವನ ಮನೆಯಲ್ಲಿ ಹಸುಗಳು ಸಮೃದ್ಧವಾಗುವುವು.

ಶಿಶಿರೇಷು ತಥಾ ತ್ವಗ್ನಿಂ ಬಹುಕಾಷ್ಠಂ ತಥೈವ ಚ ।
ಇಂಧನಾನಿ ತು ಯೋ ದದ್ಯಾದ್ವಿಜೇಭ್ಯಃ ಶಿಶಿರಾಗಮೇ ॥ ೨೩ ॥

ನಿತ್ಯಂಜಯತಿ ಸಂಗ್ರಾಮೇ ಶ್ರಿಯಾ ಯುಕ್ತಶ್ಚ ದೀಪ್ಯತೇ ।
ಸುರಭೀಣಿ ಚ ಮಾಲ್ಯಾನಿ ಗಂಧವಂತಿ ತಥೈವ ಚ ॥ ೨೪ ॥

ಪೂಜಯಿತ್ವಾ ತು ಪಾತ್ರಾಣಿ ಶ್ರಾದ್ಧೇ ಸತ್ಕೃತ್ಯ ದಾಪಯೇತ್ ।
ಗಂಧವಾಹಾ ಮಹಾನದ್ಯಃ ಸುಖಾನಿ ವಿವಿಧಾನಿ ಚ ॥ ೨೫ ॥

ದಾತಾರಮುಪತಿಷ್ಠಂತಿ ಯುವತ್ಯಶ್ಚ ಮನೋರಮಾಃ ।
ಶಯನಾಸನಾನಿ ರಮ್ಯಾಣಿ ಭೂಮಯೋ ವಾಹನಾನಿ ಚ ॥ ೨೬ ॥

ಶ್ರಾದ್ಧೇಷ್ವೇತಾನಿ ಯೋ ದದ್ಯಾದಶ್ವಮೇಧಫಲಂ ಲಭೇತ್ ।
ಶ್ರಾದ್ಧಕಾಲೇ ನಿವೇದ್ಯಂ ಚ ದರ್ಶಶ್ರಾದ್ಧ ಉಪಸ್ಥಿತೇ ॥ ೨೭ ॥

ವಿಪ್ರಾಣಾಂ ಗುಣಯುಕ್ತಾನಾಂ ಸ್ಮೃತಿಂ ಮೇಧಾಂ ಚ ವಿಂದತಿ ।
ಸರ್ಪಿಷ್ಪೂರ್ಣಾನಿ ಪಾತ್ರಾಣಿ ಶ್ರಾದ್ಧೇ ಸತ್ಕೃತ್ಯ ದಾಪಯೇತ್ ॥ ೨೮ ॥

---

೨೩–೨೬. ಹಿಮಕಾಲದಲ್ಲಿ ಯಾವನು ಅಗ್ನಿ, ಸೌದೆಯರಾಶಿ, ಕಡ್ಡಿ, ಮೊದಲಾದುವುಗಳನ್ನು ಪಿತೃಗಳ ಉದ್ದೇಶ್ಯವಾಗಿ ದಾನಮಾಡುವನೋ ಸದ್ಬ್ರಾಹ್ಮಣನಿಗೆ ದಾನಮಾಡಿದ ಅಂತಹ ಸಂಗ್ರಾಮದಲ್ಲಿ ನಿತ್ಯವಾದ ಜಯವು ಉಂಟಾಗುವುದು. ಮಹದೈಶ್ವರ್ಯವಂತನಾಗಿ ಪ್ರಕಾಶಿಸುವನು. ಮತ್ತು ಶ್ರಾದ್ಧಕಾಲದಲ್ಲಿ ಸುವಾಸನೆಯಾಗಿರುವ ಗಂಧಮಾಲ್ಯ ಧೂಪ ದೀಪಾದಿ ಪಾತ್ರೆಗಳನ್ನು ದಾನಮಾಡಿದರೆ ಸುಖಕರವಾದ ಮಂದಮಾರುತ, ವಿವಿಧವಾದ ಮಹಾನದಿಗಳು, ವಿವಿಧವಾದ ಭೋಗ್ಯವಸ್ತುಗಳು ಅತ್ಯಂತ ಮನೋಹರರಾದ ಸುಂದರಿಯರು; ರಮ್ಯವಾದ ಶಯನ, ಆಸನ, ವಾಹನ, ಭೂಮಿ ಇವುಗಳನ್ನು ಪಡೆದು ನಿತ್ಯಸುಖಿಯಾಗಿರುವನು.

೨೭–೨೮. ಶ್ರಾದ್ಧದಲ್ಲಿ ಯಾವನು ವಿಶ್ವಾಸದಿಂದ ಪೂರ್ವೋಕ್ತಗಳಾದ ದಾನಗಳನ್ನು ಕೊಡುವನೋ ಅವನು ಅಶ್ವಮೇಧ ಫಲವನ್ನು ಹೊಂದುವನು. ದರ್ಶಶಾದ್ಧವು ಬಂದಾಗ ಗುಣವಂತರಾದ ಬ್ರಾಹ್ಮಣರ ಭೋಜನಾದಿಗಳನ್ನು ಮಾಡಿಸಿದರೆ ಸ್ಮರಣಶಕ್ತಿಯೂ ದಿವ್ಯಜ್ಞಾನವೂ ಸಂಭವಿಸುವುವು. ಶ್ರಾದ್ಧದಲ್ಲಿ ತುಪ್ಪದಿಂದ ಪೂರ್ಣವಾದ ಪಾತ್ರೆಯನ್ನು (ಘೃತದಾನವನ್ನು) ದಾನಮಾಡಿದರೆ ದಿವ್ಯಜ್ಞಾನವು ಉಂಟಾಗುವುದು.

ಕುಂಭದೋಹನದೇನೂನಾಂ ಬಹ್ವೀನಾಂ ಚ ಫಲಂ ಲಭೇತ್ ।
ಅಸ್ಮಿಂಸ್ತು ಮೋದತೇ ಲೋಕೇ ಸ್ಯಂದನೈಶ್ಚ ಸುವಾಹನೈಃ ॥ ೨೯ ॥

ಶಾದ್ದೇ ಯಥೇಪ್ಸಿತಂ ದತ್ವಾ ಪುಂಡರಿಕಸ್ಯ ಯತ್ಫಲಂ ।
ರಮ್ಯಮಾವಸಥಂ ದತ್ವಾ ರಾಜಸೂಯಫಲಂ ಲಭೇತ್ ॥ ೩೦ ॥

ವನಂ ಪುಷ್ಪಫಲೋಪೇತಂ ದತ್ವಾ ಸೌರಭಮಶ್ನುತೇ ।
ಕೂಪಾರಾಮತಡಾಗಾಗಿ ಕ್ಷೇತ್ರಘೋಷಗೃಹಾಣಿ ಚ ॥ ೩೧ ॥

ದತ್ವೈತಾನ್ಮೋದತೇ ಸರ್ಗೇ ನಿತ್ಯಮಾಂ ಚಂದ್ರತಾರಕಂ ।
ಆಸ್ತೀರ್ಣಶಯನಂ ದತ್ವಾ ಶ್ರಾದ್ಧ ರತ್ನವಿಭೂಷಿತಂ ॥ ೩೨ ॥

ಪಿತರಸ್ತಸ್ಯ ತುಷ್ಯಂತಿ ಸ್ವರ್ಗಂ ಚಾನಂತ್ಯಮಶ್ನುತೇ ।
ರಾಜಭಿಃ ಪೂಜ್ಯತೇ ಚಾಪಿ ಧನಧಾನ್ಯೈಶ್ಚ ವರ್ದ್ಧತೇ ॥ ೩೩ ॥

---

೨೯. ಯಾವನು ಶ್ರಾದ್ಧದಲ್ಲಿ ಭಕ್ತಿಯಿಂದ ಘೃತದೀಪದಾನಾದಿಗಳನ್ನು ಕೊಡುವನೋ ಅವನು ಒಂದು ಕೊಡ ಹಾಲನ್ನು ಕರೆಯುವ ಸುಂದರವಾದ ಗೋವುಗಳನ್ನೂ ಸುಲಕ್ಷಣವಾದ ವಾಹನಗಳಿಂದ ಯುಕ್ತವಾದ ರಥಾದಿಗಳನ್ನೂ ಹೊಂದಿ ಈ ಲೋಕದಲ್ಲಿ ಸುಖವಾಗಿ ವಾಸಿಸುವನು.

೩೦. ಶ್ರಾದ್ಧಕಾಲದಲ್ಲಿ ಸದ್ಬ್ರಾಹ್ಮಣರಿಗೆ ಇಷ್ಟವಾದ ವಸ್ತುಗಳನ್ನು ದಾನ ಮಾಡಿದರೆ ಮಹಾಕಮಲಗಳನ್ನು ದಾನಮಾಡಿದ ಫಲವನ್ನು ಹೊಂದುವನು. ಸುಂದರವಾದ ಗೃಹದಾನವನ್ನು ಮಾಡುವುದರಿಂದ ರಾಜಸೂಯ ಯಾಗವನ್ನು ಮಾಡಿದ ಫಲವನ್ನು ಹೊಂದುವನು.

೩೧–೩೩. ಪುಷ್ಪಫಲಗಳಿಂದ ಪೂರ್ಣವಾದ ಆರಾಮವನ್ನು ದಾನಮಾಡುವುದರಿಂದ ದಿವ್ಯವಾಸನೆಯನ್ನು ಪಡೆಯುವನು. ತಟಾಕ, ಉದ್ಯಾನ, ಕೂಪ, ಕ್ಷೇತ್ರ, ಹೊಲಗಪ್ಪೆ, ಗ್ರಾಮಗೃಹ ಇವುಗಳನ್ನು ದಾನಮಾಡುವುದರಿಂದ ಸ್ವರ್ಗಲೋಕದಲ್ಲಿ ಚಂದ್ರಸೂರ್ಯರು ಇರುವವರೆಗೂ ನಿತ್ಯವಾದ ದಿವ್ಯಸುಖವನ್ನು ಹೊಂದುವನು. ರತ್ನಾದಿಗಳಿಂದ ಭೂಷಿತವಾದ ದಿವ್ಯಶಯನವನ್ನು ದಾನಮಾಡುವುದರಿಂದ ಪಿತೃಗಳು ಸಂತುಷ್ಟರಾಗಿ ಸ್ವರ್ಗಲೋಕದಲ್ಲಿ ನಿತ್ಯಸುಖವನ್ನು ಹೊಂದುವರು. ಯಜಮಾನನು ರಾಜರಿಂದ ಮಾನ್ಯನಾಗಿಯೂ ಧನಧಾನ್ಯಾದಿಗಳಿಂದ ಸಮೃದ್ಧನಾಗಿಯೂ ಸುಖಿಯಾಗಿಯೂ ಇರುವನು.

ಊರ್ಣಾಕೌಶೇಯವಸ್ತ್ರಾಣಿ ತಥಾ ಪ್ರವರಕಂಬಲೌ ।
ವಜಿನಂ ಕಾಂಚನಂ ಪಟ್ಟಂ ಪ್ರವೇಣಿ ಮೃಗಲೋಮಕಂ ॥ ೩೪ ॥

ದಾನಾನ್ಯೇತಾನಿ ವಿಪ್ರೇಭ್ಯೋ ಭೋಜಯಿತ್ವಾ ಯಥಾವಿಧಿ ।
ಪ್ರಾಪ್ನೋತಿ ಶ್ರದ್ಧದಾನಸ್ತು ವಾಜಪೇಯಶತಂ ಫಲಂ ॥ ೩೫ ॥

ಬಹ್ವ್ಯೋ ನಾರ್ಯಃ ಸುರೂಪಾಸ್ತು ಪುತ್ರಾ ಭೃತ್ಯಾಶ್ಚ ಕಿಂಕರಾಃ ।
ವಶೇ ತಿಷ್ಠಂತಿ ಭೂತಾನಿ ಅಸ್ಮಿಂಲ್ಲೋಕೇ ತ್ವನಾಮಯಂ ॥ ೩೬ ॥

ಕೌಶೇಯಂ ಕ್ಷೌಮಕಾರ್ಪಾಸಂ ದುಕೂಲಸಹಿತಂ ತಥಾ ।
ಶ್ರಾದ್ಧೇಷ್ವೇತಾನಿ ಯೋ ದದ್ಯಾತ್ ಕಾಮಾನಾಪ್ನೋತಿ ಪುಷ್ಕಲಾನ್ ॥ ೩೭ ॥

---

೩೪–೩೫. ಜ್ಞಾನಿಯಾದ ಪುರುಷನು ಶ್ರಾದ್ಧಕರ್ಮದಲ್ಲಿ ಸತ್ಪಾತ್ರರಿಗೆ ಪಟ್ಟೆಮಡಿ, ರೇಷ್ಮೆವಸ್ತ್ರ. ಹೊದಿಯುವ ಕಂಬಳಿ, ಕೃಷ್ಣಾಜಿನ, ಸುವರ್ಣವಸ್ತುಗಳು ಚಿತ್ರಕಂಬಳಿ, ರತ್ನಕಂಬಳಿ, ಆಭರಣಗಳು ಇವೇ ಮೊದಲಾದುವುಗಳನ್ನು ದಾನ ಮಾಡಿದರೆ ಮಹಾಫಲವು ಸಂಭವಿಸುವುದು. ಮೊದಲು ಬ್ರಾಹ್ಮಣರಿಗೆ ಸತ್ಕಾರಗಳನ್ನೂ ಭೋಜನಗಳನ್ನೂ ಮಾಡಿಸಿ ಅನಂತರ ದಾನಾದಿಗಳನ್ನು ಮಾಡಿದರೆ ವಾಜಪೇಯ ಯಾಗದ ಮಹಾಫಲವನ್ನು ಹೊಂದುವನು.

೩೬. ಅಂತಹ ದಾನಮಾಡಿದ ಪುರುಷನಿಗೆ ಅಸಂಖ್ಯಾಕರೂ, ಸುಂದರಿಯರೂ ಆದ ನಾರಿಯರೂ, ಪುತ್ರಮಿತ್ರಭೃತ್ಯಾದಿಗಳೂ ಯಜಮಾನನ ಅಧೀನದಲ್ಲಿರುವರು. ಈ ಲೋಕದಲ್ಲಿ ಅವನು ನಾನಾವಿಧ ಸುಖಸಂತೋಷಗಳನ್ನು ಪಡೆದು ರೋಗರಹಿತನಾಗಿ ಸುಖವಾಗಿರುವನು.

೩೭. ಯಾವನು ಶ್ರಾದ್ಧದಲ್ಲಿ ಬ್ರಾಹ್ಮಣರಿಗೆ ರೇಷ್ಮೆವಸ್ತ್ರಗಳು, ಉಣ್ಣೆಯ ವಸ್ತ್ರಗಳು, ಹತ್ತಿಯವಸ್ತ್ರಗಳು, ಇವುಗಳನ್ನು ದಾನಮಾಡುವನೋ ಅವನು ಈ ಲೋಕದಲ್ಲಿ ನಾನಾವಿಧ ಇಷ್ಟಾರ್ಥಗಳನ್ನು ಸಂಪೂರ್ಣವಾಗಿ ಹೊಂದುವನು.

ಅಲಕ್ಷ್ಮೀಂ ವಿನುದತ್ಯಾಶು ತಮಃ ಸೂರ್ಯೋದಯೋ ಯಥಾ ।
ಭ್ರಾಜತೇ ಸ ವಿಮಾನಾಗ್ರೇ ನಕ್ಷತ್ರೇಷ್ವಿವ ಚಂದ್ರಮಾಃ ॥ ೩೮ ॥

ವಾಸೋ ಹಿ ಸರ್ವದೈವತ್ಯಂ ಸರ್ವದೇವೈತ್ತ್ವಭಿಷ್ಟುತಂ ।
ವಸ್ತ್ರಾಭಾವೇ ಕ್ರಿಯಾ ನಾಸ್ತಿ ಯಜ್ಞಾ ವೇದಾಸ್ತಪಾಂಸಿ ಚ ॥ ೩೯ ॥

ತಸ್ಮಾದ್ವಸ್ತ್ರಾಣಿ ದೇಯಾನಿ ಶ್ರಾದ್ಧಕಾಲೇ ವಿಶೇಷತಃ ।
ತಾನಿ ಸರ್ವಾಣ್ಯವಾಪ್ನೋತಿ ಯಜ್ಞವೇದತಪಾಂಸಿ ಚ ॥ ೪೦ ॥

ನಿತ್ಯಂ ಶ್ರಾದ್ಧೇ ತು ಯೋ ದದ್ಯಾತ್ ಪ್ರಯತಸ್ತತ್ಪರಾಯಣಃ ।
ಸರ್ವಾನ್ ಕಾಮಾನವಾಪ್ನೋತಿ ಸರ್ವಂ ರಾಜ್ಯಂ ತಥೈವ ಚ ॥ ೪೧ ॥

---

೩೮. ಸೂರ್ಯೋದಯಕಾಲದಲ್ಲಿ ಅಂಧಕಾರಗಳು ಪರಿಹಾರವಾಗುವಂತೆ ಪಿತೃಗಳ ಅನುಗ್ರಹದಿಂದ ಅವನ ಅನರ್ಥಗಳೆಲ್ಲವೂ ಪರಿಹಾರವಾಗುವುವು. ಅಂತಹ ಪುರುಷನು ನಕ್ಷತ್ರಮಂಡಲದಲ್ಲಿ ಚಂದ್ರನು ಹೊಳೆಯುವಂತೆ ಪ್ರಕಾಶಿಸುವನು.

೩೯. ವಸ್ತ್ರಗಳು ಸಮಸ್ತರಾದ ದೇವತೆಗಳಿಗೂ ಪ್ರಿಯವಾಗಿವೆ. ಅಂತಹ ವಸ್ತ್ರವಿಲ್ಲದೆಯೇ ಯಜ್ಞಯಾಗಗಳೂ, ಜಪತಪಾದಿಗಳೂ ಸಹ ನೆರವೇರುವುದಿಲ್ಲ. ಆದುದರಿಂದ ವಸ್ತ್ರದಾನವು ಉತ್ತಮವಾಗಿರುವುದು.

೪೦. ಆದುದರಿಂದ ಜ್ಞಾನಿಯಾದ ಪುರುಷನು ಶ್ರಾದ್ಧದಲ್ಲಿ ಪಿತೃಗಳಿಗೋಸ್ಕರ ವಸ್ತ್ರದಾನವನ್ನು ಮಾಡಬೇಕು. ಹಾಗೆ ವಿಶೇಷವಾಗಿ ದಾನವನ್ನು ಮಾಡಿದರೆ ಯಜ್ಞಯಾಗಜಪತಪಾದಿಗಳನ್ನು ಮಾಡಿದ ಫಲವನ್ನು ಹೊಂದುವನು.

೪೧. ಯಾವ ಪುರುಷನು ಶ್ರಾದ್ಧಕಾಲದಲ್ಲಿ ನಿಯಮಿತನೂ, ಪಿತೃಪರಾಯಣನೂ ಆಗಿ ಶ್ರದ್ಧೆಯಿಂದ ಪಿತೃಗಳಿಗೆ ಅನ್ನೋದಕಾದಿಗಳನ್ನು ದಾನಮಾಡುವನೋ ಅವನು ಇಹಲೋಕದಲ್ಲಿ ಸಕಲ ವಿಧವಾದ ಇಷ್ಟಾರ್ಥಗಳನ್ನೂ ಹೊಂದುವನು. ರಾಜರೂ ಕೂಡ ಪೂರ್ವೋಕ್ತಕ್ರಮದಲ್ಲಿ ಶ್ರಾದ್ಧವನ್ನು ಮಾಡಿದರೆ ಆ ಪಿತೃಗಳ ಅನುಗ್ರಹದಿಂದ ಚಕ್ರವರ್ತಿಗಳಾಗುವರು.

**ಸರ್ವಕಾಮಸಮೃದ್ಧಸ್ಯ ಯಜ್ಞಸ್ಯ ಫಲಮಶ್ನುತೇ ।**
**ಭಕ್ಷ್ಯಾನ್ ಧಾನಾಃ ಕರಂಭಾಂಶ್ಚ ಪಿಷ್ಟಕಾನ್ ಘೃತಶರ್ಕರಾಃ ॥ ೪೨ ॥**

**ಕೃಶರಾನ್ಮಧುಪರ್ಕಂ ಚ ಪಯಃ ಪಾಯಸಮೇವ ಚ ।**
**ಸ್ನಿಗ್ಧಾಂಶ್ಚ ಪೂಪಾನ್ ಯೋ ದದ್ಯಾದಗ್ನಿಷ್ಟೋಮಸ್ಯ ಯತ್ ಫಲಂ ॥ ೪೩ ॥**

**ದಧಿ ಗವ್ಯಮಸಂಸ್ಪೃಷ್ಟಂ ಭಕ್ಷ್ಯಾ ನಾನಾವಿಧಾಸ್ತಥಾ ।**
**ತದನ್ನಂ ಶೋಚತಿ ಶ್ರಾದ್ಧೇ ವರ್ಷಾಸು ಚ ಮಘಾಸು ಚ ॥ ೪೪ ॥**

**ಘೃತೇನ ಭೋಜಯೇದ್ವಿಪ್ರಾನ್ ಘೃತಂ ಭೂಮೌ ಸಮುತ್ಸೃಜೇತ್ ।**
**ಗಯಾಯಾಂ ಹಸ್ತಿನಶ್ಚೈವ ದತ್ವಾ ಶ್ರಾದ್ಧೇ ನ ಶೋಚತಿ ॥ ೪೫ ॥**

---

೪೨. ಯಾವ ಮನುಜನು ಶ್ರಾದ್ಧದಲ್ಲಿ ಬ್ರಾಹ್ಮಣರ ಪೂಜೆಯನ್ನು ಮಾಡಿ ಭಕ್ಷ್ಯಭೋಜ್ಯಗಳನ್ನೂ, ದಾನಾಪೂಪಗಳನ್ನೂ, ಮೊಸರಿನಿಂದ ಕಲಸಿದ ಹುರಿ ಹಿಟ್ಟನ್ನೂ, ತುಪ್ಪ, ಸಕ್ಕರೆಗಳನ್ನೂ ಕೊಡುವನೋ ಅವನು ಸರ್ವಸಂಭಾರಗಳಿಂದ ಪೂರ್ಣವಾದ ಮಹಾಯಾಗದ ಫಲವನ್ನೂ ಹೊಂದಿ ಸುಖಿಯಾಗುವನು.

೪೩. ಯಾವನು ಶ್ರಾದ್ಧದಲ್ಲಿ ಹಾಲು, ಮೊಸರು, ಸಕ್ಕರೆ, ಜೇನುತುಪ್ಪ, ಹಾಲ್ಕೀರು, ಪಾಯಸ, ಮನೋಹರವಾದ ಭಕ್ಷ್ಯ, ಭೋಜ್ಯ ಇವುಗಳನ್ನು ದಾನ ಮಾಡುವನೋ ಅವನು ಅಗ್ನಿಷ್ಟೋಮನಾಮಕ ಯಾಗದ ಫಲವನ್ನು ಹೊಂದಿ ಸುಖಿಯಾಗುವನು.

೪೪. ಹಸುವಿನ ಹಾಲು, ಮೊಸರು, ತುಪ್ಪ ಇವುಗಳ ಸಂಬಂಧವೇ ಇಲ್ಲದ ನಾನಾವಿಧ ಭಕ್ಷ್ಯಭೋಜ್ಯಾದಿಗಳನ್ನೂ, ಅನ್ನಾದಿಗಳನ್ನೂ ಶ್ರಾದ್ಧದಲ್ಲಿ ಉಪಯೋಗಿಸಿದರೆ ವ್ಯರ್ಥವಾಗುವುವು. ವರ್ಷಾಕಾಲದಲ್ಲಿಯೂ, ಮಖಾನಕ್ಷತ್ರದಲ್ಲಿಯೂ ಮಾಡಿದ ಕಾರ್ಯಗಳು ನಿಷ್ಫಲವಾಗುವುದು.

೪೫. ಭೋಜನ ಕಾಲದಲ್ಲಿ ಯಥೇಚ್ಛವಾಗಿ ತುಪ್ಪವನ್ನು ಬಡಿಸಬೇಕು. ತುಪ್ಪವು ತಿಂದು ಭೂಮಿಯಲ್ಲಿ ಹರಿದುಹೋಗುವಂತೆ ಉಪಯೋಗಿಸಬೇಕು. ಗಯಾಕ್ಷೇತ್ರದಲ್ಲಿ ಗಜದಾನ ಮಾಡಿದವನು ಯಾವ ವಿಧವಾದ ದುಃಖವನ್ನು ಹೊಂದಲಾರನು.

**ಓದನಂ ಪಾಯಸಂ ಸರ್ಪಿರ್ಮಧುಮೂಲಫಲಾನಿ ಚ ।**
**ಭಕ್ಷ್ಯಾಂಶ್ಚ ವಿವಿಧಾನ್ ದತ್ವಾ ಪ್ರೇತ್ಯ ಚೇಹ ಚ ಮೋದತೇ ॥ ೪೬ ॥**

**ಶರ್ಕರಾಕ್ಷೀರಸಂಯುಕ್ತಂ ಪೃಥುಕಂ ನಿತ್ಯಮಕ್ಷಯಂ ।**
**ಯಶ್ಚ ಸಂವತ್ಸರಂ ಪ್ರೀತ್ಯಾ ಕೃಸರೈರ್ಮಸುರೇಣ ಚ ॥ ೪೭ ॥**

**ಸಕ್ತುಲಾಜಾಸ್ತಥಾ ಪೂಪಾಃ ಕುಲ್ಮಾಷವ್ಯಂಜನೈಸ್ತಥಾ ।**
**ಸರ್ಪಿಃ ಸ್ನಿಗ್ಧಾನಿ ಹೃದ್ಯಾನಿ ದಧ್ನಾ ಸಕ್ತೂಂಸ್ತು ಭೋಜಯೇತ್ ॥**
**ಶ್ರಾದ್ಧೇಷ್ವೇತಾನಿ ಯೋ ದದ್ಯಾತ್ ಪದ್ಮಾನಿ ಲಭತೇ ನಿಧಿಂ ॥ ೪೮ ॥**

**ನವಸಸ್ಯಾನಿ ಯೋ ದದ್ಯಾಚ್ಛ್ರಾದ್ಧೇ ಸತ್ಕೃತ್ಯ ಯತ್ನತಃ ।**
**ಸರ್ವಭೋಗಾನವಾಪ್ನೋತಿ ಪೂಜ್ಯತೇ ಚ ದಿವಂ ಗತಃ ॥ ೪೯ ॥**

---

೪೬. ಯಾವನು ಶ್ರಾದ್ಧದಲ್ಲಿ ಅನ್ನ, ಪಾಯಸ, ತುಪ್ಪ, ಜೇನುತುಪ್ಪ, ಕಂದಮೂಲಗಳು, ಫಲಪುಷ್ಪಗಳು, ನಾನಾವಿಧ ಭಕ್ಷ್ಯಗಳು ಇವುಗಳನ್ನು ದಾನ ಮಾಡುವನೋ ಅವನು, ಇಹಲೋಕದಲ್ಲಿ ಸಕಲಸುಖಗಳನ್ನೂ ಪಡೆದು ಪರದಲ್ಲಿ ನಿತ್ಯಸುಖವನ್ನೂ ಹೊಂದುವನು.

೪೭–೪೮. ಹಾಲು ಮತ್ತು ಸಕ್ಕರೆಯಿಂದ ಕಲಸಿದ ಅವಲಕ್ಕಿಯನ್ನು ದಾನ ಮಾಡಿದರೆ ಅಕ್ಷಯಸುಖವು ಸಂಭವಿಸುವುದು. ಯಾವನು ಒಂದು ವರ್ಷಗಳವರೆಗೂ ಪ್ರತಿದಿನವೂ ಹಾಲುಖೋವ, ಕಳ್ಳೇಕಾಯಿ, ಹಿಟ್ಟು, ಅರಳು, ಅಪೂಪ, ಅಲಸಂಧಿ ಯಿಂದ ಮಾಡಿದ ಪಲ್ಯಾದಿಗಳು, ಘೃತಪಕ್ವವಾದ ನಾನಾವಿಧ ಮನೋಹರ ಭಕ್ಷ್ಯಗಳು, ದಧ್ಯೋದನ ಇವೇ ಮೊದಲಾದವುಗಳನ್ನು ದಾನಮಾಡುವನೋ ಅವನಿಗೆ ಅನಂತ ಫಲವು ಲಭಿಸುವುದು. ಶ್ರಾದ್ಧಕಾಲದಲ್ಲಿ ಮೇಲೆ ಹೇಳಿದ ವಸ್ತುಗಳನ್ನು ಯಾವನು ದಾನಮಾಡುವನೋ ಅವನು ಮಹಾಪದ್ಮಾದಿನಿಧಿಗಳನ್ನು ಹೊಂದುವನು.

೪೯. ಯಾವ ಪುರುಷನು ಪ್ರಯತ್ನಪೂರ್ವಕವಾಗಿ ಶ್ರಾದ್ಧದಲ್ಲಿ ಬ್ರಾಹ್ಮಣನಿಗೆ ಭೋಜನಮಾಡಿಸಿ, ನೂತನ ಧಾನ್ಯಾದಿಗಳನ್ನು ದಾನಮಾಡುವನೋ, ಅವನು ಈ ಲೋಕದಲ್ಲಿ ಸರ್ವವಿಧಸೌಖ್ಯವನ್ನು ಹೊಂದಿ, ಸ್ವರ್ಗದಲ್ಲಿಯೂ ಕೂಡ ಪೂಜಿತನಾಗುವನು.

ಭಕ್ಷಭೋಜ್ಯಾನಿ ಚೋಷ್ಯಾಣಿ ಪೇಯಲೇಹ್ಯವರಾಣಿ ಚ ।
ಸರ್ವಶ್ರೇಷ್ಠಾನಿ ಯೋ ದದ್ಯಾತ್ ಸರ್ವ ಶ್ರೇಷ್ಠೋ ಭವೇನ್ನರಃ ॥ ೫೦ ॥

ವೈಶ್ವದೇವಂ ಚ ಸೌಮ್ಯಂ ಚ ಖಾಡ್ಗಮಾಂಸಂ ಪರಂ ಹವಿಃ ।
ವಿಷಾಣಂ ವರ್ಜಯೇತ್ ಖಾಡ್ಗಮಸೂಯಾಂ ನಾಶಯಾಮಹೇ ॥ ೫೧ ॥

ಭೋಜನೇಽಗ್ರಾಸನಂ ದದ್ಯಾದತಿಥಿಭ್ಯಃ ಕೃತಾಂಜಲಿಃ ।
ಸರ್ವಯಜ್ಞಕ್ರಿಯಾಣಾಂ ಸ ಫಲಂ ಪ್ರಾಪ್ನೋತ್ಯನುತ್ತಮಂ ॥ ೫೨ ॥

ಕ್ಷಿಪ್ರಮತ್ಯುಷ್ಣಮಕ್ಲಿಷ್ಟಂ ದದ್ಯಾಚ್ಛಾನಂ ಬುಭುಕ್ಷತೇ ।
ವ್ಯಂಜನಂ ಚ ತಥಾ ಸ್ನಿಗ್ಧಂ ಭಕ್ತ್ಯಾ ಸತ್ಕೃತ್ಯ ಯತ್ನತಃ ॥ ೫೩ ॥

---

೫೦. ಯಾವ ಪುರುಷನು ಶ್ರಾದ್ಧದಲ್ಲಿ ಪಿತೃಗಳಿಗೋಸ್ಕರವಾಗಿ ಭಕ್ಷ್ಯ ಭೋಜ್ಯಗಳನ್ನೂ, ಪಾನಯೋಗ್ಯವಾದ ರಸಗಳನ್ನೂ, ಲೇಹ್ಯಗಳನ್ನೂ, ಅತ್ಯುತ್ತಮ ವಾದ ಚೋಷ್ಯವನ್ನೂ, ವ್ಯಂಜನಪದಾರ್ಥಗಳನ್ನೂ ದಾನಕೊಡುವನೋ ಅವನು ಮನುಷ್ಯೋತ್ತಮನಾಗುವನು.

೫೧. ವಿಶ್ವೇದೇವತೆಗಳಿಗೂ, ಸೌಮ್ಯರಿಗೂ ಖಡ್ಗಮೃಗದ ಮಾಂಸವು ಮುಖ್ಯವಾದ ಹವಿರ್ದ್ರವ್ಯವಾಗಿದೆ. ಖಡ್ಗಮೃಗದ ಶರೀರದ ಪೈಕಿ ಕೊಂಬುಗಳನ್ನು ಮತ್ತು ಈ ಮಾಂಸವನ್ನು ಹೋಮಮಾಡುವುದರಿಂದ ಅಸೂಯಾದ್ವೇಷಾದಿಗಳು ಪರಿಹಾರವಾಗುವುವು. ಅಂದರೆ ದ್ವೇಷಾಸೂಯಾದಿಗಳನ್ನು ತ್ಯಾಗಮಾಡುವುದರಿಂದ ಸೌಮ್ಯಾದಿದೇವತೆಗಳು ತೃಪ್ತರಾಗುವರು.

೫೨. ಯಜಮಾನನು ಅತಿಥಿಗಳಿಗೆ ಅಗ್ರಾಸನಗಳನ್ನೂ, ಅಗ್ರಪೂಜೆಯನ್ನೂ ಮಾಡಿ ಭೋಜನವನ್ನು ಮಾಡಿಸಬೇಕು. ಹೀಗೆ ಅಂಜಲೀಬದ್ಧನಾಗಿ ಸತ್ಕರಿಸಿದರೆ ಅತ್ಯುತ್ತಮವಾದ ಸರ್ವಯಜ್ಞದ ಫಲವನ್ನು ಹೊಂದುವನು.

೫೩. ಕ್ಷುತ್ಪಿಪಾಸೆಗಳಿಂದ ಪೀಡಿತನಾದ ಅತಿಥಿಗೆ ಬೇಗನೇ (ನಿದಾನವಾಡದೇ) ಉಷ್ಣವಾಗಿಯೂ, ಮೃದುವಾಗಿಯೂ ಇರುವ ಅನ್ನವನ್ನೂ, ರುಚಿಯಾಗಿರುವ ಕಾಯಿಪಲ್ಯ ಮೊದಲಾದುವುಗಳನ್ನೂ ಬಡಿಸಿ ಪ್ರಯತ್ನಪೂರ್ವಕವಾಗಿ ಉಪಚರಿಸಿ, ಭೋಜನಮಾಡಿಸಬೇಕು.

ತರುಣಾದಿತ್ಯಸಂಕಾಶಂ ವಿಮಾನಂ ಹಂಸವಾಹನಂ ।
ಅನ್ನದೋ ಲಭತೇ ತಿಸ್ರಃ ಕಲ್ಪಕೋಟಿಸ್ತಥೈವ ಚ ॥ ೫೪ ॥

ಅನ್ನದಾನಾತ್ಪರಂ ದಾನಂ ವಿದ್ಯತೇ ನೇಹ ಕಿಂಚನ ।
ಅನ್ನಾದ್ಭೂತಾನಿ ಜಾಯಂತೇ ಜೀವಂತಿ ಚ ನ ಸಂಶಯಃ ॥ ೫೫ ॥

ಜೀವದಾನಾತ್ ಪರಂ ದಾನಂ ನ ಕಿಂಚಿದಿಹ ವಿದ್ಯತೇ ।
ಅನ್ನೈರ್ಜೀವತಿ ತ್ರೈಲೋಕ್ಯಮನ್ನಸ್ಯೈವಹಿ ತತ್ಫಲಂ ॥ ೫೬ ॥

ಅನ್ನೇ ಲೋಕಾಃ ಪ್ರತಿಷ್ಠಂತಿ ಲೋಕದಾನಸ್ಯ ತತ್ಫಲಂ ।
ಅನ್ನಂ ಪ್ರಜಾಪತಿಃ ಸಾಕ್ಷಾತ್ತೇನ ಸರ್ವಮಿದಂ ತತಂ ।
ತಸ್ಮಾದನ್ನಸಮಂ ದಾನಂ ನ ಭೂತಂ ನ ಭವಿಷ್ಯತಿ ॥ ೫೭ ॥

---

೫೪. ಹೀಗೆ ಶ್ರಾದ್ಧಾದಿಗಳಿಗೆ ಬಂದ ಅತಿಥಿಗಳನ್ನು ಯಾವನು ಭಕ್ತಿಯಿಂದ ಸತ್ಕರಿಸಿ ಅನ್ನದಾನವನ್ನು ಮಾಡುವನೋ ಅವನು ಸೂರ್ಯನಂತೆ ಕಾಂತಿಯುತವೂ, ಹಂಸಯುಕ್ತಗಳೂ ಆದ ದಿವ್ಯವಿಮಾನಗಳಲ್ಲಿ ಮೂರುಕಲ್ಪಕೋಟಿಗಳವರೆಗೂ ದಿವ್ಯ ಸುಖವನ್ನು ಹೊಂದುವನು.

೫೫. ಈ ಲೋಕದಲ್ಲಿ ಅನ್ನದಾನಕ್ಕಿಂತಲೂ ಉತ್ತಮವಾದ ಮತ್ತೊಂದು ದಾನವು ಇಲ್ಲ. ಏಕೆಂದರೆ ಅನ್ನದಿಂದಲೇ ಪ್ರಾಣಿಗಳು ಉದ್ಭವಿಸುತ್ತವೆ, ಮತ್ತು ಆ ಅನ್ನದಿಂದಲೇ ಜೀವಿಸುತ್ತವೆ. ಆದುದರಿಂದ ಅನ್ನದಾನವು ಬಹು ಮುಖ್ಯವಾಗಿದೆ. ಈ ವಿಷಯದಲ್ಲಿ ಯಾರೂ ಸಂಶಯವನ್ನು ಹೊಂದಬೇಕಾಗಿಲ್ಲ.

೫೬. ಈ ಲೋಕದಲ್ಲಿ ಜೀವದಾನಕ್ಕಿಂಲೂ ಮುಖ್ಯವಾದ ದಾನವೇ ಇಲ್ಲ. ಅನ್ನದಿಂದಲೇ ಮೂರು ಲೋಕಗಳೂ ಜೀವಿಸುತ್ತವೆ. ಲೋಕದಲ್ಲಿ ಪ್ರಾಣಿಗಳ ಜೀವನವು ಅನ್ನದಿಂದಲೇ ಹೊರತು ಮಿಕ್ಕ ಯಾವ ಪದಾರ್ಥಗಳಿಂದಲೂ ಆಗುವುದಿಲ್ಲ ವೆಂಬುದು ನಿಜವಾದ ಸಂಗತಿಯಾಗಿದೆ. ಆದರೆ ವೇದಾಂತಿಗಳು ಅನ್ನಶಬ್ದಕ್ಕೆ ಬೇರೆ ಅರ್ಥವನ್ನು ನಿರೂಪಿಸುತ್ತಾರೆ.

೫೭. ಅನ್ನದಿಂದಲೇ ಲೋಕಗಳು ಉಳಿದಿವೆ. ಆದರೆ ಆ ಲೋಕಗಳಿಂದಲೇ ಅನ್ನವು ಸಂಭವಿಸುತ್ತದೆ. ಅನ್ನವೆಂದರೆ ಸಾಕ್ಷಾದ್ಭಗವಂತನೆಂದೇ ಅರ್ಥವನ್ನು ಮಾಡಬೇಕು. ಆ ಭಗವಂತನಿಂದಲೇ ಲೋಕಗಳು ಉತ್ಪತ್ತಿ ಸ್ಥಿತಿಲಯಗಳನ್ನು ಹೊಂದುತ್ತವೆ. ಅಂತಹ ಭಗವಂತನಿಂದಲೇ ಈ ಲೋಕಗಳು ವ್ಯಾಪ್ತವಾಗಿವೆ. ಆದುದರಿಂದ ಅನ್ನಕ್ಕೆ ಸಮಾನವಾದ ಬೇರೊಂದು ದಾನವೇ ಇಲ್ಲವೆಂದು ಧಾರಾಳವಾಗಿಯೂ ಹೇಳಬಹುದು.

**ಯಾನಿ ರತ್ನಾನಿ ಮೇದಿನ್ಯಾಂ ವಾಹನಾನಿ ಸ್ತ್ರಿಯಸ್ತಥಾ ।**
**ಕ್ಷಿಪ್ರಂ ಪ್ರಾಪ್ನೋತಿ ತತ್ ಸರ್ವಂ ಪಿತೃಭಕ್ತೋ ಹಿ ಮಾನವಃ ॥ ೫೮ ॥**

**ಪ್ರತಿಶ್ರಯಂ ಸದಾ ದದ್ಯಾದತಿಥಿಭ್ಯಃ ಕೃತಾಂಜಲಿಃ ।**
**ದೇವಾಸ್ತೇ ಸಂಪ್ರತೀಕ್ಷಂತೇ ದಿವ್ಯಾತಿಥ್ಯೈಃ ಸಹಸ್ರಶಃ ॥ ೫೯ ॥**

**ಸರ್ವಾಣ್ಯೇತಾನಿ ಯೋ ದದ್ಯಾತ್ ಪೃಥಿವ್ಯಾಮೇಕರಾಡ್ ಭವೇತ್ ।**
**ತ್ರಿಭಿರ್ದ್ವಾಭ್ಯಾಮಥೈಕೇನ ದಾನೇನತು ಸುಖೀ ಭವೇತ್ ॥ ೬೦ ॥**

**ದಾನಾನಿ ಪರಮೋ ಧರ್ಮಃ ಸದ್ಭಿಃ ಸತ್ಕೃತ್ಯ ಪೂಜಿತಃ ।**
**ತ್ರೈಲೋಕ್ಯಸ್ಯಾಧಿಪತ್ಯಂ ಹಿ ದಾನಾದೇವ ವ್ಯವಸ್ಥಿತಂ ॥ ೬೧ ॥**

---

೫೮. ಪಿತೃಭಕ್ತಿಯಿಂದ ಶ್ರಾದ್ಧ ಮಾಡಿದ ಪುರುಷನು ಈ ಲೋಕದಲ್ಲಿ ಯಾವ ಯಾವ ರತ್ನಗಳು, ವಾಹನಗಳು, ಸ್ತ್ರೀಯರು ಇವೇ ಮೊದಲಾದ ಶ್ರೇಷ್ಠವಾದ ವಸ್ತುಗಳಿವೆಯೋ ಆ ಸಕಲವಸ್ತುಗಳನ್ನು ಹೊಂದಿ ದಿವ್ಯಸುಖವನ್ನು ಹೊಂದುವನು.

೫೯. ಆದುದರಿಂದ ಮನೆಗೆ ಬಂದ ಅತಿಥಿಗಳಿಗೆ ಯಜಮಾನನು ಆಶ್ರಯವನ್ನು ಕೊಟ್ಟು, ಅಂಜಲೀಬದ್ಧನಾಗಿ ಸತ್ಕಾರವನ್ನು ಮಾಡಬೇಕು. ದೇವತೆಗಳು ಮತ್ತು ಪಿತೃಗಳು ಅತಿಥಿಗಳಾಗಿ ಬಂದಿರುವರು. ಅದಕ್ಕೆ ಪ್ರತಿಯಾಗಿ ಆ ದೇವತೆಗಳು ಸಹಸ್ರಪಾಲಷ್ಟು ಅಧಿಕವಾಗಿ ಉತ್ತಮವಾದ ಆತಿಥ್ಯಗಳನ್ನು ಮಾಡಲು ಸಿದ್ಧರಾಗಿ ಕಾದಿರುವರು.

೬೦. ಈ ಲೋಕದಲ್ಲಿ ಯಾವ ಪುರುಷನು ಶ್ರಾದ್ಧಕಾಲದಲ್ಲಿ ವಿಶ್ವಾಸದಿಂದ ಮೇಲೆ ವರ್ಣಿಸಿರುವ ಸಕಲ ವಸ್ತುಗಳನ್ನೂ ದಾನಮಾಡುವನೋ ಅಂತಹ ಪುರುಷ ವರ್ಯನು ಈ ಲೋಕದಲ್ಲಿ ಚಕ್ರವರ್ತಿ ಸಾರ್ವಭೌಮನಾಗುವನು.

೬೧. ಸತ್ಪುರುಷರು ಈ ಲೋಕದಲ್ಲಿ ದಾನಗಳೇ ಅತ್ಯುತ್ತಮವಾದ ಧರ್ಮವೆಂದು ಹೇಳುವರು. ಆದುದರಿಂದ ಅಂತಹ ದಾನಗಳನ್ನು ಮಹಾತ್ಮರು ಬಹಳ ವಿಶ್ವಾಸಗಳಿಂದ ಆದರಿಸುವರು. ತ್ರೈಲೋಕ್ಯಾಧಿಪತ್ಯವೂ ಸಹ ದಾನದಿಂದಲೇ ಸಂಭವಿಸುತ್ತದೆಯೆಂದ ಮಹಾತ್ಮರು ವರ್ಣಿಸುವರು.

**ರಾಜಾ ತು ಲಭತೇ ರಾಜ್ಯಮಧನಶ್ಚೋತ್ತಮಂಧಂ |**
**ಕ್ಷೀಣಾಯುರ್ಲಭತೇ ಚಾಯುಃ ಪಿತೃಭಕ್ತಃ ಸದಾನರಃ |**
**ಯಾರ್ ಕಾಮಾರ್ ಮನ ಸ್ಯಾರ್ಥೇತ ತಾಂಸ್ತಸ್ಯ ಪಿತರೋ ವಿದುಃ || ೬೨ ||**

**ಇತಿ ಶ್ರೀಮಹಾಪುರಾಣೇ ವಾಯುಪ್ರೋಕ್ತೇ " ಶ್ರಾದ್ಧಕಲ್ಪೇ ದಾನಫಲಂ " ನಾಮಾಷ್ಟಾದಶೋಽಧ್ಯಾಯಃ**

---

೬೨. ಆದುದರಿಂದ ಪಿತೃಭಕ್ತಿಯಿಂದ ಕೂಡಿದ ಪುರುಷನು ಶ್ರದ್ಧೆಯಿಂದ ಶ್ರಾದ್ಧಾದಿಗಳಲ್ಲಿ, ಪೂರ್ವೋಕ್ತರೀತಿಯಲ್ಲಿ ಕ್ರಮವಾಗಿ ಪಿತೃಗಳನ್ನು ಪೂಜಿಸಬೇಕು. ಹೀಗೆ ದಾನಮಾಡುವುದರಿಂದ ರಾಜರು ನಷ್ಟವಾದ ರಾಜ್ಯವನ್ನು ಹೊಂದುವನು. ದರಿದ್ರನಾದ ಪುರುಷನು ಮಹದೈಶ್ವರ್ಯವನ್ನು ಪಡೆಯುವನು. ಆಯುಷ್ಯರಹಿತ ನಾದವನು ಪರಮಾಯುಷ್ಯವನ್ನು ಹೊಂದುವನು. ಮುಖ್ಯವಾಗಿ ಪಿತೃಭಕ್ತನಾದ ಪುರುಷನು ಯಾವ ಯಾವ ಇಷ್ಟಾರ್ಥಗಳನ್ನು ಬಯಸುವನೋ ಅವುಗಳೆಲ್ಲವನ್ನೂ ಪಿತೃದೇವತೆಗಳು ತೃಪ್ತರಾಗಿ ಅವನಿಗೆ ಕೊಡುವರೆಂದು ಸೂತಪುರಾಣಿಕನು ಮಹರ್ಷಿಗಳಿಗೆ ಹೇಳಿದನು.

ಇಲ್ಲಿಗೆ ವಾಯುಪ್ರೋಕ್ತವಾದ ಮಹಾಪುರಾಣದ ಶ್ರಾದ್ಧಪ್ರಕರಣದಲ್ಲಿ " ದಾನಫಲ ಕಥನ "ವೆಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು.

# ಹದಿನೆಂಟನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ದಾನದ ವಿಷಯಗಳು ವರ್ಣಿತವಾಗಿವೆ. ಶ್ರಾದ್ಧಕರ್ಮಗಳಲ್ಲಿ ಪುರುಷರು ತಮ್ಮ ಪಿತೃಗಳ ಪ್ರೀತಿಗೋಸ್ಕರವಾಗಿ ಭಕ್ತಿಯಿಂದ ಹಾಸಿಗೆ, ಹೊದ್ದಿಕೆ, ಉಪವೀತ, ಕಮಂಡಲು, ಹಾಲು, ಮೊಸರು, ತುಪ್ಪ, ಜೇನು, ಶಯ್ಯಾ, ರತ್ನಕಂಬಳಿ, ರೇಷ್ಮೆಯವಸ್ತ್ರ, ಗಂಧ, ಮಾಲ್ಯ, ಧೂಪ, ದೀಪ, ಸಕಲವಸ್ತುಗಳಿಂದ ಕೂಡಿದ ಗೃಹ, ಗಜ, ಅಶ್ವ, ರಥ, ಕನ್ಯಾ, ಭಕ್ಷ್ಯ, ಭೋಜ್ಯ, ಲೇಹ್ಯ, ಪಾನೀಯ, ಸುವರ್ಣಪಾತ್ರೆ, ರಜತಪಾತ್ರೆ, ಗೋವು, ಕಾಷ್ಟ, ಫಲ, ಪುಷ್ಪ, ಕಂದಮೂಲ ಇವುಗಳನ್ನೂ, ವಾಪೀ ಕೂಪತಟಾಕ ಕ್ಷೇತ್ರಾರಾಮಗಳನ್ನೂ, ಗ್ರಾಮನಗರಾದಿಗಳನ್ನೂ, ಕಾಯಿಪಲ್ಯ, ಹಿಟ್ಟು, ಅವಲಕ್ಕಿ, ಇವೇ ಮೊದಲಾದ ಸಕಲವಸ್ತುಗಳನ್ನೂ ದಾನಮಾಡಿದರೆ, ಚಕ್ರವರ್ತಿ ಸಾರ್ವಭೌಮನಾಗುವರು. ಮೇಲೆ ಹೇಳಿರುವ ವಸ್ತುಗಳಲ್ಲಿ ಯೋಗ್ಯತಾನುಸಾರ ಕೆಲವನ್ನು ದಾನಮಾಡಿದ ಪುರುಷನು ಅದಕ್ಕೆ ಅನುಗುಣವಾದ ಫಲವನ್ನು ಹೊಂದುವನು.

ಪಿತೃದೇವತೆಗಳು ಪ್ರೀತರಾದರೆ, ಆಯುರಾರೋಗ್ಯಾದಿ ಸಕಾಲಾಭೀಷ್ಟಗಳನ್ನೂ, ಸಂತಾನಾದಿ ಸಕಲಸುಖಗಳನ್ನೂ, ಪರಮಪದವಿಯನ್ನೂ ಕೊಡುವರು. ಇದರಲ್ಲಿ ಸಂಶಯವಿಲ್ಲವೆಂಬ ವಿಷಯಗಳು ಈ ಅಧ್ಯಾಯದಲ್ಲಿ ವರ್ಣಿತವಾಗಿವೆ.



—॥ ಹರಿಃ ಓಂ ॥—

—॥ ಶ್ರೀ ವೇದವ್ಯಾಸಾಯ ನಮಃ ॥—

# ಶ್ರೀಮದ್ವಾಯು ಮಹಾಪುರಾಣಂ

## ಏಕೋನವಿಂಶೋಽಧ್ಯಾಯಃ

**॥ ಬೃಹಸ್ಪತಿರುವಾಚ ॥**

**ಅತ ಊರ್ದ್ಧ್ವಂ ಪ್ರವಕ್ಷ್ಯಾಮಿ ಶ್ರಾದ್ಧಕರ್ಮಣಿ ಪೂಜಿತಂ ।**
**ಕಾಮ್ಯನೈಮಿತ್ತಿಕಾಜಿಸ್ರಂ ಶ್ರಾದ್ಧಕರ್ಮಣಿ ನಿತ್ಯಶಃ ॥ ೧ ॥**

**ಪುತ್ರ ದಾರಧನಮೂಲಾ ಅಷ್ಟಕಾಸ್ತಿಸ್ರ ಏವ ಚ ।**
**ಪೂರ್ವಪಕ್ಷೋ ವರಿಷ್ಠೋ ಹಿ ಪೂರ್ವಾ ಚಿತ್ರೀ ಉದಾಹೃತಾ ॥ ೨ ॥**

---

## ಹತ್ತೊಂಭತ್ತನೆಯ ಅಧ್ಯಾಯವು

೧. ಬೃಹಸ್ಪತಿಗಳು ಹೇಳಿದರು :—ಈ ಅಧ್ಯಾಯದಲ್ಲಿಯೂ ಸಹ ಶ್ರಾದ್ಧ ಕರ್ಮದ ಪೂಜಾವಿಧಾನವನ್ನು ವರ್ಣಿಸುತ್ತಾರೆ. ಆ ಶ್ರಾದ್ಧಕರ್ಮವು ನಿತ್ಯನೈಮಿತ್ತಿಕ ಕಾಮ್ಯವೆಂಬುದಾಗಿ ಮೂರು ವಿಧವಾಗಿದೆ. ಅದು ಮೂರು ವಿಧವೆಂದು ಹೇಳುವರು.

೨. ಈ ಮೂರು ವಿಧವಾದ ಕರ್ಮಗಳು ಪುತ್ರ ಪತ್ನೀ ಧನಮೂಲಕಗಳಾಗಿವೆ. ಅವುಗಳಲ್ಲಿ ಮೊದಲನೆಯದು ಬಹಳ ಉತ್ತಮವಾಗಿಯೂ, ಚಿತ್ರೀನಾಮಕವಾಗಿಯೂ, ಪ್ರಖ್ಯಾತವಾಗಿಯೂ ಇದೆ.

ಪ್ರಾಜಾಪತ್ಯಾ ದ್ವಿತೀಯಾ ಸ್ಯಾತ್ ತೃತೀಯಾ ವೈಶ್ವದೇವಕೀ ।
ಆದ್ಯಾ ಪೂಪೈಃ ಸದಾಕಾರ್ಯಾ ಮಾಂಸೈರನ್ಯಾ ಭವೇತ್ಸದಾ ॥ ೩ ॥

ಶಾಕೈರನ್ಯಾ ತೃತೀಯಾ ಸ್ಯಾದೇವಂ ದ್ರವ್ಯಗತೋ ವಿಧಿಃ ।
ಅನ್ವಷ್ಟಕಾ ಪಿತೃಣಾಂ ವೈ ನಿತ್ಯಮೇವ ವಿಧೀಯತೇ ॥ ೪ ॥

ಯದ್ಯನ್ಯಾ ಚ ಚತುರ್ಥೀ ಸ್ಯಾತ್ತಾಂಚಿಕುರ್ಯಾದ್ವಿಶೇಷತಃ ।
ತಾಸು ಶ್ರಾದ್ಧಂ ಬುಧಃ ಕುರ್ಯಾತ್ ಸರ್ವಸ್ವೇನಾಪಿ ನಿತ್ಯಶಃ ॥ ೫ ॥

ಪರತ್ರೇಹ ಚ ಸರ್ವೇಷು ನಿತ್ಯಮೇವ ಸುಖೀ ಭವೇತ್ ।
ಪೂಜಕಾನಾಂ ಸದೋತ್ಕರ್ಷೋ ನಾಸ್ತಿಕಾನಾಮಧೋ ಗತಿಃ ॥ ೬ ॥

---

೩–೪. ಅವುಗಳಲ್ಲಿ ಎರಡನೆಯದು ಪ್ರಾಜಾಪತ್ಯನಾಮಕವಾಗಿಯೂ, ಮೂರನೆಯದು ವೈಶ್ವದೇವಿಕೀನಾಮಕವಾಗಿಯೂ ಇವೆ. ಅವುಗಳಲ್ಲಿ ಮೊದಲನೆಯದನ್ನು ಅಪೂಪವೇ ಮೊದಲಾದ ದ್ರವ್ಯಗಳಿಂದಲೂ, ದ್ವಿತೀಯವಾದ ಶ್ರಾದ್ಧವನ್ನು ಮಾಂಸಗಳಿಂದಲೂ ಮಾಡಬೇಕಾಗಿದೆ. ಮೂರನೆಯ ಶ್ರಾದ್ಧವಾದರೋ ಶಾಕಾದಿಗಳಿಂದಲೂ, ಕಾಯಿಪಲ್ಯಾದಿಗಳಿಂದಲೂ ಮಾಡಬೇಕಾಗಿದೆ. ಹೀಗೆ ಮೂರುವಿಧ ಶ್ರಾದ್ಧಗಳೂ ದ್ರವ್ಯಮೂಲಕವೇ ಆಗಿವೆ. ಪದಾರ್ಥಗಳಿಂದಲೇ ನಡೆಯಬೇಕಾಗಿದೆ. ಅನಷ್ಟಕ ನಾಮಕವಾದ ಕರ್ಮವು ನಿತ್ಯವೂ ಪಿತೃಗಳಿಗೆ ಅತಿಪ್ರಿಯವಾಗಿಯೂ ಇರುತ್ತದೆ.

೫. ಇವುಗಳಲ್ಲದೆಯೇ ಈ ಮೂರರಿಗಿಂತಲೂ ಅತಿರಿಕ್ತವಾಗಿ ನಾಲ್ಕನೆಯದು ಇದ್ದದ್ದೇ ಆದರೆ ಅದನ್ನೂ ಸಹ ವಿಶೇಷವಾಗಿ ಶ್ರದ್ಧೆಯಿಂದ ಮಾಡಬೇಕು. ಅವುಗಳಲ್ಲಿ ಜ್ಞಾನಿಯಾದವನು ಶ್ರಾದ್ಧಕರ್ಮಗಳನ್ನು ಮಾತ್ರ ಸರ್ವಸ್ವವನ್ನಾದರೂ ವ್ಯಯಮಾಡಿ ನಿತ್ಯವೂ ಮಾಡಬೇಕು.

೬. ಹೀಗೆ ಯಾವನು ಭಕ್ತಿಯಿಂದ ಪಿತೃಗಳನ್ನು ಪೂಜಿಸುವನೋ, ಅಂತಹ ಪುರುಷನು ಇಹಪರಗಳಲ್ಲಿಯೂ ನಿತ್ಯಸುಖವನ್ನು ಪಡೆಯುವನು. ಹೀಗೆ ದೇವಪಿತೃಗಳನ್ನು ಪೂಜಿಸುವವರಿಗೆ ಸದಾ ಉತ್ತಮಗತಿಯೂ, ನಾಸ್ತಿಕನಾಗಿ ಪೂಜಿಸದವನಿಗೆ ಅಧೋಗತಿಯೂ ಉಂಟಾಗುವುವು.

ಪಿತರಃ ಸರ್ವಕಾಲೇಷು ತಿಥಿಕಾಲೇಷು ದೇವತಾಃ ।
ಸರ್ವೇ ಪುರುಷಮಾಯಾಂತಿ ನಿಪಾನಮಿವ ಧೇನವಃ ॥ ೭ ॥

ಮಾ ಸ್ಮ ತೇ ಪ್ರತಿಗಚ್ಛೇಯುರಷ್ಟಕಾಃ ಸುರುಪೂಜಿತಾಃ ।
ಮೋಘಸ್ತಸ್ಯ ಭವೇಲ್ಲೋಕೋ ಲಬ್ಧಂಚಾಸ್ಯ ವಿನಶ್ಯತಿ ॥ ೮ ॥

ದೇವಾಂಸ್ತು ದಾಯಿನೋ ನಿತ್ಯಂ ತಿರ್ಯಗ್ಗಚ್ಛಂತ್ಯದಾಯಿನಃ ।
ಪ್ರಜಾಂ ಪುಷ್ಟಿಂ ಸ್ಮೃತಿಂ ಮೇಧಾಂ ಪುತ್ರಾನೈಶ್ವರ್ಯಮೇವ ಚ ॥ ೯ ॥

ಕುರ್ವಾಣಃ ಪೌರ್ಣಮಾಸ್ಯಾಂ ಚ ಪೂರ್ವಂ ಪೂರ್ಣಂ ಸಮುಶ್ನುತೇ ।
ಪ್ರತಿಪದ್ಧನಲಾಭಾಯ ಲಬ್ಧಂ ಚಾಸ್ಯ ನ ನಶ್ಯತಿ ॥ ೧೦ ॥

---

೭. ಪಿತೃಗಳು ಸರ್ವಕಾಲಗಳಲ್ಲಿಯೂ, ದೇವತೆಗಳು ತಿಥಿವಿಶೇಷಗಳಲ್ಲಿಯೂ, ತಮಗೆ ಸಂಬಂಧಪಟ್ಟ ಮನುಷ್ಯರ ಮನೆಗಳ ಕಡೆಗೆ. ಹಸುಗಳು ಬಾಯಾರಿಕೆಯಿಂದ ನೀರನ್ನು ಕುಡಿಯಲು ತೊಟ್ಟಿಯ ಬಳಿಗೆ ಬರುವಂತೆ, ಆತುರದಿಂದ ಬರುವರು.

೮. ಹೀಗೆ ಮನೆಗೆ ಬಂದಂತಹ ಸುರಪೂಜಿತರೂ, ಅಷ್ಟಕನಾಮಕರೂ ಆದ ಪಿತೃಗಳು ಪೂಜೆಯಿಲ್ಲದೇ ಖಿನ್ನಮನಸ್ಕರಾಗಿ ಹಿಂದಕ್ಕೆ ಹೋದರೆ, ಪುರುಷರಿಗೆ ಅನರ್ಥಗಳು ಸಂಭವಿಸುವುವು. ಅಂತಹವರಿಗೆ ಪೂಜೆಯನ್ನು ಮಾಡದಿದ್ದರೆ ಮನುಷ್ಯರಲ್ಲಿರುವ ಪೂರ್ವಾರ್ಜಿತ ದ್ರವ್ಯವು ನಾಶವಾಗುವುದು. ಪೂಜೆಯನ್ನು ಮಾಡಿದವನಿಗೆ ದಿವ್ಯಲೋಕವು ದೊರಕುವುದು.

೯–೧೦. ಹೀಗೆ ಪಿತೃಪೂಜೆಯನ್ನು ಮಾಡಿದವನು ಸ್ವರ್ಗಲೋಕವನ್ನು ಹೊಂದುವನು. ಮಾಡದ ಪುರುಷನು ಹೊಟ್ಟೆಗಿಲ್ಲದೇ ಭೂಮಿಯಲ್ಲಿ ತಿರುಗಾಡುವನು. ಭಕ್ತಿಯಿಂದ ಪೌರ್ಣಿಮಾದಿ ಪರ್ವಕಾಲಗಳಲ್ಲಿ ಪಿತೃಕಾರ್ಯಗಳನ್ನು ಮಾಡಿದ ಪುರುಷನು ಸಂತಾನ, ಸಮೃದ್ಧವಾದ ಸಿರಿ, ಸ್ಮೃತಿ, ಬುದ್ಧಿ, ಮಕ್ಕಳುಮರಿಗಳು, ಐಶ್ವರ್ಯ ಇವೇ ಮೊದಲಾದ ಸಕಲಾನುಕೂಲ್ಯಗಳನ್ನು ಪಡೆಯುವನು. ಪಾಡ್ಯಮಿ ಮೊದಲಾದ ದಿವಸಗಳಲ್ಲಿ ಪಿತೃಪೂಜೆಯನ್ನು ಮಾಡಿದರೆ ಧನಲಾಭವಾಗುವುದು. ಅರ್ಜಿತವಾದ ಧನವು ಸ್ಥಿರವಾಗಿರುವುದು.

**ದ್ವಿತೀಯಾಯಾಂ ತು ಯಃ ಕುರ್ಯಾದ್ದ್ವಿಪದಾಧಿಪತಿರ್ಭವೇತ್ ।**
**ವರಾರ್ಥಿನಾ ತೃತೀಯಾ ತು ಶತ್ರುಘ್ನೀ ಪಾಪನಾಶಿನೀ ॥ ೧೧ ॥**

**ಚತುರ್ಥ್ಯಾಂ ಕುರುತೇ ಶ್ರಾದ್ಧಂ ಶತ್ರೋಶ್ಛಿದ್ರಾಣಿ ಪಶ್ಯತಿ ।**
**ಪಂಚಮ್ಯಾಂ ವೈ ಪ್ರಕುರ್ವಾಣಃ ಪ್ರಾಪ್ನೋತಿ ಮಹತೀಂ ಶ್ರಿಯಂ ॥ ೧೨ ॥**

**ಷಷ್ಠ್ಯಾಂ ಶ್ರಾದ್ಧಾನಿ ಕುರ್ವಾಣಂ ದ್ವಿಜಾಸ್ತಂ ಪೂಜಯಂತ್ಯುತ ।**
**ಕುರುತೇ ಯಸ್ತು ಸಪ್ತಮ್ಯಾಂ ಶ್ರಾದ್ಧಾನಿ ಸತತಂ ನರಃ ॥ ೧೩ ॥**

**ಮಹಾಸತ್ರಮವಾಪ್ನೋತಿ ಗಣಾನಾಮಧಿಪೋ ಭವೇತ್ ।**
**ಸಂಪೂರ್ಣಾಮೃದ್ಧಿಮಾಪ್ನೋತಿ ಯೋಽಷ್ಟಮ್ಯಾಂ ಕುರುತೇ ನರಃ ॥ ೧೪ ॥**

---

೧೧. ದ್ವಿತೀಯ ದಿವಸದಲ್ಲಿ ಯಾವನು ಪಿತೃಕಾರ್ಯಗಳನ್ನು ಭಕ್ತಿಯಿಂದ ಮಾಡುವನೋ ಅವನು ದ್ವಿಪಾದಗಳಿರುವ ಮನುಷ್ಯರಿಗೆ ಆಧಿಪತಿಯಾಗುವನು ಅಂದರೆ ರಾಜನಾಗುವನು. ತದಿಗೆಯಲ್ಲಿ ಪಿತೃಕಾರ್ಯಗಳನ್ನು ಮಾಡಿದರೆ ಕೋರಿದ ಅವನು ವರಗಳನ್ನು ಹೊಂದುವವನೂ ಶತ್ರುಸಂಹಾರಕನೂ ಪಾಪಪರಿಹಾರಕನೂ ಆಗುವನು.

೧೨. ಚೌತಿಯ ದಿವಸ ಶ್ರಾದ್ಧವನ್ನು ಮಾಡಿದರೆ ಶತ್ರುಗಳಲ್ಲಿರುವ ದೋಷಗಳನ್ನು ಸ್ಪಷ್ಟವಾಗಿ ತಿಳಿಯುವನು. ಪಂಚಮಿಯಲ್ಲಿ ಶ್ರಾದ್ಧವನ್ನು ಮಾಡಿದರೆ ಮಹದೈಶ್ವರ್ಯಗಳನ್ನು ಹೊಂದುವನು.

೧೩-೧೪. ಷಷ್ಟಿಯ ದಿವಸ ಶ್ರಾದ್ಧವನ್ನು ಮಾಡುವ ಪುರುಷನು ಬ್ರಾಹ್ಮಣಾದಿ ಜನರಿಂದ ಪೂಜಿಸಲ್ಪಡುವನು. ಯಾವ ಪುರುಷನು ನಿಯಮದಿಂದ ಸಪ್ತಮಿಯ ದಿವಸ ಪಿತೃಕಾರ್ಯವನ್ನು ಕ್ರಮವಾಗಿ ಮಾಡುವನೋ ಅವನು ಮಹಾಯಾಗಗಳನ್ನು ಮಾಡಿದ ಫಲವನ್ನೂ ಪಡೆಯುವನು. ಮತ್ತು ಗಣಗಳಿಗೆ ಅಧಿಪತಿಯಾಗುವನು. ಅಷ್ಟಮಿಯಾ ತಿಥಿಯಲ್ಲಿ ಶ್ರಾದ್ಧವನ್ನು ಮಾಡಿದವನು ಸಂಪೂರ್ಣವಾದ ನಿಧಿಯನ್ನು ಪಡೆದು ಶ್ರೀಮಂತನಾಗುವನು.

**ಶ್ರಾದ್ಧಂ ನವಮ್ಯಾಂ ಕುರ್ವಾಣ ಐಶ್ವರ್ಯಂ ಕಾಂಕ್ಷಿತಾಂ ಸ್ತ್ರಿಯಂ |**
**ಕುರ್ವನ್ ದಶಮ್ಯಾಂ ತು ನರೋ ಬ್ರಾಹ್ಮೀಂ ಶ್ರಿಯಮವಾಪ್ನುಯಾತ್ ೧೫**

**ವೇದಾಂಶ್ಚೈವಾಪ್ನುಯಾತ್ ಸರ್ವಾನ್ ಪ್ರಣಾಶಮೇನಸಸ್ತಥಾ |**
**ಏಕಾದಶ್ಯಾಂ ಪರಂ ದಾನಮೈಶ್ವರ್ಯಂ ಸತತಂ ತಥಾ || ೧೬ ||**

**ದ್ವಾದಶ್ಯಾಂ ರಾಷ್ಟ್ರಲಾಭಂ ತು ಜಯಮಾಹುರ್ವಸೂನಿ ಚ |**
**ಪ್ರಜಾಂ ಬುದ್ಧಿಂ ಪಶೂನ್ ಮೇಧಾಂ ಸ್ವಾತಂತ್ರ್ಯಂ ಪುಷ್ಟಿಮುತ್ತಮಾಂ ||**
**ದೀರ್ಘಮಾಯುರಥೈಶ್ವರ್ಯಂ ಕುರ್ವಾಣಸ್ತು ತ್ರಯೋದಶೀಂ || ೧೭ ||**

**ಯುವಾನಶ್ಚ ಮೃತಾಯ ತಸ್ಯ ಗೃಹೇ ತೇಷಾಂ ಪ್ರದಾಪಯೇತ್ |**
**ಶಸ್ತ್ರೇಣ ತು ಹತಾ ಯೇ ವೈ ತೇಷಾಂ ದದ್ಯಾಚ್ಚತುರ್ದಶೀಂ || ೧೮ ||**

---

೧೫. ನವಮೀ ದಿವಸದಲ್ಲಿ ಪಿತೃಕಾರ್ಯಗಳನ್ನು ಭಕ್ತಿಯಿಂದ ಮಾಡಿದ ಮನುಷ್ಯನು ಆಕಾಂಕ್ಷಿತವಾದ ಮಹದೈಶ್ವರ್ಯವನ್ನು ಪಡೆಯುವನು. ದಶಮೀ ತಿಥಿಯಲ್ಲಿ ಶ್ರಾದ್ಧವನ್ನಾಡಿದ ನರನು ದಿವ್ಯವಾದ ಬ್ರಹ್ಮತೇಜಸ್ಸನ್ನು ಹೊಂದಿ ಪ್ರಕಾಶಿಸುವನು.

೧೬. ಏಕಾದಶೀ ದಿವಸದಲ್ಲಿ ಶ್ರಾದ್ಧಾದಿ ಪಿತೃಕಾರ್ಯಗಳನ್ನು ಮಾಡದೆ, ಪಿತೃಗಳ ಉದ್ದೇಶ್ಯಕವಾಗಿ ದಾನಗಳನ್ನು ಮಾಡಿದ ಪುರುಷನು ಸಕಲ ವೇದಗಳನ್ನೂ ಹೊಂದುವನು. ಅವನ ಸಕಲ ಪಾಪಗಳೂ ಪರಿಹೃತವಾಗುವುವು. ನಿರಂತವಾದ ಸಕಲ ಸಂಪತ್ತುಗಳನ್ನೂ ಪಡೆಯುವನು.

೧೭. ದ್ವಾದಶಿಯಲ್ಲಿ ಪಿತೃಕಾರ್ಯವನ್ನು ಭಕ್ತಿಯಿಂದ ಮಾಡಿದರೆ ದೇಶಾಧಿಪತಿಯಾಗುವನು. ಜಯ ಸಂಪತ್ತುಗಳು ಸಂಭವಿಸುವುವು. ಮತ್ತು ಸಂತಾನ, ಜ್ಞಾನ, ಪಶುಗಳು, ಬುದ್ಧಿ, ಸ್ವಾತಂತ್ರ್ಯ, ಮಹಾಸಂಪತ್ತು ಇವುಗಳನ್ನು ಹೊಂದುವನು. ತ್ರಯೋದಶೀ ದಿವಸದಲ್ಲಿ ಪಿತೃಕಾರ್ಯವನ್ನು ಮಾಡಿದವನು ದೀರ್ಘಾಯುಷ್ಯ, ಮಹದೈಶ್ವರ್ಯ ಇವುಗಳನ್ನು ಹೊಂದುವನು.

೧೮. ಯಾವನ ಮನೆಯಲ್ಲಿ ಯುವಕರಾದ ಪುರುಷರು ಮೃತರಾಗಿರುವರೋ, ಮತ್ತು ಅಸ್ತ್ರಶಸ್ತ್ರಾದಿಗಳಿಂದ ತರುಣರು ಹತರಾಗಿರುವರೋ, ಅಂತಹವರ ಪ್ರೀತಿಗೋಸ್ಕರ ಅವನು ಚತುರ್ದಶೀ ತಿಥಿಯಲ್ಲಿ ಶ್ರಾದ್ಧವನ್ನು ಮಾಡಬೇಕು.

ತಥಾ ವಿಷಮಜಾತಾನಾಂ ಯಮಲಾನಾಂ ತು ಸರ್ವಶಃ ।
ಅಮಾವಾಸ್ಯಾಂ ಪ್ರಯತ್ನೇನ ಶ್ರಾದ್ಧಂ ಕುರ್ಯಾಚ್ಛುಚಿಃ ಸದಾ ॥ ೧೯ ॥

ಸರ್ವಾನ್ ಕಾಮಾನವಾಪ್ನೋತಿ ಸ್ವರ್ಗಮಾನಂತ್ಯ ಮಶ್ನುತೇ ।
ಋತಂ ದದ್ಯಾದಮಾವಾಸ್ಯಾಂ ಸೋಮಮಾಪ್ಯಾಯನಂ ಮಹತ್ ॥ ೨೦ ॥

ಏವ ಮಾಪ್ಯಾಯಿತಃ ಸೋಮಸ್ತ್ರೀಂಲ್ಲೋಕಾನ್ ಧಾರಯಿಷ್ಯತಿ ।
ಸಿದ್ಧಚಾರಣಗಂಧರ್ವೈಃಸ್ತೂಯಮಾನಸ್ತು ನಿತ್ಯಶಃ ॥ ೨೧ ॥

ಸ್ತವ್ಯೈಃ ಪುಷ್ಪೈರ್ವನೋಚ್ಚೈಶ್ಚ ಸರ್ವಕಾಮಪರಿಚ್ಛದೈಃ ।
ನೃತ್ಯವಾದಿತ್ರಗೀತೈಶ್ಚ ಹ್ಯಪ್ಸರೋಭಿಃ ಸಹಸ್ರಶಃ ॥ ೨೨ ॥

ಉಪಕ್ರೀಡ್ಯೈರ್ವಿಮಾನೈಸ್ತು ಪಿತೃಭಕ್ತಂ ಧೃಡವ್ರತಂ ।
ಸ್ತುವಂತಿ ದೇವಗಂಧರ್ವಾಃ ಸಿದ್ಧಸಂಘಾಶ್ಚ ತಂ ಸದಾ ॥ ೨೩ ॥

---

೧೯. ಅಮಾವಾಸ್ಯಾ ತಿಥಿಯಲ್ಲಿ ಶ್ರಾದ್ಧವನ್ನು ಮಾಡಿದರೆ ಕೈಕಾಲುಗಳು ವಿಷಮವಾಗಿ ಮೃತರಾದವರಿಗೂ ಅವಳಜವಳಿಯಾಗಿ ಹುಟ್ಟಿ ಮೃತರಾದ ಪುರುಷರಿಗೂ ಪ್ರೀತಿಯುಂಟಾಗುವುದು.

೨೦. ಅಮಾವಾಸ್ಯೆಯಲ್ಲಿ ಶ್ರಾದ್ಧಕರ್ಮವನ್ನು ಮಾಡಿದರೆ ಮತ್ತು ತರ್ಪಣಾದಿಗಳನ್ನು ಕೊಟ್ಟರೆ ಸೋಮದೇವನಿಗೆ ತೃಪ್ತಿಯಾಗುವುದು. ಇದರಿಂದ ಸಕಲೇಷ್ಟಾರ್ಥಗಳೂ ಕೈಗೂಡುವುವು. ಕೊನೆಗೆ ಶಾಶ್ವತವಾದ ಸ್ವರ್ಗಸೌಖ್ಯವನ್ನು ಹೊಂದುವನು.

೨೧. ಹೀಗೆ ಮನುಷ್ಯರು ಶ್ರದ್ಧೆಯಿಂದ ಮಾಡಿದ ಪಿತೃಕಾರ್ಯಾದಿಗಳಿಂದ ಪ್ರೀತನಾದ ಸೋಮದೇವನು ಮೂರು ಲೋಕಗಳನ್ನೂ ರಕ್ಷಿಸುವನು. ಮತ್ತು ಸಿದ್ಧರು, ಚಾರಣರು, ಗಂಧರ್ವರು ಇವರೇ ಮೊದಲಾದವರಿಂದ ಸ್ತುತ್ಯನಾಗಿ ಲೋಕಗಳನ್ನು ಉದ್ಧರಿಸುವನು.

೨೨–೨೩. ಹೀಗೆ ಪಿತೃಭಕ್ತಿಯಿಂದ ನಿಯಮಿತನೂ, ಶಾಂತಚಿತ್ತನೂ, ದೃಢವ್ರತನೂ, ಶ್ರಾದ್ಧದಲ್ಲಿ ಆಸಕ್ತನೂ ಆದ ಪುರುಷನನ್ನು ದೇವತೆಗಳೂ, ಗಂಧರ್ವರೂ, ಸಿದ್ಧಚಾರಣರೂ ಸಹ ಸಹಸ್ರಾರು ಅಪ್ಸರಸ್ತ್ರೀಯರ ಸಂಗಡ ನೃತ್ಯ, ಗೀತ, ವಾದ್ಯಾದಿಗಳಿಂದಲೂ, ಸ್ತೋತ್ರಾದಿಗಳಿಂದಲೂ, ಫಲಪುಷ್ಪಾದಿಗಳಿಂದಲೂ ಸತ್ಕರಿಸುವರು. ಅಂತಹ ಪುರುಷರು ದಿವ್ಯವಿಮಾನಾರೂಢರಾಗಿ ನಿತ್ಯವಾದ ಸುಖವನ್ನು ಹೊಂದುವರು.

ಪಿತೃಭಕ್ತಸ್ತ್ವಮಾವಾಸ್ಯಾಂ ಸರ್ವಾನ್ ಕಾಮಾನವಾಪ್ನುಯಾತ್ ।
ಪ್ರತ್ಯಕ್ಷಮರ್ಚಿತಾಸ್ತೇನ ಭವಂತಿ ಪಿತರಃ ಸದಾ ॥ ೨೪ ॥

ಪಿತೃದೇವಾ ಮಘಾ ಯಸ್ಮಾತ್ ತಸ್ಮಾತ್ತಾಸ್ವಕ್ಷಯಂ ಸ್ಮೃತಂ ।
ಪಿತ್ರ್ಯಂ ಕುರ್ವಂತಿ ತಸ್ಯಾಂ ತು ವಿಶೇಷೇಣ ವಿಚಕ್ಷಣಃ ॥ ೨೫ ॥

ತಸ್ಮಾನ್ಮಘಾಂ ವೈ ವಾಚ್ಛಂತಿ ಪಿತರೋ ನಿತ್ಯಮೇವ ಹಿ ।
ಪಿತೃದೈವತಭಕ್ತಾ ಯೇ ತೇಽಪಿ ಯಾಂತಿ ಪರಾಂ ಗತಿಂ ॥ ೨೬ ॥

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಶ್ರಾದ್ಧಕಲ್ಪೇ ತಿಥಿವಿಶೇಷೇ ಶ್ರಾದ್ಧಫಲವರ್ಣನಂ " ನಾಮೋನವಿಂಶೋಽಧ್ಯಾಯಃ**

---

೨೪. ಅಮಾವಾಸ್ಯೆಯಲ್ಲಿ ಭಕ್ತಿಯಿಂದ ಅನ್ನೋದಕಾದಿಗಳನ್ನು ಕೊಟ್ಟರೆ ಸಕಲೇಷ್ಟಾರ್ಥಗಳನ್ನೂ ಪಡೆಯುವರು. ಅದರಿಂದ ಪ್ರೀತರಾದ ಪಿತೃಗಳು ಪ್ರತ್ಯಕ್ಷವಾಗಿಯೇ ಬಂದು ಪ್ರೀತರಾಗಿ ವರಗಳನ್ನು ಕೊಡುವರು.

೨೫. ಪಿತೃಗಳು ಮಘಾಪ್ರಿಯರು. ಅಂದರೆ ಅಮಾವಾಸ್ಯೆಯಲ್ಲಿ ಪ್ರಿಯರಾಗಿರುವರು. ಆದುದರಿಂದ ಅಂತಹ ಅಮಾವಾಸ್ಯೆಯಲ್ಲಿ ಪಿತೃಗಳ ಉದ್ದೇಶ್ಯದಿಂದ ಕೊಟ್ಟ ದಾನಗಳು ಅಕ್ಷಯಫಲಗಳಾಗುವುವು. ಆದುದರಿಂದ ಪಂಡಿತರಾದವರು ಅಂತಹ ಅಮಾವಾಸ್ಯೆಯಲ್ಲಿ ವಿಶೇಷವಾಗಿ ಪಿತೃಕಾರ್ಯಗಳನ್ನು ಮಾಡಿ ಮಹಾಫಲಗಳಿಗೆ ಭಾಗಿಯಾಗುವರು.

೨೬. ಆದುದರಿಂದ ಪಿತೃದೇವತೆಗಳು ಮಘಾನಕ್ಷತ್ರಯುಕ್ತವಾದ ಅಮಾವಾಸ್ಯೆಯನ್ನು ನಿರಂತರವಾಗಿಯೂ ನಿರೀಕ್ಷಿಸುತ್ತಿರುವರು. ಆದುದರಿಂದ ಅಂತಹ ಪಿತೃದೇವತೆಗಳಿಗೆ ಪ್ರಿಯವಾದ ಅಮಾವಾಸ್ಯೆಯಲ್ಲಿ ಭಕ್ತಿಯಿಂದ ಪಿತೃಕಾರ್ಯಗಳನ್ನು ಮಾಡಿದರೆ, ಆ ಪಿತೃದೇವತೆಗಳ ಅನುಗ್ರಹಕ್ಕೆ ಪಾತ್ರರಾಗಿ ಪರಮಸುಖಗಳನ್ನೂ, ಪರಮಪದವಿಯನ್ನೂ ಹೊಂದುವರೆಂದು ಸೂತಮುನಿಯು ತಿಳಿಸಿದನು.

ಇಲ್ಲಿಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ತಿಥಿವಿಶೇಷಗಳಲ್ಲಿ ಮಾಡುವ
" ಶ್ರಾದ್ಧದ ಫಲನಿರೂಪಣೆ "ಯೆಂಬ ಹತ್ತೊಂಭತ್ತನೆಯ
ಅಧ್ಯಾಯವು ಮುಗಿದುದು.

## ಹತ್ತೊಂಭತ್ತನೆಯ ಅಧ್ಯಾಯದ ಸಾರಾಂಶವು

ತಿಥಿವಿಶೇಷಗಳಲ್ಲಿ ಮಾಡಿದ ಶ್ರಾದ್ಧಾದಿಗಳು ವಿಶೇಷ ಫಲಪ್ರದವಾಗುವುವು. ಎಂಬ ವಿಷಯವು ಈ ಅಧ್ಯಾಯದಲ್ಲಿ ಉಕ್ತವಾಗಿದೆ. ಪೌರ್ಣಿಮಾ ತಿಥಿಯಲ್ಲಿ ಶ್ರಾದ್ಧವನ್ನು ಮಾಡಿದರೆ ಸಂಪೂರ್ಣ ಫಲಗಳೂ, ಪಾಡ್ಯಮಿಯಲ್ಲಿ ಧನಲಾಭವೂ, ಬಿದಿಗೆಯಲ್ಲಿ ಸರ್ವಾಧಿಪತ್ಯವೂ, ತದಿಗೆಯಲ್ಲಿ ಶತ್ರುಸಂಹಾರವೂ, ಚೌತಿಯಲ್ಲಿ ಪರರಲ್ಲಿರುವ ದೋಷಜ್ಞಾನವೂ, ಪಂಚಮಿಯಲ್ಲಿ ಮಹಾಸಂಪತ್ತೂ, ಷಷ್ಠಿಯಲ್ಲಿ ಗೌರವವೂ, ಸಪ್ತಮಿಯಲ್ಲಿ ಯಾಜಮಾನ್ಯವೂ, ಅಷ್ಟಮಿಯಲ್ಲಿ ಸರ್ವಸಮೃದ್ಧಿಯೂ, ನವಮಿಯಲ್ಲಿ ಈಪ್ಸಿತಾರ್ಥಸಿದ್ಧಿಯೂ, ದಶಮಿಯಲ್ಲಿ ಬ್ರಹ್ಮಜ್ಞಾನವೂ, ಏಕಾದಶಿಯ ದಾನದಿಂದ ಸಕಲ ವೇದಾರ್ಥಜ್ಞಾನವೂ, ದ್ವಾದಶಿಯಲ್ಲಿ ಜಯವೂ, ತ್ರಯೋದಶಿಯಲ್ಲಿ ದೀರ್ಘಾಯುಷ್ಯವೂ, ಚತುರ್ದಶಿಯಲ್ಲಿ ಶಸ್ತ್ರಾಸ್ತ್ರಗಳಿಂದ ಹತರಾದವರ ಪ್ರೀತಿಯೂ, ಅಮಾವಾಸ್ಯೆಯಲ್ಲಿ ಸಕಲೇಷ್ಟಾರ್ಥಸಿದ್ಧಿಗಳೂ, ಮತ್ತು ಪರಮಪದವಿಯೂ, ಉಂಟಾಗುವುವು.

ಪಿತೃಗಳು ಅಮಾವಾಸ್ಯೆಯಲ್ಲಿ ಪ್ರತ್ಯಕ್ಷರಾಗಿ ಬಂದು ಪ್ರೀತರಾಗಿ ವರವನ್ನು ಕೊಟ್ಟು ಹೋಗುವರು. ಎಂಬ ವಿಷಯಗಳು ಉಕ್ತವಾಗಿವೆ.

—: ಹರಿಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ವಿಂಶೋಽಧ್ಯಾಯಃ

**॥ ಬೃಹಸ್ಪತಿರುವಾಚ ॥**

**ಯಮಸ್ತು ಯಾನಿ ಶ್ರಾದ್ಧಾನಿ ಪ್ರೋವಾಚ ಶಿವಬಿಂದವೇ ।**
**ತಾನಿ ಮೇ ಶೃಣು ಕಾರ್ತ್ಸ್ನ್ಯೇನನಕ್ಷತ್ರೇಷು ಪೃಥಕ್ ಪೃಥಕ್ ॥ ೧ ॥**

**ಶ್ರಾದ್ಧಂ ಯಃ ಕೃತ್ತಿಕಾಯೋಗೇ ಕರೋತಿ ಸತತಂ ನರಃ ।**
**ಅಗ್ನೀನಾಧಾಯ ಸಾಪತ್ಯೋ ಜಾಯತೇ ಸ ಗತಜ್ವರಃ ॥ ೨ ॥**

---

## ಇಪ್ಪತ್ತನೆಯ ಅಧ್ಯಾಯವು

೧. ಬೃಹಸ್ಪತಿ ಮುನಿಯು ಹೇಳಿದನು :—ಯಮದೇವನು ಶಿವಬಿಂದುವಿಗೆ ಯಾವ ಶ್ರಾದ್ಧದ ವಿಚಾರವನ್ನು ನಿರೂಪಿಸಿದನೋ ಅದನ್ನು ಸಂಪೂರ್ಣವಾಗಿ ನಿರೂಪಿಸುವೆನು. ಯಾವ ಯಾವ ನಕ್ಷತ್ರ ವಿಶೇಷಗಳಲ್ಲಿ ಶ್ರಾದ್ಧವನ್ನು ಮಾಡಿದರೆ ಯಾವ ಯಾವ ಮಹಾಫಲಗಳು ಉಂಟಾಗುವುವೋ ಅವನ್ನೂ ಹೇಳುವೆನೆಂದನು.

೨. ಯಾವ ಪುರುಷನು ಕೃತ್ತಿಕಾನಕ್ಷತ್ರಯುಕ್ತವಾದ ದಿವಸದಲ್ಲಿ ಶ್ರಾದ್ಧವನ್ನು ಮಾಡುವನೋ, ಮತ್ತು ಅಗ್ನಿಹೋತ್ರಾದಿಗಳನ್ನು ಮಾಡುವನೋ, ಅವನು ಪುತ್ರ ಪೌತ್ರಾದಿಗಳೊಡನೆ ನೀರೋಗಿಯೂ ನಿತ್ಯಸುಖಿಯೂ ಆಗುವನು.

ಅಪತ್ಯಕಾಮೋ ರೋಹಿಣ್ಯಾಂ ಸೌಮ್ಯೇನೌಜಸ್ವಿತಾ ಭವೇತ್ ।
ಪ್ರಾಯಶಃ ಕ್ರೂರಕರ್ಮಾ ತು ಚಾದ್ರಾಯಾಂ ಶ್ರಾದ್ಧಮಾಚರೇತ್ ॥ ೩ ॥

ಕ್ಷೇತ್ರಭಾಗೀ ಭವೇತ್ ಪುತ್ರೀ ಶ್ರಾದ್ಧಂ ಕುರ್ವನ್ ಪುನರ್ವಸೌ ।
ಧನಧಾನ್ಯಸಮಾಕೀರ್ಣಃ ಪುತ್ರಪೌತ್ರಸಮಾಕುಲಃ ॥ ೪ ॥

ತುಷ್ಟಿಕಾಮಃ ಪುನಸ್ತಿಷ್ಯೇ ಶ್ರಾದ್ಧಂ ಕುರ್ವೀತ ಮಾನವಃ ।
ಆಶ್ಲೇಷಾಸು ಪಿತೄನಾರ್ಚ್ಯ ವೀರಾನ್ ಪುತ್ರಾನವಾಪ್ನುಯಾತ್ ॥ ೫ ॥

ಶ್ರೇಷ್ಠೋ ಭವತಿ ಜ್ಞಾತೀನಾಂ ಮಘಾಸು ಶ್ರಾದ್ಧಮಾಚರನ್ ।
ಫಲ್ಗುನೀಷು ಪಿತೄನಾರ್ಚ್ಯ ಸೌಭಾಗ್ಯಂ ಲಭತೇ ನರಃ ॥ ೬ ॥

---

೩. ಪುತ್ರಕಾಮಿಯಾದ ಪುರುಷನು ರೋಹಿಣೀನಕ್ಷತ್ರದಲ್ಲಿಯೂ, ಸೌಂದರ್ಯಾಕಾಂಕ್ಷಿತನಾದ ಪುರುಷನು ಮೃಗಶಿರಾನಕ್ಷತ್ರದಲ್ಲಿಯೂ, ಕ್ರೂರಕರ್ಮಿಯಾದ ಪುರುಷನು ಆರಿದ್ರಾನಕ್ಷತ್ರದಲ್ಲಿಯೂ ಪಿತೃಕಾರ್ಯಗಳನ್ನು ಮಾಡುವರು.

೪. ಪುನರ್ವಸು ನಕ್ಷತ್ರಯುಕ್ತವಾದ ದಿವಸದಲ್ಲಿ ಶ್ರಾದ್ಧವನ್ನು ಮಾಡಿದರೆ ಕ್ಷೇತ್ರಾರಾಮಗಳೂ, ಸತ್ಸಂತಾನವೂ, ಧನಧಾನ್ಯಸಮೃದ್ಧಿಯೂ, ಪುತ್ರಪೌತ್ರಾದಿ ಸಮೃದ್ಧಿಯೂ ಉಂಟಾಗುವುವು.

೫. ಸಂತೋಷಕಾಮಿಯಾದ ಪುರುಷನು ಪುಷ್ಯನಕ್ಷತ್ರದಲ್ಲಿ ಶ್ರಾದ್ಧವನ್ನು ಮಾಡಬೇಕು. ಆಶ್ಲೇಷಾನಕ್ಷತ್ರದಲ್ಲಿ ಭಕ್ತಿಯಿಂದ ಪಿತೃಗಳನ್ನು ಪೂಜಿಸುವ ಪುರುಷನು ಶೂರರೂ, ವೀರರೂ ಆದ ಪುತ್ರರನ್ನು ಪಡೆಯುವನು.

೬. ಮಖಾನಕ್ಷತ್ರದಲ್ಲಿ ಶ್ರಾದ್ಧವನ್ನು ಮಾಡುವ ನರನು, ಜ್ಞಾತಿಗಳಲ್ಲಿ ಪೂಜ್ಯತೆಯನ್ನೂ, ಫಲ್ಗುನೀನಕ್ಷತ್ರದಲ್ಲಿ ಪಿತೃಗಳನ್ನು ಸತ್ಕರಿಸುವ ಮನುಜನು ಸೌಭಾಗ್ಯವನ್ನೂ ಹೊಂದುವನು.

ಪ್ರಧಾನಶೀಲಃ ಸಾಪತ್ಯ ಉತ್ತರಾಸು ಕರೋತಿ ಯಃ ।
ಸ ಸತ್ಸು ಮುಖ್ಯೋ ಭವತಿ ಹಸ್ತೇ ಯಸ್ತರ್ಪಯೇತ್ಪಿತ್ರ್ಯಾನ್ ॥ ೭ ॥

ಚಿತ್ರಾಯಾಂ ಚೈವ ಯಃ ಕುರ್ಯಾತ್ ಪಶ್ಯೇದ್ರೂಪವತಃ ಸುತಾನ್ ।
ಸ್ವಾತಿನಾ ಚೈವ ಯಃ ಕುರ್ಯಾದ್ವಿದ್ವಾಲ್ಲಾಭಮವಾಪ್ನುಯಾತ್ ॥ ೮ ॥

ಪುತ್ರಾರ್ಥಂ ತು ವಿಶಾಖಾಸು ಶ್ರಾದ್ಧಮೀಹೇತ ಮಾನವಃ ।
ಅನುರಾಧಾಸು ಕುರ್ವಾಣೋ ನರಶ್ಚಕ್ರಂ ಪ್ರವರ್ತಯೇತ್ ॥ ೯ ॥

ಆಧಿಪತ್ಯಂ ಲಭೇಚ್ಛ್ರೇಷ್ಠಂ ಜ್ಯೇಷ್ಠಾಯಾಂ ಸತತಂ ತು ಯಃ ॥
ಮೂಲೇನಾರೋಗ್ಯಮಿಚ್ಛಂತಿ ಆಷಾಢಾಸು ಮಹದ್ಯಶಃ ॥ ೧೦ ॥

---

೭. ಉತ್ತರಾನಕ್ಷತ್ರದಲ್ಲಿ ಪಿತೃಪೂಜೆಗಳನ್ನು ಮಾಡುವ ಪುರುಷನು ಪುತ್ರ ಸಮೇತನಾಗಿ ಉತ್ತಮಗುಣಶಾಲಿಯಾಗುವನು. ಹಸ್ತಾನಕ್ಷತ್ರದಲ್ಲಿ ಪಿತೃಗಳನ್ನು ಅರ್ಚಿಸಿದ ನರನು ಸತ್ಪುರುಷರಲ್ಲಿ ಅಗ್ರಗಣ್ಯನಾಗುವನು.

೮. ಚಿತ್ತಾನಕ್ಷತ್ರದಲ್ಲಿ ಪಿತೃಗಳ ಪೂಜೆಯನ್ನು ಮಾಡುವ ಪುರುಷನು ಸುಕುಮಾರರಾದ ಮಕ್ಕಳನ್ನು ಪಡೆಯುವನು. ಸ್ವಾತೀನಕ್ಷತ್ರದಲ್ಲಿ ಪಿತೃಪೂಜೆಯನ್ನು ಮಾಡಿದರೆ ವಿದ್ವಾಂಸನಾಗಿ ಮಹಾಲಾಭವನ್ನು ಪಡೆಯುವನು.

೯. ವಿಶಾಖೆಯಲ್ಲಿ ಪಿತೃಗಳನ್ನು ಆರಾಧಿಸುವ ನರನು ಪುತ್ರಲಾಭವನ್ನೂ, ಅನೂರಾಧೆಯಲ್ಲಿ ಪಿತೃದೇವತೆಗಳನ್ನು ಪೂಜಿಸುವ ಮನುಜನು ಚಕ್ರವರ್ತಿಯಾಗಿ ರಾಜ್ಯವನ್ನೂ, ಪಾಲಿಸುವನು.

೧೦. ಜ್ಯೇಷ್ಠಾನಕ್ಷತ್ರದಲ್ಲಿ ಪಿತೃಗಳನ್ನು ಆರಾಧಿಸಿದರೆ ಶ್ರೇಷ್ಠವಾದ ಅಧಿಕಾರವೂ, ಮೂಲಾನಕ್ಷತ್ರದಲ್ಲಿ ಪೂಜಿಸಿದರೆ ದೇಹಾರೋಗ್ಯವೂ, ಆಷಾಢಾ ನಕ್ಷತ್ರದಲ್ಲಿ ಪೂಜಿಸಿದರೆ ಮಹಾಕೀರ್ತಿಯೂ ಉಂಟಾಗುವುವು.

**ಆಷಾಢಾ ಭಿಶ್ಚೋತ್ತರಾಭಿರ್ವೀತಶೋಕೋ ಭವೇನ್ನರಃ ।**
**ಶ್ರವಣಾಯಾಂ ಸುಲೋಕೇಷು ಪ್ರಾಪ್ನುಯಾತ್ ಪರಮಾಂ ಗತಿಂ ॥ ೧೧ ॥**

**ರಾಜ್ಯಭಾಗ್ಯೈ ಧನಿಷ್ಠಾಸು ಪ್ರಾಪ್ನುಯಾದ್ವಿಪುಲಂ ಧನಂ ।**
**ಶ್ರಾದ್ಧಂ ತ್ವಭಿಜಿತಾ ಕುರ್ವನ್ ವಿಂದತೇಽಜಾವಿಕಂ ಫಲಂ ॥ ೧೨ ॥**

**ನಕ್ಷತ್ರೇ ವಾರುಣೇ ಕುರ್ವನ್ ಭಿಷಕ್ ಸಿದ್ಧಿಮವಾಪ್ನುಯಾತ್ ।**
**ಪೂರ್ವೇ ಪ್ರೋಷ್ಠಪದೇ ಕುರ್ವನ್ ವಿಂದತೇಽಜಾವಿಕಂ ಫಲಂ ॥ ೧೩ ॥**

**ಉತ್ತರಾಸ್ವನತಿಕ್ರಮ್ಯ ವಿಂದೇದ್ಗಾವೈ ಸಹಸ್ರಶಃ ।**
**ಬಹುರೂಪಕೃತಂ ದ್ರವ್ಯಂ ವಿಂದೇತ್ ಕುರ್ವಂಸ್ತು ರೇವತೀಂ ॥**
**ಅಶ್ವಾಂಶ್ಚೈವಾಶ್ವಿನೀಯುಕ್ತೋ ಭರಣ್ಯಾಮಾಯುರುತ್ತಮಂ ॥ ೧೪ ॥**

---

೧೧. ಯಾವ ಪುರುಷನು ಉತ್ತರಾಷಾಢಾನಕ್ಷತ್ರದಲ್ಲಿ ಭಕ್ತಿಯಿಂದ ಪಿತೃಕಾರ್ಯವನ್ನು ಮಾಡುವನೋ ಅವನು ಸಕಲದುಃಖರಹಿತನೂ, ನಿತ್ಯಸುಖಿಯೂ ಆಗುವನು. ಶ್ರವಣನಕ್ಷತ್ರದಲ್ಲಿ ಶ್ರಾದ್ಧವನ್ನು ಮಾಡುವವನು ಸಮಸ್ತ ಲೋಕಗಳಲ್ಲಿಯೂ, ಉತ್ತಮವಾದ ಸದ್ಗತಿಯನ್ನು ಹೊಂದುವನು.

೧೨. ಧನಿಷ್ಠಾನಕ್ಷತ್ರದಲ್ಲಿ ಪಿತೃಕಾರ್ಯವನ್ನು ಮಾಡುವ ನರನು ರಾಜ್ಯಕೋಶಾದಿ ಸಕಲಸಂಪತ್ತುಗಳನ್ನೂ ಪಡೆಯುವನು, ಶತಭಿಷಾನಕ್ಷತ್ರದಲ್ಲಿ ಶ್ರಾದ್ಧವನ್ನು ಮಾಡುವವನು ಆಡು, ಕುರಿ ಮೊದಲಾದ ಪಶುಗಳಿಗೆ ಯಜಮಾನನಾಗುವನು.

೧೩. ಪೂರ್ವಾಭಾದ್ರನಕ್ಷತ್ರದಲ್ಲಿ ಶ್ರಾದ್ಧಕಾರ್ಯಗಳನ್ನು ಮಾಡಿದರೆ ಸಕಲ ರೋಗಗಳನ್ನು ಅರಿಯುವ ವೈದ್ಯಸಿದ್ಧಿಯನ್ನು ಹೊಂದುವನು. ಮತ್ತು ಆಡು, ಕುರಿ ಮೊದಲಾದ ಸಕಲ ಪಶುಗಳಿಗೂ ಸ್ವಾಮಿಯಾಗುವನು.

೧೪. ಉತ್ತರಾಭಾದ್ರನಕ್ಷತ್ರದಲ್ಲಿ ಭಕ್ತಿಯಿಂದ ಪಿತೃಕ್ರಿಯೆಗಳನ್ನು ಮಾಡುವವನು ಸಾವಿರಾರು ಗೋವುಗಳಿಗೆ ಸ್ವಾಮಿಯಾಗುವನು. ರೇವತೀನಕ್ಷತ್ರದಲ್ಲಿ ಶ್ರಾದ್ಧವಿಧಿಯನ್ನು ಶ್ರದ್ಧೆಯಿಂದ ಮಾಡುವವನು ಅನೇಕ ವಿಧವಾದ ಐಶ್ವರ್ಯವನ್ನು ಪಡೆಯುವನು. ಅಶ್ವಿನೀನಕ್ಷತ್ರದಲ್ಲಿ ಪಿತೃಕ್ರಿಯೆಯನ್ನು ಮಾಡುವವನಿಗೆ ಅಶ್ವಸಮೃದ್ಧಿಯೂ, ಭರಣೀನಕ್ಷತ್ರದಲ್ಲಿ ಶ್ರಾದ್ಧಕರ್ಮವನ್ನು ನೆರವೇರಿಸುವ ಪುರುಷನಿಗೆ ಪರಮಾಯುಷ್ಯವೂ ಉಂಟಾಗುವುವು.

**ಇಮಂ ಶ್ರಾದ್ಧವಿಧಿಂ ಕುರ್ವಚ್ಛಶಬಿಂದುರ್ಮಹೀಮಿಮಾಂ।**
**ಕೃತ್ಸ್ನಾಂ ತು ಲೇಭೇ ಸ ಕೃತ್ಸ್ನಾಂ ಲಬ್ಧ್ವಾ ಚ ಪ್ರಶಶಂಸ ತಂ ॥ ೧೫ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ ನಕ್ಷತ್ರವಿಶೇಷೇ**
**" ಶ್ರಾದ್ಧಫಲವರ್ಣನಂ " ನಾಮ ವಿಂಶೋಽಧ್ಯಾಯಃ**

---

೧೫. ಈ ರೀತಿಯಾಗಿ ಶ್ರಾದ್ಧವಿಧಿಯನ್ನು ಕ್ರಮವಾಗಿ ಕೇಳಿ, ಭಕ್ತಿಯಿಂದ ಮಾಡಿದ ಶಶಬಿಂದು ಮಹಾರಾಜನು, ಸಂಪೂರ್ಣ ಭೂಮಂಡಲವನ್ನು ಜಯಿಸಿ ಚಕ್ರವರ್ತಿಯಾಗುವನು. ಮತ್ತು ಸರ್ವವಿಧವಾದ ಸೌಖ್ಯವನ್ನೂ ಹೊಂದಿ, ಪಿತೃವಿಷಯಕವಾದ ಶ್ರಾದ್ಧಕ್ರಮವನ್ನು ಬಹಳವಾಗಿ ಹೊಗಳಿ, ಲೋಕದಲ್ಲಿ ಪ್ರಖ್ಯಾತಿಪಡಿಸಿದನು.

ಇಲ್ಲಿಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ನಕ್ಷತ್ರವಿಶೇಷಗಳಲ್ಲಿ ಮಾಡುವ
" ಶ್ರಾದ್ಧಫಲವರ್ಣನ "ವೆಂಬ ಇಪ್ಪತ್ತನೆಯ
ಅಧ್ಯಾಯವು ಸಮಾಪ್ತವಾದುದು.



## ಇಪ್ಪತ್ತನೆಯ ಅಧ್ಯಾಯದ ಸಾರಾಂಶವು

ನಕ್ಷತ್ರವಿಶೇಷಗಳಲ್ಲಿ ಶ್ರಾದ್ಧಕರ್ಮಗಳನ್ನು ಮಾಡಿದರೆ ನಾನಾವಿಧ ಫಲ ಪ್ರಾಪ್ತಿಗಳಾಗುವುವು ಎಂಬ ವಿಷಯವು ಈ ಅಧ್ಯಾಯದಲ್ಲಿ ವರ್ಣಿತವಾಗಿದೆ.

ಅಶ್ವಿನೀನಕ್ಷತ್ರದಲ್ಲಿ ಶ್ರಾದ್ಧಕರ್ಮವನ್ನು ಭಕ್ತಿಯಿಂದ ಮಾಡಿದರೆ ಅಶ್ವ ಸಮೃದ್ಧಿಯೂ, ಭರಣಿಯಲ್ಲಿ ಪರಮಾಯುಷ್ಯವೂ, ಕೃತ್ತಿಕೆಯಲ್ಲಿ ಆರೋಗ್ಯವೂ, ರೋಹಿಣಿಯಲ್ಲಿ ಪುತ್ರಸಂತಾನವೂ, ಮೃಗಶಿರೆಯಲ್ಲಿ ದಿವ್ಯತೇಜಸ್ಸೂ, ಆರುದ್ರೆಯಲ್ಲಿ ಕ್ರೌರ್ಯವೂ, ಪುನರ್ವಸುವಿನಲ್ಲಿ ಕ್ಷೇತ್ರಾರಾಮಗಳೂ, ಪುಷ್ಯದಲ್ಲಿ ಧನಧಾನ್ಯಸಮೃದ್ಧಿಯೂ, ಆಶ್ಲೇಷದಲ್ಲಿ ಪುತ್ರಸಮೃದ್ಧಿಯೂ, ಮಖೆಯಲ್ಲಿ ಗೌರವವೂ, ಉತ್ತರೆಯಲ್ಲಿ ಸೌಭಾಗ್ಯವೂ, ಹಸ್ತದಲ್ಲಿ ಮಹಾಗುಣಗಳೂ, ಚಿತ್ತೆಯಲ್ಲಿ ಸೌಂದರ್ಯಸಂತಾನವೂ, ಸ್ವಾತಿಯಲ್ಲಿ ಜ್ಞಾನವೂ, ವಿಶಾಖೆಯಲ್ಲಿ ನರಕವೂ, ಜ್ಯೇಷ್ಠೆಯಲ್ಲಿ ದೊರೆತನವೂ, ಮೂಲದಲ್ಲಿ ಆರೋಗ್ಯವೂ, ಪೂರ್ವಾಷಾಢದಲ್ಲಿ ಯಶಸ್ಸೂ, ಉತ್ತರಾಷಾಢದಲ್ಲಿ ದುಃಖರಾಹಿತ್ಯವೂ, ಶ್ರವಣದಲ್ಲಿ ಪರಮಪದವಿಯೂ, ಧನಿಷ್ಠೆಯಲ್ಲಿ ಧನವೂ, ಶತಭಿಷೆಯಲ್ಲಿ ಆಡುಕುರಿಗಳೂ, ಪೂರ್ವಾಭಾದ್ರದಲ್ಲಿ ವೈದ್ಯಸಿದ್ಧಿಯೂ, ಉತ್ತರಾಭಾದ್ರದಲ್ಲಿ ಗೋಸಮೃದ್ಧಿಯೂ, ರೇವತಿಯಲ್ಲಿ ಸಕಲವಿಧ ಸಮೃದ್ಧಿಗಳೂ ಸಂಭವಿಸುವುವು.

ಶಶಿಬಿಂದು ಮಹಾರಾಜನು, ಇದನ್ನು ಅನುಷ್ಠಾನಕ್ಕೆ ತಂದು ಚಕ್ರವರ್ತಿಸಾರ್ವಭೌಮನಾಗಿ ಸಕಲ ಸಂಪತ್ತುಗಳನ್ನೂ ಪಡೆದನೆಂಬ ವಿಷಯಗಳು ಈ ಅಧ್ಯಾಯದಲ್ಲಿ ವರ್ಣಿತವಾಗಿವೆ.

—|| ಹರಿಃ ಓಂ ||—

—|| ಶ್ರೀ ವೇದವ್ಯಾಸಾಯ ನಮಃ ||—

# ಶ್ರೀಮದ್ವಾಯು ಮಹಾಪುರಾಣಂ

## ಏಕೋವಿಂಶೋಽಧ್ಯಾಯಃ

**|| ಶಂಯುರುವಾಚ ||**

**ಕಿಂಚಿದ್ದತ್ತಂ ಪಿತೃಣಾಂ ತು ಧಿನೋತಿ ವದತಾಂ ವರ |**
**ಕಿಂ ಹಿ ಸ್ವಿಚ್ಚಿರರಾತ್ರಾಯ ಕಿಂಚಾನಂತ್ಯಾಯ ಕಲ್ಪತೇ || ೧ ||**

**|| ಬೃಹಸ್ಪತಿರುವಾಚ ||**

**ಹವೀಂಷಿ ಶ್ರಾದ್ಧಕಾಲೇ ತು ಯಾನಿ ಶ್ರಾದ್ಧವಿದೋ ವಿದುಃ |**
**ತಾನಿ ಮೇ ಶೃಣು ಸರ್ವಾಣಿ ಫಲಂ ಚೈಷಾಂ ಯಥಾಬಲಂ || ೨ ||**

---

## ಇಪ್ಪತ್ತೊಂದನೆಯ ಅಧ್ಯಾಯವು

೧. ಶಂಯುಮುನಿಯು ಹೇಳಿದನು :—ಎಲೈ ಜ್ಞಾನಿಯಾದ ಬೃಹಸ್ಪತಿಗಳೇ, ಪಿತೃಗಳಿಗೋಸ್ಕರವಾಗಿ ಕೊಡುವ ಯಾವ ಪದಾರ್ಥಗಳು ಅನಂತಫಲಪ್ರದವಾಗುವುವು ? ಯಾವುದು ಬಹುಕಾಲದವರೆಗೂ ಫಲಗಳನ್ನು ಕೊಡುವುದು? ಯಾವುದು ಚಿರಕಾಲ ಫಲದಾಯಕವಾಗುವುದು ಎಂದು ಕೇಳಿದನು ?

೨. ಬೃಹಸ್ಪತಿಯು ಹೇಳಿದನು :—ಶ್ರಾದ್ಧಕರ್ಮವನ್ನು ತಿಳಿದ ಮಹಾತ್ಮರು, ಯಾವ ಕ್ರಮಗಳನ್ನು ಮತ್ತು ಫಲಗಳನ್ನು ಹೇಳಿರುವರೋ ಅವುಗಳನ್ನು ನಿನಗಾಗಿ ತಿಳಿಸುವೆನು. ಯಾವ ಹವಿರ್ದ್ರವ್ಯಗಳಿಂದ ಯಾವ ಫಲಪ್ರಾಪ್ತಿಯಾಗುವುದೋ ಅದನ್ನೂ ಸಹ ಯಥಾಸ್ಥಿತವಾಗಿ ಹೇಳುವೆನು ಕೇಳೆಂದನು.

ತಿಲೈರ್ವ್ರೀಹಿಯವೈರ್ಮಾಷೈರದ್ಭಿರ್ಮೂಲಫಲೇನ ಚ ।
ದತ್ತೇನ ಮಾಸಂ ಪ್ರೀಯಂತೇ ಶ್ರಾದ್ಧೇನ ತು ಪಿತಾಮಹಾಃ ॥ ೩ ॥

ಮತ್ಸ್ಯೈಃ ಪ್ರೀಣಂತಿ ದ್ವೌ ಮಾಸೌ ತ್ರೀನ್ಮಾಸಾನಾಹರಿಣೇನ ತು ।
ಶಾಶಂ ತು ಚತುರೋ ಮಾಸಾನ್ ಪಂಚ ಪ್ರೀಣಾತಿ ಶಾಕುನಂ ॥ ೪ ॥

ವಾರಾಹೇಣ ತು ಷಣ್ಮಾಸಾಚ್ಛಾಗಲಂ ಸಾಪ್ತಮಾಸಿಕಂ ।
ಅಷ್ಟಮಾಸಿಕಮಿತ್ಯುಕ್ತಂ ಯಚ್ಚ ಪಾರ್ಷತಕಂ ಭವೇತ್ ॥ ೫ ॥

ರೌರವೇಣ ತು ಪ್ರೀಯಂತೇ ನವಮಾಸಾನ್ ಪಿತಾಮಹಾಃ ।
ಗವಯಸ್ಯ ತು ಮಾಂಸೇನ ತೃಪ್ತಿಃ ಸ್ಯಾದ್ದಶಮಾಸಿಕೀ ॥ ೬ ॥

---

೩. ಶ್ರಾದ್ಧದಲ್ಲಿ ಎಳ್ಳು, ಅಕ್ಕಿ, ಗೋಧಿ, ಉದ್ದು, ಕಂದ, ಮೂಲ, ಫಲಪುಷ್ಪ ಇವೇ ಮೊದಲಾದುವುಗಳನ್ನು ಉಪಯೋಗಿಸಿದರೆ ಪಿತೃದೇವತೆಗಳು ಒಂದು ತಿಂಗಳ ವರೆಗೂ ಪ್ರೀತರಾಗಿರುವರು.

೪. ಶ್ರಾದ್ಧದಲ್ಲಿ ಮತ್ಸ್ಯಮಾಂಸವನ್ನು ಉಪಯೋಗಿಸಿದರೆ ಎರಡು ಮಾಸಗಳು ಪ್ರೀತಿಯೂ, ಜಿಂಕೆಯ ಮಾಂಸವನ್ನು ಕೊಟ್ಟರೆ ಮೂರು ತಿಂಗಳವರೆಗೂ ಸಂತೋಷವೂ, ಮೊಲದ ಮಾಂಸದಿಂದ ನಾಲ್ಕು ತಿಂಗಳು ಸಂತೋಷವೂ, ಶಕುನಿಯ ಮಾಂಸದಿಂದ ಐದು ತಿಂಗಳು ಆನಂದವೂ ಉಂಟಾಗುವುವು.

೫. ವರಾಹ ಮಾಂಸಗಳಿಂದ ಆರು ತಿಂಗಳು ಪ್ರಿಯವೂ, ಚುಕ್ಕೆಗಳಿರುವ ಮೃಗಮಾಂಸದಿಂದ ಎಂಟು ತಿಂಗಳು ಪ್ರಿಯವೂ, ಮೇಕೆಯ ಮಾಂಸದಿಂದ ಏಳು ಮಾಸಗಳು ಆನಂದವೂ ಉಂಟಾಗುವುವು.

೬. ಪಿತೃದೇವತೆಗಳಿಗೆ ಕರೀಮಚ್ಚೆಗಳಿರುವ ಮೃಗಮಾಂಸದಿಂದ ಒಂಭತ್ತು ತಿಂಗಳು ಪ್ರೀತಿಯೂ, ಕಾಡುಹಸುಗಳ ಮಾಂಸಗಳಿಂದ ಹತ್ತು ತಿಂಗಳು ಆನಂದವೂ ಉಂಟಾಗುವುವು.

**ಕೂರ್ಮಸ್ಯ ಚೈವ ಮಾಂಸೇನ ಮಾಸಾನೇಕಾದಶೈವ ತು ।**
**ಶ್ರಾದ್ಧಮೇವ ವಿಜಾನೀಯಾದ್ಗವ್ಯಂ ಸಂವತ್ಸರಂ ಭವೇತ್ ॥ ೭ ॥**

**ತಥಾ ಗವ್ಯಸಮಾಯುಕ್ತಂ ಪಾಯಸಂ ಮಧುಸರ್ಪಿಷಾ ।**
**ವಧ್ರೀಣಸ್ಯ ಮಾಂಸೇನ ತೃಪ್ತಿರ್ದ್ವಾದಶವಾರ್ಷಿಕೀ ॥ ೮ ॥**

**ಅನಂತ್ಯಾಯ ಭವೇದ್ಯುಕ್ತಂ ಖಾಡ್ಗಮಾಂಸೈಃ ಪಿತೃಕ್ಷಯೇ ।**
**ಕೃಷ್ಣಚ್ಛಾಗಸ್ತಥಾ ಗೋಧಾ ಆನಂತ್ಯಾಯೈವ ಕಲ್ಪತೇ ॥ ೯ ॥**

**ಅತ್ರ ಗಾಥಾಃ ಪಿತೃಗೀತಾಃ ಕೀರ್ತಯಂತಿ ಪುರಾವಿದಃ ।**
**ತಾಸ್ತೇಽಹಂ ಸಂಪ್ರವಕ್ಷ್ಯಾಮಿ ಯಥಾವತ್ಸನ್ನಿಬೋಧತ ॥ ೧೦ ॥**

---

೭. ಆಮೆಯ ಮಾಂಸದಿಂದ ಹನ್ನೊಂದು ತಿಂಗಳು ಪ್ರೀತಿಯೂ, ಹಸುವಿನ ಹಾಲು, ಮೊಸರು ಮೊದಲಾದುವುಗಳಿಂದ ಒಂದು ವರ್ಷಗಳವರೆಗೂ ಪ್ರೀತಿಯೂ ಉಂಟಾಗುವುವು.

೮. ಹಸುವಿನ ಹಾಲು, ತುಪ್ಪ, ಜೇನು ಇವುಗಳಿಂದ ಮಿಶ್ರವಾದ ಪಾಯಸದಿಂದಲೂ ವಧ್ರೀಣವೆಂಬ ಮೃಗದ ಮಾಂಸದಿಂದಲೂ ಹನ್ನೆರಡು ವರ್ಷಗಳ ತನಕ ಪ್ರೀತಿಯೂ ಸಂಭವಿಸುವುದು.

೯. ಖಡ್ಗಮೃಗದ ಮಾಂಸದಿಂದಲೂ ಕರಿಯಮೇಕೆ ಮತ್ತು ನೀರುಡದ ಮಾಂಸದಿಂದಲೂ ಪಿತೃಗಳಿಗೆ ನಿತ್ಯತೃಪ್ತಿಯು ಉಂಟಾಗುವುದು. ಇದರಿಂದ ಯಜಮಾನನಿಗೆ ಅನಂತ ಫಲಪ್ರಾಪ್ತಿಯುಂಟಾಗುವುದು.

೧೦. ಈ ವಿಷಯದಲ್ಲಿ ಪುರಾತನರಾದ ಪಿತೃಗಳು ಹೇಳಿರುವ ಗಾದೆಗಳನ್ನು ಯಥಾಸ್ಥಿತವಾಗಿ ನಿಮಗೋಸ್ಕರ ನಿರೂಪಿಸುವೆನು ಕೇಳಿರೆಂದು ಬೃಹಸ್ಪತಿಯು ಹೇಳಿದನು.

ಅಪಿ ನಃ ಸ್ವಕುಲೇ ಜಾಯಾದ್ಯೋಽನ್ನಂ ದದ್ಯಾನ್ ತ್ರಯೋದಶೀಂ ।
ಪಾಯಸಂ ಮಧುಸರ್ಪಿರ್ಭ್ಯಾಂ ಛಾಯಾಯಾಂ ಕುಂಜರಸ್ಯ ತು ॥ ೧೧ ॥

ಆಜೇನ ಸರ್ವಲೋಹೇನ ವರ್ಷಾಸು ಚ ಮಘಾಸು ಚ ।
ಏಷ್ಟವ್ಯಾ ಬಹವಃ ಪುತ್ರಾ ಯದ್ಯೇಕೋಽಪಿ ಗಯಾಂ ವ್ರಜೇತ್ ॥
ಗೌರೀಂ ವಾಪ್ಯುದ್ವಹೇದ್ಭಾರ್ಯಾಂ ನೀಲಂ ವಾ ವೃಷಮುತ್ಸೃಜೇತ್ ॥ ೧೨ ॥

॥ ಶಂಯುರುವಾಚ ॥

ಗಯಾದೀನಾಂ ಫಲಂ ತಾತ ಪ್ರಬ್ರೂಹಿ ಸಮುಪೃಚ್ಛತಃ ।
ಪಿತೄಣಾಂ ಚೈವ ಯತ್ಪುಣ್ಯಂ ನಿಖಿಲೇನ ಬ್ರವೀಹಿ ಮೇ ॥ ೧೩ ॥

॥ ಬೃಹಸ್ಪತಿರುವಾಚ ॥

ಗಯಾಯಾಮಕ್ಷಯಂ ಶ್ರಾದ್ಧಂ ಜಪಹೋಮತಪಾಂಸಿ ಚ ।
ಪಿತೃಕ್ಷಯಾಹೇ ತೇ ಪುತ್ರ ತಸ್ಮಾತ್ತತ್ರಾಕ್ಷಯಂ ಸ್ಮೃತಂ ॥ ೧೪ ॥

---

೧೧. ಯಾವನು ತ್ರಯೋದಶೀ ತಿಥಿಯಲ್ಲಿ ಪಿತೃಗಳಿಗೆ ಅನ್ನೋದಕಗಳನ್ನೂ ಗಜಚ್ಛಾಯೆಯಲ್ಲಿ ಮಧು, ತುಪ್ಪ, ಇವುಗಳಿಂದ ಮಿಶ್ರವಾದ ಪಾಯಸವನ್ನೂ ದಾನ ಮಾಡುವನೋ ಅವನು ನಮ್ಮ ಮಹರ್ಷಿಗಳ ವಂಶದಲ್ಲಿ ಜನಿಸುವನು.

೧೨. ಯಾವನು ಆಡಿನ ಮಾಂಸದಿಂದಲೂ, ಸುವರ್ಣವೇ ಮೊದಲಾದ ಲೋಹಗಳಿಂದಲೂ, ವರ್ಷಾಕಾಲದಲ್ಲಿಯೂ, ಮಖಾನಕ್ಷತ್ರದಲ್ಲಿಯೂ ಹೋಮಾದಿಗಳನ್ನು ಮಾಡುವನೋ ಅವನು ಬಹುಪುತ್ರವಂತನಾಗುವನು. ಅವರಲ್ಲಿ ಒಬ್ಬ ಕುಮಾರನಾದರೂ ಗಯೆಗೆ ಹೋಗಿ ಶ್ರಾದ್ಧಮಾಡಿ ನೀಲವೃಷೋತ್ಸರ್ಜನೆ ಮಾಡಿದರೆ ಆ ಕುಮಾರನು ಗೌರೀದೇವಿಯಂಥ ಪತ್ನಿಯನ್ನು ಪಡೆದು ಸುಖಿಯಾಗುವನು.

೧೩. ಶಂಯುಮುನಿಯು ಹೇಳಿದನು:—ಎಲೈ ಪೂಜ್ಯರಾದ ಬೃಹಸ್ಪತಿಗಳಿರಾ, ವಿಶ್ವಾಸದಿಂದ ಕೇಳುವ ನಮಗೆ ಗಯಾಶ್ರಾದ್ಧಫಲವನ್ನು ನಿರೂಪಿಸಬೇಕು. ಪಿತೃಗಳಿಗೆ ಯಾವ ಫಲಪ್ರಾಪ್ತಿಯಾಗುವುದು ? ಇದನ್ನು ತಿಳಿಸಬೇಕೆಂದು ಬೇಡಿಕೊಂಡರು.

೧೪. ಬೃಹಸ್ಪತಿಗಳು ತಿಳಿಸಿದರು :—ಪುರುಷರು ಗಯಾಕ್ಷೇತ್ರಕ್ಕೆ ಹೋಗಿ ಪಿತೃಗಳಿಗಾಗಿ ಶ್ರಾದ್ಧ, ಜಪ, ಹೋಮ, ತಪಸ್ಸು ಇವುಗಳನ್ನು ಮಾಡಿದರೆ ಅಕ್ಷಯ ಫಲದಾಯಕವಾಗುವುದು. ಮತ್ತು ಪಿತೃಗಳು ಕ್ಷೇಮವಾಗಿರುವರು.

**ಪುನೀಯಾದೇಕವಿಂಶಂ ತು ಗೌರ್ಯಾಮುತ್ಪಾದಿತಃ ಸುತಃ ।**
**ಮಾತಾಮಹಾಂಸ್ತು ಷಡ್‌ಭೂಯ ಇತಿ ತಸ್ಯಾಃ ಫಲಂ ಸ್ಮೃತಂ ॥ ೧೫ ॥**

**ಫಲಂ ವೃಷಸ್ಯ ವಕ್ಷ್ಯಾಮಿ ಗದತೋ ಮೇ ನಿಬೋಧತ ।**
**ವೃಷೋತ್ಸೃಷ್ಟಾ ಪುನಾತ್ಯೇವ ದಶಾತೀತಾನ್ ದಶಾವರಾ ॥ ೧೬ ॥**

**ಯತ್ಕಿಂಚಿತ್ ಸ್ಪೃಶ್ಯತೇ ತೋಯೈರುತ್ತೀರ್ಣೇ ನ ಜಲಾಸ್ಮಹೀಂ ।**
**ವೃಷೋತ್ಸರ್ಗೇ ಪಿತೄಂಣಾಂ ತು ಹ್ಯಕ್ಷಯಂ ಸಮುದಾವೃತಂ ॥ ೧೭ ॥**

**ಯದ್ಯದ್ಧಿ ಸಂಸ್ಪೃಶೇತ್ತೋಯಂ ಲಾಂಗೂಲಾದಿಭಿರಂತತಃ ।**
**ಸರ್ವಂ ತದಕ್ಷಯಂ ತಸ್ಯ ಪಿತೄಣಾಂ ನಾತ್ರ ಸಂಶಯಃ ॥ ೧೮ ॥**

---

೧೫. ಗಯೆಗೆ ಹೋಗಿ ಶ್ರಾದ್ಧವನ್ನು ಮಾಡಿದರೆ ಇಪ್ಪತ್ತೊಂದು ಕುಲದವರು ಪವಿತ್ರರಾಗುವರು. ಅವನು ಗೌರೀದೇವಿಯಲ್ಲಿ ಜನಿಸಿದ ಪುತ್ರನಂತೆ ಪ್ರಸಿದ್ಧನಾಗುವನು. ಮಾತಾಮಹಾದಿ ಆರು ಜನರೂ ಪವಿತ್ರರಾಗಿ ಮುಕ್ತಿಗೆ ಹೋಗುವರು. ಇದು ಗಯಾಕ್ಷೇತ್ರದ ಶ್ರಾದ್ಧದ ಫಲವಾಗಿದೆ.

೧೬. ಈಗ ವೃಷೋತ್ಸರ್ಗದ ಫಲವನ್ನು ಹೇಳುವೆನು ಕೇಳಿರಿ. ಗಯೆಯಲ್ಲಿ ವೃಷೋತ್ಸರ್ಗವನ್ನು ಮಾಡಿದರೆ ಹಿಂದಿನ ಮತ್ತು ಮುಂದಿನ ಹತ್ತು ಕುಲದವರು ಪವಿತ್ರರಾಗಿ ನಿತ್ಯಸುಖವನ್ನು ಪಡೆಯುವರು.

೧೭. ವೃಷೋತ್ಸರ್ಗವನ್ನು ಮಾಡುವಾಗ ಆ ವೃಷವು ಗಂಗೆಯಲ್ಲಿ ಸ್ನಾನ ಮಾಡಿ ತೀರಕ್ಕೆ ಬಂದಾಗ ಯಾವ ಜಲವು ಅದರ ದೇಹದ ಮೇಲಿರುವುದೋ ಅದು ಪಿತೃಗಳಿಗೆ ಅಕ್ಷಯಫಲವನ್ನು ಕೊಡುವುದು.

೧೮. ವೃಷೋತ್ಸರ್ಗ ಮಾಡಿದ ಎತ್ತಿನ ಬಾಲವೇ ಮೊದಲಾದ ಅಂಗಗಳಲ್ಲಿ ಯಾವ ಜಲವಿರುತ್ತದೆಯೋ ಅದು ಪಿತೃಗಳಿಗೆ ಅಕ್ಷಯಫಲಗಳನ್ನು ಕೊಡುತ್ತದೆ. ಈ ವಿಷಯದಲ್ಲಿ ಸಂದೇಹವೇ ಇಲ್ಲ.

ಶೃಂಗೈಃ ಖುರೈರ್ವಾ ಯದ್ಭೂಮಿಮುಲ್ಲಿಖತ್ಯನಿಶಂ ವೃಷಃ ।
ಮಧುಕುಲ್ಯಾಃ ಪಿತೄಂಸ್ತಸ್ಯ ಅಕ್ಷಯಾಸ್ತಾ ಭವಂತಿ ವೈ ॥ ೧೯ ॥

ಸಹಸ್ರನಲ್ವಮಾತ್ರೇಣ ತಡಾಗೇನ ಯಥಾ ಶ್ರುತಿಃ ।
ತೃಪ್ತಿಸ್ತೃಪ್ತಿಃ ಪಿತೄಣಾಂ ವೈ ತದ್ವೃಷಸ್ಯಾಧಿಕೋಽಚ್ಯತೇ ॥ ೨೦ ॥

ಯೋ ದದತಿ ಗುಡೈರ್ಮಿಶ್ರಾಂಸ್ತಿಲಾನ್ ವೈ ಶ್ರಾದ್ಧಕರ್ಮಣಿ ।
ಮಧುನಾ ಮಧುಮಿಶ್ರಾನ್ ವಾ ಅಕ್ಷಯಂ ಸರ್ವಮೇವ ತತ್ ॥ ೨೧ ॥

॥ ಬೃಹಸ್ಪತಿರುವಾಚ ॥

ನ ಬ್ರಾಹ್ಮಣಾನ್ ಪರೀಕ್ಷೇತ ಸದಾ ದೇಯೇ ತು ಮಾನವಃ ।
ದೈವೇ ಕರ್ಮಣಿ ಪಿತ್ರ್ಯೇ ಚ ಶ್ರೂಯತೇ ವೈ ಪರೀಕ್ಷಣಂ ॥ ೨೨ ॥

---

೧೯. ಆ ವೃಷವು ಕೋಂಬು ಗೊರಸು ಇವುಗಳಿಂದ ಭೂಮಿಯನ್ನು ಪುನಃ ಪುನಃ ಕೆರದರೆ, ಅವು ಕ್ಷೀರ, ಮಧು, ಘೃತಗಳ ಕಾಲಿವೆಯಾಗಿ ಪಿತೃಗಳಿಗೆ ಅಕ್ಷಯಫಲವನ್ನು ಕೊಡುವುವು.

೨೦. ನಾನ್ನೂರು ಮೊಳಗಳಷ್ಟು ಅಗಲವಿರುವ ಕೆರೆತಟಾಕಾದಿಗಳನ್ನು ಅಗಿಸಿ ಜನೋಪಕಾರ ಮಾಡಿದರೆ ಯಾವ ಫಲವು ಉಂಟಾಗುವುದೋ, ಅಂತಹ ಮಹಾ ಫಲವು ಗಯಾಕ್ಷೇತ್ರದಲ್ಲಿ ವೃಷೋತ್ಸರ್ಗ ಮಾಡಿದ ಮಾತ್ರದಿಂದಲೇ ಪಿತೃಗಳಿಗೆ ಉಂಟಾಗುವುದು. ಯಜಮಾನನು ನಿತ್ಯಸುಖಿಯಾಗುವನು.

೨೧. ಯಾವನು ಶ್ರಾದ್ಧಕರ್ಮದಲ್ಲಿ ಗುಡ (ಬೆಲ್ಲ) ಮಿಶ್ರವಾದ ಎಳ್ಳನ್ನು ದಾನಮಾಡುವನೋ ಅಥವಾ ಜೇನುತುಪ್ಪವನ್ನು, ಜೇನುಮಿಶ್ರವಾದ ಎಳ್ಳನ್ನು, ಕೊಡುವನೋ ಅದು ಅವನಿಗೆ ಅನಂತಫಲವನ್ನು ಕೊಡುವುದು.

೨೨. ಬೃಹಸ್ಪತಿಗಳು ಹೇಳುವರು :—ಮನುಷ್ಯನು ಸಾಮಾನ್ಯವಾಗಿ ಧ್ಯೇಯವಾದ ನಿತ್ಯದಾನದ ವಿಷಯದಲ್ಲಿ ಬ್ರಾಹ್ಮಣರನ್ನು ಪದೇ ಪದೇ ಪರೀಕ್ಷಿಸಬಾರದು. ಆದರೆ ದೇವತೋದ್ದೇಶ್ಯಕವೂ ಪಿತೃಗಳ ಉದ್ದೇಶ್ಯಕವೂ ಆದ ಕರ್ಮಗಳಲ್ಲಿ ಮಾತ್ರ ಬ್ರಾಹ್ಮಣರನ್ನು ಪರೀಕ್ಷಿಸಿ ಉಪಯೋಗಿಸಿಕೊಳ್ಳಬೇಕು.

ಸರ್ವವೇದವ್ರತಸ್ನಾತಾಃ ಪಂಕ್ತೀನಾಂ ಪಾವನಾ ದ್ವಿಜಾಃ ।
ಯೇ ಚ ಭಾಷ್ಯವಿದೋ ಮುಖ್ಯಾ ಯೇ ಚ ವ್ಯಾಕರಣೇ ರತಾಃ ॥ ೨೩ ॥

ಅಧೀಯತೇ ಪುರಾಣಂ ಚ ಧರ್ಮಶಾಸ್ತ್ರಂ ತಥೈವ ಚ ।
ತ್ರೀಣಾಚಿಕೇತಪಂಚಾಗ್ನಿಸ್ತ್ರೀಸುಪರ್ಣಃ ಷಡಂಗವಿತ್ ॥ ೨೪ ॥

ಬ್ರಹ್ಮದೇಯಸುತಶ್ಚೈವ ಛಂದೋಗೋ ಜ್ಯೇಷ್ಠಸಾಮಗಃ ।
ಪುಣ್ಯೇಷು ಯೇಷು ತೀರ್ಥೇಷು ಅಭಿಷೇಕಕೃತವ್ರತಾಃ ॥ ೨೫ ॥

ಮುಖ್ಯೇಷು ಯೇಷು ಸತ್ರೇಷು ಭವಂತ್ಯವಭೃಥಪ್ರುತಾಃ ।
ಯೇ ಚ ಸದ್ಯೋವ್ರತಾ ನಿತ್ಯಂ ಸ್ವಕರ್ಮನಿರತಾಶ್ಚ ಯೇ ॥ ೨೬ ॥

ಅಕ್ರೋಧನಾಃ ಶಾಂತಿಪರಾಸ್ತಾನ್ ವೈ ಶ್ರಾದ್ಧೇ ನಿಮಂತ್ರಯೇತ್ ।
ಯೇ ಚಾಪಿ ನಿತ್ಯಂ ದಶಸು ಸುಕೃತೇಷು ವ್ಯವಸ್ಥಿತಾಃ ॥ ೨೭ ॥

---

೨೩–೨೫. ಸರ್ವವೇದಗಳನ್ನು ತಿಳಿದವರೂ, ಸರ್ವಕರ್ಮಾನುಷ್ಠಾತೃಗಳೂ, ಸರ್ವಯಜ್ಞಗಳಲ್ಲಿಯೂ ಸ್ನಾತರೂ, ಭಾಷ್ಯವನ್ನು ತಿಳಿದವರೂ, ವ್ಯಾಕರಣಾಸಕ್ತರೂ, ಪುರಾಣಧರ್ಮಶಾಸ್ತ್ರಗಳನ್ನು ತಿಳಿದವರೂ, ಕಾಟಕ ಛಾಂದ್ಯೋಜ್ಞಾದಿ ಉಪನಿಷತ್ತುಗಳನ್ನು ಬಲ್ಲವರೂ, ವೇದಾಂಗಜ್ಞರೂ, ಆಯಾ ಕ್ಷೇತ್ರಪುರುಷರ ಪುತ್ರರೂ, ಛಂದಸ್ಸನ್ನು ತಿಳಿದವರೂ, ಸಾಮವನ್ನರಿತವರೂ, ಆಯಾ ಪುಣ್ಯತೀರ್ಥಗಳಲ್ಲಿ ಅಭಿಷೇಕ ವ್ರತಾದಿಗಳನ್ನು ಮಾಡಿದವರೂ ಇವರು ಪಂಕ್ತಿಪಾವನರಾಗಿರುವರು.

೨೬–೨೭. ಮುಖ್ಯವಾದ ಯಾಗಗಳಲ್ಲಿ ಅವಭೃತಸ್ನಾನವನ್ನು ಮಾಡಿದವರೂ, ಸದ್ಯೋವ್ರತಗಳಲ್ಲಿ ಆಸಕ್ತರಾದವರೂ, ಸ್ವಕರ್ಮಗಳಲ್ಲಿ ನಿರತರೂ, ಕೋಪವರ್ಜಿತರೂ, ಶಾಂತರಾದವರೂ ಪಂಕ್ತಿಪಾವನರಾಗಿರುವರು. ಇವರನ್ನು ಶ್ರಾದ್ಧಕಾರ್ಯಗಳಲ್ಲಿ ನಿಮಂತ್ರಿಸಬೇಕು. ಮತ್ತು ಯಾವ ಪುರುಷರು ದಶವಿಧಕರ್ಮಗಳಲ್ಲಿಯೂ ಆಸಕ್ತರಾಗಿರುವನೋ ಅವರೆಲ್ಲರೂ ಪಂಕ್ತಿಪಾವನರಾಗಿರುವರು.

**ಏತೇಷು ದತ್ತಮಕ್ಷಯ್ಯಮೇತೇ ವೈ ಪಂಕ್ತಿಪಾವನಃ ।**
**ಶ್ರದ್ಧೇಯಾ ಬ್ರಾಹ್ಮಣಾ ಯೇ ತು ಯೋಗಧರ್ಮಮನುವ್ರತಾಃ ॥ ೨೮ ॥**

**ಧರ್ಮಾಶ್ರಮವರಿಷ್ಠಾಸ್ತೇ ಹವ್ಯಕವೇಷು ತೇ ವರಾಃ ।**
**ತ್ರಯೋಽಪಿ ಪೂಜಿತಾಸ್ತೇನ ಬ್ರಹ್ಮವಿಷ್ಣುಮಹೇಶ್ವರಾಃ ॥ ೨೯ ॥**

**ಪಿತೃಭಿಃ ಸಹ ಲೋಕಾಂಶ್ಚ ಯೋ ಹ್ಯೇತಾನ್ ಪೂಜಯೇನ್ನರಃ ।**
**ಪವಿತ್ರಾಣಾಂ ಪವಿತ್ರಂಚ ಮಂಗಲಾನಾಂ ಚ ಮಂಗಲಂ ॥ ೩೦ ॥**

**ಪ್ರಥಮಃ ಸರ್ವಧರ್ಮಾಣಾಂ ಯೋಗಧರ್ಮೋ ನಿಗದ್ಯತೇ ।**
**ಅಪಾಂಕ್ತೇಯಾಂಸ್ತು ವಕ್ಷ್ಯಾಮಿ ಗದತೋಮೇ ನಿಬೋಧತ ॥ ೩೧ ॥**

---

೨೮. ಮೇಲೆ ಹೇಳಿದವರೆಲ್ಲರೂ ಪಂಕ್ತಿಪಾವನರಾಗಿರುವುದರಿಂದ ಅವರಿಗೆ ಕೊಟ್ಟ ಅನ್ನೋದಕಗಳು ಅಕ್ಷಯವಾಗುವುವು. ಯಾರು ಯೋಗಧರ್ಮಗಳಲ್ಲಿ ನಿರತರೋ, ಅಂತಹ ಬ್ರಾಹ್ಮಣರನ್ನು ನಂಬಿ ಕಾರ್ಯಕ್ರಮವನ್ನು ಮಾಡಬೇಕು.

೨೯. ಯಾರು ವರ್ಣಾಶ್ರಮ ಧರ್ಮಗಳಲ್ಲಿ ಆಸಕ್ತರಾಗಿರುವರೋ, ಹವ್ಯ ಕವ್ಯಗಳಲ್ಲಿ ನಿರತರೋ, ಇಂತಹ ಮೂವರನ್ನು ಶ್ರಾದ್ಧಕರ್ಮಗಳಲ್ಲಿ ಪೂಜಿಸಿದರೆ, ಬ್ರಹ್ಮ, ವಿಷ್ಣು, ವಿಹ್ವೇಶರರು ಸಂಪೂರ್ಣರಾಗಿ ಸಂತುಷ್ಟರಾಗುವರು.

೩೦. ಯಾವ ಪುರುಷರು ಲೋಕದಲ್ಲಿರುವ ಪವಿತ್ರವಸ್ತುಗಳಿಗಿಂತ ಪವಿತ್ರರೂ, ಮಂಗಳವಸ್ತುಗಳಿಗಿಂತ ಮಂಗಳಪ್ರದರೂ ಆದ ಈ ತ್ರಿಮೂರ್ತಿಗಳ ಸಂಗಡ ಪಿತೃಗಳನ್ನು ಪೂಜಿಸುವರೋ, ಅವರು ಉತ್ತಮಲೋಕಗಳನ್ನು ಹೊಂದುವರು.

೩೧. ಯೋಗಧರ್ಮವು ಸರ್ವಧರ್ಮಗಳಿಗೂ ಮೂಲಭೂತವಾಗಿದೆ. ಈಗ ಈ ಪಂಕ್ತಿಬಾಹಿರರು ಜೊತೆಯಲ್ಲಿ ಕೂತು ಊಟಮಾಡಲು ಅನರ್ಹರು ಯಾರೆಂಬು ದನ್ನು ಹೇಳುವೆನು ಕೇಳಿರೆಂದನು.

**ಕಿತವೋ ಮದ್ಯಪೋ ಯಕ್ಷ್ಮೀ ಪಶುಪಾಲೋ ನಿರಾಕೃತಿಃ ।**
**ಗ್ರಾಮಪ್ರೇಷ್ಯೋ ವಾರ್ಧುಷಿಕೋ ಗಾಯಕೋವಣಿಜಸ್ತಥಾ ॥ ೩೨ ॥**

**ಅಗಾರದಾಹೀ ಗರದಃ ಕುಂಡಾಶೀ ಸೋಮವಿಕ್ರಯೀ ।**
**ಸಮುದ್ರಯಾಯೀ ದುಶ್ಚರ್ಮಾ ತೈಲಿಕಃ ಕೂಟಕಾರಕಃ ॥ ೩೩ ॥**

**ಪಿತ್ರಾ ವಿವದಮಾನಶ್ಚ ಯಸ್ಯ ಚೋಪಪತಿರ್ಗೃಹೇ ।**
**ಅಭಿಶಸ್ತಸ್ತಥಾ ಸ್ತೇನಃ ಶಿಲ್ಪೈರ್ಯಶ್ಚೋಪಜೀವತಿ ॥ ೩೪ ॥**

**ಸೂಚಕಃ ಪರ್ವಕಾರೀ ಚ ಯಸ್ತು ಮಿತ್ರೇಷು ದ್ರುಹ್ಯತಿ ।**
**ಗಣಯಾಚನಕಶ್ಚೈವ ನಾಸ್ತಿಕೋ ವೇದವರ್ಜಿತಃ ॥ ೩೫ ॥**

**ಉನ್ಮತ್ತಃ ಷಂಡಕಶಠೌ ಭ್ರೂಣಹಾ ಗುರುತಲ್ಪಗಃ ।**
**ಭಿಷಕ್‌ಜೀವಃ ಪ್ರೈಷಣಿಕಃ ಪರಸ್ತ್ರೀಂ ಯಶ್ಚ ಗಚ್ಛತಿ ॥ ೩೬ ॥**

**ವಿಕ್ರೀಣಾತಿ ಚ ಯೋ ಬ್ರಹ್ಮ ವ್ರತಾನಿ ಚ ತಪಾಂಸಿ ಚ ।**
**ನಷ್ಟಂ ಸ್ಯಾನ್ನಾಸ್ತಿಕೇ ದತ್ತಂ ಕೃತಘ್ನೇ ಚೈವ ಶಂಸಕೇ ॥ ೩೭ ॥**

---

೩೨-೩೪. ವಂಚಕ, ಮದ್ಯಪಾಯಿಯು, ಕ್ಷಯರೋಗಿ, ಪಶುಪಾಲಕ, ಕುರೂಪಿ, ಗ್ರಾಮಸೇವಕ, ಗಾಯಕ, ವರ್ತಕ, ಬಡ್ಡಿಯಜೀವಿ, ಮನೆಮುರುಕ, ವಿಷಪ್ರದ. ಪಾತ್ರೆಯಿಂದಲೇ ಭುಂಜಿಸುವವನು, ಸೋಮರಸವನ್ನು ಮಾರುವವನು, ಸಮುದ್ರಯಾನ ಮಾಡಿದವನು, ಚರ್ಮರೋಗಿಯು, ತೈಲವಿಕ್ರೇತನು, ಮಾಯಗಾರನು, ಪಿತೃವಿರೋಧಿಯು, ಜಾರಿಣೀಪತಿಪುತ್ರರು, ಶಾಪಹೊಂದಿದವನು, ಗುರುಗಳಿಂದ ಬಹಿಷ್ಕೃತನು, ಚೋರರು, ಶಿಲ್ಪಜೀವಿಗಳು ಇವರೂ ಪಂಕ್ತಿದೂಷ್ಯರಾಗಿರುವರು.

೩೫–೪೦. ಚಾಡೀಕೋರನು, ಜಗಳಕಂಟಕನು, ಮಿತ್ರದ್ರೋಹಿಯು, ನಿತ್ಯಯಾಚಕನು, ನಾಸ್ತಿಕನು, ವೇದಬಾಹ್ಯನು, ಉನ್ಮತ್ತನು, ಷಂಡನು, ದುಷ್ಟನು, ಭ್ರೂಣಹತ್ಯವನ್ನು ಮಾಡಿದವನು, ಗುರುಪತ್ನೀಗಾಮಿಯು, ವೈದ್ಯಜೀವಿಯು, ಪರಪ್ರೇರಕನು, ಪರಸ್ತ್ರೀರತನು, ವೇದವಿಕ್ರೇತನು, ವ್ರತನಿಯಮಗಳನ್ನು ದ್ರವ್ಯಕ್ಕಾಗಿ ಮಾಡಿದವನು, ಕೃತಘ್ನನು, ನಾಸ್ತಿಕನು, ಹೊಗಳುಭಟನು, ವ್ಯಾಪಾರಿಯು, ನಿಧಿಯನ್ನು

5

**ಯಚ್ಚ ವಾಣಿಜಲೇ ಚೈವ ನೇಹ ನಾಮುತ್ರ ತದ್ಭವೇತ್ ।**
**ನಿಕ್ಷೇಪಹಾರಿಣೇ ಚೈವ ಕಿತವೇ ವೇದನಿಂದಕೇ ॥ ೩೮ ॥**

**ತಥಾ ವಾಣಿಜಕೇ ಚೈವ ಕಾರುಕೇ ಧರ್ಮವರ್ಜಿತೇ ।**
**ನಿಂದನ್ ಕ್ರೀಣಾತಿ ಪಣ್ಯಾನಿ ವಿಕ್ರೀಣಂಶ್ಚ ಪ್ರಶಂಸತಿ ॥ ೩೯ ॥**

**ಅನೃತಸ್ಯ ಸಮಾವಾಸೋ ನ ವಣಿಕ್ ಶ್ರಾದ್ಧಮರ್ಹತಿ ।**
**ಭಸ್ಮನೀವ ಹುತಂ ಹವ್ಯಂ ದತ್ತಂ ಪೌನರ್ಭವೇ ದ್ವಿಜೇ ॥ ೪೦ ॥**

**ಷಷ್ಟಿಂ ಕಾಣಃ ಶತಂ ಪಂಡಃ ಶ್ವಿತ್ರೀ ಯಾವತ್ ಪ್ರಪಶ್ಯತಿ ।**
**ಪಾಪರೋಗೀ ಸಹಸ್ರಸ್ಯ ದಾತುರ್ನಾಶಯತೇ ಫಲಂ ॥ ೪೧ ॥**

**ಭ್ರಶ್ಯತೇ ಸತ್ಫಲಾತ್ತಸ್ಮಾದ್ದಾತಾ ಯಸ್ಯ ತು ಬಾಲಿಶಃ ।**
**ಯೋ ವೇಷ್ಟಿತಶಿರಾ ಭುಂಕ್ತೇ ಯೋ ಭುಂಕ್ತೇ ದಕ್ಷಿಣಾಮುಖಃ ॥ ೪೨ ॥**

---

ಅಪಹರಿಸುವವನು, (ನಂಬಿಕೆದ್ರೋಹಿಯು) ವಂಚಕನು, ವೇದದೂಷಕನು, ವ್ಯಾಪಾರ ಜೀವಿಯು, ಶಿಲ್ಪಜೀವಿಯು, ಧರ್ಮಹೀನನು, ಪರದೂಷಕನು, ವ್ಯಾಪಾರಗಾರನು, ವ್ಯಭಿಚಾರಿಪುತ್ರನು ಇವರು ಪಂಕ್ತಿಬಾಹ್ಯರಾಗಿರುವರು. ಇವರಿಗೆ ಅನ್ನದಾನಾದಿಗಳನ್ನು ಮಾಡಿದರೆ ಬೂದಿಯಲ್ಲಿ ಮಾಡಿದ ಹೋಮದಂತೆ ವ್ಯರ್ಥವಾಗುವುದು.

೪೧. ಪುರುಷರು ಶ್ರಾದ್ಧಕರ್ಮದಲ್ಲಿ ಅಂಧನಿಗೆ ಅನ್ನೋದಕಗಳನ್ನು ಕೊಟ್ಟರೆ ಅರವತ್ತು ಭಾಗವೂ, ನಪುಂಸಕನಿಗೆ ದಾನಮಾಡಿದರೆ ನೂರರಷ್ಟೂ, ಕುಷ್ಟರೋಗಿಗೆ ದಾನಮಾಡಿದರೆ ಸಂಪೂರ್ಣವೂ, ಮೇಹರೋಗದವನಿಗೆ ಕೊಟ್ಟದ್ದೇ ಆದರೆ ಸಹಸ್ರ ಭಾಗವೂ ನಾಶವಾಗುವುದು. ಆದುದರಿಂದ ಇವರು ಪಂಕ್ತಿಬಾಹ್ಯರಾಗಿರುವರು.

೪೨–೪೩. ಯಜಮಾನನು ಶ್ರಾದ್ಧಕರ್ಮದಲ್ಲಿ ಅನ್ನೋದಕಾದಿಗಳನ್ನು ಮೂರ್ಖರಿಗೆ ದಾನಮಾಡಿದರೆ ಅವೆಲ್ಲ ವ್ಯರ್ಥವಾಗುವುದು. ಯಾವನು ಶಿರಸ್ಸಿಗೆ ವಸ್ತ್ರವನ್ನು ಸುತ್ತಿಕೊಂಡು ಭೋಜನವನ್ನು ಮಾಡುವನೋ, ಯಾವನು ದಕ್ಷಿಣಾಭಿ

ಸೋಪಾನತ್ಕಶ್ಚ ಯೋ ಭುಂಕ್ತೇ ಯಚ್ಚ ದದ್ಯಾತ್ತಿರಸ್ಕೃತಂ ।
ಸರ್ವಂ ತದಸುರೇಂದ್ರಾಣಾಂ ಬ್ರಹ್ಮಾ ಭಾಗಮಕಲ್ಪಯತ್ ॥ ೪೩ ॥

ಶ್ವಾನಶ್ಚ ಯಾತುಧಾನಾಶ್ಚ ನಾವೇಕ್ಷೇರನ್ ಕಥಂಚನ ।
ತಸ್ಮಾತ್ಪರಿವೃತಿಂ ದದ್ಯಾತ್ತಿಲೈಶ್ಚಾನ್ವವಕೀರಯನ್ ॥ ೪೪ ॥

ರಾಕ್ಷಸಾನಾಂ ತಿಲಾಃ ಪ್ರೋಕ್ತಾಃ ಶುನಾಂ ಪರಿವೃತಿಸ್ತಥಾ ।
ದರ್ಶನಾತ್ಸೂಕರೋ ಹಂತಿ ಪಕ್ಷಪಾತೇನ ಕುಕ್ಕುಟಃ ॥ ೪೫ ॥

ರಜಸ್ವಲಾನುಸ್ಪರ್ಶೇನ ಕ್ರುದ್ಧೋ ಯಶ್ಚ ಪ್ರಯಚ್ಛತಿ ।
ಯಸ್ಯ ಮಿತ್ರಪ್ರದೇ ಯಾನಿ ಶ್ರಾದ್ಧಾನಿ ಚ ಹವೀಂಷಿ ಚ ॥
ನ ಪ್ರೀಣಾತಿ ಪಿತ್ರ್ನ್ ದೇವಾನ್ ಸ್ವರ್ಗಂ ನ ಚ ಸ ಗಚ್ಛತಿ ॥ ೪೬ ॥

---

ಮುಖವಾಗಿ ಕುಳಿತುಕೊಂಡು ಊಟಮಾಡುವನೋ, ಯಾವನು ಪಾದರಕ್ಷಣೆಸಹಿತ ಭೋಜನಮಾಡುವನೋ, ಯಾವನು ದೂಷ್ಯವಾದ ಪದಾರ್ಥಗಳನ್ನು ಕೊಡುವನೋ ಅವೆಲ್ಲಾ ಅಸುರರ ಪಾಲಾಗುವುವು. ಎಂದು ಬ್ರಹ್ಮದೇವನು ಅಸುರರಿಗೆ ವರವನ್ನು ಕೊಟ್ಟಿರುವನು.

೪೪—೪೫. ಶ್ರಾದ್ಧಕರ್ಮದಲ್ಲಿ ಮಾಡಿರುವ ಭಕ್ಷ್ಯಭೋಜ್ಯಾದಿಗಳನ್ನು ನಾಯಿಗಳೂ, ರಾಕ್ಷಸರೂ, ನೋಡದ ಹಾಗೆ ಬಚ್ಚಿಡಬೇಕು. ಆ ದೋಷಪರಿಹಾರಕ್ಕಾಗಿ ಎಳ್ಳನ್ನು ಗೃಹದಲ್ಲಿ ಎರಚಬೇಕು. ಇದರಿಂದ ಅಸುರಾದಿಗಳ ದೋಷಗಳು ಪರಿಹಾರ ವಾಗುವುದು. ಆವರಣದಿಂದ ನಾಯಿಗಳ ಕಾಟವು ಹೋಗುವುದು. ಹಂದಿಗಳು ಕೇವಲ ದರ್ಶನದಿಂದಲೂ, ಕೋಳಿಗಳು ರೆಕ್ಕೆಗಳ ಹೊಡೆತದಿಂದಲೂ, ಪದಾರ್ಥಗಳನ್ನು ಅಶುಚಿಮಾಡುವುವು. ಆದುದರಿಂದ ಅವುಗಳಿಗೆ ಅವಕಾಶವನ್ನು ಕೊಡಬಾರದು.

೪೬. ಹವ್ಯಕವ್ಯಗಳಲ್ಲಿ ದಾನಮಾಡಿದ ಅನ್ನೋದಕಾದಿಗಳು ರಜಸ್ವಲಾ ಸಂಪರ್ಕದಿಂದಲೂ ಕೆಡುವುವು. ಕಾಮಕ್ರೋಧಾದಿಗಳಿಂದ ಕೂಡಿ ದಾನಮಾಡಿದರೂ ನಿರರ್ಥಕವಾಗುವುವು. ಇದರಿಂದ ಪಿತೃಗಳಿಗೂ ದೇವತೆಗಳಿಗೂ ಪ್ರೀತಿಯಾಗುವುದಿಲ್ಲ. ಯಜಮಾನನಿಗೂ ಸ್ವರ್ಗಾದಿ ಸುಖಗಳು ಉಂಟಾಗಲಾರವು.

**ನದೀತೀರೇಷು ರಮ್ಯೇಷು ಸರಿತ್ಸು ಚ ಸರಸ್ಸು ಚ ।**
**ವಿವಿಕ್ತೇಷು ಚ ಪ್ರೀಯಂತೇ ದತ್ತೇನೇಹ ಪಿತಾಮಹಾಃ ॥ ೪೭ ॥**

**ನ ಚಾಶ್ರುಂ ಪಾತಯೇಜ್ಜಾತು ನ ಯುಕ್ತೋ ವಾಚಮೀರಯೇತ್ ।**
**ನ ಚ ಕುರ್ವೀತ ಭುಂಜಾನೋ ಹ್ಯನ್ಯೋಽನ್ಯಂ ಮತ್ಸರಸ್ತದಾ ॥ ೪೮ ॥**

**ಅಪಸವ್ಯೇ ಕೃತೇ ತೇನ ವಿಧಿವದ್ದರ್ಭಪಾಣಿನಾ ।**
**ಪಿತ್ರ್ಯಮಾನಿಧನಂ ಕಾರ್ಯಮೇವಂ ಪ್ರೀಣಾತಿ ವೈ ಪಿತೄನ್ ॥ ೪೯ ॥**

**ಅನುಮತ್ಯಾದಿತೋ ವಿಪ್ರಾನಗ್ನೌ ಕುರ್ಯಾದ್ಯಥಾವಿಧಿ ।**
**ಪಿತೄಣಾಂ ನಿರ್ವಪೇದ್ಭೂವೌ ಶೂರ್ಪೇ ವಾ ದರ್ಭಸಂಸ್ತರೇ ॥ ೫೦ ॥**

---

೪೭. ಪುರುಷರು ನದೀತೀರ, ಮನೋಹರವಾದ ಗಂಗಾದಿತೀರ್ಥ, ಸರೋವರಗಳ ದಡ, ನಿರ್ಜನವಾದ ಪ್ರದೇಶ ಇವುಗಳಲ್ಲಿ ಸಮಾಧಾನ ಮನಸ್ಸಿನಿಂದ ಮಾಡಿದ ಶ್ರಾದ್ಧಾದಿ ಕರ್ಮಗಳಿಂದ ಪಿತಾಮಹಾದಿ ದೇವತೆಗಳು ಪ್ರೀತರಾಗುವರು.

೪೮. ಪುರುಷರು ವ್ಯಸನದಿಂದ ಕಣ್ಣಿನಲ್ಲಿ ನೀರನ್ನು ಸುರಿಸುತ್ತಾ ಶ್ರಾದ್ಧ ಕರ್ಮಗಳನ್ನು ಮಾಡಬಾರದು. ಶ್ರಾದ್ಧಕಾಲದಲ್ಲಿ ಅನುಪಯುಕ್ತವಾದ ಕಾಡುಹರಟೆಯನ್ನು ಮಾಡದೆ ಬ್ರಹ್ಮವಿಚಾರಗಳನ್ನು ಮಾಡಬೇಕು. ಭೋಜನಕಾಲಗಳಲ್ಲಿ ದ್ವೇಷಾಸೂಯೆಗಳಿಂದ ಜಗಳವಾಡಬಾರದು. ಹಾಗಾದರೆ ವ್ಯರ್ಥವಾಗುವುದು.

೪೯. ಯಜಮಾನನು ಶ್ರಾದ್ಧಕಾಲದಲ್ಲಿ ದರ್ಭೆಯ ಪವಿತ್ರವನ್ನು ಧರಿಸಿ, ಅಪಸವ್ಯದಿಂದ ವಿಧ್ಯುಕ್ತರೀತಿಯಾಗಿ ಪಿತೃಮರಣ ಕಾಲ ಮೊದಲುಗೊಂಡು ಶ್ರಾದ್ಧವನ್ನು ಮಾಡಿದರೆ ಪಿತೃಗಳಿಗೆ ಅತ್ಯಂತ ಪ್ರಿಯವಾಗುವುದು. ಯಜಮಾನನಿಗೂ ಸುಖವಾಗುವುದು.

೫೦. ಪುರುಷನು ಮೊದಲು ಬ್ರಾಹ್ಮಣರ ಅನುಮತಿಯನ್ನು ಪಡೆದು ಶ್ರಾದ್ಧವನ್ನು ಪ್ರಾರಂಭಮಾಡಿ, ಶಾಸ್ತ್ರೋಕ್ತರೀತಿಯಾಗಿ ಅಗ್ನಿಯಲ್ಲಿ ಹೋಮವನ್ನು ಮಾಡಬೇಕು. ಆಗ ಪಿತೃಗಳ ಉದ್ದೇಶ್ಯಕವಾಗಿ, ಭೂಮಿಯಲ್ಲಾಗಲಿ, ಅಥವಾ ಮೊರದಲ್ಲಿಯಾಗಲಿ, ದರ್ಭೆಗಳನ್ನು ಹರಡಿ, ತಿಲೋದಕಪಿಂಡದಾನಗಳನ್ನು ಮಾಡಬೇಕು.

ಶುಕ್ಲ ಪಕ್ಷಸ್ಯ ಪೂರ್ವಾಹ್ಣೇ ಶ್ರಾದ್ಧಂ ಕುರ್ಯಾದ್ವಿಚಕ್ಷಣಃ ।
ಕೃಷ್ಣ ಪಕ್ಷೇಽಪರಾಹ್ಣೇ ತು ರೌಹಿಣಂ ನ ವಿಲಂಘಯೇತ್ ॥ ೫೧ ॥

ಏವಮೇತೇ ಮಹಾತ್ಮಾನೋ ಮಹಾಯೋಗಾ ಮಹೌಜಸಃ ।
ಸದಾ ವೈ ಪಿತರಃ ಪೂಜ್ಯಾ ದ್ರಷ್ಟಾರೋ ದೇಶಕಾಲಯೋಃ ॥ ೫೨ ॥

ಪಿತೃಭಕ್ತಿರತೋ ನಿತ್ಯಂ ಯೋಗಂ ಪ್ರಾಪ್ನೋತ್ಯನುತ್ತಮಂ ।
ಧ್ಯಾನೇನ ಮೋಕ್ಷಂ ಗಚ್ಛಂತಿ ಹಿತ್ವಾ ಕರ್ಮಶುಭಾಶುಭಂ ॥ ೫೩ ॥

ಯಜ್ಞಹೇತೋರ್ಯದುದ್ಧೃತ್ಯ ಮೋಹಯಿತ್ವಾ ಜಗತ್ತದಾ ।
ಗುಹಾಯಾಂ ನಿಹತಂ ಯೋಗಂ ಕಶ್ಯಪೇನ ಮಹಾತ್ಮನಾ ॥ ೫೪ ॥

---

೫೧. ಜ್ಞಾನಿಯಾದವನು ಶುಕ್ಲಪಕ್ಷದಲ್ಲಿ ಶ್ರಾದ್ಧವನ್ನು ಮಾಡಬೇಕಾದರೆ ಅದನ್ನು ಪೂರ್ವಾಹ್ಣದಲ್ಲಿಯೇ ಪ್ರಾರಂಭಮಾಡಬೇಕು. ಕೃಷ್ಣಪಕ್ಷದಲ್ಲಿ ಶ್ರಾದ್ಧವು ಪ್ರಾಪ್ತವಾದರೆ ಅಪರಾಹ್ಣದಲ್ಲಿಯೂ ಮಾಡಬೇಕು. ಅಪರಾಹ್ಣವನ್ನು ಮೀರಬಾರದು.

೫೨. ಹೀಗೆ ಮನುಜರು ಮಹಾತ್ಮರೂ, ಮಹಾಯೋಗಿಗಳೂ, ಮಹಾತೇಜಸ್ವಿಗಳೂ, ದೇಶಕಾಲಜ್ಞರೂ ಆದ ಪಿತೃದೇವತೆಗಳನ್ನು ಉತ್ತಮವಾದ ದೇಶಕಾಲಗಳಲ್ಲಿ ಸರ್ವದಾ ಪೂಜಿಸಬೇಕು.

೫೩. ಪಿತೃಭಕ್ತಿಯುಳ್ಳ ಪುರುಷನು ಉತ್ತಮವಾದ ಯೋಗಾಭ್ಯಾಸವನ್ನು ಮಾಡಿ, ಧ್ಯಾನದಿಂದ ಶುಭಾಶುಭಕರ್ಮಗಳನ್ನು ತ್ಯಾಗಮಾಡಿ, ದಿವ್ಯಜ್ಞಾನದಿಂದ ಪರಮಪದವಾದ ಮೋಕ್ಷವನ್ನು ಹೊಂದುವನು.

೫೪. ಎಲೈ ಮಹಾತ್ಮನಾದ ಶಂಯುಮುನಿಯೇ, ಪೂರ್ವದಲ್ಲಿ ಮಹಾತ್ಮನಾದ ಕಶ್ಯಪಮಹರ್ಷಿಯು ಯಜ್ಞನಿಮಿತ್ತಕವಾಗಿ ಹೃದಯ ಗುಹೆಯಲ್ಲಿ ಗೂಢವಾಗಿರುವ ಯೋಗಮಹಿಮೆಗಳನ್ನು ಹೊರಪಡಿಸಿ ಲೋಕಕಲ್ಯಾಣಕ್ಕಾಗಿ ವ್ಯಕ್ತಮಾಡಿದನು.

ಅಮೃತಂ ಗುಹ್ಯಮುದ್ಧೃತ್ಯ ಯೋಗಂ ಯೋಗವಿದಾಂ ವರ ।
ಪ್ರೋಕ್ತಂ ಸನತ್ಕುಮಾರೇಣ ಮಹತ್ತದ್ಧರ್ಮಶಾಶ್ವತಂ ॥ ೫೫ ॥

ದೇವಾನಾಂ ಪರಮಂ ಗುಹ್ಯಂ ಋಷೀಣಾಂ ಚ ಪರಾಯಣಂ ।
ಪಿತೃಭಕ್ತ್ಯಾ ಪ್ರಯತ್ನೇನ ಪಿತೃಭಕ್ತೈಶ್ಚ ನಿತ್ಯಶಃ ॥ ೫೬ ॥

ತಂ ಚ ಯೋಗಂ ಸಮಾಸೇನ ಪಿತೃಭಕ್ತಸ್ತು ಕೃತ್ಸ್ನಶಃ ।
ಪ್ರಯತ್ನಾತ್ಪ್ರಾಪ್ನುಯಾತ್ತತ್ರ ಸರ್ವಮೇವ ನ ಸಂಶಯಃ ॥ ೫೭ ॥

ಯಸ್ಮೈ ಶ್ರಾದ್ಧಾನಿ ದೇಯಾನಿ ಯಚ್ಚ ದತ್ತಂ ಮಹಾಫಲಂ ।
ಯೇಷು ವಾಪ್ಯಕ್ಷಯಂ ಶ್ರಾದ್ಧಂ ತೀರ್ಥೇಷು ಚ ನದೀಷು ಚ ॥
ಯೇಷು ಚ ಸ್ವರ್ಗಮಾಪ್ನೋತಿ ತತ್ತೇ ಪ್ರೋಕ್ತಂ ಸ ಸಂಗ್ರಹಂ ॥ ೫೮ ॥

---

೫೫. ಆದರಂತೆಯೇ ಮಹಾತ್ಮರಾದ ಸನತ್ಕುಮಾರರು ಅತ್ಯಂತ ಗೋಪ್ಯವೂ ಅಮೃತವೂ, ಹೃದಯ ಗುಹಾನಿಹಿತವೂ ಆದ ಯೋಗವನ್ನು ವ್ಯಕ್ತವಾಡಿ, ಶಾಶ್ವತವೂ ಮಹತ್ತೂ ಆದ ಧರ್ಮಗಳನ್ನು ತಿಳಿಸಿರುವರು.

೫೬. ಅಂತಹ ಮಹಾಯೋಗವು ದೇವತೆಗಳಿಗೆ ಪರಮರಹಸ್ಯವಾಗಿಯೂ, ಋಷಿಗಳಿಗೆ ಮುಖ್ಯಾಶ್ರಯವಾಗಿಯೂ, ಪಿತೃಭಕ್ತಿಪ್ರಯತ್ನ ಇವುಗಳಿಂದ ಕೂಡಿದ ಪಿತೃಪರಾಯಣನಿಂದ ಹೊಂದಲು ಅರ್ಹವಾಗಿಯೂ ಇರುತ್ತದೆ.

೫೭. ಪಿತೃಭಕ್ತಿಯುಳ್ಳ ಪುರುಷನು ಸಂಪೂರ್ಣವಾಗಿ ಹೊಂದಲು ಯೋಗ್ಯವಾದ ಯೋಗದ ಸಂಗತಿಗಳನ್ನು ಸಂಕ್ಷೇಪವಾಗಿ ತಿಳಿಸಿರುವೆನು. ಪ್ರಯತ್ನವನ್ನು ಮಾಡಿದರೆ ಭಕ್ತರು ಅಂತಹ ಯೋಗವನ್ನು ಹೊಂದಬಹುದು ಇದರಲ್ಲಿ ಸಂದೇಹವಿಲ್ಲವೆಂದನು.

೫೮. ಶ್ರಾದ್ಧವನ್ನು ಯಾರಿಗೋಸ್ಕರ ಮಾಡಬೇಕು. ಯಾರಿಗೆ ಕೊಟ್ಟರೆ ಮಹಾಫಲವನ್ನು ಹೊಂದಬಹುದು. ಯಾವ ಯಾವ ನದೀ ತೀರ್ಥಗಳಲ್ಲಿ ಶ್ರಾದ್ಧವನ್ನು ಮಾಡಿದರೆ ಅಕ್ಷಯವಾದ ಫಲವು ಉಂಟಾಗುವುದು. ಯಾವ ಕ್ಷೇತ್ರಗಳಲ್ಲಿ ಮಾಡಿದರೆ ಸ್ವರ್ಗಪ್ರಾಪ್ತಿಯಾಗುವುದು ಇವೆಲ್ಲವನ್ನೂ ಸಂಕ್ಷೇಪವಾಗಿ ಹೇಳಿರುವೆನು ಎಂದನು.

|| ಬೃಹಸ್ಪತಿರುವಾಚ ||

ಶ್ರುತ್ವೈವಂ ಶ್ರಾದ್ಧಕಲ್ಪಂ ತು ಯೋಽಸೂಯಾಂ ಕುರುತೇ ನರಃ |
ಸ ಮಜ್ಜೇನ್ನರಕೇ ಘೋರೇ ನಾಸ್ತಿಕಸ್ತಮಸಾವೃತಃ || ೫೯ ||

ಮಹಾರೋಗಾವಸಾಯುಸ್ತು ಸ ಯಃ ಸಂಯುತಮಾನಸಃ |
ವೇದಾಶ್ರಮಾನ್ಮುಕ್ತಚಿತ್ತಃ ಕುಂಭೀಕಾನಧಿಗಚ್ಛತಿ |
ಜಿಹ್ವಾಚ್ಛೇದಂ ಸ್ತೇನಮೇತ್ಯ ಪ್ರಾಪ್ನುಯುಸ್ತೇನ ಚೈವ ಹ || ೬೦ ||

ಸೀದಂತಿ ತೇ ಸಾಗರೇ ಲೋಷ್ಟಭೂತಾ
ಯೋಗದ್ವಿಷಃ ಸ್ಥಾಸ್ಯಂತೇ ಯಾವದುರ್ವೀ |
ತಸ್ಮಾಚ್ಛ್ರಾದ್ಧೇ ಧರ್ಮ ಉದ್ದಿಷ್ಟ ಏಷ
ನಿತ್ಯಂ ಕಾರ್ಯಃ ಶ್ರದ್ಧದಾನೇನ ಪುಂಸಾ || ೬೧ ||

ಪರಿವಾದೋ ನ ಕರ್ತವ್ಯೋ ಯೋಗಿನಾಂ ಚ ವಿಶೇಷತಃ |
ಪರಿವಾದಾತ್ ಕೃಮಿರ್ಭೂತ್ವಾ ತತ್ರೈವ ಪರಿವರ್ತತೇ || ೬೨ ||

---

೫೯. ಬೃಹಸ್ಪತಿಗಳು ಹೇಳಿದರು :–ಯಾವ ಪುರುಷನು ಈ ವಿಧವಾದ ಶ್ರಾದ್ಧದ ವಿಚಾರಗಳನ್ನು ಕೇಳಿ ದ್ವೇಷಾಸೂಯೆಗಳನ್ನು ಮಾಡುವನೋ ಅಂತಹ ನಾಸ್ತಿಕ ಪುರುಷನು ಅಜ್ಞಾನಾವೃತನಾಗಿ ಘೋರವಾದ ನರಕದಲ್ಲಿ ಮುಳುಗಿ ತೇಲುವನು.

೬೦. ಯಾವ ಪುರುಷನು ಶ್ರಾದ್ಧದ ವಿಚಾರದಲ್ಲಿ ಸಂಶಯವುಳ್ಳವನಾಗಿ ವೇದಾಶ್ರಮಗಳನ್ನು ಬಿಟ್ಟು ಸತ್ಕಾರ್ಯಗಳನ್ನು ತ್ಯಜಿಸುವನೋ ಅವನು ಮಹಾ ರೋಗಗಳಿಂದ ನರಳಿ ಮೃತನಾಗಿ ಕುಂಭೀಪಾಕವೆಂಬ ನರಕಕ್ಕೆ ಹೋಗುವನು. ಮತ್ತು ಕಳ್ಳರ ಕೈಗೆ ಸಿಕ್ಕಿ ಜಿಹ್ವಾಚ್ಛೇದನವನ್ನು ಹೊಂದಿ ನಿತ್ಯದುಃಖಿಯಾಗುವನು.

೬೧. ಅಂತಹ ನಾಸ್ತಿಕನಾದ ಪುರುಷನು ಯೋಗದ ದ್ವೇಷದಿಂದ ಕಲ್ಲು ಮಣ್ಣಾಗಿ ಜನಿಸಿ, ಭೂಮಿ ಇರುವವರೆಗೂ ಸಮುದ್ರದಲ್ಲಿ ಬಿದ್ದು ಹೊರಳಾಡುವನು. ಆದುದರಿಂದ ಶ್ರಾದ್ಧದ ವಿಚಾರದಲ್ಲಿ ನಂಬಿಕೆಯನ್ನಿಟ್ಟು ಧರ್ಮವನ್ನು ಆಚರಿಸಬೇಕು. ಮುಖ್ಯವಾಗಿ ಪುರುಷನು ಶ್ರದ್ಧೆಯಿಂದ ಪಿತೃಕಾರ್ಯವನ್ನು ಮಾಡಬೇಕು.

೬೨. ಆದುದರಿಂದ ಶ್ರಾದ್ಧಯೋಗದ ವಿಷಯದಲ್ಲಿ ದೂಷಣೆಯನ್ನೂ, ಬ್ರಾಹ್ಮಣರ ಅಪಮಾನವನ್ನೂ ಮಾಡಬಾರದು. ಹಾಗೆ ದೂಷಿಸಿದರೆ ಕ್ರಿಮಿಕೀಟಗಳಾಗಿ ಜನಿಸಿ ಸಮುದ್ರದಲ್ಲಿ ನಾನಾವಿಧ ದುಃಖಗಳನ್ನು ಅನುಭವಿಸುವನು.

ಯೋಗಂ ಪರಿವೇದ್ಯಸ್ತು ಧ್ಯಾನಿನಾಂ ಮೋಕ್ಷಕಾರಣಂ ।
ಸ ಗಚ್ಛೇನ್ನರಕಂ ಘೋರಂ ಶ್ರೋತಾ ಯಶ್ಚ ನ ಸಂಶಯಃ || ೬೩ ||

ಆವೃತಂ ತಮಸಾ ಸರ್ವಂ ನರಕಂ ಘೋರದರ್ಶನಂ ।
ಯೋಗೀಶ್ವರಪರೀವಾದಾನ್ನಿಶ್ಚಯಂ ಯಾತಿ ಮಾನವಃ || ೬೪ ||

ಯೋಗೇಶ್ವರಾಣಾಮಾಕ್ರೋಶಂ ಶೃಣುಯಾದ್ಯೋ ಯತಾತ್ಮನಾಂ ।
ಸ ಹಿ ಕಾಲಂ ಚಿರಂ ಮಜ್ಜೇತ್ ಕುಂಭೀಪಾಕೇ ನ ಸಂಶಯಃ || ೬೫ ||

ಮನಸಾ ಕರ್ಮಣಾ ವಾಚಾ ದ್ವೇಷಂ ಯೋಗಿಷು ವರ್ಜಯೇತ್ ।
ಪ್ರೇತ್ಯಾನ್ಯಂ ತತ್ಫಲಂ ಭುಂಕ್ತೇ ಇಹ ಚೈವ ನ ಸಂಶಯಃ || ೬೬ ||

---

೬೩. ಯಾವನು ಯೋಗಿಗಳ ಮೋಕ್ಷಕ್ಕೆ ಕಾರಣವಾದ ಯೋಗವನ್ನು ದೂಷಿಸುವನೋ ಅವನು ಅಂತಹ ದೂಷಣೆಯಿಂದ ಘೋರವಾದ ನರಕವನ್ನು ಹೊಂದುವನು. ಆ ಯೋಗದ ದೂಷಣೆಯನ್ನು ಕೇಳಿದವನೂ ಸಹ ನರಕಕ್ಕೆ ಭಾಗಿಯಾಗುವನು. ಈ ವಿಷಯದಲ್ಲಿ ಸಂದೇಹವಿಲ್ಲ.

೬೪. ಮನುಷ್ಯನು ಯೋಗೀಶ್ವರರಾದ ಪಿತೃದೇವತೆಗಳನ್ನು ದೂಷಿಸಿದರೆ ನಿಶ್ಚಯವಾಗಿಯೂ ಅಂಧಕಾರಾವೃತವೂ, ಅತಿಭಯಂಕರವೂ ಆದ ನರಕವನ್ನು ಹೊಂದುವನು. ಆದುದರಿಂದ ಮಹಾತ್ಮರನ್ನು ದೂಷಿಸಬಾರದು.

೬೫. ಯಾವನು ಮಹಾತ್ಮರಾದ ಯೋಗೀಶ್ವರರ ಆಗ್ರಹಕ್ಕೆ ಪಾತ್ರನಾಗುವನೋ ಅಂತಹ ಪುರುಷನು ಚಿರಕಾಲ ಘೋರವಾದ ಕುಂಭೀಪಾಕವೆಂಬ ನರಕದಲ್ಲಿ ಮುಳುಗಿ ತೇಲುವನು. ಈ ವಿಷಯದಲ್ಲಿ ಸಂದೇಹವಿಲ್ಲ.

೬೬. ಆದುದರಿಂದ ಪುರುಷರು ಮನೋವಾಕ್ಕಾಯಕರ್ಮಗಳಿಂದ ಯೋಗೀಶ್ವರರ ವಿಷಯದಲ್ಲಿ ದ್ವೇಷವನ್ನು ಖಂಡಿತವಾಗಿಯೂ ತ್ಯಜಿಸಬೇಕು. ಹಾಗೆ ದ್ವೇಷಿಸಿದರೆ ಇಹಪರಗಳಲ್ಲಿಯೂ ಅದರ ಫಲಗಳನ್ನು ನಿಜವಾಗಿಯೂ ಅನುಭವಿಸಬೇಕಾಗುವುದು ಇದು ನಿಶ್ಚಯವು.

ನ ಪಾರಗೋ ವಿಂದತಿ ಪಾರಮಾತ್ಮನ
ಸ್ತ್ರಿಲೋಕಮಧ್ಯೇ ಚರತಿ ಸ್ವಕರ್ಮಭಿಃ ।
ಋಚೋ ಯಜುಃಸಾಮತದಂಗಪಾರಗೋ
ವಿಕಾರಮೇವ ಹ್ಯನವಾಪ್ಯ ಸೀದತಿ ॥ ೬೭ ॥

ವಿಕಾರಪಾರಃ ಪ್ರಕೃತೇಶ್ಚ ಪಾರಗ
ಸ್ತ್ರಯಿಾ ಗುಣಾನಾಂ ತ್ರಿಗುಣಾಂತಪಾರಗಾ ।
ತತ್ವಂಚತುರ್ವಿಂಶತಿಯೋಗಪಾರಗಂ
ಸ ಪಾರಗೋ ಯಸ್ತ್ವಯನಾಂತಪಾರಗಃ ॥ ೬೮ ॥

ಕೃತ್ಸ್ನಂ ಯಥಾ ತತ್ವವಿಸರ್ಗಮಾತ್ಮನ
ಸ್ತಥೈವ ಭೂಯಃ ಪ್ರಲಯಂ ಸದಾತ್ಮನಃ ।
ಪ್ರತ್ಯಾಹರೇದ್ಯೋಗಬಲೇನ ಯೋಗವಿತ್
ಸ ಸರ್ವಪಾರಕ್ರಮಯಾನಗೋಚರಃ ॥ ೬೯ ॥

---

೬೭. ಆದುದರಿಂದ ಧ್ಯಾನವಾಡದ ಅಜ್ಞನು ಪರಮಾತ್ಮನನ್ನು ಹೊಂದದಯೇ ಸ್ವಕರ್ಮಾನುಗುಣವಾಗಿ ಈ ಮೂರು ಲೋಕಗಳಲ್ಲಿಯೂ ಜನಿಸಿ ಸಂಚರಿಸುವನು. ಮತ್ತು ಋಗ್ಯಜುಸ್ಸಾಮಾಥರ್ವಣವೆಂಬ ನಾಲ್ಕು ವೇದಗಳನ್ನೂ, ಷಡಂಗಗಳನ್ನೂ ತಿಳಿದ ಪುರುಷನೂ ಸಹ ಕಾಮಕ್ರೋದಾಧಿಗಳಿಗೆ ವಶನಾಗಿ ಪರಮಾತ್ಮನನ್ನು ಹೊಂದದಯೇ ದುಃಖಕ್ಕೆ ಭಾಗಿಯಾಗುವನು.

೬೮. ಕಾಮಕ್ರೋದಾಧಿ ವಿಕಾರವನ್ನು ವಿಾರಿದ ಮಹಾತ್ಮನು ಪ್ರಕೃತಿಯನ್ನು ವಿಾರಿದಂತೆಯೇ ಆಗುವನು ವೇದತ್ರಯಗಳನ್ನು ತಿಳಿದಂತಹ ಪುರುಷನು ಸತ್ವರಜಸ್ತಮೋಗುಣಗಳ ಅಂತರವನ್ನು ತಿಳಿಯುವನು. ಇಪ್ಪತ್ತನಾಲ್ಕು ತತ್ವಗಳನ್ನು ತಿಳಿದ ಮಹಾತ್ಮನು, ಯೋಗಪಾರಂಗತನಾಗುವನು. ಅಂತಹ ಯೋಗಿವರ್ಯನೇ ಪರಮಪದವಿಯನ್ನು ಹೊಂದುವನು.

೬೯. ಯೋಗಸಿದ್ಧಿಯುಳ್ಳ ಮಹಾತ್ಮನು ತನ್ನ ಸೃಷ್ಟಿ, ಸ್ಥಿತಿ, ಲಯಗಳನ್ನು ಸಂಪೂರ್ಣವಾಗಿ ತಿಳಿಯುವನು. ಮತ್ತು ತನ್ನ ಯೋಗಶಕ್ತಿಯಿಂದ ಲೋಕಗಳಲ್ಲಿ ನಡೆಯುವ ಸರ್ವವ್ಯಾಪಾರಗಳನ್ನೂ ಯಥಾಸ್ಥಿತವಾಗಿ ತಿಳಿದು ಮುಕ್ತನಾಗುವನು.

ವೇದಸ್ಯ ವೇದಿತಾ ಯೋ ವೈ ವೇದ್ಯಂ ವಿಂದತಿ ಯೋಗವಿತ್ ।
ತಂ ವೈ ವೇದವಿದಂ ಪ್ರಾಹುಸ್ತಂ ಪ್ರಾಹುರ್ವೇದಪಾರಗಂ ॥ ೭೦ ॥

ವೇದಂ ಚ ವೇದಿತವ್ಯಂ ಚ ವಿದಿತ್ವಾ ವೈ ಯಥಾವಿಧಿ ।
ಏವಂ ವೇದವಿದಂ ಪ್ರಾಹುಸ್ತತೋಽನ್ಯೇ ವೇದಚಿಂತಕಾಃ ॥ ೭೧ ॥

ಯಜ್ಞಾನ್ ವೇದಾಂಸ್ತಥಾ ಕಾಮಾಂಜ್ಞಾನಾನಿ ವಿವಿಧಾನಿ ಚ ।
ಪ್ರಾಪ್ನೋತ್ಯಾಯುಃ ಪ್ರಜಾಶ್ಚೈವ ಪಿತೃಭಕ್ತೋ ಧನಾನಿ ಚ ॥ ೭೨ ॥

ಶ್ರಾದ್ಧೇ ಯಃ ಶ್ರಾದ್ಧಕಲ್ಪಂ ವೈ ಪಶ್ಚಿಮಂ ನಿಯತಂ ಪಠೇತ್ ।
ಸರ್ವಾಣ್ಯೇತಾನ್ಯವಾಪ್ನೋತಿ ತೀರ್ಥೇ ದಾನಫಲಾನಿ ಚ ॥ ೭೩ ॥

---

೭೦. ಯಾವ ಯೋಗಿಯು ವೇದಪಾರಂಗತನಾಗಿರುವನೋ ಅಂತಹ ಯೋಗಿವರ್ಯನು ವೇದ್ಯನಾದ ಪರಮಾತ್ಮನನ್ನು ಹೊಂದುವನು. ಇಂತಹ ಜ್ಞಾನಿಯನ್ನು ವೇದವೇತ್ತೃವೆಂದೂ, ವೇದಪಾರಂಗತನೆಂದೂ ಮಹಾತ್ಮರು ಹೇಳುವರು.

೭೧. ಯಾವ ಯೋಗಿಯು ತಿಳಿಯಬೇಕಾದ ತತ್ವಗಳನ್ನೂ ತಿಳಿಯಲರ್ಹನಾದ ಪರಮಪುರುಷನನ್ನೂ ಯಥಾಸ್ಥಿತವಾಗಿ ತಿಳಿಯುವನೋ, ಅವನೇ ವೇದಪಾರಂಗತನೆಂದು ಜ್ಞಾನಿಗಳು ಹೇಳುವರು. ಹೀಗೆ ತತ್ವವನ್ನರಿಯದ ವೇದಜ್ಞರು ಕೇವಲ ವೇದವಾಹಕರಾಗಿರುವರು.

೭೨. ಪಿತೃಗಳಲ್ಲಿ ನಂಬಿಕೆಯುಳ್ಳ ಭಕ್ತನಾದ ಪುರುಷನು ಶ್ರಾದ್ಧಾದಿ ಸತ್ಕರ್ಮಗಳಿಂದ ಯಜ್ಞಯಾಗಾದಿಫಲಗಳನ್ನೂ, ವೇದಗಳನ್ನೂ, ಧರ್ಮಾರ್ಥಕಾಮಗಳನ್ನೂ, ದಿವ್ಯಜ್ಞಾನವನ್ನೂ, ಆಯುಷ್ಯ, ಸಂತಾನ ಇವೇ ಮೊದಲಾದ ಸಕಲಾಭೀಷ್ಟಗಳನ್ನೂ ಹೊಂದುವನು.

೭೩. ಯಾವನು ಶ್ರಾದ್ಧಕಾಲದಲ್ಲಿ ಶ್ರಾದ್ಧಪ್ರಕರಣದ ಕೊನೆಯಲ್ಲಿರುವ ವೇದಭಾಗಗಳನ್ನು ನಿಯಮದಿಂದ ಪಠನಮಾಡುವನೋ, ಅವನು ಸಮಸ್ತ ಫಲಗಳನ್ನೂ, ಸರ್ವತೀರ್ಥಗಳಲ್ಲಿ ದಾನಮಾಡಿದ ಮಹಾಫಲವನ್ನೂ ಹೊಂದುವನು.

ಸ ಪಂಕ್ತಿಪಾವನಶ್ಚೈವ ದ್ವಿಜಾನಾಮುಗ್ರಭುಗ್ ಭವೇತ್ ।
ಅಧ್ಯಾಪ್ಯ ವಾ ದ್ವಿಜಾನ್ ಸರ್ವಾನ್ ಸರ್ವಾನ್ ಕಾಮಾನವಾಪ್ನುಯಾತ್ ॥೭೪॥

ಯಶ್ಚೈವ ಶೃಣುಯಾನ್ನಿತ್ಯಮಾನಂತ್ಯಂ ಸ್ವರ್ಗಮಶ್ನುತೇ ।
ಅನುಸೂಯೋ ಜಿತಕ್ರೋಧೋ ಲೋಭಮೋಹವಿವರ್ಜಿತಃ ॥ ೭೫ ॥

ತೀರ್ಥಾನಾಂ ಚ ಫಲಂ ಕೃತ್ಸ್ನಂ ದಾನಾದೀನಾಂ ತಥೈವ ಚ ।
ಮೋಕ್ಷೋಪಾಯೋ ಹ್ಯಯಂ ಶ್ರೇಷ್ಠಃ ಸ್ವರ್ಗೋಪಾಯೋ ಹ್ಯಯಂ ಪರಃ ॥
ಇಹ ಚಾಪಿ ಪರಾ ತುಷ್ಟಿಸ್ತಸ್ಮಾತ್ಕುರ್ವೀತ ಯತ್ನತಃ ॥ ೭೬ ॥

ಇಮಂ ವಿಧಿಂ ಯೋ ಹಿ ಪಠೇದತಂದ್ರಿತಃ
ಸಮಾಹಿತಃ ಸಂಸದಿ ಪರ್ವಸಂಧಿಷು ।
ಅಪತ್ಯಭಾಗ್ಭವತಿ ತರೇಣ ತೇಜಸಾ
ದಿವೌಕಸಾಂ ಸ ವ್ರಜತೇ ಸಲೋಕತಾಂ ॥ ೭೭ ॥

---

೭೪. ಈ ರೀತಿಯಲ್ಲಿ ಭಕ್ತಿಯಿಂದ ಪಿತೃಕಾರ್ಯವನ್ನು ಮಾಡಿದ ಯೋಗಿಯು ಪಂಕ್ತಿಪಾವನನೂ, ಬ್ರಾಹ್ಮಣೋತ್ತಮನೂ ಆಗುವನು. ಮತ್ತು ಶಿಷ್ಯರಿಗೆ ವೇದಾಧ್ಯಯನವನ್ನು ಮಾಡಿದ ಫಲವನ್ನೂ, ಸಕಲ ಇಷ್ಟಾರ್ಥಗಳನ್ನೂ ಹೊಂದುವನು.

೭೫. ಯಾವ ಪುರುಷನು ಈ ವಿಷಯಗಳನ್ನು ಸತತವಾದ ಚಿಂತೆಯಿಂದ ತಿಳಿಯುವನೋ ಅವನು ಶಾಶ್ವತವಾದ ಸ್ವರ್ಗಸುಖಗಳನ್ನು ಹೊಂದುವನು. ಮತ್ತು ಅಸೂಯಾರಹಿತನೂ, ಕೋಪವರ್ಜಿತನೂ, ಲೋಭಮೋಹಶೂನ್ಯನೂ ಆಗಿ ನಿತ್ಯ ಸುಖವನ್ನು ಅನುಭವಿಸುವನು.

೭೬. ಈ ಭಾಗಗಳನ್ನು ಯಾವನು ನಿರಂತರವೂ ಪಠನಮಾಡುವನೋ, ಅವನು ಸಮಸ್ತ ತೀರ್ಥಕ್ಷೇತ್ರಗಳ ಯಾತ್ರಾಫಲವನ್ನೂ, ಸಮಸ್ತ ದಾನಗಳ ಫಲಗಳನ್ನೂ ಹೊಂದುವನು. ಇದು ಮೋಕ್ಷವನ್ನು ಪಡೆಯಲು ಉತ್ತಮ ಮಾರ್ಗವಾಗಿದೆ. ಸ್ವರ್ಗಕ್ಕೂ ದಾರಿಯಾಗಿದೆ. ಇಹಲೋಕದಲ್ಲಿ ಪರಮಸುಖವನ್ನೂ, ಪರದಲ್ಲಿ ಪರಮ ಪದವಿಯನ್ನೂ ಹೊಂದುವನು.

೭೭. ಆದುದರಿಂದ ಈ ಶ್ರಾದ್ಧವಿಧಿಯನ್ನು ಯಾವನು ಸ್ಥಿರಮನಸ್ಸಿನಿಂದ ಸಾವಧಾನವಾಗಿ ಸಭೆಯಲ್ಲಿಯೂ, ಪರ್ವಕಾಲಗಳಲ್ಲಿಯೂ ಪಠನಮಾಡುವನೋ, ಅವನು ಪುತ್ರಸಂತಾನವನ್ನೂ, ಪರಮತೇಜಸ್ಸನ್ನೂ, ದೇವತೆಗಳ ದಿವ್ಯಪದವಿಯನ್ನೂ ಹೊಂದುವನು.

**ಯೇನ ಪ್ರೋಕ್ತಸ್ತ್ವಯಂ ಕಲ್ಪೋ ನಮಸ್ತಸ್ಮೈ ಸ್ವಯಂಭುವೇ |**
**ಮಹಾಯೋಗೇಶ್ವರೇಭ್ಯಶ್ಚ ಸದಾ ಚ ಪ್ರಣತೋ ಹ್ಯಹಂ || ೭೮ ||**

**ಇತ್ಯೇತೇ ಪಿತರಸ್ತಾತ ದೇವಾನಾಮಪಿ ದೇವತಾಃ |**
**ಸಪ್ತಸ್ವೇತೇಷು ತೇ ನಿತ್ಯಂ ಸ್ಥಾನೇಷು ಪಿತರೋಽವ್ಯಥಾಃ || ೭೯ ||**

**ಪ್ರಜಾಪತಿಸುತಾ ಹ್ಯೇತೇ ಸರ್ವೇ ಚೈವ ಮಹಾತ್ಮನಃ |**
**ಆದ್ಯೋ ಗಣಸ್ತು ಯೋಗಾನಾಂ ಸ ನಿತ್ಯೋ ಯೋಗವರ್ದ್ಧನಃ || ೮೦ ||**

**ದ್ವಿತೀಯೋ ದೇವತಾನಾಂ ತು ತೃತೀಯೋ ದೇವತಾರಿಣಾಂ |**
**ಶೇಷಾಸ್ತು ವರ್ಣಿನಾಂ ಜ್ಞೇಯಾ ಇತಿ ಸರ್ವೇ ಪ್ರಕೀರ್ತಿತಾಃ || ೮೧ ||**

---

೭೮. ಯಾವ ಬ್ರಹ್ಮದೇವನು ಈ ಶ್ರಾದ್ಧಕಲ್ಪವನ್ನು ಸಾಂಗವಾಗಿ ಮಹಾಯೋಗೀಶ್ವರರಿಗೆ ಸಾವಧಾನವಾಗಿ ನಿರೂಪಿಸಿದನೋ, ಅಂತಹ ಬ್ರಹ್ಮದೇವನಿಗೂ, ಮಹಾಯೋಗಿವರ್ಯರಿಗೂ ಸದಾ ಕಾಲದಲ್ಲಿಯೂ ವಂದನೆಗಳನ್ನು ಅರ್ಪಿಸುತ್ತೇನೆ.

೭೯. ಎಲೈ ಪ್ರಿಯನಾದ ಶಂಯುಮುನಿಯೇ, ಇಂತಹ ಪಿತೃದೇವತೆಗಳು ದೇವತೆಗಳಿಂದಲೂ ಪೂಜ್ಯರಾಗಿರುವರು. ಅಂತಹ ಪಿತೃಗಳು ಸಪ್ತಲೋಕಗಳಲ್ಲಿಯೂ ಪೂಜ್ಯರೂ ದುಃಖರಹಿತರೂ ಆಗಿರುವರು.

೮೦. ಈ ಪಿತೃದೇವತೆಗಳೆಲ್ಲರೂ ಬ್ರಹ್ಮದೇವನ ಮಾನಸಪುತ್ರರೂ ಮಹಾತ್ಮರೂ ಆಗಿರುವರು. ಆ ಪಿತೃಗಳಲ್ಲಿ ಮೊದಲನೆಯ ಗಣವು ಯೋಗವರ್ಧಕರಾದ ಯೋಗೀಶ್ವರರ ಸಂಗಡವಾಗಿದೆ.

೮೧. ಎರಡನೆಯ ಗಣವು ದೇವತೆಗಳ ಗುಂಪಾಗಿಯೂ, ಮೂರನೆಯದು ದೈತ್ಯವೈರಿಗಳಾದ ದೇವತೆಗಳ ವರ್ಗವಾಗಿಯೂ, ಇತರ ಗಣಗಳು ಬ್ರಾಹ್ಮಣಾದಿ ವರ್ಣದವರ ಗುಂಪಾಗಿಯೂ ಇರುತ್ತವೆ. ಹೀಗೆ ಸರ್ವಪಿತೃಗಣಗಳೂ ವರ್ಣಿಸಲ್ಪಟ್ಟಿರುತ್ತಾರೆ.

**ದೇವಾಸ್ತ್ವೇತಾನ್ ಯಜಂತೇ ವೈ ಸರ್ವೇಷ್ವೇತೇಷ್ವವಸ್ಥಿತಾಃ ।**
**ಆಶ್ರಮಾಸ್ತು ಯಜಂತ್ಯೇತಾಂಶ್ಚತ್ವಾರಸ್ತು ಯಥಾಕ್ರಮಂ ॥ ೮೨ ॥**

**ವರ್ಣಾಶ್ಚಾಪಿ ಯಜಂತ್ಯೇತಾಂಶ್ಚತ್ವಾರಸ್ತು ಯಥಾವಿಧಿ ।**
**ತಥಾ ಸಂಕರಜಾತಾಶ್ಚ ಮ್ಲೇಚ್ಛಾಶ್ಚೈವ ಯಜಂತಿ ವೈ ॥ ೮೩ ॥**

**ಪಿತೄಂಶ್ಚ ಯೋ ಯಜೇದ್ಭಕ್ತ್ಯಾ ಪಿತರಃ ಪೂಜಯಂತಿ ತಂ ।**
**ಪಿತರಃ ಪುಷ್ಟಿಕಾಮಸ್ಯ ಪ್ರಜಾಕಾಮಸ್ಯ ವಾ ಪುನಃ ।**
**ಪುಷ್ಟಿಂ ಪ್ರಜಾಶ್ಚ ಸ್ವರ್ಗಂ ಚ ಪ್ರಯಚ್ಛಂತಿ ಪಿತಾಮಹಾಃ ॥ ೮೪ ॥**

**ದೇವಕಾರ್ಯಾದಪಿ ಸೂನೋಃ ಪಿತೃಕಾರ್ಯಂ ವಿಶಿಷ್ಯತೇ ।**
**ದೇವತಾನಾಂ ಹಿ ಪಿತರಃ ಪೂರ್ವಮಾಪ್ಯಾಯನಂ ಸ್ವಯಂ ॥ ೮೫ ॥**

---

೮೨. ದೇವತೆಗಳು ಸದಾ ಕಾಲದಲ್ಲಿಯೂ ಇವರನ್ನು ಪೂಜಿಸುತ್ತಾರೆ. ಸರ್ವಕಾಲದಲ್ಲಿಯೂ ಅವರ ಸಂಗಡ ವಾಸಿಸುವರು. ಅದರಂತೆ ನಾಲ್ಕು ಆಶ್ರಮದವರೂ ಸಹ ಈ ಪಿತೃದೇವತೆಗಳನ್ನು ಪೂಜಿಸುತ್ತಾರೆ.

೮೩. ಬ್ರಾಹ್ಮಣ ಕ್ಷತ್ರಿಯಾದಿ ನಾಲ್ಕು ವರ್ಣದವರೂ ಸಂಕರಜಾತಿಯಲ್ಲಿ ಹುಟ್ಟಿದ ಪುರುಷರೂ ಮತ್ತು ಮ್ಲೇಂಚ್ಛಾದಿಗಳೂ ಸಹ ಬೇರೆ ಬೇರೆ ನಾಮಗಳಿಂದ ಈ ಪಿತೃದೇವತೆಗಳನ್ನು ಪೂಜಿಸುತ್ತಾರೆ.

೮೪. ಯಾರು ಭಕ್ತಿಯಿಂದ ಪಿತೃದೇವತೆಗಳನ್ನು ಪೂಜಿಸುವರೋ ಅವರನ್ನು ಆ ದೇವತೆಗಳು ಪೂಜಿಸುವರು. ಮತ್ತು ಪುಷ್ಟಿಕಾಮನೂ, ಪ್ರಜಾಕಾಮನೂ ಆದ ಪುರುಷರಿಗೆ ಪಿತಾಮಹಂದಿರು, ಸಂಪತ್ತು, ಸಂತಾನ, ಸ್ವರ್ಗ ಇವೇ ಮೊದಲಾದ ಸರ್ವಸೌಖ್ಯಗಳನ್ನೂ ಕೊಡುವರು.

೮೫. ದೇವತಾಕಾರ್ಯಕ್ಕಿಂತಲೂ ಪಿತೃಕಾರ್ಯವೇ ಉತ್ತಮವಾಗಿರುವುದು. ಆದುದರಿಂದ ದೇವತೆಗಳಿಗಿಂತಲೂ ಪಿತೃಗಳನ್ನು ಮೊದಲು ಸತ್ಕರಿಸಬೇಕು. ಪಿತೃಗಳನ್ನು ಪೂಜಿಸಿದನಂತರ ದೇವತೆಗಳನ್ನು ಸತ್ಕರಿಸಬೇಕು.

**ನ ಯೋಗಗತಿಃ ಸೂಕ್ಷ್ಮಾ ಪಿತೄಣಾಂ ಚ ಪರಾ ಗತಿಃ ।**
**ತಪಸಾ ವಿಪ್ರಕೃಷ್ಟೇನ ದೃಶ್ಯತೇ ಮಾಂಸಚಕ್ಷುಷಾ ॥ ೮೬ ॥**

**ಸರ್ವೇಷಾಂ ರಾಜತಂ ಪಾತ್ರಮಥವಾ ರಜತಾನ್ವಿತಂ ।**
**ಪಾವನಂ ಹ್ಯುತ್ತಮಂ ಪ್ರೋಕ್ತಂ ದೇವಾನಾಂ ಪಿತೃಭಿಃ ಸಹ ॥ ೮೭ ॥**

**ಯೇಷಾಂ ದಾಸ್ಯಂತಿ ಪಿಂಡಾಂಸ್ತ್ರೀನ್ ಬಾಂಧವಾ ನಾಮಗೋತ್ರತಃ ।**
**ಭೂಮೌ ಕುಶೋತ್ತರಾಯಾಂ ಚ ಅಪಸವ್ಯವಿಧಾನತಃ ॥ ೮೮ ॥**

**ಸರ್ವತ್ರ ವರ್ತಮಾನಾಸ್ತೇ ಪಿಂಡಾಃ ಪ್ರೀಣಂತಿ ವೈ ಪಿತೄನ್ ।**
**ಯದಾಹಾರೋ ಭವೇಜ್ಜಂತುರಾಹಾರಃ ಸೋಽಸ್ಯ ಜಾಯತೇ ॥ ೮೯ ॥**

---

೮೬. ಯೋಗಮಾರ್ಗವೂ, ಪಿತೃಮಾರ್ಗವೂ ಕೂಡ ಅತ್ಯುತ್ತಮವಾಗಿರುವುದು. ಇಂತಹ ಸೂಕ್ಷ್ಮಗತಿಯನ್ನು ತಪೋಮಹಿಮೆಯಿಂದ ತಿಳಿಯಲು ಸಾಧ್ಯವೇ ಹೊರತು ಈ ಚರ್ಮಚಕ್ಷುಸ್ಸಿನಿಂದ ತಿಳಿಯಲು ಸಾಧ್ಯವಿಲ್ಲ. ಅದು ಅತಿ ಸೂಕ್ಷ್ಮವಾಗಿರುವುದು.

೮೭. ಸಮಸ್ತವಾದ ದೇವಕಾರ್ಯ ಪಿತೃಕಾರ್ಯಗಳಿಗೆ ರಜತಪಾತ್ರೆಗಳು ಅತ್ಯುತ್ತಮಗಳಾಗಿವೆ. ಅಥವಾ ರಜತಮಿಶ್ರವಾದ ಪಾತ್ರೆಗಳಾದರೂ ಉಪಯೋಗಿಸಲ್ಪಟ್ಟರೆ ಶ್ರೇಷ್ಠವಾಗಿರುವುದು. ಇಂತಹ ಪಾತ್ರೆಗಳನ್ನುಪಯೋಗಿಸುವುದರಿಂದ ಪಿತೃಗಳೂ, ದೇವತೆಗಳೂ, ತೃಪ್ತರಾಗುವರು.

೮೮. ಪುತ್ರಪೌತ್ರಾದಿ ಬಂಧುಗಳು ಶ್ರಾದ್ಧಕಾಲದಲ್ಲಿ ನಾಮಗೋತ್ರಗಳನ್ನುಚ್ಚಾರಮಾಡಿ, ಅಪಸವ್ಯದಿಂದ ಭೂಮಿಯಲ್ಲಿ ದರ್ಭೆಗಳನ್ನು ಹರಡಿ, ಅವುಗಳ ಮೇಲೆ ಪಿತೃಗಳ ಪ್ರೀತಿಗೋಸ್ಕರ ಮೂರು ಪಿಂಡಗಳನ್ನು ಕೊಡಬೇಕು. ಇದರಿಂದ ಪಿತೃಗಳಿಗೆ ತೃಪ್ತಿಯಾಗುವುದು.

೮೯. ಹೀಗೆ ಕ್ರಮವಾಗಿ ಅರ್ಪಿಸಿದ ಪಿಂಡಗಳು ಪಿತೃಗಳು ಎಲ್ಲಿದ್ದರೂ ಅವರಿಗೆ ಸೇರುತ್ತವೆ. ಪಿತೃಗಳು ಯಾವ ಪ್ರಾಣಿಗಳಾಗಿ ಜನಿಸಿದ್ದರೂ ನಾವು ಕೊಟ್ಟ ಪಿಂಡಗಳು ಅವರಿಗೆ ಪ್ರಿಯವಾದ ಆಹಾರರೂಪವಾಗಿ ತೃಪ್ತಿಯನ್ನುಂಟುಮಾಡುವುವು.

**ಯಥಾ ಗೋಷ್ಠೇ ಪ್ರನಷ್ಟಾಂ ವೈ ವತ್ಸೋ ವಿಂದತಿ ಮಾತರಂ ।**
**ತಥಾ ತಂ ನಯತೇ ಮಂತ್ರೋ ಜಂತುರ್ಯತ್ರಾವತಿಷ್ಠತೇ ॥ ೯೦ ॥**

**ನಾಮ ಗೋತ್ರಂ ಚ ಮಂತ್ರಶ್ಚ ದತ್ತಮನ್ನಂ ನಯಂತಿ ತಂ ।**
**ಅಪಿ ಯೋನಿಶತಂ ಪ್ರಾಪ್ತಾಂಸ್ತೃಪ್ತಿಸ್ತಾನನು ಗಚ್ಛತಿ ॥ ೯೧ ॥**

**ಏವಮೇಷಾ ಸ್ಥಿತಾ ಸಂಸ್ಥಾ ಬ್ರಹ್ಮಣಾ ಪರಮೇಷ್ಠಿನಾ ।**
**ಪಿತೄಣಾಮಾದಿಸರ್ಗಸ್ತು ಲೋಕಾನಾಮಕ್ಷಯಾರ್ಥಿನಾಂ ॥ ೯೨ ॥**

**ಇತ್ಯೇತೇ ಪಿತರೋ ದೇವಾ ದೇವಾಶ್ಚ ಪಿತರಃ ಪುನಃ ।**
**ದೌಹಿತ್ರಾ ಯಜಮಾನಾಶ್ಚ ಪ್ರೋಕ್ತಾಶ್ಚೈವ ಮಯಾನಘಾಃ ॥ ೯೩ ॥**

---

೯೦. ತಾಯಿಯನ್ನು ಬಿಟ್ಟು ಅಗಲಿದ ಕರುವು, ಗೋಷ್ಠದಲ್ಲಿದ್ದ ತಾಯಿಯನ್ನು ಹುಡುಕಿಕೊಂಡು ಹೇಗೆ ಬರುತ್ತವೆಯೋ ಹಾಗೆ ಮಂತ್ರ ಸಹಿತವಾಗಿ ಪಿತೃಗಳಿಗೆ ಅರ್ಪಿಸಿರುವ ಪಿಂಡಗಳನ್ನೂ ಸಹ ಆ ಮಂತ್ರಗಳು ಪಿತೃಗಳು ಎಲ್ಲಿದ್ದರೂ ಅಲ್ಲಿಗೆ ಒಯ್ದು ಅವರಿಗೆ ಪ್ರಿಯವಾದ ಆಹಾರ ರೂಪವಾಗಿ ಬದಲಾಯಿಸಿ, ತೃಪ್ತಿಯನ್ನು ಉಂಟುಮಾಡುತ್ತವೆ. ಮಂತ್ರದಲ್ಲಿ ಆ ಶಕ್ತಿಯಿರುವುದು.

೯೧. ವೇದೋಕ್ತವಾದ ಮಂತ್ರವು ನಾಮಗೋತ್ರೋಚ್ಚಾರ ಪೂರ್ವಕವಾಗಿ ದತ್ತವಾದ ಅನ್ನವನ್ನು, ಪಿತೃಗಳು ನೂರಾರು ಜನ್ಮಗಳನ್ನು ಹೊಂದಿದ್ದರೂ ಅವರಿಗೆ ಅದನ್ನು ಒದಗಿಸಿ ಕೊಟ್ಟು, ತೃಪ್ತಿಯನ್ನುಂಟುಮಾಡುತ್ತವೆ.

೯೨. ಪರಮ ಪೂಜ್ಯನಾದ ಬ್ರಹ್ಮದೇವನು ಲೋಕಾನುಗ್ರಹಕಾಂಕ್ಷಿಗಳೂ ಅಕ್ಷಯಫಲದಾತೃಗಳೂ ಆದ ಪಿತೃದೇವತೆಗಳನ್ನು ಆದಿಯಲ್ಲಿ ಸೃಷ್ಟಿಸಿ, ಲೋಕ ಸಂರಕ್ಷಣೆಯನ್ನು ಮಾಡಿದನು.

೯೩. ಎಲೈ ಶಂಯುಮುನಿಯೇ ನಿರ್ದೋಷಿಗಳೂ ಪರಮಪವಿತ್ರರೂ ಆದ ಪಿತೃದೇವತೆಗಳು, ದೇವತೆಗಳು, ಪಿತೃಗಳು, ಮೊಮ್ಮಕ್ಕಳು ಯಜಮಾನರೂ ಇವರನ್ನು ನಿರೂಪಿಸಿರುವೆನು.

**ಲೋಕಾ ದುಹಿತರಶ್ಚೈವ ದೌಹಿತ್ರಾಶ್ಚ ಸುತಾಸ್ತಥಾ ।**
**ದಾನಾನಿ ಸಹ ಶೌಚೇನ ತೀರ್ಥಾನಿ ಚ ಫಲಾನಿ ಚ ॥ ೯೪ ॥**

**ಅಕ್ಷಯತ್ವಂ ದ್ವಿಜಾಶ್ಚೈವ ಯಾಯಾವರವಿಧಿಸ್ತಥಾ ।**
**ಪ್ರೋಕ್ತಂ ಸರ್ವಂ ಯಥಾನ್ಯಾಯಂ ಯಥಾ ಬ್ರಹ್ಮಾಬ್ರವೀತ್ಪುರಾ ॥ ೯೫ ॥**

**॥ ಬೃಹಸ್ಪತಿರುವಾಚ ॥**

**ಇತ್ಯೇತದಂಗಿರಾಃ ಪ್ರಾಹ ಋಷೀಣಾಂ ಶೃಣ್ವತಾಂ ತದಾ ।**
**ಪೃಷ್ಟಸ್ತು ಸಂಶಯಂ ಸರ್ವಂ ಪಿತೄಣಾಂ ಪ್ರಾಹ ಸಂಸದಿ ॥ ೯೬ ॥**

**ಸತ್ರೇ ವೈ ವಿತತೇ ಪೂರ್ವಂ ತದಾ ವರ್ಷಸಹಸ್ರಕೇ ।**
**ಯಸ್ಮಿನ್ ಗೃಹಪತಿರ್ಹ್ಯಾಸೀದ್ಬ್ರಹ್ಮಾ ವೈ ದೇವತಾ ಪ್ರಭುಃ ॥ ೯೭ ॥**

**ಸಂವತ್ಸರಶತಾನ್ಯಂ ಚ ತತ್ರೋಪೇತಾ ಇತಿ ಶ್ರುತಿಃ ।**
**ಶ್ಲೋಕಾಶ್ಚಾತ್ರ ಪುರಾ ಗೀತಾ ಋಷಿಭಿರ್ಬ್ರಹ್ಮವಾದಿಭಿಃ ॥ ೯೮ ॥**

---

೯೪. ಪಿತೃಗಳಿಗೆ ಲೋಕಗಳೇ ಪುತ್ರಿಯರಾಗಿಯೂ ಪ್ರಜೆಗಳೇ ಮಕ್ಕಳು ಮೊಮ್ಮಕ್ಕಳಾಗಿಯೂ ಇರುವರು. ಇವರ ವಿಷಯಗಳನ್ನು ದಾನ ಶೌಚ ತೀರ್ಥ ಮತ್ತು ಇವುಗಳ ಫಲಗಳು ಇವನ್ನು ತಿಳಿಸಿರುವೆನು.

೯೫. ಪೂರ್ವದಲ್ಲಿ ಬ್ರಹ್ಮದೇವನು ಯಾವ ಯಾವ ವಿಷಯಗಳು ಅಕ್ಷಯವಾದ ಫಲಗಳು, ಬ್ರಾಹ್ಮಣರು, ವಿಧಿಗಳು, ಇವನ್ನು ಹೇಳಿರುವನೋ ಅವುಗಳನ್ನು ನಾನು ನಿಮಗಾಗಿ ಕ್ರಮವಾಗಿಯೂ, ಯಥಾಸ್ಥಿತವಾಗಿಯೂ, ನಿರೂಪಿಸುವೆನು ಎಂದನು.

೯೬. ಬೃಹಸ್ಪತಿಗಳು ಹೇಳಿದರು :—ಋಷಿಗಳ ಸಭೆಯಲ್ಲಿ ಮಹರ್ಷಿಗಳು ಪಿತೃಗಳ ವಿಷಯಗಳನ್ನು ಕೇಳಲಾಗಿ ಅಂಗಿರಸ ಮುನಿಯು ಮುನಿಗಳಿಗೆ ಈ ಸಮಸ್ತವಾದ ವಿಷಯಗಳನ್ನು ಸ್ಪಷ್ಟವಾಗಿ ಹೇಳಿದರು.

೯೭. ಪೂರ್ವದಲ್ಲಿ ಒಂದು ಸಹಸ್ರವರ್ಷಗಳವರೆಗೂ ಅತ್ಯಂತ ವಿಸ್ತಾರವಾದ ಯಾಗವು ಉಪಕ್ರಮವಾಯಿತು. ಆ ಮಹಾಯಾಗದಲ್ಲಿ ಬ್ರಹ್ಮದೇವನು ಯಜಮಾನನಾಗಿಯೂ, ಶ್ರೀಹರಿಯು ಮುಖ್ಯ ದೇವತೆಯಾಗಿಯೂ ಇದ್ದರು.

೯೮. ಅಲ್ಲಿ ಒಂದು ಲಕ್ಷ ವರ್ಷಗಳವರೆಗೂ ಯಾಗವು ಅತಿ ವಿಶಾಲವಾಗಿ ನಡೆಯಿತೆಂಬುದಾಗಿ ಶ್ರುತಿಯು ಹೋಗಳುತ್ತದೆ. ಬ್ರಹ್ಮಜ್ಞಾನಿಗಳಾದ ಮಹರ್ಷಿಗಳು ಕೂಡ ಈ ವಿಷಯಗಳಲ್ಲಿ ಶ್ಲೋಕಗಳನ್ನು ಹೇಳಿರುವರು.

ದೀಕ್ಷಿತಸ್ಯ ತದಾ ಸತ್ರೇ ಬ್ರಹ್ಮಣಃ ಪರಮಾತ್ಮನಃ ।
ತತ್ರೈವ ಜಾತಮತ್ಯುಗ್ರಂ ಪಿತೄಣಾಮಕ್ಷಯಾರ್ಥಿನಾ ॥
ಲೋಕಾನಾಂ ಚ ಹಿತಾರ್ಥಾಯ ಬ್ರಹ್ಮಣಾ ಪರಮೇಷ್ಠಿನಾ ॥ ೯೯ ॥

॥ ಸೂತ ಉವಾಚ ॥

ಏವಂ ಬೃಹಸ್ಪತಿಃ ಪೂರ್ವಂ ಪೃಷ್ಟಃ ಪುತ್ರೇಣ ಧೀಮತಾ ।
ಪ್ರೋವಾಚ ಪಿತೃವಂಶಂ ತು ಯತ್ತದ್ವೈ ಸಮುದಾಹೃತಂ ॥
ಅತ ಊರ್ಧ್ವಂ ಪ್ರವಕ್ಷ್ಯಾಮಿ ವರುಣಸ್ಯ ನಿಬೋಧತ ॥ ೧೦೦ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಶ್ರಾದ್ಧಕಲ್ಪೇ ಭಿನ್ನಕಾಲಿಕ ತೃಪ್ತಿಸಾಧನದ್ರವ್ಯವಿಶೇಷಗಯಾಶ್ರಾದ್ಧಾದಿಫಲಬ್ರಾಹ್ಮಣ ಪರೀಕ್ಷಾದಿ ಕಥನಂ " ನಾಮೈಕವಿಂಶೋಽಧ್ಯಾಯಃ

---

೯೯. ಆ ಯಾಗದಲ್ಲಿ ಪರಮಪುರುಷನಾದ ಬ್ರಹ್ಮದೇವನು ದೀಕ್ಷಿತನಾಗಿರಲು ಪಿತೃಗಳಿಗೆ ಅಕ್ಷಯವಾದ ಮೋಕ್ಷಾಪೇಕ್ಷೆಯಿಂದಲೂ, ಲೋಕಕಲ್ಯಾಣಾಕಾಂಕ್ಷೆಯಿಂದಲೂ, ಆದಿಪರಮಪುರುಷನಾದ ಬ್ರಹ್ಮದೇವನೇ ಅತ್ಯುಗ್ರರೂಪವನ್ನು ಹೊಂದಿ ಯಾಗವನ್ನು ಸಾಂಗವಾಗಿ ನೆರವೇರಿಸಿದನು.

೧೦೦. ಸೂತಮುನಿಯು ಹೇಳಿದನು :—ಹೀಗೆ ಬೃಹಸ್ಪತಿಗಳ ಕುಮಾರನೂ ಜ್ಞಾನಿಯೂ ಆದ ಶಂಯುಮುನಿಯು ತಮ್ಮ ತಂದೆಯಾದ ಬೃಹಸ್ಪತಿಯನ್ನು ಕೇಳಲಾಗಿ ಅವರು ಪಿತೃವಂಶವನ್ನು ಸಾಂಗವಾಗಿ ಕುಮಾರನಿಗೆ ವಿವರಿಸಿದರು. ಅದೇ ವಿಷಯವನ್ನೇ ನಾನು ನಿಮಗೆ ಈಗ ವಿವರಿಸಿರುವೆನು. ಇನ್ನು ಮುಂದೆ ವರುಣನ ವಂಶವನ್ನು ವಿಸ್ತಾರವಾಗಿ ತಿಳಿಸುವೆನು ಕೇಳಿರೆಂದು ಸೂತನು ಮುನಿಗಳಿಗೆ ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದ " ಶ್ರಾದ್ಧಕಲ್ಪದಲ್ಲಿ ಭಿನ್ನಕಾಲ ತೃಪ್ತಿಸಾಧಕಪದಾರ್ಥಗಳು ಶ್ರಾದ್ಧದ ಫಲ ಬ್ರಾಹ್ಮಣಪರೀಕ್ಷೆ ಇವುಗಳ ಕಥನ "ವೆಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

## ಇಪ್ಪತ್ತೊಂದನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ಭಕ್ಷ್ಯಭೋಜ್ಯಾದಿಗಳಿಂದ ಪಿತೃಗಳಿಗೆ ತೃಪ್ತಿಯಾಗುವ ಕ್ರಮವು ಬ್ರಾಹ್ಮಣಾದಿ ಪರೀಕ್ಷಾ, ಗಯಾ, ಶ್ರಾದ್ಧಫಲ, ಇವುಗಳು ವರ್ಣಿತವಾಗಿವೆ. ಪಿತೃದೇವತೆಗಳು, ಪಿತೃಗಳು, ಶ್ರಾದ್ಧಗಳು, ಇವುಗಳನ್ನು ನಿಂದಿಸುವವನು ನರಕ ಭಾಜನನಾಗುವನು. ಶ್ರದ್ಧೆಯಿಂದ ಶ್ರಾದ್ಧಮಾಡಿದರೆ ಇಹಪರಗಳಲ್ಲಿ ಪರಮಸುಖ ವಾಗುವುದು. ವೇದಶಾಸ್ತ್ರ, ಪುರಾಣ, ವೇತ್ತೃಗಳಿಗೆ ಮಾಡಿದ ಪೂಜೆಯು ಅನಂತ ಫಲದಾಯಕವಾಗುವುದು.

ಶ್ರಾದ್ಧದಲ್ಲಿ ಪಿತೃ ಉದ್ದೇಶ್ಯಕವಾಗಿ·ಅನ್ನೋದಕಾದಿಗಳನ್ನು ಮಂತ್ರಪೂರ್ವಕ ವಾಗಿ ಶ್ರದ್ಧೆಯಿಂದ ಕೊಟ್ಟರೆ, ಆ ಮಂತ್ರಗಳು, ದೇವತೆಗಳು, ಯಜಮಾನನ ಪಿತೃಗಳು ಯಾವ ಲೋಕದಲ್ಲಿ ಯಾವ ರೂಪದಲ್ಲಿದ್ದರೂ ಆ ಪದಾರ್ಥಗಳನ್ನು ಅವರಿಗೆ ತೃಪ್ತಿಯಾಗುವ ವಸ್ತುಗಳನ್ನಾಗಿ ಪರಿಣಮಿಸಿ ಆ ಪಿತೃಗಳಿಗೆ ಕೊಟ್ಟು ತೃಪ್ತಿಯನ್ನುಂಟುಮಾಡುವರೆಂಬ ವಿಷಯಗಳು ವರ್ಣಿತವಾಗಿವೆ.



—: ಹರಿಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ದ್ವಾವಿಂಶೋಽಧ್ಯಾಯಃ

**ಋಷಯಶ್ಚೈವಮುಕ್ತಾಸ್ತು ಪರಂ ಹರ್ಷಮುಪಾಗತಾಃ |**
**ಪರಂ ಶುಶ್ರೂಷವೋ ಭೂಯಃ ಪಪ್ರಚ್ಛುಸ್ತದನಂತರಂ || ೧ ||**

**|| ಋಷಯ ಊಚುಃ ||**

**ವಂಶಾನಾಮಾನುಪೂರ್ವ್ಯೇಣ ರಾಜ್ಞಾಂಚಾಮಿತತೇಜಸಾಂ |**
**ಸ್ಥಿತಿಂ ಚೈಷಾಂ ಪ್ರಭಾವಂ ಚ ಬ್ರೂಹಿ ನಃ ಪರಿಪೃಚ್ಛತಾಂ || ೨ ||**

---

## ಇಪ್ಪತ್ತೆರಡನೆಯ ಅಧ್ಯಾಯವು

೧. ಹೀಗೆ ಸೂತಪುರಾಣಿಕರು ಶ್ರಾದ್ಧದ ವಿಷಯಗಳನ್ನು ವಿಸ್ತಾರವಾಗಿ ಹೇಳಲಾಗಿ ಅದನ್ನು ಕೇಳಿದ ಮಹರ್ಷಿಗಳು ಅತ್ಯಂತ ಹರ್ಷವನ್ನು ಹೊಂದಿ ಸೂತರನ್ನು ಬಹಳವಾಗಿ ಮರ್ಯಾದಿಸಿ ಪುನಃ ಇಂತೆಂದರು.

೨. ಮುನಿಗಳು ಕೇಳಿದರು :—ಎಲೈ ಸೂತಪುರಾಣೀಕರೆ ಮಹಾಪರಾಕ್ರಮಿಗಳೂ ಪ್ರಖ್ಯಾತರೂ ಆದ ಮಹಾರಾಜರ ವಂಶಗಳನ್ನೂ ಸ್ಥಿತಿಗತಿಗಳನ್ನೂ ಕ್ರಮವಾಗಿಯೂ, ಯಥಾಸ್ಥಿತವಾಗಿಯೂ, ತಿಳಿಸಬೇಕು. ಅವರ ಶಕ್ತಿಸಾಮರ್ಥ್ಯಗಳನ್ನು ಕೇಳಬೇಕೆಂಬ ಕುತೂಹಲವು ಬಹಳವಾಗಿ ಉಂಟಾಗಿದೆ, ತಿಳಿಸಬೇಕೆಂದು ಕೇಳಿದರು.

ಏವಮುಕ್ತಸ್ತತಃ ಸೂತಸ್ತಥಾಽಸೌ ಲೋಮಹರ್ಷಣಃ ।
ಶುಶ್ರೂಷಾಮುತ್ತರಾಖ್ಯಾನೇ ಋಷೀಣಾಂ ವಾಕ್ಯಕೋವಿದಃ ॥ ೩ ॥

ಆಖ್ಯಾನಕುಶಲೋ ಭೂಯಃ ಪರಂ ವಾಕ್ಯಮುವಾಚ ಹ ।
ಬ್ರುವತೋ ಮೇ ನಿಬೋಧಧ್ವ ಋಷಿರಾಹ ಯಥಾ ಮಮ ॥ ೪ ॥

ವಂಶಾನಾಮಾನುಪೂರ್ವ್ಯೇಣ ರಾಜ್ಞಾಂಚಾಮಿತತೇಜಸಾಂ ।
ಸ್ಥಿತಿಂ ಚೈಷಾಂ ಪ್ರಭಾವಂ ಚ ಬ್ರುವತೋ ಮೇ ನಿಬೋಧತ ॥ ೫ ॥

ವರುಣಸ್ಯ ಪತ್ನೀ ಸಾಮುದ್ರೀ ಶುನೋದೇವೀತ್ಯುದಾಹೃತಾ ।
ತಸ್ಯಾಃ ಪುತ್ರೌ ಕಲಿರ್ವೈದ್ಯಃ ಸುತಾ ಚ ಸುರಸುಂದರೀ ॥ ೬ ॥

ಕಲಿಪುತ್ರೌ ಮಹಾವೀರ್ಯೌ ಜಯಶ್ಚ ವಿಜಯಶ್ಚ ಹ ।
ವೈದ್ಯಪುತ್ರೌಘೃಣಿಶ್ಚೈವ ಮುನಿಶ್ಚೈವ ಮಹಾಬಲೌ ॥ ೭ ॥

---

೩-೪. ಹೀಗೆ ಮಹರ್ಷಿಗಳು ಹೇಳಲಾಗಿ ಲೋಮಹರ್ಷನೂ, ವಾಗ್ವಿಶಾರದನೂ, ಆಖ್ಯಾನಕುಶಲನೂ ಆದ ಸೂತಮುನಿಯು ಸೇವಾಸಕ್ತರಾದ ಮಹರ್ಷಿಗಳಿಗೆ ರಾಜರ ವಂಶವನ್ನೂ, ಅವರ ಸ್ಥಿತಿಗತಿ ಸಾಮರ್ಥ್ಯಗಳನ್ನೂ, ಕ್ರಮವಾಗಿ ಹೇಳಲುಪ ಕ್ರಮಿಸಿದನು. ಎಲೈ ಮುನಿವರ್ಯರೇ ನಾನು ಹೇಳುವ ವಿಷಯಗಳನ್ನು ಸಾವಧಾನ ದಿಂದ ಕೇಳಿರೆಂದನು.

೫. ಎಲೈ ಮಹರ್ಷಿಗಳೇ, ಈಗ ಮಹಾಶೂರರೂ ಮಹಾನುಭಾವರೂ ಆದ ರಾಜರ ವಂಶಗಳನ್ನು ಅವರ ಸ್ಥಿತಿ, ಪ್ರಭಾವ, ಇವೇ ಮೊದಲಾದುವನ್ನು ನಿಮಗಾಗಿ ತಿಳಿಸುವೆನು. ನೀವು ಸಾವಧಾನದಿಂದ ನಾನು ಹೇಳುವ ವಿಷಯಗಳನ್ನು ಕೇಳಿರೆಂದನು.

೬. ಎಲೈ ಮಹರ್ಷಿಗಳೇ, ವರುಣದೇವನಿಗೆ ಸಮುದ್ರರಾಜನ ಕುಮಾರಿಯಾದ ಶುನೋದೇವಿಯು ಪ್ರಖ್ಯಾತಳಾದ ಪತ್ನಿಯಾಗಿದ್ದಳು. ಅವಳಿಗೆ ಕಲಿ, ವೈದ್ಯರೆಂಬ ಕುಮಾರರೂ, ಸುರಸುಂದರಿಯೆಂಬ ಒಬ್ಬಳು ಕುಮಾರಿಯೂ, ಹುಟ್ಟಿ ಪ್ರಸಿದ್ಧ ರಾಗಿದ್ದರು.

೭. ಅವರಲ್ಲಿ ಕಲಿಯೆಂಬುವನಿಗೆ ಮಹಾಶೂರರಾದ ಜಯವಿಜಯರೆಂಬ ಇಬ್ಬರು ಕುಮಾರರೂ, ವೈದ್ಯನಿಗೆ ಘೃಣಿ, ಮುನಿಯರೆಂಬ ಮಹಾಬಲಶಾಲಿಗಳಾದ ಇಬ್ಬರು ಪುತ್ರರೂ ಲೋಕವಿಖ್ಯಾತರಾಗಿದ್ದರು.

ಪ್ರಜಾನಾಮುತ್ತುಕಾಮೂನಾಮನ್ಯೋಽನ್ಯಸ್ಯ ಪ್ರಭಕ್ಷಿಣೌ ।
ಭಕ್ಷಯಿತ್ವಾ ತಾವನ್ಯೋಽನ್ಯಂ ವಿನಾಶಂ ಸಮವಾಪತುಃ ॥ ೮ ॥

ಕಲಿಃ ಸುರಾಯಾಂ ಸಂಜ್ಞೇ ತಸ್ಯ ಪುತ್ರೋ ಮದಃ ಸ್ಮೃತಃ ।
ತ್ವಾಷ್ಟ್ರೀ ಹಿಂಸಾ ಕಲೇರ್ಭಾರ್ಯಾ ಜ್ಯೇಷ್ಠಾ ಯಾ ನಿಕೃತಿಃ ಸ್ಮೃತಾ ॥ ೯ ॥

ಅಸೂತಾನ್ಯಾನ್ ಕಲೇಃ ಪುತ್ರಾಂಶ್ಚತುರಃ ಪುರುಷಾದಕಾನ್ ।
ನಾಕಂ ವಿಘ್ನಂ ಚ ವಿಖ್ಯಾತಂ ಸದ್ರಮಂ ವಿಧಮಂ ತಥಾ ॥ ೧೦ ॥

ಅಶಿರಸ್ಕಸ್ತಯೋರ್ವಿಘ್ನೋ ನಾಕಶ್ಚೈವಾಶರೀರವಾನ್ ।
ಸದ್ರಮಶ್ಚೈಕಹಸ್ತೋಽಭೂದ್ವಿಧಮಶ್ಚೈಕಪಾತ್ಸ್ಮೃತಃ ॥ ೧೧ ॥

ಸದ್ರಮಸ್ಯ ತಥಾ ಪತ್ನೀ ತಾಮಸೀ ಪೂತನಾ ಸ್ಮೃತಾ ।
ರೇವತೀ ವಿಧಮಸ್ಯಾಪಿ ತಯೋಃ ಪುತ್ರಾಃ ಸಹಸ್ರಶಃ ॥ ೧೨ ॥

---

೮. ಆ ಕುಮಾರರು ಪ್ರಜಾನಾಶಕರಾಗಿಯೂ, ಪ್ರಜಾಭಕ್ಷಕರಾಗಿಯೂ, ಲೋಕಕಂಟಕರಾಗಿಯೂ ಇದ್ದು ಪರಸ್ಪರವಾದ ಕಲಹದಿಂದ ಅವರು ನಾಶವನ್ನು ಹೊಂದಿದರು.

೯. ಆ ವಂಶದಲ್ಲಿ ಸುರೆಯಲ್ಲಿ ಕಲಿಯೆಂಬ ಪುತ್ರನೂ, ಅವನಿಗೆ ಮದನೆಂಬ ಕುಮಾರನೂ ಜನಿಸಿದರು. ಆ ಕಲಿಗೆ ತ್ವಷ್ಟೃವಿನ ಪುತ್ರಿಯಾದ ಹಿಂಸೆಯು ಕಿರಿಯ ಹೆಂಡತಿಯಾಗಿಯೂ, ನಿಕೃತಿಯೆಂಬುವಳು ಹಿರಿಯ ಹೆಂಡತಿಯಾಗಿಯೂ ಇದ್ದರು.

೧೦. ಕಲಿಪುರುಷನಿಗೆ ಆ ಪತ್ನಿಯರಲ್ಲಿ ನರಭಕ್ಷಕರಾದ ನಾಕ, ವಿಘ್ನ, ಪ್ರಖ್ಯಾತನಾದ ಸದ್ರಮ ಮತ್ತು ವಿಧಮನೆಂಬ ನಾಲ್ಕು ಜನ ಮಕ್ಕಳು ಹುಟ್ಟಿದರು.

೧೧. ಅವರಲ್ಲಿ ವಿಘ್ನನಿಗೆ ತಲೆಯಿಲ್ಲದೆ ಕೇವಲ ರುಂಡನಾಗಿದ್ದನು. ನಾಕನು ಶರೀರವಿಲ್ಲದೇ ಕೇವಲ ತಲೆಯುಳ್ಳವನಾಗಿದ್ದನು. ಸದ್ರಮನಿಗೆ ಒಂದೇ ಒಂದು ಕೈಮಾತ್ರವೂ, ವಿಧಮನಿಗೆ ಒಂದು ಪಾದಮಾತ್ರವೇ ಇದ್ದುವು.

೧೨. ಅವರಲ್ಲಿ ಸದ್ರಮನಿಗೆ ತಮೋಗುಣಗಳಿಂದ ದುಷ್ಟಳಾದ ಪೂತನಾ ನಾಮಕಳಾದ ಪತ್ನಿಯೂ, ವಿಧಮನಿಗೆ ರೇವತಿಯೆಂಬ ಭಾರ್ಯಳೂ ಇದ್ದರು. ಅವರಿಬ್ಬರಿಗೆ ಸಹಸ್ರಾರು ಮಕ್ಕಳು ಜನಿಸಿ ಲೋಕಕಂಟಕರಾಗಿದ್ದರು.

**ನಾಕಸ್ಯ ಶಕುನಿಃ ಪತ್ನೀ ವಿಘ್ನಸ್ಯ ಚ ಅಯೋಮುಖೀ ।**
**ರಾಕ್ಷಸಾಸ್ತು ಮಹಾಶೀರ್ಷಾಃ ಸಂಧ್ಯಾದ್ವಯವಿಚಾರಿಣಃ ॥ ೧೩ ॥**

**ರೇವತೀಪೂತನಾಪುತ್ರಾ ನೈಋತಾ ನಾಮತಃ ಸ್ಮೃತಾಃ ।**
**ಗ್ರಹಾಸ್ತೇ ರಾಕ್ಷಸಾಃ ಸರ್ವೇ ಬಾಲಾನಾಂ ತು ವಿಶೇಷತಃ ॥**
**ಸ್ಕಂಧಸ್ತೇಷಾಮಧಿಪತಿರ್ಬ್ರಹ್ಮಣೋನುಮತೇ ಪ್ರಭುಃ ॥ ೧೪ ॥**

**ಬೃಹಸ್ಪತೇರ್ಯಾ ಭಗಿನೀ ವರಸ್ತ್ರೀ ಬ್ರಹ್ಮಚಾರಿಣೀ ।**
**ಯೋಗಸಿದ್ಧಾ ಜಗತ್ ಕೃತ್ಸ್ನಮಸಕ್ತಾ ಚರತೇ ಸದಾ ॥ ೧೫ ॥**

**ಪ್ರಭಾಸಸ್ಯ ತು ಸಾ ಭಾರ್ಯಾ ವಸೂನಾಮಷ್ಟಮಸ್ಯ ತು ।**
**ವಿಶ್ವಕರ್ಮಾ ಸುತಸ್ತಸ್ಯಾ ಜಾತಃ ಶಿಲ್ಪಿಪ್ರಜಾಪತಿಃ ॥ ೧೬ ॥**

---

೧೩. ನಾಕನಿಗೆ ಶಕುನಿಯೆಂಬ ಪತ್ನಿಯೂ ವಿಘ್ನನಿಗೆ ಅಯೋಮುಖಿಯೆಂಬ ಭಾರ್ಯೆಯೂ, ಅವರಿಗೆ ಉಭಯ ಸಂಧ್ಯಾಕಾಲಗಳಲ್ಲಿಯೂ ಸಂಚಾರಮಾಡುವ ಮಹಾಕ್ರೂರರೂ, ಸ್ಥೂಲಶಿರಸ್ಕರೂ ಆದ ಅನೇಕ ರಾಕ್ಷಸ ಕುಮಾರರು ಹುಟ್ಟಿದರು.

೧೪. ರೇವತಿ ಮತ್ತು ಪೂತನೆಯರ ಪುತ್ರರು ನೈಋತ ನಾಮದಿಂದ ಪ್ರಸಿದ್ಧರಾಗಿದ್ದರು. ಅವರೆಲ್ಲರೂ ಬಾಲಕರನ್ನು ವಿಶೇಷವಾಗಿ ಹಿಂಸಿಸುವ ಗ್ರಹರೂಪರಾಗಿಯೂ, ರಾಕ್ಷಸರಾಗಿಯೂ ಇದ್ದರು. ಇವರೆಲ್ಲರಿಗೂ ಸ್ಕಂಧನು ಪ್ರಭುವಾದ ಬ್ರಹ್ಮದೇವನ ಆಜ್ಞಾನುಸಾರ ಪ್ರಭುವಾದನು. ಅಂದರೆ ಯಜಮಾನನಾಗಿ ನಿಯಾಮಕನಾಗಿದ್ದನು.

೧೫. ಬೃಹಸ್ಪತಿಗಳ ಭಗಿನಿಯೂ, ಸುಂದರಿಯೂ, ಬ್ರಹ್ಮಚಾರಿಣಿಯೂ, ಯೋಗಸಿದ್ಧಿಯುಳ್ಳವಳೂ ಆದ ಸಾಧ್ವೀಮಣಿಯು ಕೇವಲ ಪ್ರೀತಿಯಿಂದ ಲೋಕಕಲ್ಯಾಣಕ್ಕಾಗಿ ಜಗತ್ತಿನಲ್ಲಿ ಸಂಚರಿಸುತ್ತಿದ್ದಳು.

೧೬. ವಸುಗಳಲ್ಲಿ ಎಂಟನೆಯವನೂ, ಪ್ರಭಾಸನಾಮಕನೂ ಆದ ಮಹಾಪುರುಷನಿಗೆ ತನ್ನ ನಾರೀಮಣಿಯಲ್ಲಿ ಶಿಲ್ಪವಿದ್ಯೆಗಳಿಗೆ ನಿಯಾಮಕನೂ, ದೇವತೆಗಳ ಬಡಿಗೆಯೂ ಆದ ವಿಶ್ವಕರ್ಮನೆಂಬ ಸುತನು ಜನಿಸಿದನು.

ತ್ವಷ್ಟಾ ವಿರಾಜೋ ರೂಪಾಣಾಂ ಧರ್ಮಪೌತ್ರ ಉದಾರಧೀಃ ।
ಕರ್ತಾ ಶಿಲ್ಪಸಹಸ್ರಾಣಾಂ ತ್ರಿದಶಾನಾಂ ಚ ವಾಸ್ತುಕೃತ್ ॥ ೧೭ ॥

ಯಃ ಸರ್ವೇಷಾಂ ವಿಮಾನಾನಿ ದೇವತಾನಾಂ ಚಕಾರ ಹ ।
ಮಾನುಷಾಶ್ಚೋಪಜೀವಂತಿ ಯಸ್ಯ ಶಿಲ್ಪಂ ಮಹಾತ್ಮನಃ ॥ ೧೮ ॥

ಪ್ರಹ್ಲಾದೀ ವಿಶ್ರುತಾ ತಸ್ಯ ತ್ವಷ್ಟುಃ ಪತ್ನೀ ವಿರೋಚನಾ ।
ವಿರೋಚನಸ್ಯ ಭಗಿನೀ ಮಾತಾ ತ್ರಿಶಿರಸಸ್ತು ಸಾ ॥ ೧೯ ॥

ದೇವಾಚಾರ್ಯಸ್ಯ ಮಹತೋ ವಿಶ್ವಕರ್ಮಸ್ಯ ಧೀಮತಃ ।
ವಿಶ್ವಕರ್ಮಾತ್ಮಜಶ್ಚೈವ ವಿಶ್ವಕರ್ಮಮಯಃ ಸ್ಮೃತಃ ॥ ೨೦ ॥

ಸುರೇಣುರಿತಿ ವಿಖ್ಯಾತಾ ಸ್ವಸಾ ತಸ್ಯ ಯವೀಯಸೀ ।
ತ್ವಾಷ್ಟ್ರೀ ಸಾ ಸವಿತುರ್ಭಾರ್ಯಾ ಪುನಃ ಸಂಜ್ಞೇತಿ ವಿಶ್ರುತಾ ॥ ೨೧ ॥

---

೧೭. ಆ ವಿಶ್ವಕರ್ಮನು ಅತಿಸುಂದರನೂ, ಧರ್ಮಪಾತ್ರನೂ, ಉದಾರ ಬುದ್ಧಿಯುಳ್ಳವನೂ, ವಿಶಾಲಹೃದಯನೂ, ಸಹಸ್ರಾರು ಶಿಲ್ಪಕಾರ್ಯಗಳಲ್ಲಿ ಕುಶಲನೂ, ದೇವಗೃಹನಿರ್ಮಾಪಕನೂ ಆಗಿದ್ದನು.

೧೮. ಮಹಾತ್ಮನಾದ ವಿಶ್ವಕರ್ಮನು ಸಮಸ್ತರಾದ ದೇವತೆಗಳ ವಿಮಾನ ಗಳನ್ನೂ, ಗೃಹಗಳನ್ನೂ ಮಾಡತಕ್ಕವನಾಗಿದ್ದನು. ಆ ಮಹಾನುಭಾವನು ಮಾಡಿರುವ ಶಿಲ್ಪವಿಶೇಷಗಳಿಂದಲೇ ಈಗಲೂ ಲೋಕದಲ್ಲಿ ಜನರು ಜೀವಿಸುತ್ತಿರುವರು.

೧೯. ಆ ಶಿಲ್ಪಿವರ್ಯನಾದ ವಿಶ್ವಕರ್ಮನ ಪತ್ನಿಯು ಸರ್ವದಾ ಆಹ್ಲಾದ ಜನಕಳೂ, ವಿರೋಚನಾಮಕಳೂ, ವಿರೋಚನನ ತಂಗಿಯೂ, ತ್ರಿಶಿರಸನ ತಾಯಿಯೂ ಆಗಿದ್ದಳು.

೨೦. ದೇವಾಚಾರ್ಯನೂ, ಮಹಾತ್ಮನೂ, ಜ್ಞಾನಿಯೂ ಆದ ವಿಶ್ವಕರ್ಮನ ಸುತನೂ ಕೂಡ ವಿಶ್ವಕರ್ಮಮಯನೆಂದು ಪ್ರಖ್ಯಾತನಾಗಿದ್ದನು

೨೧. ಆ ವಿಶ್ವಕರ್ಮಮಯನ ಭಗಿನಿಯು ಸುರೇಣುವೆಂದು ಪ್ರಖ್ಯಾತ ಳಾಗಿಯೂ, ಕುಶಲವಿದ್ಯೆಯಲ್ಲಿ ಸಮರ್ಥಳಾಗಿಯೂ, ಸೂರ್ಯನ ಪತ್ನಿಯಾಗಿಯೂ, ಸಂಜ್ಞಾನಾಮಕಳಾಗಿಯೂ, ಪ್ರಸಿದ್ಧಳಾಗಿಯೂ ಇರುವಳು.

**ಅಸೂತ ತಪಸಾ ಸಾ ತು ಮನುಂ ಜ್ಯೇಷ್ಠಂ ವಿವಸ್ವತಃ ।**
**ಯಮೌ ಪುನರಸೂತಾಸೌ ಯಮುಂ ಚ ಯಮುನಾಂ ಚ ಹ ॥ ೨೨ ॥**

**ಸಾ ತು ಗತ್ವಾ ಕುರೂನ್ ದೇವೀ ವಡವಾರೂಪಧಾರಿಣೀ ।**
**ಸವಿತುಶ್ಚಾಶ್ವರೂಪಸ್ಯ ನಾಸಿಕಾಭ್ಯಾಂ ತು ತೌ ಸ್ಮೃತೌ ॥ ೨೩ ॥**

**ಅಸೂತಾ ಸಾ ಮಹಾಭಾಗಾ ತ್ವಂತರಿಕ್ಷೇಽಶ್ವಿನೌ ಕಿಲ ।**
**ನಾಸಂತ್ಯಂಚೈವ ದಸ್ರಂ ಚ ಮಾರ್ತಂಡಸ್ಯಾತ್ಮಜಾವುಭೌ ॥ ೨೪ ॥**

**॥ ಋಷಯ ಊಚುಃ ॥**

**ಕಸ್ಮಾನ್ ಮಾರ್ತಂಡ ಇತ್ಯೇಷ ವಿವಸ್ವಾನುಚ್ಯತೇ ಬುಧೈಃ ।**
**ಕಿಮರ್ಥಂ ಸಾಶ್ವರೂಪಾ ವೈ ನಾಸಿಕಾಭ್ಯಾಮಸೂಯತ ॥**
**ಏತದ್ವೇದಿತುಮಿಚ್ಛಾಮಸ್ತತ್ತ್ವಂ ವಿಬ್ರೂಹಿ ಪೃಚ್ಛತಾಂ ॥ ೨೫ ॥**

---

೨೨. ಆ ಸುರೇಣುನಾಮಕಳೂ, ಸೂರ್ಯನ ಪತ್ನಿಯೂ ಆದ ಸಂಜ್ಞಾ ದೇವಿಯು ಘೋರವಾದ ತಪಸ್ಸನ್ನು ಮಾಡಿ ಹಿರಿಯವನಾದ ವೈವಸ್ವತಮನುವನ್ನೂ ಯಮಳರಾದ ಯಮನನ್ನೂ, ಯಮುನೆಯನ್ನೂ ಪಡೆದಳು.

೨೩. ಒಂದಾನೊಂದು ಕಾಲದಲ್ಲಿ ಸೂರ್ಯನು ಅಶ್ವರೂಪವನ್ನು ಧರಿಸಿ ಕುರುದೇಶದಲ್ಲಿ ಸಂಚರಿಸಿದನು. ಆಗ ಸಂಜ್ಞಾದೇವಿಯು ವಡವಾರೂಪವನ್ನು ಧರಿಸಿ ಅಲ್ಲಿಯೇ ಸಂಚರಿಸಿದಳು. ಆಗ ಅವಳು ಮೂಗಿನ ಹೊಳ್ಳೆಗಳಿಂದ ಇಬ್ಬರು ಮಕ್ಕಳನ್ನು ಪಡೆದಳು.

೨೪. ಮಹಾನುಭಾವಳಾದ ಸಂಜ್ಞಾದೇವಿಯು ಅಂತರಿಕ್ಷದಲ್ಲಿ ಅಶ್ವಿನೀ ದೇವತೆಗಳನ್ನು ಪಡೆದಳು. ನಾಸತ್ಯದಸ್ಯರೆಂಬ ಆ ಇಬ್ಬರು ಮಕ್ಕಳೂ ಸೂರ್ಯ ದೇವನ ಕುಮಾರರೆಂದು ಲೋಕವಿಖ್ಯಾತರಾಗಿದ್ದರು.

೨೫. ಋಷಿಗಳು ಕೇಳಿದರು :—ಎಲೈ ಸೂತಪುರಾಣಿಕನೇ, ಪಂಡಿತರು ಸೂರ್ಯನನ್ನು ವಿವಸ್ವಂತನೆಂದು ಕರೆಯಲು ಕಾರಣವೇನು ? ಆತನ ಪತ್ನಿಯಾದ ಸಂಜ್ಞೆಯು ಅಶ್ವರೂಪವನ್ನು ಧರಿಸಿ, ಮೂಗಿನಿಂದ ಮಕ್ಕಳನ್ನು ಪಡೆಯಲು ಕಾರಣವೇನು ? ಇದನ್ನು ತಿಳಿಯಬೇಕೆಂದು ನಮಗೆ ಬಹಳ ಕುತೂಹಲವಿರುತ್ತದೆ. ಆದುದರಿಂದ ದಯವಿಟ್ಟು ತಾವು ತಿಳಿಸಬೇಕೆಂದು ಕೇಳಿದರು.

|| ಸೂತ ಉವಾಚ ||

ಚಿರೋತ್ಪನ್ನಮತಿರ್ಭಿನ್ನಮಂಡಂ ತ್ವಷ್ಟ್ರಾ ವಿದಾರಿತಂ |
ದೃಷ್ಟ್ವಾ ಗರ್ಭನದಾದ್ಭೀತಃ ಕಶ್ಯಪೋ ದುಃಖಿತೋಽಭವತ್ || ೨೬ ||

ಅಂಡೇ ದ್ವಿಧಾಕೃತೇ ತ್ವಂಡಂ ದೃಷ್ಟ್ವಾ ತ್ವಷ್ಟಾರಮಬ್ರವೀತ್ |
ನೈತದಂಡಂ ಭವಾನ್ನೂನಂ ಮಾರ್ತಂಡಸ್ತ್ವಂ ಭವಾನಘ || ೨೭ ||

ನ ಖಲ್ವಯಂ ಮೃತೋಽಂಡೇ ಚ ಇತಿ ಸ್ನೇಹಾತ್ ಪಿತಾಬ್ರವೀತ್ |
ತಸ್ಯ ತದ್ವಚನಂ ಶ್ರುತ್ವಾ ನಾಮಾನ್ವರ್ಥಮುದಾಹರತ್ || ೨೮ ||

ಯನ್ಮಾರ್ತಂಡೋ ಭವೇತ್ಯುಕ್ತಃ ಪಿತ್ರಾಽಂಡೇ ವೈ ದ್ವಿಧಾಕೃತೇ |
ತಸ್ಮಾದ್ವಿವಸ್ವಾನ್ಮಾರ್ತಂಡಃ ಪುರಾಣಜ್ಞೈರ್ವಿಭಾಷ್ಯತೇ || ೨೯ ||

---

೨೬. ಸೂತಮುನಿಯು ಹೇಳಿದನು :—ವಿಚಿತ್ರಬುದ್ಧಿಯುಳ್ಳ ವಿಶ್ವಕರ್ಮನು ಅಂಡವನ್ನು ಎರಡು ಭಾಗವಮಾಡಿದನು. ಆಗ ಪೂಜ್ಯನಾದ ಕಶ್ಯಪನು ಗರ್ಭವು ನಷ್ಟವಾಯಿತಲ್ಲಾ ಏನುಮಾಡಬೇಕೆಂದು ಭೀತನಾಗಿ ಖೇದದಿಂದ ಇಂತೆಂದನು.

೨೭. ಹೀಗೆ ಅಂಡವು ಎರಡು ಹೋಳಾಗಿ ಒಡೆದುಹೋಗಲು, ಅದನ್ನು ನೋಡಿದ ಕಶ್ಯಪನು ಸೂರ್ಯನನ್ನು ಕುರಿತು ಇಂತೆಂದನು. ಇದು ಹೀಗೆ ಆದದ್ದು ಉಚಿತವಲ್ಲ. ನೀನು ನಿರ್ದೋಷಿಯಾಗಿರುತ್ತೀಯೆ, ನೀನು ಮಾರ್ತಂಡನಾಗು ಎಂದು ವರವನ್ನು ಕೊಟ್ಟನು.

೨೮. ಈ ಶಿಶುವು ಈ ಅಂಡದಲ್ಲಿ ಮೃತಿಯನ್ನು ಹೊಂದಬಾರದೆಂದು ತಂದೆಯು ಪ್ರೀತಿಯಿಂದ ಹೇಳಿದನು. ತಂದೆಯ ಆ ಮಾತನ್ನು ಕೇಳಿದ್ದರಿಂದ ಅವನ ನಾಮವು ಅನ್ವರ್ಥಕವಾಯಿತು.

೨೯. ಹೀಗೆ ಗರ್ಭದಲ್ಲಿ ಎರಡು ಭಾಗವಾದ ಸೂರ್ಯನು ತಂದೆಯಾದ ಕಶ್ಯಪರ ಪ್ರಿಯವಚನದಿಂದ ಮಾರ್ತಂಡನಾದನು. ಆದುದರಿಂದ ಸೂರ್ಯನನ್ನು ಪುರಾಣೀಕರು ಮಾರ್ತಂಡನೆಂದು ಕರೆಯುವರು.

ತತಃ ಪ್ರಜಾಃ ಪ್ರವಕ್ಷ್ಯಾಮಿ ಮಾರ್ತಂಡಸ್ಯ ವಿವಸ್ವತಃ ।
ವಿಜಜ್ಞೇ ಸವಿತುಃ ಸಂಜ್ಞಾ ಭಾರ್ಯಾಯಾಂ ತು ತ್ರಯಂ ಪುರಾ ॥ ೩೦ ॥

ಮನುರ್ಯವೀಯಾನ್ ಸಾವರ್ಣಿಃ ಸಂಜ್ಞಾಯಾಂ ಚ ತಥಾಶ್ವಿನೌ ।
ಶನೈಶ್ಚರಶ್ಚ ಸಪ್ತೈತೇ ಮಾರ್ತಂಡಸ್ಯಾತ್ಮಜಾಃ ಸ್ಮೃತಾಃ ॥ ೩೧ ॥

ವಿವಸ್ವಾನ್ ಕಶ್ಯಪಾಜ್ಜಜ್ಞೇ ದಾಕ್ಷಾಯಣ್ಯಾಂ ಮಹಾಯಶಾಃ ।
ತಸ್ಯ ಭಾರ್ಯಾಭವತ್ತ್ವಾಷ್ಟ್ರೀ ಮಹಾದೇವೀ ವಿವಸ್ವತಃ ॥
ಸುರೇಣುರಿತಿ ವಿಖ್ಯಾತಾ ಪುನಃ ಸಂಜ್ಞೇತಿ ವಿಶ್ರುತಾ ॥ ೩೨ ॥

ಸಾ ತು ಭಾರ್ಯಾ ಭಗವತೋ ಮಾರ್ತಂಡಸ್ಯಾತಿತೇಜಸಃ ।
ನಾತುಷ್ಯದ್ಭರ್ತೃರೂಪೇಣ ರೂಪಯೌವನಶಾಲಿನೀ ॥ ೩೩ ॥

---

೩೦. ಈಗ ವಿವಸ್ವತನ ಕುಮಾರನಾದ ಮಾರ್ತಂಡನ ಸಂತಾನವನ್ನು ವರ್ಣಿಸುವೆನು ಕೇಳಿರಿ. ಸೂರ್ಯದೇವನ ಪತ್ನಿಯಾದ ಸಂಜ್ಞಾದೇವಿಗೆ ಪೂರ್ವದಲ್ಲಿ ಮೂವರು ಮಕ್ಕಳು ಹುಟ್ಟಿದರು.

೩೧. ಸೂರ್ಯದೇವನಿಗೆ ಸಂಜ್ಞಾದೇವಿಯಲ್ಲಿ ಹಿರಿಯವನಾದ ಮನು, ಸಾವರ್ಣಿ, ಅಶ್ವಿನೀದೇವತೆಗಳು, ಶನೈಶ್ಚರ ಇವರೇ, ಮೊದಲಾದ ಏಳು ಜನ ಮಕ್ಕಳು ಜನಿಸಿದರು.

೩೨. ಮಹಾಕೀರ್ತಿವಂತನಾದ ಸೂರ್ಯದೇವನು ಮಹಾನುಭಾವರಾದ ಕಶ್ಯಪರಿಂದ ದಾಕ್ಷಾಯಣೀದೇವಿಯಲ್ಲಿ ಜನಿಸಿದನು. ಅಂತಹ ಸೂರ್ಯನಿಗೆ ತ್ವಾಷ್ಟ್ರೀ, ಮಹಾದೇವೀ, ಸುರೇಣು, ಸಂಜ್ಞೆ ಎಂಬ ಅನೇಕ ನಾಮಗಳಿಂದ ಪ್ರಖ್ಯಾತಳಾದ ಹೆಂಡತಿಯು ಇದ್ದಳು.

೩೩. ಅತಿಸುಂದರಿಯೂ, ರೂಪಯೌವನಶಾಲಿಯೂ ಆದ ಸಂಜ್ಞೆಯು ಸೂರ್ಯದೇವನ ಪತ್ನಿಯಾಗಿದ್ದರೂ ಅತಿತೇಜಸ್ವಿಯಾದ ಪತಿಯ ಆ ರೂಪವನ್ನು ಮೆಚ್ಚದೇ, ಖಿನ್ನಳಾದಳು.

**ಆದಿತ್ಯಸ್ಯ ಹಿ ತದ್ರೂಪಂ ಮಾರ್ತಂಡಸ್ಯ ಹಿ ತೇಜಸಾ ।**
**ಗೋತ್ರೇಷು ಪ್ರತಿರುದ್ಧಂ ವೈ ನಾತಿಕಾಂತಮಿವಾಭವತ್ ॥ ೩೪ ॥**

**ನ ಖಲ್ವಯಂ ಮೃತೋ ಹ್ಯಂಡೇ ಇತಿ ಸ್ನೇಹಾತ್ತಮಬ್ರವೀತ್ ।**
**ಅಜ್ಞಾನಃ ಕಶ್ಯಪಃ ಸ್ನೇಹಾನ್ಮಾರ್ತಂಡ ಇತಿ ಚೋಚ್ಯತೇ ॥ ೩೫ ॥**

**ತೇಜಸ್ತ್ವಭ್ಯಧಿಕಂ ತಸ್ಯ ನಿತ್ಯಮೇವ ವಿವಸ್ವತಃ ।**
**ಯೇನಾಪಿ ತಾಪಯಾಮಾಸ ತ್ರೀನ್ ಲೋಕಾನ್ ಕಶ್ಯಪಾತ್ಮಜಃ ॥ ೩೬ ॥**

**ತ್ರೀಣ್ಯಪತ್ಯಾನಿ ಸಂಜ್ಞಾಯಾಂ ಜನಯಾಮಾಸ ವೈ ರವಿಃ ।**
**ದ್ವೌ ಸುತೌ ತು ಮಹಾವೀರ್ಯೌ ಕನ್ಯಾಂ ಕಾಲಿಂದಿಮೇವ ಚ ॥ ೩೭ ॥**

---

೩೪. ಮಾರ್ತಂಡನಾಮಕನಾದ ಸೂರ್ಯನ ಆ ರೂಪವು ಅತಿತೇಜಸ್ವಿಯಾದುದರಿಂದ ಪರ್ವತಗಳಲ್ಲಿ ಪ್ರತಿಫಲಿತವಾದ ಘೋರರೂಪದಂತೆ ರುಚಿಸಲಿಲ್ಲ.

೩೫. ಇವನು ಅಂಡದಲ್ಲಿ ಮೃತನಾಗಲಿಲ್ಲ. ಪ್ರೀತಿಯಿಂದ ತಂದೆಯಾದ ಕಶ್ಯಪನು ಅಜ್ಞಾನದಿಂದ ಹೀಗೆ ಮಾರ್ತಂಡನೆಂದು ನಾಮವನ್ನು ಕೊಟ್ಟಿರುತ್ತಾನೆಂದು ತಿಳಿಸಿದಳು.

೩೬. ಈ ಸೂರ್ಯದೇವನಿಗೆ ಪ್ರತಿ ನಿತ್ಯವೂ ಇದೇ ರೀತಿಯಾದ ಮಹಾ ಕಾಂತಿಯು ಸಿದ್ಧವಾಗಿದೆ. ಅದರಿಂದ ಕಶ್ಯಪನ ಪುತ್ರನಾದ ಸೂರ್ಯನು ಮೂರು ಲೋಕಗಳನ್ನೂ ತಾಪಗೊಳಿಸುವನು.

೩೭. ಅಂತಹ ಸೂರ್ಯನಿಗೆ ಸಂಜ್ಞಾದೇವಿಯಲ್ಲಿ ಮೂರು ಜನ ಮಕ್ಕಳು ಹುಟ್ಟಿದರು. ಮಹಾಶೂರರಾದ ಇಬ್ಬರು ಕುಮಾರರೂ, ಯಮುನೆಯೆಂಬ ಕುಮಾರಿಯೂ ಉತ್ಪನ್ನರಾದರು.

ಮನುರ್ವಿವಸ್ವತೋ ಜ್ಯೇಷ್ಠಃ ಶ್ರಾದ್ಧದೇವಃ ಪ್ರಜಾಪತಿಃ |
ತತೋ ಯಮೋ ಯಮೀ ಚೈವ ಯಮಜೌ ಸಂಬಭೂವತುಃ || ೩೮ ||

ಶಾಂತವರ್ಣಂ ತು ತದ್ರೂಪಂ ದೃಷ್ಟ್ವಾ ಸಂಜ್ಞಾ ವಿವಸ್ವತಃ |
ಅಸಹಂತೀ ಸ್ವಕಾಂ ಛಾಯಾಂ ಸವರ್ಣಾಂ ನಿರ್ಮಮೇ ಪುನಃ || ೩೯ ||

ಮಹೀಮಯೀ ತು ಸಾ ನಾರೀ ತಸ್ಯಾಶ್ಛಾಯಾಸಮುದ್ಗತಾ |
ಪ್ರಾಂಜಲಿಃ ಪ್ರಯತಾ ಭೂತ್ವಾ ಪುನಃ ಸಂಜ್ಞಾ ಮಭಾಷತ || ೪೦ ||

ವದಸ್ವ ಕಿಂ ಮಯಾ ಕಾರ್ಯಂ ಸಾ ಸಂಜ್ಞಾ ತಾಮಥಾಬ್ರವೀತ್ |
ಅಹಂ ಯಾಸ್ಯಾಮಿ ಭದ್ರಂ ತೇ ಸ್ವಮೇವ ಭವನಂ ಪಿತುಃ || ೪೧ ||

---

೩೮. ಅವರಲ್ಲಿ ವೈವಸ್ವತಮನುವು ಹಿರಿಯ ಮಗನು. ಶ್ರಾದ್ಧದೇವನಾದ ಯಮನು ಕಿರಿಯ ಸುತನು. ಅವರಲ್ಲಿ ಯಮನು, ಯಮುನೆಯೂ, ಇವರಿಬ್ಬರೂ ಅವಳಿಮಕ್ಕಳಾಗಿದ್ದರು.

೩೯. ಹೀಗಿರುವಲ್ಲಿ ಆ ಸಂಜ್ಞೆಯು ಸೂರ್ಯನ ಆ ದಿವ್ಯತೇಜಸ್ಸುಳ್ಳ ರೂಪವನ್ನು ನೋಡಿ ಸಹಿಸದೇ ತನ್ನ ಸಮಾನರೂಪವುಳ್ಳ ಛಾಯಾದೇವಿಯನ್ನು ಸ್ವಶಕ್ತಿಯಿಂದ ನಿರ್ಮಿಸಿದಳು.

೪೦. ಆ ಛಾಯಾದೇವಿಯು ಭೂಮಿಯ ಸಂಬಂಧವುಳ್ಳವಳಾಗಿದ್ದುದರಿಂದ ಅವಳಿಗೆ ನೆರಳು ಉಂಟಾಗಿತ್ತು. ತರುವಾಯ ಛಾಯೆಯು ಅಂಜಲಿಬದ್ಧಳಾಗಿ ಸಂಜ್ಞೆಗೆ ಈ ರೀತಿಯಲ್ಲಿ ಹೇಳಿದಳು.

೪೧. ಛಾಯಾದೇವಿಯು ಸಂಜ್ಞೆಯನ್ನು ಕುರಿತು ನನ್ನಿಂದ ಏನಾಗಬೇಕು ತಿಳಿಸಿರೆಂದು ಪ್ರಾರ್ಥಿಸಿದಳು. ನಾನು ನನ್ನ ತಂದೆಯ ಮನೆಗೆ ಹೋಗುತ್ತೇನೆ. ನೀನು ಇಲ್ಲಿರು, ನಿನಗೆ ಮಂಗಳವಾಗುವುದೆಂದಳು.

ತ್ವಯೇಹ ಭವನೇ ಮಹ್ಯಂ ವಸ್ತವ್ಯಂ ನಿರ್ವಿಶಂಕಯಾ ।
ಇಮೌ ಚ ಬಾಲಕೌ ಮಹ್ಯಂ ಕನ್ಯಾ ಚ ವರವರ್ಣಿನೀ ॥ ೪೨ ॥

ಭರ್ತ್ರೇ ನ ವೈ ನೈವಮಾಖ್ಯೇಯಮಿದಂ ಭಗವತೇ ತ್ವಯಾ ।
ಏವಮುಕ್ತ್ವಾಬ್ರವೀತ್ಸಂಜ್ಞಾಂ ಸಂಜ್ಞಾಯಾಃ ಪಾರ್ಥಿವೀ ತು ಸಾ ॥ ೪೩ ॥

ಆಕಾಶಗ್ರಹಣಾದ್ದೇವಿ ಆಶಯಂ ನೈವ ಕರ್ಹಿಚಿತ್ ।
ಆಖ್ಯಾಸ್ಯಾಮಿ ಮತಂ ತುಭ್ಯಂ ಗಚ್ಛ ದೇವಿ ಸ್ವಮಾಲಯಂ ॥ ೪೪ ॥

ಸಮಾಧಾಯ ಚ ತಾಂ ಸಂಜ್ಞಾ ತಥೇತ್ಯುಕ್ತ್ವಾ ತಯಾ ಚ ಸಾ ।
ತ್ವಷ್ಟುಃ ಸ್ವಮಿಾಪಮಗಮದ್ವ್ರೀಡಿತೇವ ತಪಸ್ವಿನೀ ॥ ೪೫ ॥

ಪಿತಾ ತಾಮಾಗತಾಂ ದೃಷ್ಟ್ವಾ ಕ್ರುದ್ಧಃ ಸಂಜ್ಞಾಮಥಾಬ್ರವೀತ್ ।
ಭರ್ತುಃ ಸಮಿಾಪಂಗಚ್ಛ ತ್ವಂ ಮಾಂ ಜುಗುಪ್ಸ ದಿವಾಕರಂ ॥ ೪೬ ॥

---

೪೨–೪೪. ಎಲೌ ಛಾಯೆಯೇ, ನೀನು ಈಗ ಈ ನನ್ನ ಮನೆಯಲ್ಲಿ ನನ್ನಂತೆ ನಿರಾತಂಕವಾಗಿ ವಾಸಿಸುವಳಾಗು. ಇಬ್ಬರು ಮಕ್ಕಳನ್ನು ನಿನ್ನ ಸ್ವಂತ ಮಕ್ಕಳಂತೆ ಸಾಕಬೇಕು. ಈ ವಿಷಯಗಳು ಯಾರಿಗೂ ತಿಳಿಯುವುದಿಲ್ಲ. ನೀನು ಪತಿಯಾದ ಸೂರ್ಯದೇವನಿಗೆ ಹೇಳಬೇಡವೆಂದು ಹೇಳಿ ಹೊರಡಲು ಸಿದ್ಧಳಾದಳು. ಆಗ ಛಾಯೆಯು ಎಲೌ ಸಂಜ್ಞಾದೇವಿಯೇ, ಪ್ರಮಾಣವಾಗಿಯೂ ನಿನ್ನ ಅಭಿಪ್ರಾಯವನ್ನು ಯಾರಿಗೂ ಖಂಡಿತವಾಗಿಯೂ ತಿಳಿಸುವುದಿಲ್ಲ. ನೀನು ನಿನ್ನ ತಂದೆಯ ಮನೆಗೆ ಸುಖವಾಗಿ ಹೋಗು ಎಂದು ಹೇಳಿದಳು.

೪೫. ಅನಂತರ ಸಂಜ್ಞಾದೇವಿಯು ಛಾಯೆಯನ್ನು ಸಮಾಧಾನಮಾಡಿ ಅವಳಿಂದ ಅನುಮತಿಯನ್ನು ಪಡೆದು ತನ್ನ ತಂದೆಯ ಮನೆಗೆ ಬಂದು ಲಜ್ಜಿತಳೂ, ಖಿನ್ನಳೂ ಆದಳು.

೪೬. ತರುವಾಯ ತಂದೆಯಾದ ಮಯನು ಏಕಾಕಿಯಾಗಿ ಬಂದ ಕುಮಾರಿಯನ್ನು ನೋಡಿ ಬಹಳವಾಗಿ ಕೋಪಗೊಂಡು ಅವಳನ್ನು ಕುರಿತು, ಎಲೌ ಕುಮಾರಿ, ನೀನು ಪತಿಯ ಆಜ್ಞೆಯನ್ನು ಪಡೆಯದೇ ಇಲ್ಲಿಗೆ ಬಂದಿರುವುದು ಸರಿಯಲ್ಲ. ಪತಿಯ ಬಳಿಗೆ ಹೋಗು. ಸೂರ್ಯದೇವನನ್ನು ಜಿಗುಪ್ಸೆಯಿಂದ ತಿರಸ್ಕರಿಸುವುದು ಸರಿಯಲ್ಲವೆಂದು ಹೇಳಿದನು.

ಸೈವಮುಕ್ತಾ ತದಾ ಪಿತ್ರಾ ನಿಯುಕ್ತಾ ಚ ಪುನಃ ಪುನಃ ।
ವರ್ಷಾಣಾಂ ತು ಸಹಸ್ರಂ ವೈ ವಸತಿ ಸ್ಮ ಪಿತುರ್ಗೃಹೇ || ೪೭ ||

ಭರ್ತುಃ ಸಮೀಪಂ ಗಚ್ಛ ತ್ವಂ ನಿಯುಕ್ತಾ ಚ ಪುನಃ ಪುನಃ ।
ಅಗಮದ್ವಡವಾ ಭೂತ್ವಾಚ್ಛಾದ್ಯ ರೂಪಮನಿಂದಿತ ॥
ಉತ್ತರಾನ್ ಸಾ ಕುರೂನ್ ಗತ್ವಾ ತೃಣಾನ್ಯಥ ಚಚಾರ ಸಾ || ೪೮ ||

ದ್ವಿತೀಯಾಯಾಂ ತು ಸಂಜ್ಞಾಯಾಂ ಸಂಜ್ಞೇಯಮಿತಿಚಿಂತ್ಯ ತಾಂ ।
ಆದಿತ್ಯೋ ಜನಯಾಮಾಸ ಪುತ್ರಾವಾದಿತ್ಯವರ್ಚಸೌ || ೪೯ ||

ಪೂರ್ವಜಸ್ಯ ಮನೋಸ್ತುಲ್ಯೌ ಸಾದೃಶ್ಯೇನ ತು ತೌ ಪ್ರಭೂ ।
ಶ್ರುತಶ್ರವಂ ತು ಧರ್ಮಜ್ಞಂ ಶ್ರುತಕರ್ಮಾಣಮೇವ ಚ || ೫೦ ||

---

೪೭. ತಂದೆಯು ಹೀಗೆ ಹೇಳಿ ಪುನಃ ಪುನಃ ಪತಿಯ ಮನೆಗೆ ಹೋಗುವಂತೆ ನಿರ್ಬಂಧಪಡಿಸಿದರೂ ಕೂಡ ಅವಳು ಹಟ ಹಿಡಿದು ಹೋಗದೇ ತಂದೆಯ ಮನೆಯಲ್ಲಿಯೇ ಒಂದು ಸಹಸ್ರವರ್ಷಗಳು ವಾಸಿಸಿದಳು.

೪೮. ಕೊನೆಗೆ ತಂದೆಯು ಪತಿಯ ಬಳಿಗೆ ಹೋಗುವಂತೆ ಬಹಳವಾಗಿ ನಿರ್ಬಂಧಪಡಿಸಲು ಆಕೆಯು ಮನಸ್ಸಿಲ್ಲದೇ ತನ್ನ ರೂಪವನ್ನು ಮರೆಮಾಚಿಕೊಂಡು (ಹೇಸರುಕತ್ತೆಯ) ವಡವಾ ರೂಪವನ್ನು ಹೊಂದಿ ಉತ್ತರ ಕುರುದೇಶಕ್ಕೆ ಹೋಗಿ ತೃಣವನ್ನು ತಿನ್ನುತ್ತಾ ಸಂಚರಿಸಿದಳು.

೪೯–೫೦. ಅತ್ತಲಾಗೆ ಸೂರ್ಯದೇವನು ಮನೆಗೆ ಬಂದು ಛಾಯೆಯನ್ನು ನೋಡಿ ಸಂಜ್ಞೆಯೆಂದೇ ಭಾವಿಸಿ, ಅವಳೊಡನೇ ಸುಖವಾಗಿದ್ದನು. ತರುವಾಯ ಸೂರ್ಯನಿಗೆ ಆ ಛಾಯಾದೇವಿಯಲ್ಲಿ ಮಹಾ ತೇಜಸ್ವಿಗಳೂ ಹಿರಿಯವನಾದ ವೈವಸ್ವತ ಮನುವಿಗೆ ಸಮಾನ ರೂಪವಂತರೂ, ಧರ್ಮಜ್ಞರೂ ಆದ ಶ್ರುತವಂತ ಶ್ರುತಕರ್ಮರೆಂಬ ಇಬ್ಬರು ಕುಮಾರರು ಉತ್ಪನ್ನರಾದರು.

ಶ್ರುತಶ್ರವಾ ಮನುಃ ಸೋಽಽಪಿ ಸಾವರ್ಣಿರ್ವೈ ಭವಿಷ್ಯತಿ।
ಶ್ರುತಕರ್ಮಾ ತು ವಿಜ್ಞೇಯೋ ಗ್ರಹೋ ವೈ ಯಃ ಶನೈಶ್ಚರಃ ॥ ೫೧ ॥

ಮನುರೇವಾಭವತ್ಸೋಽಪಿ ವೈ ಸಾವರ್ಣ್ಯ ಇತಿ ಬುಧ್ಯತೇ।
ಸಂಜ್ಞಾ ತು ಪಾರ್ಥಿವೀ ಸಾ ವೈ ಸ್ವಸ್ಯ ಪುತ್ರಸ್ಯ ವೈ ತದಾ ॥ ೫೨ ॥

ಚಕಾರಾಭ್ಯಧಿಕಂ ಸ್ನೇಹಂ ನ ತಥಾ ಪೂರ್ವಜೇಷು ವೈ।
ಮನುಸ್ತಚ್ಚಾಕ್ಷಮತ್ಸರ್ವಂ ಯಮುಸ್ತದ್ವೈ ನ ಚಾಕ್ಷಮತ್ ॥ ೫೩ ॥

ಬಹುಶೋ ಯಸ್ಯಮಾನಸ್ತು ಸಾಪಂತ್ಯಾದತಿದುಃಖಿತಃ।
ತಾಂ ವೈ ರೋಷಾಚ್ಚ ಬಾಲ್ಯಾಚ್ಚ ಭಾವಿನೋಽರ್ಥಸ್ಯ ವೈ ಬಲಾತ್ ॥ ೫೪ ॥

---

೫೧. ತರುವಾಯ ಶ್ರುತಶ್ರವನೆಂಬುವನು ಸಾವರ್ಣಿಮನುವಾದನು. ಶ್ರುತಕರ್ಮನಾದರೋ ಶನೈಶ್ಚರನೆಂಬ ಗ್ರಹರೂಪಿಯಾದನು.

೫೨. ಅದೇ ಶ್ರುತಶ್ರವನೇ ಕ್ರಮವಾಗಿ ಸಾವರ್ಣ್ಯಮನುವೆಂಬುದಾಗಿ ಪ್ರಖ್ಯಾತನಾದನು. ಈ ರೀತಿಯಾಗಿ ಆ ಪೃಥಿವೀ ಸಂಬಂಧಿಯಾದ ಸಂಜ್ಞಾದೇವಿಯು ತಮ್ಮ ಮಕ್ಕಳೊಡನೆ ಸುಖವಾಗಿದ್ದಳು.

೫೩. ಸೂರ್ಯನು ಪೂರ್ವಜರಂತೆ ಆ ಮಕ್ಕಳಲ್ಲಿಯೂ ಅತ್ಯಂತವಾದ ಸ್ನೇಹವನ್ನು ಮಾಡುತ್ತಿದ್ದನು. ಇದು ವೈವಸ್ವತಮನುವಿಗೂ ಯಮದೇವನಿಗೂ ಸಮ್ಮತವಾಗಿರಲಿಲ್ಲ.

೫೪. ಹೀಗೆ ಅವರು ಸುಖವಾಗಿರಲಾಗಿ ಯಮನು ಸಪತ್ನೀಭಾವದಿಂದ ಖಿನ್ನನಾಗಿ ರೋಷದಿಂದಲೂ, ಬಾಲ್ಯದಿಂದಲೂ, ಮುಂದಿನ ಕಾರ್ಯಾನುಗುಣವಾಗಿಯೂ, ತಾಯಿಯ ಮೇಲೆ ಸಿಟ್ಟಾದನು.

ಯದಾ ಸಂತರ್ಜಯಾಮಾಸ ಸಂಜ್ಞಾಂಚೈವ ಸ್ವತೋ ಯಮಃ |
ಸಾ ಶಶಾಪ ತತಃ ಕ್ರೋಧಾತ್ ಸವರ್ಣಾ ಜನನೀ ಯಮಂ || ೫೫ ||

ಯದಾ ತರ್ಜಯಸೇ ಯಸ್ಮಾತ್ ಪಿತೃಭಾರ್ಯಾಂ ಯಶಸ್ವಿನೀಂ |
ತಸ್ಮಾತ್ತವೈಷ ಚರಣಃ ಪತಿಷ್ಯತಿ ನ ಸಂಶಯಃ || ೫೬ ||

ಯಮಸ್ತು ತೇನ ಶಾಪೇನ ಭೃಶಂ ಪೀಡಿತಮಾನಸಃ |
ಮನುನಾ ಸಹ ಧರ್ಮಾತ್ಮಾ ಪಿತುಃ ಸರ್ವಂ ನ್ಯವೇದಯತ್ || ೫೭ ||

ಭೃಶಂ ಶಾಪಭಯೋದ್ವಿಗ್ನಃ ಸಂಜ್ಞಾವಾಕ್ಯೈರ್ವಿನಿರ್ಜಿತಃ |
ಬಾಲ್ಯಾದ್ವಾ ಯದಿ ವಾ ಮೋಹಾನ್ಮಾಂಭವಾಂಸ್ತ್ರಾತುಮರ್ಹತಿ || ೫೮ ||

ಶಪ್ತೋಽಹಮಸ್ಮಿಂಲ್ಲೋಕೇಶ ಜನನ್ಯಾ ತಪತಾಂ ವರ |
ತವ ಪ್ರಸಾದೋ ಸಸ್ತ್ರಾ ತು ಹ್ಯೇತಸ್ಮಾನ್ಮಹತೋ ಭಯಾತ್ || ೫೯ ||

---

೫೫. ಆಗ ಯಮದೇವನು ತನ್ನ ಚಿಕ್ಕಮ್ಮನಾದ ಸಂಜ್ಞೆಯನ್ನು ಕಾಲಿನಿಂದ ಒದೆಯುವುದಕ್ಕೆ ಪ್ರಯತ್ನಿಸಿದನು. ಆಗ ಸಾವರ್ಣಿಯ ತಾಯಿಯು ಕೋಪಗೊಂಡು ಯಮನಿಗೆ ಶಾಪವನ್ನು ಕೊಟ್ಟಳು.

೫೬. ಎಲೈ ಯಮನೇ, ನೀನು ತಂದೆಯ ಪತ್ನಿಯು ಅಂದರೆ ನಿನಗೆ ಚಿಕ್ಕತಾಯಿಯಾದ ನನ್ನನ್ನು ಕಾಲಿನಿಂದ ದೂಷಣೆಮಾಡಿದ್ದರಿಂದ ಈ ನಿನ್ನ ಪಾದವು ಮುರಿದು ಹೋಗಲಿ ನೀನು ಕುಂಟನಾಗು ಈ ವಿಷಯದಲ್ಲಿ ಸಂದೇಹ ಬೇಡವೆಂದಳು.

೫೭. ಆ ಶಾಪದಿಂದ ಪೀಡಿತನಾದ ಧರ್ಮರೂಪಿಯಾದ ಯಮನು ಅತ್ಯಂತ ಖಿನ್ನನಾಗಿ ಮನುವಿನ ಸಂಗಡ ಆಲೋಚಿಸಿ ತಂದೆಯ ಬಳಿಗೆ ಹೋಗಿ ಸರ್ವವನ್ನೂ ತಿಳಿಸಿದನು.

೫೮. ಧರ್ಮಾತ್ಮನಾದ ಯಮನು ಆ ಸಂಜ್ಞೆಯ ಶಾಪದಿಂದ ಬಹಳ ಖಿನ್ನಮನಸ್ಕನಾಗಿ ಅಜ್ಞಾನದಿಂದಲೂ, ಬಾಲ್ಯದಿಂದಲೂ, ಮಾಡಿದ ಅಪರಾಧವನ್ನು ಕ್ಷಮಿಸಬೇಕೆಂದೂ ಶಾಪದಿಂದ ಬಿಡಿಸಬೇಕೆಂದೂ ತಂದೆಯನ್ನು ಬೇಡಿದನು.

೫೯. ತಾಪಕರಲ್ಲಿ ಉತ್ತಮನೂ, ಲೋಕೇಶನೂ ಆದ ಸೂರ್ಯದೇವನೇ ನಾನು ಮಾಡಿದ ಮಹಾಪರಾಧದಿಂದ ತಾಯಿಯಿಂದ ಶಪ್ತನಾಗಿರುವೆನು. ತಂದೆಯಾದ ತಾವು ಈಗ ಪ್ರಾಪ್ತವಾದ ಮಹಾಭಯದಿಂದ ನನ್ನನ್ನು ರಕ್ಷಿಸಲು ಪರವ ಪ್ರಸಾದವನ್ನು ಮಾಡಬೇಕೆಂದು ಪ್ರಾರ್ಥಿಸಿಕೊಂಡನು.

ವಿವಸ್ವಾನೇವಮುಕ್ತಸ್ತು ಯಮಂ ಪ್ರೋವಾಚ ವೈ ಪ್ರಭುಃ ।
ಅಸಂಶಯಂ ಪುತ್ರ ಮಹದ್ಭವಿಷ್ಯಂ ತತ್ರ ಕಾರಣಂ || ೬೦ ||

ಯೇನ ತ್ವಾಮಾವಿಶತ್ಕ್ರೋಧೋ ಧರ್ಮಜ್ಞಂ ಸತ್ಯವಾದಿನಂ ।
ನ ಶಕ್ಯಮೇತನ್ಮಿಥ್ಯಾ ತು ಕರ್ತುಂ ಮಾತುರ್ವಚಸ್ತವ || ೬೧ ||

ಕ್ರಿಮಯೋ ಮಾಂಸಮಾದಾಯ ಯಾಸ್ಯಂತಿ ತು ಮಹೀಂ ತವ ।
ತತಃ ಪಾದಂ ಮಹಾಪ್ರಾಜ್ಞ ಪುನಃ ಸಂಪ್ರಾಪ್ಸ್ಯಸೇ ಸುಖಂ || ೬೨ ||

ಕೃತಮೇವಂ ವಚಃ ಸತ್ಯಂ ಮಾತುಸ್ತವ ಭವಿಷ್ಯತಿ ।
ಶಾಪಸ್ಯ ಪರಿಹಾರೇಣ ತ್ವಂ ಚ ತ್ರಾತಾ ಭವಿಷ್ಯಸಿ || ೬೩ ||

---

೬೦. ಹೀಗೆ ಯಮನು ಹೇಳಲಾಗಿ, ಪ್ರಭುವಾದ ಸೂರ್ಯನು, ಎಲೈ ಪುತ್ರನೇ ನೀನು ಹೇಳುವುದು ನಿಜ ಆ ಶಾಪವು ಮಹತ್ತರವಾಗಿದೆ. ಇದು ಮುಂದೆ ನಡೆಯಬೇಕಾದ ಕಾರ್ಯಾನುಗುಣವಾಗಿದೆಯೆಂದು ಹೇಳಿದನು.

೬೧. ಧರ್ಮಜನೂ ಸತ್ಯವಾದಿಯೂ ಆದ ನಿನಗೆ ಈ ರೀತಿಯಾದ ಕೋಪವು ಸಂಭವಿಸಿದ್ದು ಮುಂದೆ ನಡೆಯಬೇಕಾದ ಕಾರ್ಯಾನುಗುಣವಾಗಿದೆ. ಆದುದರಿಂದ ನಿನ್ನ ತಾಯಿಯ ಮಾತನ್ನು ಸುಳ್ಳನ್ನಾಗಿ ಮಾಡಲು ಸುತರಾಂ ಸಾಧ್ಯವೇ ಇಲ್ಲವೆಂದು, ಸೂರ್ಯನು ಯಮದೇವನಿಗೆ ಹೇಳಿದನು.

೬೨. ಎಲೈ ಯಮನೇ, ಯಾವಾಗ ಕ್ರಿಮಿಗಳು ನಿನ್ನ ಮಾಂಸವನ್ನು ಸ್ವೀಕರಿಸಿ ಭೂಮಿಗೆ ಹೋಗುತ್ತವೆಯೋ ಆಗ ನೀನು ಪುನಃ ನಿನ್ನ ಪಾದವನ್ನು ಹೊಂದಿ ಸುಖಿಯಾಗುವಿ ಎಂದನು.

೬೩. ಹೀಗೆ ಆದರೆ ನಿನ್ನ ತಾಯಿಯ ಮಾತು ಸತ್ಯವಾಗುವುದು. ಅದರಿಂದ ಶಾಪವು ಪರಿಹಾರವಾಗುವುದು. ನೀನೂ ಸಹ ಅನಂತರ ಸುರಕ್ಷಿತನಾಗುವಿಯೆಂದು ಹೇಳಿದನು.

ಆದಿತ್ಯಸ್ತ್ವಬ್ರವೀತ್ ಸಂಜ್ಞಾಂ ಕಿಮರ್ಥಂ ತನಯೇಷು ವೈ ।
ತುಲ್ಯೇಷ್ವಪ್ಯಧಿಕಃ ಸ್ನೇಹ ಏಕಸ್ಮಿನ್ ಕ್ರಿಯತೇ ತ್ವಯಾ || ೬೪ ||

ಸಾ ತತ್ಪರಿಹರಂತೀ ವೈ ನಾಚಚಕ್ಷೇ ವಿವಸ್ವತಃ ।
ಆತ್ಮನಾ ಸ ಸಮಾಧಾಯ ಯೋಗಂತಥ್ಯಮುಪಶ್ಯತ || ೬೫ ||

ತಾಂ ಶಪ್ತುಕಾಮೋ ಭಗವಾನ್ ನಾಶಾಯ ಕುಪಿತಃ ಪ್ರಭುಃ ।
ಸಾ ತತ್ಸರ್ವಂ ಯಥಾತತ್ತ್ವಮಾಚಚಕ್ಷೇ ವಿವಸ್ವತಃ || ೬೬ ||

ವಿವಸ್ವಾನಥ ತಚ್ಛ್ರುತ್ವಾ ಕ್ರುದ್ಧಸ್ತ್ವಷ್ಟಾರಮಭ್ಯಯಾತ್ ।
ತ್ವಷ್ಟಾ ತು ತಂ ಯಥಾನ್ಯಾಯಮರ್ಚಯಿತ್ವಾ ವಿಭಾವಸುಂ || ೬೭ ||

---

೬೪. ಅನಂತರ ಸೂರ್ಯದೇವನು ಸಂಜ್ಞೆಯನ್ನು ನೋಡಿ, ಪ್ರೀತಿಗೆ ಸಮರಾದ ಮಕ್ಕಳಲ್ಲಿ ಒಬ್ಬನ ಮೇಲೆ ಹೀಗೆ ದ್ವೇಷಿಸಲು ಕಾರಣವೇನು ? ಮತ್ತೊಬ್ಬರಲ್ಲಿ ಹೆಚ್ಚು ಪ್ರೀತಿಯನ್ನಿಡಲು ಕಾರಣವೇನೆಂದನು ?

೬೫. ಆಗ ಅವಳು ತನ್ನ ದೋಷಗಳನ್ನು ಪರಿಹರಿಸಿಕೊಳ್ಳಲೋಸ್ಕರವಾಗಿ ಸೂರ್ಯನ ಸಂಗಡ ಏನೂ ಮಾತನ್ನಾಡದೇ ಸುಮ್ಮನಾದಳು. ತರುವಾಯ ತನ್ನಷ್ಟಕ್ಕೆ ತಾನೇ ಸಮಾಹಿತಚಿತ್ತಳಾಗಿ, ತತ್ವಜ್ಞಾನವನ್ನು ಪಡೆಯಲು ನಿಜವಾದ ಯೋಗಾಭ್ಯಾಸವನ್ನು ಮಾಡಿದಳು.

೬೬. ಆಗ ಮಹಾನುಭಾವನೂ, ಸ್ವಾಮಿಯೂ, ಆದ ಸೂರ್ಯನು, ಅವಳ ಮೇಲೆ ಕೋಪಗೊಂಡು ಶಾಪವನ್ನು ಕೊಡಲು ಸಿದ್ಧನಾದನು. ಅನಂತರ ಅವಳು ಇವೆಲ್ಲವನ್ನೂ ತಿಳಿದು ಸಮಾಧಾನವನ್ನು ಪಡಿಸಲು ಸರ್ವವನ್ನೂ ಯಥಾಸ್ಥಿತವಾಗಿ ತಿಳಿಸಿದಳು.

೬೭. ತರುವಾಯ ಸೂರ್ಯನು ಅವೆಲ್ಲವನ್ನೂ ಕೇಳಿ, ಕ್ರುದ್ಧನಾಗಿ ಮಾವನಾದ ಮಯನ ಬಳಿಗೆ ಹೋದನು. ಆಗ ಮಯನು ಮನೆಗೆ ಬಂದಂತಹ ಅಳಿಯನಾದ ಸೂರ್ಯನನ್ನು ಕ್ರಮವಾಗಿ ಪೂಜಿಸಿದನು.

**ನಿರ್ದಗ್ಧುಕಾಮಂ ರೋಷೇಣ ಸಾಂತ್ವಯಾಮಾಸ ವೈ ಶನೈಃ ।**
**ತವಾತಿತೇಜಸಾ ಯುಕ್ತಮಿದಂ ರೂಪಂ ನ ಶೋಭತೇ || ೬೮ ||**

**ಅಸಹಂತೀ ತು ತತ್ ಸಂಜ್ಞಾ ವನೇ ಚರತಿ ಶಾದ್ವಲೇ ।**
**ದಕ್ಷ್ಯತೇ ತಾಂ ಭವಾನದ್ಯ ಸ್ವಾಂ ಭಾರ್ಯಾಂ ಶುಭಚಾರಿಣೀಂ || ೬೯ ||**

**ಶ್ಲಾಘ್ಯಾಂ ಯೌವನಸಂಪನ್ನಾಂ ಯೋಗಮಾಸ್ಥಾಯ ಗೋಪತೇ ।**
**ಅನುಕೂಲಂ ಭವೇದೇವಂ ಯದಿ ಸ್ಯಾತ್ ಸಮಯೋ ಮತಃ || ೭೦ ||**

**ರೂಪಂ ವಿವರ್ತಯೇದಂತೇ ಆದ್ಯಂ ಶ್ರೇಷ್ಠಮರಿಂದಮ ।**
**ರೂಪಂ ವಿವಸ್ವತಸ್ತ್ವಾಸೀತ್ತಿರ್ಯಗೂರ್ಧ್ವಮಧಸ್ತಥಾ || ೭೧ ||**

---

೬೮. ಆಗ ಸೂರ್ಯನು ಕೋಪದಿಂದ ಅತಿತೇಜಸ್ವಿಯಾಗಿ ದಹಿಸುವಂತಿದ್ದನು. ಆಗ ಮಾವನು ಸಾಮವಾಕ್ಯಗಳಿಂದ ನಿಧಾನವಾಗಿ ಸಮಾಧಾನವನ್ನು ಹೇಳಿದನು. ಎಲೈ ಸೂರ್ಯದೇವನೇ, ನೀನು ಅತಿತೇಜಸ್ಸಿನಿಂದ ಕೂಡಿರುವುದು ಯುಕ್ತವಾಗಿ ಕಾಣುವುದಿಲ್ಲ. ಶಾಂತವಾಗಿರುವುದು ಒಳ್ಳೆಯದೆಂದನು.

೬೯. ಎಲೈ ಸೂರ್ಯನೇ, ನಾನು ನಿನ್ನ ಪತ್ನಿಯನ್ನು ಮನೆಯಲ್ಲಿ ಇರಿಸಿಕೊಳ್ಳದೆ ನಿಮ್ಮ ಮನೆಗೆ ಕಳುಹಿಸಿಕೊಟ್ಟೆನು. ಅವಳು ನಿಮ್ಮ ರೂಪವನ್ನು ಸಹನ ಮಾಡದೇ ಬಡವಾರೂಪವನ್ನು ಹೊಂದಿ ಕುರುದೇಶದಲ್ಲಿ ಸಂಚರಿಸುತ್ತಿರುವಳು. ಈಗ ನೀನು ಸಾಧ್ವೀಮಣಿಯಾದ ನಿನ್ನ ಪತ್ನಿಯನ್ನು ನೋಡಬಹುದೆಂದು ಸಮಾಧಾನ ಮಾಡಿದನು.

೭೦. ಈಗ ನೀನು ಯೋಗಮಹಿಮೆಯಿಂದ ರೂಪಾಂತರವನ್ನು ಪಡೆದು ಅನುಕೂಲಳೂ, ಯೌವನಸಂಪನ್ನಳೂ ಆದ ಭಾರ್ಯೆಯನ್ನು ಪ್ರೀತಿಸುವುದು ಯುಕ್ತವೆಂದು ಹೇಳಿದನು.

೭೧. ಎಲೈ, ಶತ್ರುಸಂಹಾರಕನಾದ ಸೂರ್ಯನೇ, ಶ್ರೇಷ್ಠವಾದ ನಿನ್ನ ರೂಪವನ್ನು ಕೊನೆಯಲ್ಲಿ ಬದಲಾಯಿಸಿಕೊಳ್ಳಬಹುದು. ಈಗ ನಿನ್ನ ರೂಪವು ಮೇಲೆ ಕೆಳಗೆ ಸುತ್ತಮುತ್ತಲೂ ಸರ್ವತ್ರ ವ್ಯಾಪ್ತವಾಗಿದೆ ಎಂದನು.

**ತೇನಾ ಸೌ ವ್ರೀಡಿತೇ ದೇವೋ ರೂಪೇಣ ತು ದಿವಸ್ಪತಿಃ ।**
**ತಸ್ಮಾತ್ತ್ವಷ್ಟಾ ಸ ಚಕ್ರಂ ತು ಬಹು ಮೇನೆ ಮಹಾತಪಾಃ ॥ ೭೨ ॥**

**ಅನುಜ್ಞಾತಸ್ತತಸ್ತ್ವಷ್ಟಾ ರೂಪನಿರ್ವರ್ತನಾಯ ತು ।**
**ತತೋಽಭ್ಯುಪಗಮಾತ್ತ್ವಷ್ಟಾ ಮಾರ್ತಂಡಸ್ಯ ವಿವಸ್ವತಃ ॥ ೭೩ ॥**

**ಭ್ರಮಿಮಾರೋಪ್ಯ ತತ್ತೇಜಃ ಶಾತಯಾಮಾಸ ತಸ್ಯ ವೈ ।**
**ತತ್ತು ನಿರ್ಭಾಸಿತಂತೇಜಸ್ತೇಜಸಾಪಹೃತೇನ ತು ॥ ೭೪ ॥**

**ಕಾಂತಾತ್ ಕಾಂತತರಂ ದ್ರಷ್ಟುಮಶುಭಂ ಶುಶುಭೇ ತತಃ ।**
**ದದರ್ಶ ಯೋಗಮಾಸ್ಥಾಯ ಸ್ವಾಂಭಾರ್ಯಾಂ ವಡವಾಂ ತಥಾ ॥ ೭೫ ॥**

---

೭೨. ಆಗ ದೇವನಾದ ಸೂರ್ಯನು ತನ್ನ ರೂಪವನ್ನು ನೋಡಿ ತಾನೇ ಲಜ್ಜಿತನಾದನು. ತರುವಾಯ ಮಹಾತಪಸ್ವಿಯಾದ ಮಯನು ತನ್ನ ಚಕ್ರವನ್ನು ಗೌರವದಿಂದ ಸ್ವೀಕರಿಸಿದನು.

೭೩. ತರುವಾಯ ಆ ರೂಪವನ್ನು ಬದಲಾಯಿಸುವಂತೆ ಪ್ರಾರ್ಥಿಸಲ್ಪಟ್ಟವನಾಗಿ ರೂಪವನ್ನು ಪರಿವರ್ತಿಸಲು ಯತ್ನಿಸಿದನು. ಅದರಂತೆ ಪರಿವರ್ತಿಸಲು ಉಪಕ್ರಮಿಸಿದನು.

೭೪. ತರುವಾಯ ಯಮನು, ಸೂರ್ಯನ ಆ ತೇಜಃಪುಂಜವನ್ನು ಚಕ್ರದ ಮೇಲೆ ಇರಿಸಿ ಗರ್ರನೆ ತಿರುಗಿಸಿ, ಶಾಂತವನ್ನಾಗಿ ಮಾಡಿದನು. ಹಾಗೆ ತಿರುಗಿಸುವುದರಿಂದ ಬೆಣ್ಣೆಯಂತೆ ಸಾರವಾದ ಭಾಗವು ಮಾತ್ರ ಉಳಿಯಿತು.

೭೫. ಚಕ್ರದಿಂದ ಸೂರ್ಯನ ತೇಜಸ್ಸನ್ನು ಮಥಿಸಿ, ಸಾರಾಂಶವನ್ನು ಮಾತ್ರ ಉಳಿಸಿದನು. ಆ ರೂಪು ಅತಿ ಮನೋಹರವಾಗಿತ್ತು. ಆಗ ಸೂರ್ಯನು ಧ್ಯಾನವನ್ನು ಮಾಡಿ ವಡವಾ ರೂಪಿಯಾದ ತನ್ನ ಪತ್ನಿಯನ್ನು ನೋಡಿದನು.

ಅದೃಶ್ಯಾಂ ಸರ್ವಭೂತಾನಾಂ ತೇಜಸಾ ನಿಯಮೇನ ಚ ।
ಅಶ್ವರೂಪೇಣ ಮಾರ್ತಂಡಸ್ತಾಂ ಮುಖೇ ಸಮಭಾವಯತ್ ॥ ೭೬ ॥

ಮೈಥುನಾಯ ವಿಚೇಷ್ಟಂತೀ ಪರಪಂಸೋಪಶಂಕಯಾ ।
ಸಾ ತನ್ನಿರಥಮುಚ್ಛುಕ್ರಂ ನಾಸಿಕಾಭ್ಯಾಂ ವಿವಸ್ವತಃ ॥ ೭೭ ॥

ದೇವೌ ತಸ್ಮಾದಜಾಯೇತಾಮಶ್ವಿನೌ ಭಿಷಜಾಂ ವರೌ ।
ನಾಸತ್ಯಶ್ಚೈವ ದಸ್ರಶ್ಚ ಸ್ಮೃತೌ ದ್ವಾವಶ್ವಿನಾವಿತಿ ॥ ೭೮ ॥

ಮಾರ್ತಂಡಸ್ಯ ಸುತಾವೇತಾವಷ್ಟಮಸ್ಯ ಪ್ರಜಾಪತೇಃ ।
ತಾಂತು ರೂಪೇಣ ಕಾಂತೇನ ದರ್ಶಯಾಮಾಸ ಭಾಸ್ಕರಃ ॥ ೭೯ ॥

---

೭೬. ಸೂರ್ಯನು ತನ್ನ ಮಹಿಮೆಯಿಂದ ಅಶ್ವರೂಪವನ್ನು ಹೊಂದಿ ನಿಯಮದಿಂದಲೂ, ಸ್ವಮಹಿಮೆಯಿಂದಲೂ, ಸರ್ವಭೂತಗಳಿಗೂ ಕಾಣದ ರೂಪವನ್ನು ಹೊಂದಿರುವ ತನ್ನ ಪತ್ನಿಯನ್ನು ನೋಡಿ, ಮುಖಸ್ಪರ್ಶದಿಂದಲೇ ಭಾವವನ್ನು ವ್ಯಕ್ತಪಡಿಸಿದನು.

೭೭. ಆಗ ಅವರಿಬ್ಬರೂ ಪರಸ್ಪರ ಸಂಬಂಧಕ್ಕಾಗಿ ಭಾವವನ್ನು ಸೂಚಿಸಿದರು. ಸಂಗಮವು ಸಂಭವಿಸಿ ಪರಪುರುಷನೆಂಬ ಶಂಕೆಯಿಂದ ಸೂರ್ಯನ ವೀರ್ಯವನ್ನು ಅವಳು ಮೂಗಿನ ಹೊಳ್ಳೆಗಳಿಂದ ತ್ಯಾಗಮಾಡಿದಳು.

೭೮. ಅವರಿಂದ ದೇವರೂಪಿಗಳಾದ ಅಶ್ವಿನೀದೇವತೆಗಳು ಜನಿಸಿದರು. ಅವರು ಭಿಷಗ್ವರ್ಯರೂ ನಾಸತ್ಯದಸ್ರರೆಂಬ ಅಶ್ವಿನೀದೇವತೆಗಳಾಗಿಯೂ ಪ್ರಖ್ಯಾತರಾದರು. ಇವರೇ ಅಶ್ವಿನೀದೇವತೆಗಳಾಗಿರುವರು.

೭೯. ಈ ಅಶ್ವಿನೀದೇವತೆಗಳಿಬ್ಬರೂ ಎಂಟನೆಯ ಪ್ರಜಾಪತಿಯಾದ ಸೂರ್ಯದೇವನ ಕುಮಾರರಾಗಿರುವರು. ಅನಂತರ ಸೂರ್ಯನು ತನ್ನ ನಿಜವಾದ ತೇಜಸ್ಸು, ಸೌಂದರ್ಯ ಇವುಗಳಿಂದ ಕೂಡಿದ ರೂಪವನ್ನು ಪ್ರಕಟಿಸಿದನು.

ಸಾ ತಂ ದೃಷ್ಟ್ವಾ ತದಾ ಭಾರ್ಯಾ ತುತೋಷ ಚ ಮುಮೋಹ ಚ ।
ಯಮುಸ್ತು ತೇನ ಶಾಪೇನ ಭೃಶಂ ಪೀಡಿತಮಾನಸಃ ॥ ೮೦ ॥

ಧರ್ಮೇಣ ರಂಜಯಾಮಾಸ ಧರ್ಮರಾಜಸ್ತತಸ್ತು ಸಃ ।
ಸೋಽಲಭತ್ ಕರ್ಮಣಾ ತೇನ ಶುಭೇನ ಪರಮದ್ಯುತಿಃ ॥ ೮೧ ॥

ಪಿತೄಣಾಮಾಧಿಪತ್ಯಂ ಚ ಲೋಕಪಾಲತ್ವಮೇವ ಚ ।
ಮನುಃ ಪ್ರಜಾಪತಿಶ್ಚೈವ ಸಾವರ್ಣಿಃ ಸ ಮಹಾಯಶಾಃ ॥ ೮೨ ॥

ಭಾವ್ಯಸೌ ನಾಗತೇ ತಸ್ಮಿನ್ ಮನುಃ ಸಾವರ್ಣಿಕೇಽಂತರೇ ।
ಮೇರುಪೃಷ್ಠೇ ಸುರಮ್ಯೇ ವೈ ಅದ್ಯಾಪಿ ಚರತೇ ಪ್ರಭುಃ ॥ ೮೩ ॥

ಭ್ರಾತಾ ಶನೈಶ್ಚರಸ್ತತ್ರ ಗ್ರಹತ್ವಂ ಸ ತು ಲಬ್ಧವಾನ್ ।
ತ್ವಷ್ಟಾನು ತೇನ ರೂಪೇಣ ವಿಷ್ಣೋಶ್ಚಕ್ರಮಕಲ್ಪಯತ್ ॥
ಮಹಾಪ್ರತಿಹತಂ ಯುದ್ಧೇ ದಾನವಪ್ರತಿವಾರಣೇ ॥ ೮೪ ॥

---

೮೦. ಆಗ ಸಂಜ್ಞಾದೇವಿಯು, ಪತಿಯ ಸುಂದರವಾದ ರೂಪವನ್ನು ನೋಡಿ ಬಹಳ ಸಂತೋಷಪಟ್ಟಳು. ಮತ್ತು ಭ್ರಾಂತಳಾದಳು. ಯಮದೇವನು ತಾಯಿಯ ಶಾಪದಿಂದ ಅತ್ಯಂತ ಖಿನ್ನಮನಸ್ಕನಾದನು.

೮೧. ಅನಂತರ ಧರ್ಮರಾಯನು ಅವನಿಗೆ ಪರಮಧರ್ಮವು ಸಂಭವಿಸುವಂತೆ ಅನುಗ್ರಹಿಸಿದನು. ಇಂತಹ ಧರ್ಮದೇವನ ಪರಮಾನುಗ್ರಹದಿಂದಲೂ ಆ ಶುಭ ಕಾರ್ಯದಿಂದಲೂ ಪರಮಕಾಂತಿಯನ್ನು ಪಡೆದನು.

೮೨. ಮತ್ತು ಪಿತೃಗಳಿಗೆ, ಆಧಿಪತ್ಯವೂ, ಲೋಕಪಾಲತ್ವವೂ ಉಂಟಾದವು. ಆ ಮಹಾನುಭಾವನಾದ ಮನುವೇ, ಪ್ರಜಾಪತಿಯೂ, ಕೀರ್ತಿವಂತನಾದ ಸಾವರ್ಣಿಯೂ (ಸಾವರ್ಣಿಮನುವೂ) ಆದನು.

೮೩. ಆ ಸಾವರ್ಣಿಮನುವೇ ಭಾವಿಯಾದ ಸಾವರ್ಣಿಕಮನ್ವಂತರದಲ್ಲಿ ಆಧಿಪತ್ಯವನ್ನು ಹೊಂದುವನು. ಅದುವರೆಗೂ ಆ ಸಾವರ್ಣಿಮನುವು ಅತಿರಮ್ಯವಾದ ಮೇರುವಿನ ಮಧ್ಯಭಾಗದಲ್ಲಿ ಧ್ಯಾನಾಸಕ್ತನಾಗಿ ವಾಸಿಸುವನು.

೮೪. ಅವನ ಸಹೋದರನಾದ ಶನೈಶ್ಚರನು ಗ್ರಹಾಧಿಪತಿಯಾದನು. ಆಗ ಮಯನು ಆ ಚಕ್ರವನ್ನು ಶ್ರೀಮಹಾವಿಷ್ಣುವಿಗೆ ಆಯುಧವನ್ನಾಗಿಯೂ, ಭೂಷಣವನ್ನಾಗಿಯೂ ಮಾಡಿದನು. ಆ ಚಕ್ರಾಯುಧವು ಯುದ್ಧದಲ್ಲಿ ದೈತ್ಯದಾನವ ಭಯಜನಕವೂ, ಭಂಜಕವೂ ಆಗಿತ್ತು.

**ಯಮೀಯಮೀ ತಯೋರ್ಯಾ ತು ಯಮುನಾ ಚ ಯಶಸ್ವಿನೀ |**
**ಅಭವತ್ ಸಾ ಸರಿಚ್ಛ್ರೇಷ್ಠಾ ಯಮುನಾ ಲೋಕಭಾವಿನೀ || ೮೫ ||**

**ಯಸ್ತು ಜ್ಯೇಷ್ಠೋ ಮಹಾತೇಜಾಃ ಸರ್ಗೋ ಯಸ್ಯ ತು ಸಾಂಪ್ರತಂ |**
**ವಿಸ್ತರಂ ತಸ್ಯ ವಕ್ಷ್ಯಾಮಿ ಮನೋರ್ವೈವಸ್ವತಸ್ಯ ಹ || ೮೬ ||**

**ಇದಂ ತು ಜನ್ಮ ದೇವಾನಾಂ ಶೃಣುಯಾದ್ವಾ ಪಠೇತ ವಾ |**
**ವೈವಸ್ವತಸ್ಯ ಪುತ್ರಾಣಾಂ ಸಪ್ತಾನಾಂ ತು ಮಹೌಜಸಾಂ ||**
**ಆಪದಂ ಪ್ರಾಪ್ಯ ಮುಚ್ಯೇತ ಪ್ರಾಪ್ನುಯಾಚ್ಚ ಮಹದ್ಯಶಃ || ೮೭ ||**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಶ್ರಾದ್ಧ ಕಲ್ಪೇ**
**ವರುಣವಂಶವರ್ಣನಂ ನಾಮ ದ್ವಾವಿಂಶೋಽಧ್ಯಾಯಃ**

---

೮೫. ಅವರಿಬ್ಬರಿಗೂ ತಂಗಿಯಾದ ಯಾವ ಯಮುನೆಯಿದ್ದಳೋ, ಅವಳು ಅತಿಕೀರ್ತಿವಂತಳೂ, ನದಿಗಳಲ್ಲಿ ಶ್ರೇಷ್ಠಳೂ, ಲೋಕಪಾವನೆಯೂ ಆಗಿದ್ದಳು.

೮೬. ಮಹಾತೇಜಸ್ವಿಯಾದ ಯಾವ ಮನುವು ಎಲ್ಲರಿಗಿಂತಲೂ ಹಿರಿಯವನಾಗಿದ್ದನೋ ಅವನೇ ಈ ವರ್ತಮಾನಕಾಲದಲ್ಲಿ ವೈವಸ್ವತಮನುವಾಗಿರುವನು. ಅವನ ವಿಷಯಗಳನ್ನು ಅತ್ಯಂತ ವಿಸ್ತಾರವಾಗಿ ವರ್ಣಿಸುವೆನು ಕೇಳಿರೆಂದನು.

೮೭. ಯಾವ ಪುರುಷನು, ಮಹಾತೇಜಸ್ವಿಗಳೂ, ವೈವಸ್ವತಮನುವಿನ ಪುತ್ರರೂ, ಸಪ್ತಸಂಖ್ಯಾಕರೂ ಆದ ದೇವತೆಗಳ ಚರಿತ್ರೆಯನ್ನು, ಶ್ರವಣಪಠನಾದಿಗಳನ್ನು ಮಾಡುವನೋ, ಅವನು ಮಹಾವಿಪತ್ತುಗಳನ್ನು ಹೊಂದಿದ್ದರೂ, ಅದರಿಂದ ಮುಕ್ತನಾಗುವನು. ಮತ್ತು ಈ ಲೋಕದಲ್ಲಿ ಮಹಾಕೀರ್ತಿಯನ್ನೂ, ಪರದಲ್ಲಿ ಪರಮಪದವಿಯನ್ನೂ ಹೊಂದುವನು.

ಇಲ್ಲಿಗೆ ವಾಯುಪ್ರೋಕ್ತವಾದ ಮಹಾಪುರಾಣದ ಶ್ರಾದ್ಧಕಲ್ಪದಲ್ಲಿ " ವರುಣವಂಶ ವರ್ಣನ "ವೆಂಬ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



## ಇಪ್ಪತ್ತೆರಡನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ವರುಣನ ವಂಶವು ವರ್ಣಿತವಾಗಿದೆ. ವರುಣದೇವನಿಗೆ ಸಾಮುದ್ರೀನಾಮಕ ಪತ್ನಿಯೂ, ಕಲಿವೈದ್ಯರೆಂಬ ಕುಮಾರರೂ, ಸುರಸುಂದರಿಯಾದ ಕುಮಾರಿಯೂ, ಇದ್ದರು. ಆ ಕಲಿಗೆ ಜಯ, ವಿಜಯ, ನಾಕ, ವಿಘ್ನ, ಸದ್ರುಮ, ವಿಧಮನೆಂಬುವರು ಜನಿಸಿ ಈ ವಂಶವು ವಿಶೇಷವಾಗಿ ಬೆಳೆಯಿತು. ಅದೇ ವಂಶದಲ್ಲಿ ಜನಿಸಿದ ಪ್ರಭಾಸನಿಗೆ ದೇವಶಿಲ್ಪಿಯಾದ ವಿಶ್ವಕರ್ಮನೂ, ಅವನಿಗೆ ವಿರೋಚನಾ, ಎಂಬ ಪತ್ನಿಯೂ ಇದ್ದರು. ಆ ದಂಪತಿಗಳಿಗೆ ಸುರೇಣು ಅಥವಾ ಸಂಜ್ಞೆಯೆಂಬ ನಾಮವಿರುವ ಕುಮಾರಿಯು ಇದ್ದಳು. ಅವಳು ಸೂರ್ಯದೇವನನ್ನು ಮದುವೆಯಾದಳು. ಅವಳಿಗೆ ಮನು ಮತ್ತು ಯಮರೆಂಬ ಇಬ್ಬರು ಮಕ್ಕಳಿದ್ದರು. ಸೂರ್ಯನ ಪತ್ನಿಯಾದ ಸಂಜ್ಞಾದೇವಿಯು, ವಡವಾ(ಕುದುರೆ) ರೂಪವನ್ನು ಧರಿಸಿ, ಕುರುದೇಶದಲ್ಲಿ ಸಂಚರಿಸಿದಳು. ಆಗ ಸೂರ್ಯನೂ ಸಹ ಅಶ್ವರೂಪವನ್ನು ಹೊಂದಿ ಅವಳೊಡನೆ ವಿನೋದದಿಂದಿರುವಾಗ ಮೂಗಿನಿಂದ ಅಶ್ವಿನೀದೇವತೆಗಳೆಂಬ ಇಬ್ಬರು ಕುಮಾರರು ಜನಿಸಿದರು. ಸೂರ್ಯದೇವನಿಗೆ ಮಾರ್ತಾಂಡನೆಂಬ ನಾಮಾಂತರವು ಪ್ರಾಪ್ತವಾಗಿದೆ. ಎಂಬಿವೇ ಮೊದಲಾದ ವಿಷಯಗಳು (ಈ ಅಧ್ಯಾಯದಲ್ಲಿ) ವರ್ಣಿತವಾಗಿವೆ.

—: ಹರಿಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ತ್ರಯೋವಿಂಶೋಽಧ್ಯಾಯಃ

|| ಸೂತ ಉವಾಚ ||

ತತೋ ಮನ್ವಂತರೇಽತೀತೇ ಚಾಕ್ಷುಷೇ ದೈವತೈಃ ಸಹ ।
ವೈವಸ್ವತಾಯ ಮಹತೇ ಪೃಥಿವೀರಾಜ್ಯಮಾದಿಶತ್ || ೧ ||

ತಸ್ಯ ವೈವಸ್ವತೋ ವಕ್ಷ್ಯೇ ಸಾಂಪ್ರತಸ್ಯ ಮಹಾತ್ಮನಃ ।
ಆನುಪೂರ್ವೇಣ ವೈ ವಿಪ್ರಾಃ ಕೀರ್ತ್ಯಮಾನಂ ನಿಬೋಧತ || ೨ ||

ಮನೋರ್ವೈವಸ್ವತಸ್ಯೇಹ ಸರ್ಗಮಾದಾಯ ಸಾಂಪ್ರತಂ ।
ಮನೋಃ ಪ್ರಥಮಜಸ್ಯಾಸನ್ ನವಪುತ್ರಾಸ್ತು ತತ್ಸಮಾಃ || ೩ ||

---

## ಇಪ್ಪತ್ತಮೂರನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :—ಅನಂತರ ಚಾಕ್ಷುಷಮನ್ವಂತರವು ದೇವತೆಗಳ ಸಂಗಡ ಕಳೆದುಹೋಗಲಾಗಿ, ಈ ವೈವಸ್ವತಮನ್ವಂತರವು ಪ್ರಾಪ್ತವಾಯಿತು. ಆಗ ಈ ವೈವಸ್ವತಮನುವು ಈ ಪೃಥಿವೀರಾಜ್ಯವನ್ನು ಆಳುವನು.

೨. ಎಲೈ ವಿಪ್ರೋತ್ತಮರೇ, ಮಹಾತ್ಮನಾದ ಈಗಿನ ವೈವಸ್ವತಮನುವಿನ ವಂಶವನ್ನು ಕ್ರಮವಾಗಿ ನಿರೂಪಿಸುವೆನು. ಸಾವಧಾನದಿಂದ ಕೇಳಿರೆಂದು ಸೂತಮುನಿಯು ಹೇಳಿದನು.

೩. ಈಗಿನ ವೈವಸ್ವತಮನುವಿನ ಸೃಷ್ಟಿಕ್ರಮವನ್ನು ಕ್ರಮವಾಗಿ ಹೇಳುವೆನು ಕೇಳಿರಿ. ಮೊದಲನೆಯ ಮನುವಿಗೆ, ತನಗೆ ಸಮಾನರಾದ ನವಮನುಗಳು ಕ್ರಮವಾಗಿ ಸಂಭವಿಸಿ, ಸುಪ್ರಸಿದ್ಧರಾಗಿದ್ದರು.

**ಇಕ್ಷ್ವಾಕುರ್ನಹುಷಶ್ಚೈವ ಧೃಷ್ಟಃ ಶರ್ಯಾತಿರೇವ ಚ |**
**ನರಿಷ್ಯಂತಸ್ತಥಾ ಪ್ರಾಂಶುರ್ನಾಭಾಗೋಽರಿಷ್ಟ ಏವ ಚ ||**
**ಕರೂಷಶ್ಚ ಪೃಷಧ್ರಶ್ಚ ನವೈತೇ ಮಾನವಾಃ ಸ್ಮೃತಾಃ || ೪ ||**

**ಬ್ರಹ್ಮಣಾ ತು ಮನುಃ ಪೂರ್ವಂ ಚೋದಿತಸ್ತು ನಿಬೋಧತ |**
**ಸ್ರಷ್ಟುಂ ಪ್ರಚಕ್ರಮೇ ಕಾಮಂ ನಿಷ್ಫಲಂ ಸಮವರ್ತತ || ೫ ||**

**ಅಥಾಕರೋತ್ಪುತ್ರಕಾಮಃ ಪರಾಮಿಷ್ಟಿಂ ಪ್ರಜಾಪತಿಃ |**
**ಮಿತ್ರಾವರುಣಯೋರಂಶೇ ಮನುರಾಹುತಿ ಮಾವಪತ್ || ೬ ||**

**ತತ್ರ ದಿವ್ಯಾಂಬರಧರಾ ದಿವ್ಯಾಭರಣಭೂಷಿತಾ |**
**ದಿವ್ಯಸನ್ನಹನಾ ಚೈವ ಇಡಾ ಜಜ್ಞೇ ಇತಿ ಶ್ರುತಿಃ || ೭ ||**

---

೪. ಇಕ್ಷ್ವಾಕು, ನಹುಷ, ಧೃಷ್ಟ, ಶರ್ಯಾತಿ, ನರಿಷ್ಯಂತ, ಪ್ರಾಂಶು, ನಾಭಾಗ, ಅರಿಷ್ಟ, ಕರೂಷ, ಪೃಷಧ್ರರೆಂಬ ಒಂಬತ್ತು ಜನ ರಾಜರು ಮನುಪುತ್ರರಾಗಿ ಜನಿಸಿ, ಪ್ರಸಿದ್ಧರಾಗಿ ಪೃಥಿವಿಯನ್ನು ಆಳಿದರು.

೫. ಪೂರ್ವದಲ್ಲಿ ಬ್ರಹ್ಮದೇವನು ಮನುಚಕ್ರವರ್ತಿಯ ಸಂಗಡ ಹೇಳಿದ ವಿಷಯಗಳನ್ನು ನಿರೂಪಿಸುವೆನು ಕೇಳಿರಿ. ಬ್ರಹ್ಮದೇವನಿಂದ ಪ್ರೇರಿತನಾದ ಮನುವು ಯಥೇಚ್ಛೆಯಾಗಿ ಪ್ರಜಾಸೃಷ್ಟಿಯನ್ನು ಮಾಡಲು ಪ್ರಯತ್ನಿಸಿದನು. ಅದರೆ ಪ್ರಯತ್ನಗಳು ಕೈಗೂಡದೇ ನಿಷ್ಫಲವಾಯಿತು.

೬. ತರುವಾಯ ಪ್ರಜಾಪತಿಯಾದ ಮನುವು ಪ್ರಜಾಕಾಂಕ್ಷೆಯಿಂದ ಉತ್ತಮವಾದ ಯಾಗವನ್ನು ಮಾಡಲು ಪ್ರಯತ್ನಿಸಿದನು. ಆ ಇಷ್ಟಿಯಲ್ಲಿ ಮಿತ್ರಾವರುಣರ ಉದ್ದೇಶ್ಯಕವಾದ ಆಹುತಿಗಳನ್ನೂ ಕೊಟ್ಟನು.

೭. ಹೀಗೆ ಮನುವು ಯಾಗಮಾಡಲು, ಅದರಲ್ಲಿ ದಿವ್ಯವಸ್ತ್ರಾಲಂಕಾರ ಭೂಷಿತಳೂ, ದಿವ್ಯಶರೀರಧಾರಿಯೂ ಆದ ಇಡಾ (ಇಲಾ) ಎಂಬುವಳು ಪ್ರಾದುರ್ಭೂತಳಾದಳು ಎಂದು ಶ್ರುತಿಯಲ್ಲಿ ಪ್ರಸಿದ್ಧವಾಗಿದೆ.

**ತಾಮಿಲೇತ್ಯಥ ಹೋವಾಚ ಮನುರ್ದಂಡಧರಃ ಸ್ಮೃತಃ ।**
**ಅನುಗಚ್ಛಾಮಿ ಭದ್ರಂ ತೇ ತಮಿಲಾ ಪ್ರತ್ಯುವಾಚ ಹ ॥ ೮ ॥**

**ಧರ್ಮಯುಕ್ತಮಿದಂ ವಾಚ್ಯಂ ಪುತ್ರಕಾಮಂ ಪ್ರಜಾಪತಿಂ ।**
**ಮಿತ್ರಾವರುಣಯೋರಂಶೇ ಜಾತಾಸ್ಮಿ ವದತಾಂ ವರ ॥ ೯ ॥**

**ತಯೋಃ ಸಕಾಶಂ ಯಾಸ್ಯಾಮಿ ಮಾನೋ ಧರ್ಮೋ ಹತೋವಧೀತ್ ।**
**ಸೈವಮುಕ್ತ್ವಾ ಪುನರ್ದೇವೀ ತಯೋರಂತಿಕಮಾಗಮತ್ ॥ ೧೦ ॥**

**ಗತ್ವಾಂತಿಕಂ ವರಾರೋಹ ಪ್ರಾಂಜಲಿರ್ವಾಕ್ಯಮಬ್ರವೀತ್ ।**
**ಅಂಶೇಸ್ಮಿನ್ಯುವಯೋರ್ಜಾತಾ ದೇವೌ ಕಿಂ ಕರವಾಣಿ ಚ ॥ ೧೧ ॥**

---

೮. ಆ ಕುಮಾರಿಯು ಇಲಾದೇವಿಯೆಂದು ಪ್ರಖ್ಯಾತಳಾದಳು. ಜ್ಞಾನಿಗಳು ಅವಳನ್ನು ಇಲೆಯೆಂದು ಹೇಳಿದರು. ಮನುವು ದುಷ್ಟಶಿಕ್ಷಕ, ಶಿಷ್ಟಪಾಲಕನೆಂದು ಪ್ರಸಿದ್ಧನಾದನು. ಎಲೈ ಚಕ್ರವರ್ತಿಯೇ, ನಾನು ನಿನ್ನನ್ನು ಹಿಂಬಾಲಿಸುವೆನು. ನಿನಗೆ ಮಂಗಳವಾಗಲಿ ಎಂದು ಹೇಳಲು, ಇಲಾದೇವಿಯು ಮನುವನ್ನು ಕುರಿತು ಹೇಳಿದ್ದೇನೆಂದರೆ—

೯. ಆ ಇಲಾದೇವಿಯು ಪುತ್ರಕಾಮಿನಿಯಾದ ಮನುವನ್ನು ಕುರಿತು ಧರ್ಮಯುಕ್ತವಾದ ಭಾಷಣಮಾಡಿದಳು. ಎಲೈ ಜ್ಞಾನಿಗಳಲ್ಲಿ ಉತ್ತಮನಾದ ಮನುಭೂಪತಿಯೇ, ನಾನು ಮಿತ್ರಾವರುಣರ ಅಂಶದಿಂದ ಅವತರಿಸಿರುವೆನು ಎಂದು ಇಲೆಯು ಹೇಳಿದಳು.

೧೦. ಎಲೈ ಮನುಭೂಪತಿಯೇ, ನಾನು ಮಿತ್ರಾವರುಣರ ಸಮೀಪಕ್ಕೆ ಹೋಗುವೆನು. ಇದರಿಂದ ಧರ್ಮಚ್ಯುತಿಯಾಗುವುದಿಲ್ಲ. ಎಂದು ಇಲಾದೇವಿಯು ಹೇಳಿ ಮಿತ್ರಾವರುಣರ ಬಳಿಗೆ ಹೋದಳು.

೧೧. ಸುಂದರಿಯಾದ ಇಲಾದೇವಿಯು, ಅವರ ಬಳಿಗೆ ಹೋಗಿ ಅಂಜಲಿ ಬದ್ಧಳಾಗಿ ಎಲೈ ದೇವತೆಗಳಿರಾ! ನಿಮ್ಮ ಅಂಶಗಳಿಂದ ನಾನು ಅವತರಿಸಿರುತ್ತೇನೆ. ನಾನು ಏನುಮಾಡಲಿ, ಆಜ್ಞಾಪಿಸಬೇಕೆಂದು ಬೇಡಿಕೊಂಡಳು.

ಮನುನ್ಯೈವಾಹಮುಕ್ತಾಸ್ಮಿ ಅನುಗಚ್ಛಸ್ವ ಮಾಮಿತಿ ।
ತಥಾ ತು ವದತೀಂ ಸಾಧ್ವೀಮಿಡಾಮಾಶ್ರಿತ್ಯ ತಾವುಭೌ ॥ ೧೨ ॥

ದೇವೌ ಚ ಮಿತ್ರಾವರುಣಾವಿದಂ ವಚನಮೂಚತುಃ ।
ಅನೇನ ತವ ಧರ್ಮಜ್ಞೇ ಪ್ರಶ್ರಯೇಣ ದಮೇನ ಚ ॥ ೧೩ ॥

ಸತ್ಯೇನ ಚೈವ ಸುಶ್ರೋಣಿ ಪ್ರೀತೌ ಸ್ವೋ ವರವರ್ಣಿನೀ ।
ಆವಯೋಸ್ತ್ವಂ ಮಹಾಭಾಗೇ ಖ್ಯಾತಿಂ ಕನ್ಯಾ ಪ್ರಯಾಸ್ಯಸಿ ॥ ೧೪ ॥

ಸುದ್ಯುಮ್ನ ಇತಿ ವಿಖ್ಯಾತಸ್ತ್ರಿಷು ಲೋಕೇಷು ಪೂಜಿತಃ ।
ಜಗತ್ಪ್ರಿಯೋ ಧರ್ಮಶೀಲೋ ಮನೋರ್ವಂಶವಿವರ್ಧನಃ ॥ ೧೫ ॥

---

೧೨. ಇಲೆಯು, ಮನುವು ತನ್ನನ್ನು ಹಿಂಬಾಲಿಸುವಂತೆ ಆಜ್ಞಾಪಿಸಿರುವನು ಎಂದು ಹೇಳಲಾಗಿ, ಮಿತ್ರಾವರುಣರು ಪತಿವ್ರತೆಯಾದ ಅವಳಿಗೆ ಮುಂದೆ ಹೇಳುವಂತೆ ತಿಳಿಸಿದರು.

೧೩. ಆ ಮಿತ್ರಾವರುಣರೆಂಬ ದೇವತೆಗಳು, ಎಲೌ ಧರ್ಮಜ್ಞಳಾದ ಇಲಾದೇವಿಯೇ, ನಿನ್ನ ಈ ವಿನಯದಿಂದಲೂ, ನಮ್ರತೆಯಿಂದಲೂ, ಜಿತೇಂದ್ರಿಯತನದಿಂದಲೂ ನಾವು ಬಹಳವಾಗಿ ಪ್ರೀತರಾಗಿರುವೆವು ಎಂದು ಹೇಳಿದರು.

೧೪. ಸುಂದರಿಯೂ, ಸುಶ್ರೋಣಿಯೂ ಆದ ಇಲೆಯೇ, ನಿನ್ನ ಸತ್ಯತೆಯೇ ಮೊದಲಾದ ಮಹಾಗುಣಗಳಿಂದ ನಾವು ಪ್ರೀತರಾಗಿರುವೆವು. ಆದುದರಿಂದ ಮಹಾನುಭಾವಳಾದ ಎಲೌ ದೇವಿಯೇ, ನೀನು ನಮಗೆ ಕುಮಾರಿಯಾಗಿ ಪ್ರಖ್ಯಾತಿಯನ್ನು ಪಡೆ ಎಂದು ಹೇಳಿದರು.

೧೫. ಮೂರು ಲೋಕಗಳಲ್ಲಿ ಪೂಜಿತನೂ, ಜಗತ್ಪ್ರಿಯನೂ, ಧರ್ಮಶೀಲನೂ, ಮನುವಂಶವರ್ಧಕನೂ ಆದ ಸುದ್ಯುಮ್ನನೆಂಬ ಕುಮಾರನು ಅವತರಿಸಿ ಪ್ರಖ್ಯಾತನಾದನು.

**ಮಾನವಃ ಸ ತು ಸುದ್ಯುಮ್ನಃ ಸ್ತ್ರೀಭಾವಮುಗಮತ್ ಪ್ರಭುಃ ।**
**ಸಾ ತು ದೇವೀ ವರಂ ಲಬ್ಧ್ವಾ ನಿವೃತ್ತಾ ಪಿತರಂ ಪ್ರತಿ ॥ ೧೬ ॥**

**ಬುಧೇನಾಂತರಮಾಸಾದ್ಯ ಮೈಥುನಾಯೋಪಮಂತ್ರಿತಾ ।**
**ಸೋಮಪುತ್ರಾದ್ಬುಧಾಚ್ಚಾಸ್ಯ ಐಲೋ ಜಜ್ಞೇ ಪುರೂರವಾಃ ॥ ೧೭ ॥**

**ಬುಧಾತ್ ಸಾ ಜನಯಿತ್ವಾ ತು ಸುದ್ಯುಮ್ನಂ ಪುನರಾಗತಾ ।**
**ಸದ್ಯುಮ್ನಸ್ಯ ಚ ದಾಯಾದಾಸ್ತ್ರಯಃ ಪರಮಧಾರ್ಮಿಕಾಃ ॥ ೧೮ ॥**

**ಉತ್ಕಲಶ್ಚ ಗಯಶ್ಚೈವ ವಿನತಾಶ್ವಸ್ತಥೈವ ಚ ।**
**ಉತ್ಕಲಸ್ಯೋತ್ಕಲಂ ರಾಷ್ಟ್ರಂ ವಿನತಾಶ್ವಸ್ಯ ಪಶ್ಚಿಮಂ ॥**
**ದಿಕ್ಷು ವಾತಸ್ಯ ರಾಜರ್ಷೇರ್ಗಯಸ್ಯ ತು ಗಯಾಪುರೀ ॥ ೧೯ ॥**

---

೧೬. ಮನುಪುತ್ರನೂ, ಪ್ರಭುವೂ ಆದ ಆ ಸುದ್ಯುಮ್ನನು ಸ್ತ್ರೀರೂಪವನ್ನು ಧರಿಸಿದನು. ಆ ದೇವಿಯು ವರವನ್ನು ಪಡೆದು ತಂದೆಯ ಸಮೀಪಕ್ಕೆ ಹೋಗಿ ವಿನಯದಿಂದ ವಂದಿಸಿದಳು.

೧೭. ತರುವಾಯ ಇಲೆಯು ಚಂದ್ರನ ಕುಮಾರನಾದ ಬುಧನ ಸಹವಾಸವಾಗಿ ಅವನೊಡನೆ ಪ್ರೀತಿಯಿಂದ ಇದ್ದಳು. ಹೀಗೆ ಸೋಮಕುಮಾರನಾದ ಬುಧನಿಂದ ಇಲಾದೇವಿಗೆ ಪುರೂರವಸನೆಂಬ ಕುಮಾರನು ಜನಿಸಿದನು.

೧೮. ಆ ಇಲಾದೇವಿಯು ಬುಧನಿಂದ ಪುರೂರವಸನೆಂಬ ಕುಮಾರನನ್ನು ಪಡೆದು ಸುದ್ಯುಮ್ನನ ಬಳಿಗೆ ಪುನಃ ಬಂದಳು. ಸುದ್ಯುಮ್ನನಿಗೆ ಪರಮಧಾರ್ಮಿಕರಾದ ಮೂವರು ಮಕ್ಕಳು ಜನಿಸಿದರು.

೧೯. ಸುದ್ಯುಮ್ನನಿಗೆ ಉತ್ಕಲ, ಗಯ, ವಿನತಾಶ್ವರೆಂಬ ಮೂವರು ಕುಮಾರರು ಉತ್ಪನ್ನರಾದರು. ತಂದೆಯು ಆ ಮೂವರಲ್ಲಿ ಉತ್ಕಲನಿಗೆ ಉತ್ಕಲವೆಂಬ ದೇಶವನ್ನೂ, ವಿನತಾಶ್ವನಿಗೆ ಪಶ್ಚಿಮದೇಶವನ್ನೂ, ಲೋಕವಿಖ್ಯಾತನೂ, ರಾಜರ್ಷಿಯೂ ಆದ ಗಯನಿಗೆ ಗಯಾನಗರವನ್ನೂ, ಕೊಟ್ಟು ಪ್ರಜೆಗಳನ್ನು ಪಾಲಿಸುವಂತೆ ಆಜ್ಞಾಪಿಸಿದನು.

ಪ್ರವಿಸೃಷ್ಟೇ ಮಸಾ ತಸ್ಮಿನ್ ಪ್ರಜಾಃ ಸೃಷ್ಟ್ವಾ ದಿವಾಕರಃ ।
ದಶಧಾ ತದ್ದಧತ್ ಕ್ಷೇತ್ರಮಕರೋತ್ ಪೃಥಿವೀಮಿಮಾಂ ॥ ೨೦ ॥

ಇಕ್ಷ್ವಾಕುರೇವ ದಾಯಾದಾನನ್ಯಾನ್ ದಶ ಸಮಾಪ್ನುಯಾತ್ ।
ಕನ್ಯಾಭಾವಾತ್ತು ಸದ್ಯುಮ್ನೋ ನೈನಂ ಭಾಗಮವಾಪ್ನುಯಾತ್ ॥ ೨೧ ॥

ವಸಿಷ್ಠವಚನಾಚ್ಛಾಸೀತ್ ಪ್ರತಿಷ್ಠಾನೋ ಮಹಾದ್ಯುತಿಃ ।
ಪ್ರತಿಷ್ಠಾ ಧರ್ಮರಾಜಸ್ಯ ಸುದ್ಯುಮ್ನಸ್ಯ ಮಹಾತ್ಮನಃ ॥ ೨೨ ॥

ತತ್ ಪುರೂರವಸೇ ಪ್ರಾದಾದ್ರಾಷ್ಟ್ರಂ ಪ್ರಾಪ್ಯ ಮಹಾಯಶಾಃ ।
ಮಾನವೇಭ್ಯೋ ಮಹಾಭಾಗಾ ಸ್ತ್ರೀಪುಂಸೋರ್ಲಕ್ಷಣಂ ಪ್ರತಿ ॥
ಮಾನವಃ ಸ ತು ಸುದ್ಯುಮ್ನಃ ಸ್ತ್ರೀಭಾವಮಗಮತ್ ಪುನಃ ॥ ೨೩ ॥

---

೨೦. ಮನುರಾಜನು ಜನಿಸಿದ ಕೂಡಲೇ, ಸೂರ್ಯನು ಪ್ರಜೆಗಳನ್ನು ಸೃಷ್ಟಿಸಿ ಈ ಭೂಮಂಡಲವನ್ನು ಹತ್ತು ಪ್ರಖ್ಯಾತವಾದ ಕ್ಷೇತ್ರವನ್ನಾಗಿ ವಿಭಾಗಮಾಡಿದನು.

೨೧. ಇಕ್ಷ್ವಾಕುಮಹಾರಾಜನು ಹತ್ತು ಜನ ಕುಮಾರರನ್ನು ಹೊಂದಿದನು. ಸುದ್ಯುಮ್ನನಿಗೆ ಹೆಣ್ಣುಮಕ್ಕಳು ಇಲ್ಲದಿರುವುದರಿಂದ ಅವನು ಭಾಗಕ್ಕೆ ಅರ್ಹನಾಗಲಿಲ್ಲ.

೨೨. ಮಹಾತ್ಮನಾದ ವಸಿಷ್ಠನ ಮಾತಿನಂತೆ :ಅತಿತೇಜಸ್ವಿಯಾದ ಮಹಾರಾಜನು ಸ್ಥಾಪಿತನಾದನು. ಅದರಂತೇ ಧರ್ಮರಾಜನೂ, ಮಹಾತ್ಮನೂ ಆದ ಸುದ್ಯುಮ್ನನು ಸ್ಥಾಪಿತನಾದನು.

೨೩. ತರುವಾಯ ಕೀರ್ತಿವಂತನಾದ ಸುದ್ಯುಮ್ನನು ಆ ರಾಜ್ಯವನ್ನು ಪುರೂರುವಸು ಮಹಾರಾಜನಿಗೆ ಕೊಟ್ಟನು. ಎಲೈ ಮಹಾನುಭಾವರೇ, ಮಾನವರಿಗೆ ಸ್ತ್ರೀಪುರುಷಭಾವವು ಬದಲಾಯಿಸುವುದು ಸಹಜವಾಗಿದೆ. ಇದರಿಂದ ಮನುಪುತ್ರನಾದ ಸುದ್ಯುಮ್ನನು ಪುನಃ ಸ್ತ್ರೀರೂಪವನ್ನು ಹೊಂದಿದನು.

ಏತಚ್ಛ್ರುತ್ವಾ ತು ಋಷಯಃ ಪಪ್ರಚ್ಛುಸ್ತದನಂತರಂ ।
ಮಾನವಃ ಸ ತು ಸುದ್ಯುಮ್ನಃ ಸ್ತ್ರೀಭಾವಮುಗಮತ್ ಕಥಂ ॥ ೨೪ ॥

॥ ಸೂತ ಉವಾಚ ॥

ಪ್ರೋವಾಚ ವಚನಂ ದೇವೀ ಪ್ರಿಯಹೇತೋಃ ಪ್ರಿಯಂ ಪ್ರಿಯಾ ।
ಸ ಮೇ ಮಮಾಶ್ರಮೇ ದೇವ ಯಃ ಪುಮಾನ್ ಸಂಪ್ರವೇಕ್ಷ್ಯತಿ ॥
ಭವಿಷ್ಯತಿ ಧ್ರುವಂ ನಾರೀ ಸಾ ತುಲ್ಯಾಪ್ಸರಸಾಂ ಶುಭಾ ॥ ೨೫ ॥

ತತ್ರ ಸರ್ವಾಣಿ ಭೂತಾನಿ ಪಿಶಾಚಾಃ ಪಶವಶ್ಚ ಯೇ ।
ಸ್ತ್ರೀಭೂತಾಃ ಸಹ ರುದ್ರೇಣ ಕ್ರೀಡಂತ್ಯಪ್ಸರಸೋ ಯಥಾ ॥ ೨೬ ॥

ಉಮಾವನಂ ಪ್ರವಿಷ್ಟಸ್ತು ಸ ರಾಜಾ ಮೃಗಯಾಂಗತಃ ।
ಸಹ ಪಿಶಾಚೈರ್ಭೂತೈಸ್ತು ರುದ್ರೈಃ ಸ್ತ್ರೀಭಾವಮಾಸ್ಥಿತಃ ॥ ೨೭ ॥

---

೨೪. ಎಲೈ ಸುತರೇ, ಆ ಮನುಪುತ್ರನಾದ ಸುದ್ಯುಮ್ನನು ಸ್ತ್ರೀಭಾವವನ್ನು ಹೊಂದಲು ಕಾರಣವೇನು ? ಈ ವಿಷಯವನ್ನು ದಯಪಾಲಿಸಿ ತಾವು ನಮಗೆ ತಿಳಿಸಬೇಕೆಂದು, ಮಹರ್ಷಿಗಳು ಸೂತಮುನಿಗಳನ್ನು ಪ್ರಾರ್ಥಿಸಿದರು.

೨೫. ಸೂತಮುನಿಯು ಹೇಳಿದನು :—ಪ್ರಿಯಳಾದ ಪಾರ್ವತೀದೇವಿಯು ತನ್ನ ಪತಿಯಾದ ಮಹಾದೇವನಿಗೆ ಇಂತೆಂದಳು. ಎಲೈ ಸ್ವಾಮಿಯಾದ ದೇವನೇ, ಯಾವ ಪುರುಷನು ಈ ಉಮಾವನವನ್ನು ಪ್ರವೇಶಿಸುವನೋ, ಅಂತಹ ಪುರುಷನು ಅಪ್ಸರಸ್ತ್ರೀಯರಿಗೆ ಸಮಾನವಾದ ದಿವ್ಯ ಸ್ತ್ರೀರೂಪವನ್ನು ಹೊಂದುವನು. ಈ ವಿಷಯವು ನಿಶ್ಚಯವಾಗಿರುವುದು ಎಂದಳು.

೨೬. ಆ ವನದಲ್ಲಿ ಸಮಸ್ತವಾದ ಪ್ರಾಣಿಗಳು, ಪಿಶಾಚಗಳು, ಪಶುಗಳು ಇವು ಸ್ತ್ರೀರೂಪವನ್ನು ಧರಿಸಿ ಅಪ್ಸರಸ್ತ್ರೀಯರಂತೆ ಪರಮೇಶ್ವರನ ಸಂಗಡ ವಿಹರಿಸುವುವು. ಆದುದರಿಂದ ಈ ವನದಲ್ಲಿ ಪುರುಷರು ಪ್ರವೇಶಿಸಬಾರದು.

೨೭. ಆದುದರಿಂದ ಸುದ್ಯುಮ್ನಮಹಾರಾಜನು ಮೃಗಯಾವಿಹಾರವನ್ನು ಮಾಡಿಕೊಂಡು ಉಮಾವನವನ್ನು ಪ್ರವೇಶಿಸಿದನು. ಆದುದರಿಂದ ಅವನೂ ಸಹ ಪಿಶಾಚಗಳು, ಭೂತಗಳು, ರುದ್ರಗಣಗಳು ಇವುಗಳೊಡನೆ ಸ್ತ್ರೀರೂಪವನ್ನು ಹೊಂದಿದನು.

**ತಸ್ಮಾತ್ ಸ ರಾಜಾ ಸುದ್ಯುಮ್ನಃ ಸ್ತ್ರೀಭಾವಂ ಲಬ್ಧವಾನ್ ಪುನಃ ।**
**ಮಹಾದೇವಪ್ರಸಾದಾಚ್ಚ ಗಾಣಪತ್ಯಮವಾಪ್ನುಯಾತ್ ॥ ೨೮ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ವೈವಸ್ವತಮನೋಃ ಸೃಷ್ಟಿಕಥನಂ " ನಾಮ ತ್ರಯೋವಿಂಶೋಽಧ್ಯಾಯಃ**

---

೨೮. ಎಲೈ ಮುನಿವರ್ಯರೇ, ಆ ಸುದ್ಯುಮ್ನಮಹಾರಾಜನು ಅಕಸ್ಮಾತ್ತಾಗಿ ಆ ಉಮಾವನವನ್ನು ಪ್ರವೇಶಿಸಿದುದರಿಂಹ ಸ್ತ್ರೀರೂಪವನ್ನು ಧರಿಸಿದನು. ತರುವಾಯ ಪರಮೇಶ್ವರನ ಅನುಗ್ರಹದಿಂದ ಪ್ರಮಥಗಣಕ್ಕೆ ಅಧಿಪತಿಯಾಗಿ ದಿವ್ಯಸೌಖ್ಯವನ್ನು ಪಡೆದನೆಂದು ಸೂತರು ಮಹರ್ಷಿಗಳಿಗೆ ತಿಳಿಸಿದರು.

ಇಲ್ಲಿಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ವೈವಸ್ವತಮನುವಿನ
" ಸೃಷ್ಟಿಕ್ರಮನಿರೂಪಣ "ವೆಂಬ ಇಪ್ಪತ್ತಮೂರನೆಯ
ಅಧ್ಯಾಯವು ಮುಗಿದುದು.



## ಇಪ್ಪತ್ತಮೂರನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ವೈವಸ್ವತಮನುವಿನ ಸೃಷ್ಟಿಕ್ರಮವು ನಿರೂಪಿತವಾಗಿದೆ. ಚಾಕ್ಷುಷಮನ್ವಂತರವು ಕಳೆಯಲು ವೈವಸ್ವತಮನ್ವಂತರವು ಪ್ರಾಪ್ತವಾಗುವುದು. ಆ ವೈವಸ್ವತಮನುವು ರಾಜ್ಯವನ್ನಾಳಲು ಅವನಿಗೆ ಇಕ್ಷ್ವಾಕು, ನಹುಷ, ಧೃಷ್ಟ, ಶರ್ಯಾತಿ, ನರಿಷ್ಯಂತ, ಪ್ರಾಂಶು. ನಾಭಾಗ, ಅರಿಷ್ಟ, ಕರೂಷ ಮತ್ತು ವೃಷಧ್ರರೆಂಬ ಒಂಭತ್ತು ಜನ ರಾಜಕುಮಾರರು ಜನಿಸಿದರು. ಮಿತ್ರಾವರುಣರ ಅಂಶದಿಂದ ಇಲಾದೇವಿಯು ಜನಿಸಿದಳು. ಬುಧನ ಸಂಬಂಧದಿಂದ ಉತ್ಕಲ. ಗಯ, ವಿನತಾಶ್ವ ರೆಂಬ ಪುತ್ರರು ಜನಿಸಿದರು. ಆ ಇಲಾದೇವಿಗೆ ಐಲನೆಂಬ ಪುರೂರವಸ ಮಹಾರಾಜನು ಜನಿಸಿದನು. ಮನುಪುತ್ರನಾದ ಸುದ್ಯುಮ್ನನು ಉಮಾವನವನ್ನು ಅಕಸ್ಮಾತ್ತಾಗಿ ಪ್ರವೇಶಿಸಿ ಸ್ತ್ರೀರೂಪಿಯಾದನು. ಕೊನೆಗೆ ಅವನು ಈಶ್ವರಾನು ಗ್ರಹದಿಂದ ಪ್ರಮಥಗಣಾಧಿಪತಿಯಾಗಿ ದಿವ್ಯಸೌಖ್ಯವನ್ನು ಪಡೆದನೆಂಬ ವಿಷಯಗಳು ವರ್ಣಿತವಾಗಿವೆ.



—॥ ಹರಿಃ ಓಂ ॥—

—॥ ಶ್ರೀ ವೇದವ್ಯಾಸಾಯ ನಮಃ ॥—

# ಶ್ರೀಮದ್ವಾಯು ಮಹಾಪುರಾಣಂ

## ಚತುರ್ವಿಂಶೋಽಧ್ಯಾಯಃ

**॥ ಸೂತ ಉವಾಚ ॥**

**ನಿಸರ್ಗಂ ಮನುಪುತ್ರಾಣಾಂ ವಿಸ್ತರೇಣ ನಿಬೋಧತ ।**
**ಪೃಷಧ್ರೋ ಹಿಂಸಯಿತ್ವಾ ತುಗುರೋರ್ಗಾವಮಭಕ್ಷಯತ್ ॥ ೧ ॥**

**ಶಾಪಾಚ್ಛೂದ್ರತ್ವಮಾಪನ್ನಶ್ಚ್ಯವನಸ್ಯ ಮಹಾತ್ಮನಃ ।**
**ಕರೂಷಸ್ಯ ತು ಕಾರೂಷಃ ಕ್ಷತ್ರಿಯೋ ಯುದ್ಧದುರ್ಮದಃ ॥ ೨ ॥**

---

## ಇಪ್ಪತ್ತನಾಲ್ಕನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :—ಎಲೈ ಮಹರ್ಷಿಗಳಿರಾ ! ಈಗ ಮನುಪುತ್ರರ ಸೃಷ್ಟಿಕ್ರಮವನ್ನು ಸಾಂಗವಾಗಿಯೂ, ವಿಸ್ತಾರವಾಗಿಯೂ, ನಿರೂಪಿಸುವೆನು ಕೇಳಿರಿ. ಪೃಷಧ್ರನೆಂಬುವನು ತನ್ನ ಗರುಗಳ ಹಸುವನ್ನು ಅಪಹರಿಸಿ ಅನುಭವಿಸಿದನು.

೨. ಮಹಾತ್ಮರಾದ ಚ್ಯವನಮಹರ್ಷಿಗಳ ಶಾಪದಿಂದ ಅವನು ಶೂದ್ರನಾದನು. ಕರೂಷರಾಜನಿಗೆ ಯುದ್ಧಮಾಡುವುದರಲ್ಲಿ ಮದಾಂಧನಾದ ಕಾರೂಷನೆಂಬ ಕುಮಾರನು ಜನಿಸಿದನು.

ಸಹಸ್ರಕ್ಷತ್ರಿಯಗಣವಿಕ್ರಾಂತಃ ಸಂಬಭೂವ ಹ ।
ನಾಭಗಾರಿಷ್ಟ ಪುತ್ರಸ್ತು ವಿದ್ವಾನಾಸೀದ್ಭಲಂದನಃ ॥ ೩ ॥

ಭಲಂದನಸ್ಯ ಪುತ್ರೋಽಭೂತ್ ಪ್ರಾಂಶುರ್ನಾಮ ಮಹಾಬಲಃ ।
ಪ್ರಾಂಶೋರೇಕೋಽಭವತ್ ಪುತ್ರಃ ಪ್ರಜಾನಿರಿತಿ ವಿಶ್ರುತಃ ॥ ೪ ॥

ಪ್ರಜಾನೇರಭವತ್ ಪುತ್ರಃ ಖನಿತ್ರೋ ನಾಮ ವೀರ್ಯವಾನ್ ।
ತಸ್ಯ ಪುತ್ರೋಽಭವಚ್ಛ್ರೀಮಾನ್ ಕ್ಷುಪೋ ನಾಮ ಮಹಾಯಶಾಃ ॥ ೫ ॥

ಕ್ಷುಪಸ್ಯ ವಿಂಶಃ ಪುತ್ರಸ್ತು ಪ್ರತಿಮಾ ನ ಬಭೂವ ಹ ।
ವಿಂಶಪುತ್ರಸ್ತು ಕಲ್ಯಾಣೋ ವಿವಿಂಶೋ ನಾಮ ಧಾರ್ಮಿಕಃ ॥ ೬ ॥

---

೩. ಆ ಕರೀಷಕುಮಾರನಾದ ಕಾರೀಷನು, ಸಾವಿರಾರು ಕ್ಷತ್ರಿಯರ ಗಣಕ್ಕೆ ಸಮಾನವಾದ ಬಲವುಳ್ಳವನಾಗಿದ್ದನು. ನಾಭಾಗಾರಿಷ್ಟಪುತ್ರನಾದ ಭಲಂದನನು ಮಹಾಪಂಡಿತನಾಗಿದ್ದನು.

೪. ಭಲಂದನನ ಪುತ್ರನಾದ ಪ್ರಾಂಶುನೆಂಬುವನು ಮಹಾಬಲಿಷ್ಠನಾಗಿದ್ದನು. ಆ ಪ್ರಾಂಶುವೆಂಬುವನಿಗೆ ಪ್ರಜಾಸಿಯೆಂಬ ಲೋಕವಿಖ್ಯಾತನಾದ ಒಬ್ಬ ಮಗನಿದ್ದನು. ಅವನು ಅತಿ ಪ್ರಖ್ಯಾತನಾಗಿದ್ದನು.

೫. ಆ ಪ್ರಜಾನಿಯೆಂಬುವನಿಗೆ ಶೂರನೂ, ಖನಿತ್ರನಾಮಕನೂ ಆದ ಕುಮಾರನು ಹುಟ್ಟಿದನು. ಆ ಖನಿತ್ರನಿಗೆ ಶ್ರೀಮಂತನೂ ಮಹಾಕೀರ್ತಿವಂತನೂ ಆದ ಕ್ಷುಪನೆಂಬಪ್ರ ಖ್ಯಾತನಾದ ಸುತನು ಆವಿರ್ಭವಿಸಿದನು.

೬. ಆ ಕ್ಷುಪನಿಗೆ ವಿಂಶನೆಂಬ ಪುತ್ರನು ಜನಿಸಿದನು. ಅವನಿಗೆ ಸಮಾನರಾದ ಪುರುಷರು ಯಾರೂ ಇಲ್ಲ. ಆ ವಿಂಶನಿಗೆ ಮಂಗಳಕರನೂ, ಧಾರ್ಮಿಕನೂ ಆದ ವಿವಿಂಶನೆಂಬ ಕುಮಾರನು ಜನಿಸಿ ಪ್ರಖ್ಯಾತನಾದನು.

ವಿವಿಂಶಪುತ್ರೋ ಧರ್ಮಾತ್ಮಾ ಖನಿನೇತ್ರಃ ಪ್ರತಾಪವಾನ್ ।
ಕರಂಧಮಸ್ತಸ್ಯ ಪುತ್ರಸ್ತ್ರೇತಾಯುಗಮುಖೇಽಭವತ್ ॥ ೭ ॥

ಕರಂಧಮಸುತಶ್ಚಾಪಿ ಅವಿಕ್ಷಿನ್ನಾಮ ವೀರ್ಯವಾನ್ ।
ಅವಿಕ್ಷಿತೋಽ ವ್ಯತಿಕ್ರಾಮತ್ ಪಿತರಂ ಗುಣವತ್ತಯಾ ॥ ೮ ॥

ಮರುತ್ತೋ ನಾಮ ಧರ್ಮಾತ್ಮಾ ಚಕ್ರವರ್ತಿಸಮೋ ನೃಪಃ ।
ಸಂವರ್ತೇನ ದಿವನ್ನೀತಃ ಸಸುಹೃತ್ ಸಹ ಬಾಂಧವೈಃ ॥ ೯ ॥

ವಿವಾದೋಽತ್ರ ಮಹಾನಾಸೀತ್ ಸಂವರ್ತಸ್ಯ ಬೃಹಸ್ಪತೇಃ ।
ಋದ್ಧಿಂ ದೃಷ್ಟ್ವಾ ತು ಯಜ್ಞಸ್ಯ ಕ್ರುದ್ಧಸ್ತಸ್ಯ ಬೃಹಸ್ಪತಿಃ ॥ ೧೦ ॥

---

೭. ಆ ವಿವಿಂಶನಿಗೆ ಧರ್ಮಾತ್ಮನೂ, ಪ್ರತಾಪಶಾಲಿಯೂ ಆದ ಖನಿನೇತ್ರನೆಂಬ ಕುಮಾರನು ಉತ್ಪನ್ನನಾದನು. ಅವನಿಗೆ ಕರಂಧಮನೆಂಬ ಸುಪ್ರಸಿದ್ಧನಾದ ತನೂಜನು ಅವತರಿಸಿದನು. ಅವನು ತ್ರೇತಾಯುಗದ ಪ್ರಾರಂಭದಲ್ಲಿದ್ದನು.

೮. ಆ ಕರಂಧಮನಿಗೆ ಅತ್ಯಂತ ಶೂರನಾದ ಅವಿಕ್ಷಿತನೆಂಬ ಸುತನು ಹುಟ್ಟಿದನು. ಆ ಅವಿಕ್ಷಿದ್ರಾಜನು ಮಹಾಸದ್ಗುಣಗಳಿಂದ ತನ್ನ ತಂದೆಯನ್ನು ಮೀರಿದ್ದನು.

೯. ಅವಿಕ್ಷಿತನಿಗೆ, ಧರ್ಮಾತ್ಮನೂ, ಸಾರ್ವಭೌಮನಿಗೆ ಸಮನೂ, ಆದ ಮರುತ್ತನೆಂಬ ಕುಮಾರನು ಜನಿಸಿದನು. ಅವನು ಬಂಧುಮಿತ್ರಸಮೇತನಾಗಿ ಸಂವರ್ತನ ಮೂಲಕ ಸ್ವರ್ಗವನ್ನೂ, ಹೊಂದಿ ದಿವ್ಯಸೌಖ್ಯವನ್ನು ಪಡೆದನು.

೧೦. ಮಹಾಶೂರನಾದ ಸಂವರ್ತನ ಕಾಲದಲ್ಲಿ ಅವನಿಗೂ ಬೃಹಸ್ಪತಿಗೂ, ಅತ್ಯಂತ ವಿವಾದವು ಸಂಭವಿಸಿತು. ಏಕೆಂದರೆ ಬೃಹಸ್ಪತಿಗಳು ಆ ಸಂವರ್ತನ ಯಾಗದ ಸಮೃದ್ಧಿಯನ್ನು ನೋಡಿ ಅಸೂಯೆಯಿಂದ ವಿವಾದವನ್ನು ಪ್ರಾರಂಭಿಸಿದರು.

ಸಂವರ್ತೇನ ಹೃತೇ ಯಜ್ಞೇ ಚುಕೋಪ ಸುಭೃಶಂ ತದಾ ।
ಲೋಕಾನಾಂ ಸ ಹಿ ನಾಶಾಯ ದೈವತೈರ್ಹಿ ಪ್ರಸಾದಿತಃ ॥ ೧೧ ॥

ಮರುತ್ತಶ್ಚಕ್ರವರ್ತೀ ಸ ನರಿಷ್ಯಂತಮವಾಪ್ತವಾನ್ ।
ನರಿಷ್ಯಂತಸ್ಯ ದಾಯಾದೋ ರಾಜಾ ದಂಡಧರೋ ದಮಃ ॥ ೧೨ ॥

ತಸ್ಯ ಪುತ್ರಸ್ತು ವಿಕ್ರಾಂತೋ ರಾಜಾಸೀದ್ರಾಷ್ಟ್ರವರ್ಧನಃ ।
ಸುಧೃತೀ ತಸ್ಯ ಪುತ್ರಸ್ತು ನರಃ ಸುಧೃತಿನಃ ಸುತಃ ॥ ೧೩ ॥

ಕೇವಲಸ್ತಸ್ಯ ಪುತ್ರಸ್ತು ಬಂಧುಮಾನ್ ಕೇವಲಾತ್ಮಜಃ ।
ಅಥ ಬಂಧುಮತಃ ಪುತ್ರೋ ಧರ್ಮಾತ್ಮಾ ವೇಗವಾನ್ ನೃಪಃ ॥ ೧೪ ॥

---

೧೧. ಸಂವರ್ತನು ಯಜ್ಞವನ್ನು ನಾಶಮಾಡಲು ಅವನು ಬಹಳವಾಗಿ ಕೋಪಮಾಡಿದನು. ಅದರಿಂದ ಲೋಕವು ನಾಶವಾಗುವ ಹಾಗೆ ಆಯಿತು. ದೇವತೆಗಳು ಲೋಕವು ನಾಶವಾಗುವ ಹಾಗೆ ಅವಕಾಶವನ್ನು ಕೊಡಲಿಲ್ಲ. ಲೋಕವು ನಾಶವಾಗ ದಂತೆ ಅನುಗ್ರಹಿಸಿದರು.

೧೨. ಚಕ್ರವರ್ತಿಯಾದ ಮರುತ್ತನು ನರಿಷ್ಯಂತನೆಂಬ ಕುಮಾರನನ್ನು ಪಡೆದನು. ನರಿಷ್ಯಂತನಿಗೆ ದಾಯಾದನಾದ ದಂಡಧರನೆಂಬ ಕುಮಾರನು ಹುಟ್ಟಿ ಸುಪ್ರಸಿದ್ಧನಾದನು. ಅವನಿಗೆ ದಮನೆಂಬ ನಾಮಾಂತರವು ಸುಪ್ರಸಿದ್ಧವಾಗಿದೆ.

೧೩. ನರಿಷ್ಯಂತನಿಗೆ ಪರಾಕ್ರಮಿಯಾದ ರಾಷ್ಟ್ರವರ್ಧನನೆಂಬ ಕುಮಾರನು ಜನಿಸಿದನು. ಅವನಿಗೆ ಸುಧೃತಿಯೆಂಬುವನೂ, ಅವನಿಗೆ ನರನೆಂಬ ಕುಮಾರನೂ ಉದ್ಭೂತರಾದರು.

೧೪. ಆ ನರನಿಗೆ ಕೇವಲನೆಂಬ ಕುಮಾರನೂ, ಅವನಿಗೆ ಬಂಧುಮಂತನೆಂಬ ಸುತನೂ, ಅವನಿಗೆ ಧರ್ಮಾತ್ಮನಾದ ವೇಗವಂತನೆಂಬ ತನುಜನೂ ಹುಟ್ಟಿದರು.

**ಬುಧೋ ವೇಗವತಃ ಪುತ್ರಸ್ತೃಣಬಿಂದುರ್ಬುಧಾತ್ಮಜಃ ।**
**ತ್ರೇತಾಯುಗಮುಖೇ ರಾಜಾ ತೃತೀಯೋ ಸಂಬಭೂವ ಹ || ೧೫ ||**

**ಕನ್ಯಾ ತು ತಸ್ಯ ದ್ರವಿಡಾ ಮಾತಾ ವಿಶ್ರವಸೋ ಹಿ ಸಾ ।**
**ಪುತ್ರಶ್ಚಾಸ್ಯ ವಿಶಾಲೋಽಭೂತ್ ರಾಜಾ ಪರಮಧಾರ್ಮಿಕಃ || ೧೬ ||**

**ವಿಶಾಲಸ್ಯ ಸಮುತ್ಪನ್ನಾ ವಿಶಾಲಾ ನಯನಿರ್ಮಿತಾ ।**
**ವಿಶಾಲಸ್ಯ ಸುತೋ ರಾಜಾ ಹೇಮಚಂದ್ರೋ ಮಹಾಬಲಃ || ೧೭ ||**

**ಸುಚಂದ್ರ ಇತಿ ವಿಖ್ಯಾತೋ ಹೇಮಚಂದ್ರಾದನಂತರಂ ।**
**ಸುಚಂದ್ರತನಯೋ ರಾಜಾ ಧೂಮ್ರಾಶ್ವ ಇತಿ ವಿಶ್ರುತಃ || ೧೮ ||**

---

೧೫. ಆ ವೇಗವಂತನಿಗೆ ಬುಧನೆಂಬ ಕುಮಾರನು ಜನಿಸಿದನು. ಅವನಿಗೆ ತೃಣಬಿಂದುನಾಮಕರಾಜನು ಜನಿಸಿ, ರಾಜ್ಯವನ್ನು ಪಾಲಿಸುತ್ತಿದ್ದನು. ಇವರು ತ್ರೇತಾಯುಗದ ಆದಿಯಲ್ಲಿ ಹುಟ್ಟಿ ರಾಜ್ಯವನ್ನು ಆಳುತ್ತಿದ್ದರು.

೧೬. ಆ ತೃಣಬಿಂದುವಿಗೆ ದ್ರವಿಡನಾಮಕಕುಮಾರಿಯೂ, ಅವಳಿಗೆ ವಿಶ್ರವಸನೆಂಬ ಸುತನೂ, ಆ ವಿಶ್ರವಸುವಿಗೆ ಪರಮಧಾರ್ಮಿಕನಾದ ವಿಶಾಲನೆಂಬ ರಾಜನೂ, ಜನಿಸಿ ಖ್ಯಾತಿವಂತರಾಗಿದ್ದರು.

೧೭. ಆ ವಿಶಾಲಮಹಾರಾಜನಿಗೆ, ನಯಭಕ್ತಿಗಳಿಂದ ಭರಿತಳಾದ ವಿಶಾಲಾನಾಮಕಕುಮಾರಿಯೂ, ಮಹಾಬಲಶಾಲಿಯೂ, ವಿಖ್ಯಾತನೂ ಆದ ಹೇಮಚಂದ್ರನೆಂಬ ಮಹಾರಾಜನೂ ಜನಿಸಿದರು.

೧೮. ಹೇಮಚಂದ್ರನನಂತರ ಆ ವಂಶದಲ್ಲಿ ಪ್ರಸಿದ್ಧನಾದ ಸುಚಂದ್ರನೆಂಬ ರಾಜನೂ, ಅವನಿಗೆ ಲೋಕವಿಖ್ಯಾತನೂ, ಸುಪ್ರಸಿದ್ಧನೂ ಆದ ಧೂಮ್ರಾಶ್ವನೆಂಬ ಮಹಾರಾಜರು ಜನಿಸಿದರು.

ಧೂಮ್ರಾಶ್ವತನಯೋ ವಿದ್ವಾನ್ ಸೃಂಜಯಃ ಸಮಪದ್ಯತ ।
ಸೃಂಜಯಸ್ಯ ಸುತಃ ಶ್ರೀಮಾನ್ ಸಹದೇವಃ ಪ್ರತಾಪವಾನ್ ॥ ೧೯ ॥

ಕೃಶಾಶ್ವಃ ಸಹದೇವಸ್ಯ ಪುತ್ರಃ ಪರಮಧಾರ್ಮಿಕಃ ।
ಕೃಶಾಶ್ವಸ್ಯ ಮಹಾತೇಜಾಃ ಸೋಮದತ್ತಃ ಪ್ರತಾಪವಾನ್ ॥ ೨೦ ॥

ಸೋಮದತ್ತಸ್ಯ ರಾಜರ್ಷೇಃ ಸುತೋಽಭೂಜ್ಜನಮೇಜಯಃ ।
ಜನಮೇಜಯಾತ್ಮಜಶ್ಚೈವ ಪ್ರಮತಿರ್ನಾಮ ವಿಶ್ರುತಃ ॥ ೨೧ ॥

ತೃಣಬಿಂದುಪ್ರಸಾದೇನ ಸರ್ವೇ ವೈಶಾಲಕಾ ನೃಪಾಃ ।
ದೀರ್ಘಾಯುಷೋ ಮಹಾತ್ಮಾನೋ ವೀರ್ಯವಂತಃ ಸುಧಾರ್ಮಿಕಾಃ॥೨೨॥

---

೧೯. ಆ ಧೂಮ್ರಾಶ್ವನಿಗೆ, ಮಹಾಪಂಡಿತನಾದ ಸೃಂಜಯನೆಂಬ ಕುಮಾರನೂ, ಆ ಸೃಂಜಯನಿಗೆ ಮಹಾತೇಜಸ್ವಿಯೂ, ಮಹದೈಶ್ವರ್ಯವಂತನೂ, ಮಹಾ ಪರಾಕ್ರಮಿಯೂ ಆದ ಸಹದೇವನೆಂಬ ಮಹಾರಾಜನೂ ಅವತರಿಸಿದರು.

೨೦. ಆ ಸಹದೇವಮಹಾರಾಜನಿಗೆ ಪರಮಧಾರ್ಮಿಕನೂ, ದಯಾಳುವೂ ಆದ ಕೃಶಾಶ್ವನಾಮಕನಾದ ಕುಮಾರನೂ, ಅವನಿಗೆ ಮಹಾತೇಜಸ್ವಿಯೂ, ಮಹಾ ಪರಾಕ್ರಮಿಯೂ ಆದ ಸೋಮದತ್ತನೆಂಬ ಸುತನೂ ಉದ್ಭವಿಸಿದರು.

೨೧. ಪರಮದಯಾಳುವೂ, ರಾಜರ್ಷಿಯೂ, ಆದ ಸೋಮದತ್ತನಿಗೆ ಜನಮೇಜಯ ಮಹಾರಾಜನು ಉತ್ಪನ್ನನಾದನು. ಆ ಜನಮೇಜಯ ಮಹಾರಾಜನಿಗೆ ಅತ್ಯಂತ ಪ್ರಸಿದ್ಧನಾದ ಪ್ರಮತಿಯೆಂಬ ಮಹಾರಾಜನು ಹುಟ್ಟಿದನು.

೨೨. ತೃಣಬಿಂದುಮುನಿಗಳ ಪರಮಾನುಗ್ರಹದಿಂದ ವೈಶಾಲನಾಮಕರಾದ ಸಮಸ್ತ ರಾಜರು ದೀರ್ಘಾಯುಷ್ಯವಂತರೂ, ಮಹಾತ್ಮರೂ, ಶೌರ್ಯವಂತರೂ, ಅತ್ಯಂತ ಧಾರ್ಮಿಕರೂ ಆಗಿ ಖ್ಯಾತಿಗೊಂಡಿದ್ದರು.

ಶರ್ಯಾತೇರ್ಮಿಥುನಂ ತ್ವಾಸೀದಾನರ್ತೋ ನಾಮ ವಿಶ್ರುತಃ ।
ಪುತ್ರ ಸುಕನ್ಯಾ ಕನ್ಯಾ ಚ ಭಾರ್ಯಾ ಯಾಚ್ಯವನಸ್ಯ ತು ॥ ೨೩ ॥

ಆನರ್ತಸ್ಯ ತು ದಾಯಾದೋ ರೇವ್ರೋ ನಾಮ್ನಾ ತು ವೀರ್ಯವಾನ್ ।
ಆನರ್ತೋ ವಿಷಯೋ ಯಸ್ಯ ಪುರೀಚಾಪಿ ಕುಶಸ್ಥಲೀ ॥ ೨೪ ॥

ರೇವಸ್ಯ ರೈವತಃ ಪುತ್ರಃ ಕಕುದ್ಮೀ ನಾಮ ಧಾರ್ಮಿಕಃ ।
ಜ್ಯೇಷ್ಠೋ ಭ್ರಾತೃಶತಸ್ಯಾಸೀದ್ರಾಜಾ ಪ್ರಾಪ್ಯ ಕುಶಸ್ಥಲೀಂ ॥ ೨೫ ॥

ಕನ್ಯಯಾ ಸಹ ಶ್ರುತ್ವಾ ಚ ಗಾಂಧರ್ವಂ ಬ್ರಹ್ಮಣೋಂತಿಕೇ ।
ಮುಹೂರ್ತಂ ದೇವದೇವಸ್ಯ ಮಾರ್ತ್ಯಂ ಬಹುಯುಗಂ ವಿಭೋಃ ॥ ೨೬ ॥

---

೨೩. ಶರ್ಯಾತಿಮಹಾರಾಜನಿಗೆ ಲೋಕವಿಖ್ಯಾತನಾದ ಆನರ್ತನಾಮಕ ಪುತ್ರನೂ, ಸುಕನ್ಯಾಮಕಳಾದ ಕುಮಾರಿಯೂ, ಜನಿಸಿದರು. ಆ ಸುಕನ್ಯೆಯು ಚ್ಯವನನ ಜನನಿಯಾಗಿದ್ದಳು.

೨೪. ಆನರ್ತಮಹಾರಾಜನಿಗೆ ಮಹಾಶೂರನೂ, ಖ್ಯಾತಿವಂತನೂ ಆದ ರೇವನೆಂಬ ಮಹಾರಾಜನು ಹುಟ್ಟಿದನು. ಅವನ ದೇಶವು ಆನರ್ತವೆಂದು ಪ್ರಖ್ಯಾತ ವಾಗಿತ್ತು. ಅವನ ರಾಜಧಾನಿಯು ಕುಶಸ್ಥಲಿಯಾಗಿತ್ತು.

೨೫. ರೇವಮಹಾರಾಜನಿಗೆ ರೈವತನಾಮಕರಾಜನು ಉತ್ಪನ್ನನಾದನು. ಅವನು ಕಕುದ್ಮೀನಾಮಕನೂ, ಧಾರ್ಮಿಕನೂ ಆಗಿದ್ದನು. ಆ ರೈವತಮಹಾರಾಜನು ನೂರಾರು ಸಹೋದರರಿಂದ ಸಹಿತನಾಗಿ, ಕುಶಸ್ಥಳದಲ್ಲಿ ಧರ್ಮದಿಂದ ರಾಜ್ಯವನ್ನು ಪಾಲಿಸುತ್ತಿದ್ದನು.

೨೬. ಆ ರೇವತಮಹಾರಾಜನಿಗೆ ರೇವತೀನಾಮಕಕುಮಾರಿಯು ಜನಿಸಿದಳು. ಆ ರಾಜನು ತರುಣಿಯಾದ ಮಗಳೊಡನೆ ಬ್ರಾಹ್ಮಣನ ಮೂಲಕ ದೇವದೇವನೂ, ಸ್ವಾಮಿಯೂ ಆದ ಭಗದ್ವಿಷಯಗಳಾದ ಬಹುಯುಗಮಹಿಮೆಗಳನ್ನು ಕೇಳಿ, ಆ ಭಗವದ್ದರ್ಶನಕ್ಕಾಗಿ ದ್ವಾರಕಾನಗರಕ್ಕೆ ಹೊರಟನು.

**ಆಜಗಾಮ ಯುವಾ ಚೈವ ಸ್ವಾಂ ಪುರೀಂ ಯಾದವೈರ್ವೃತಾಂ ।**
**ಕೃತಾಂ ದ್ವಾರವತೀಂ ನಾಮ ಬಹುದ್ವಾರಾಂ ಮನೋರಮಾಂ ॥ ೨೭ ॥**

**ಭೋಜವೃಷ್ಣ್ಯಂಧಕೈರ್ಗುಪ್ತಾಂ ವಸುದೇವಪುರೋಗಮೈಃ ।**
**ತಾಂ ಕಥಾಂ ರೈವತಃ ಶ್ರುತ್ವಾ ಯಥಾತತ್ವಮರಿಂದಮಃ ॥ ೨೮ ॥**

**ಕನ್ಯಾಂ ತು ಬಲದೇವಾಯ ಸುವ್ರತಾಂ ನಾಮ ರೇವತೀಂ ।**
**ದತ್ವಾ ಜಗಾಮ ಶಿಖರಂ ಮೇರೋಸ್ತಪಸಿ ಸಂಸ್ಥಿತಃ ॥ ೨೯ ॥**

**ರೇಮೇ ರಾಮಶ್ಚ ಧರ್ಮಾತ್ಮಾ ರೇವತ್ಯಾ ಸಹಿತಃ ಕಿಲ ।**
**ತಾಂ ಕಥಾಂ ಋಷಯಃ ಶ್ರುತ್ವಾ ಪಪ್ರಚ್ಛುಸ್ತದನಂತರಂ ॥ ೩೦ ॥**

**॥ ಋಷಯ ಊಚುಃ ॥**

**ಕಥಂ ಬಹುಯುಗೇ ಕಾಲೇ ವ್ಯತೀತೇ ಸೂತನಂದನ ।**
**ನ ಜರಾಂ ರೇವತೀ ಪ್ರಾಪ್ತಾ ಪಲಿತಂ ಚ ಕುತಃ ಪ್ರಭೋ ॥ ೩೧ ॥**

---

೨೭–೨೯. ಆ ದ್ವಾರಕಾನಗರಿಯು ಯಾದವರಿಂದ ಸಹಿತವೂ, ಅನೇಕ ದ್ವಾರಗಳಿಂದ ಯುಕ್ತವೂ, ಅತ್ಯಂತ ರಮ್ಯವೂ, ಭೋಜರು, ವೃಷ್ಣಿಗಳು, ಅಂಧಕರು, ವಸುದೇವನು ಇವರೇ ಮೊದಲಾದವರಿಂದ ಸುರಕ್ಷಿತವೂ, ಆಗಿ ಪ್ರಜ್ವಲಿಸುತ್ತಿತ್ತು ಎಂಬ ಕಥೆಯನ್ನು ಶತ್ರುಸಂಹಾರಕನಾದ ರೇವತರಾಜನು ಯಥಾಸ್ಥಿತವಾಗಿ ಕೇಳಿದನು. ತರುವಾಯ ಆ ರಾಜನು ತನ್ನ ಕುಮಾರಿಯೂ, ಸಾಧ್ವೀಮಣಿಯೂ, ಆದ ರೇವತೀದೇವಿಯನ್ನು ಸ್ವಾಮಿಯಾದ ಬಲದೇವನಿಗೆ ಕೊಟ್ಟು ವಿವಾಹಮಹೋತ್ಸವವನ್ನು ನೆರವೇರಿಸಿದನು. ತರುವಾಯ ಮೇರುಗಿರಿಯ ಶಿಖರಕ್ಕೆ ಹೋಗಿ ಮಹಾ ತಪಸ್ಸನ್ನು ಮಾಡಿದನು.

೩೦. ಧರ್ಮರೂಪಿಯಾದ ಬಲರಾಮನೂ ಸಹ, ರೇವತಿಯನ್ನು ಮದುವೆಯಾಗಿ ಅವಳೊಡನೇ ಸುಖವಾಗಿ ದ್ವಾರಕಾನಗರದಲ್ಲಿ ವಾಸಿಸಿದನೆಂಬ ಕಥೆಯನ್ನು ಸೂತಮುನಿಯ ಮೂಲಕವಾಗಿ ಕೇಳಿದ ಮಹರ್ಷಿಗಳು ಪುನಃ ಪ್ರಶ್ನೆ ಮಾಡಿದರು.

೩೧-೩೨. ಮಹರ್ಷಿಗಳು ಹೇಳಿದರು :—ಎಲೈ ಸೂತಮುನಿಯೇ, ಅನೇಕ ಯುಗಗಳು ಕಳೆದಿದ್ದರೂ ಸಹ, ರೇವತೀದೇವಿಯು ಮುದಿತನವನ್ನು ಏಕೆ ಹೊಂದಲಿಲ್ಲ?

ಮೇರುಂ ಗತಸ್ಯ ವಾ ತಸ್ಯ ಶಾರ್ಯಾತೇಃ ಸಂತತಿಃ ಕಥಂ ।
ಸ್ಥಿತಾ ಪೃಥಿವ್ಯಾಮದ್ಯಾಪಿ ಶ್ರೋತುಮಿಚ್ಛಾಮಿ ತತ್ತ್ವತಃ ॥ ೩೨ ॥

ಕಿಯಂತೋ ವಾ ಸುರಗಣಾ ಗಂಧರ್ವಾಸ್ತತ್ರಕೀದೃಶಾಃ ।
ಯಚ್ಛೃತ್ವಾ ರೈವತಃ ಕಾಲಾನ್ ಮುಹೂರ್ತಮಿವಮನ್ಯತೇ ॥ ೩೩ ॥

॥ ಸೂತ ಉವಾಚ ॥

ನ ಜರಾ ಕ್ಷುತ್ಪಿಪಾಸಾ ವಾ ನ ಚ ಮೃತ್ಯುಭಯಂ ತತಃ ।
ನ ಚ ರೋಗಃ ಪ್ರಭವತಿ ಬ್ರಹ್ಮಲೋಕಗತಸ್ಯ ಹಿ ॥ ೩೪ ॥

ಗಾಂಧರ್ವಂ ಪ್ರತಿ ಯಚ್ಚಾಪಿ ಪೃಷ್ಟಸ್ತು ಮುನಿಸತ್ತಮಾಃ ।
ತತೋಽಹಂ ಸಂಪ್ರವಕ್ಷ್ಯಾಮಿ ಯಾಥಾತಥ್ಯೇನ ಸುವ್ರತಾಃ ॥ ೩೫ ॥

---

ಏತರಿಂದ ಅವಳು ನೆರೆಯನ್ನು ಹೊಂದಲಿಲ್ಲ ? ಮತ್ತು ಮೇರುಗಿರಿಗೆ ತಪಸ್ಸಿಗೆ ಹೋದ ಶರ್ಯಾತಿಮಹಾರಾಯನ ವಂಶವು ಈಗಲೂ ಸಹ ಖ್ಯಾತಿಗೊಂಡು ನೆಲಸಿರಲು ಕಾರಣವೇನು ? ಇವುಗಳನ್ನು ತಾವು ದಯಪಾಲಿಸಿ ತಿಳಿಸಬೇಕೆಂದು ಮುನಿಗಳು ಪ್ರಾರ್ಥಿಸಿದರು.

೩೩. ಆ ದ್ವಾರಕೆಯಲ್ಲಿ ದೇವಗಣಗಳು ಎಷ್ಟು ಇವೆ ? ಗಂಧರ್ವರು ಎಂತಹವರು? ಯಾವ ವಿಷಯಗಳನ್ನು ಕೇಳುತ್ತಾ, ರೇವತರಾಜನು ಅನೇಕ ಸಂವತ್ಸರಗಳನ್ನು ಮುಹೂರ್ತದಂತೆ ಕಳೆದನು ? ಇವುಗಳನ್ನು ತಿಳಿಸಬೇಕೆಂದು ಬೇಡಿದರು.

೩೪. ಸೂತಮುನಿಯು ಹೇಳಿದನು :—ಎಲೈ ಮಹರ್ಷಿಗಳೇ, ಆ ದ್ವಾರಕಾ ನಗರದಲ್ಲಿ ಮುದಿತನ, ಹಸಿವು, ಬಾಯಾರಿಕೆ, ಮೃತ್ಯು, ರೋಗ, ಇವುಗಳ ಭಯವು ಯಾವಾಗಲೂ ಇಲ್ಲವೇ ಇಲ್ಲ. ಏಕೆಂದರೆ ಅದು ಬ್ರಹ್ಮಲೋಕಕ್ಕೆ ಸಮವಾಗಿರುವುದು.

೩೫. ಎಲೈ ಮುನಿವರ್ಯರೇ, ಗಾಂಧರ್ವವಿದ್ಯೆಯನ್ನು ಕುರಿತು, ಯಾವ ವಿಷಯವನ್ನು ಕೇಳಿದಿರೋ ಅದನ್ನು ಯಥಾಸ್ಥಿತವಾಗಿ ನಿರೂಪಿಸುವೆನು, ಸಾವಧಾನವಾಗಿ ಕೇಳಿರೆಂದನು.

ಸಪ್ತ ಸ್ವರಾಸ್ತ್ರಯೋ ಗ್ರಾಮಾ ಮೂರ್ಛನಾಸ್ತ್ವೇಕವಿಂಶತಿಃ ।
ತಾಲಾಶ್ಚೈಕೋನಪಂಚಾಶದಿತ್ಯೇತತ್ ಸ್ವರಮಂಡಲಂ ॥ ೩೬ ॥

ಷಡ್ಜರ್ಷಭೌ ಚ ಗಾಂಧಾರೋ ಮಧ್ಯಮಃ ಪಂಚಮಸ್ತಥಾ ।
ಧೈವತಶ್ಚಾಪಿ ವಿಜ್ಞೇಯಸ್ತಥಾ ಚಾಪಿ ನಿಷಾದವಾನ್ ॥ ೩೭ ॥

ಸೌಬೀರೀ ಮಧ್ಯಮಗ್ರಾಮೋ ಹರಿಣಾಸ್ಯಾ ತಥೈವ ಚ ।
ಸ್ಯಾತ್ಕಲೋಪಬಲೋಪೇತಾ ಚತುರ್ಥೀ ಶುದ್ಧಮಧ್ಯಮಾ ॥ ೩೮ ॥

ಶಾರ್ಙ್ಗೀ ಚ ಪಾವನೀ ಚೈವ ದೃಷ್ಟಾಕಾ ಚ ಯಥಾಕ್ರಮಂ ।
ಮಧ್ಯಮಗ್ರಾಮಿಕಾಃ ಖ್ಯಾತಾಃ ಷಡ್ಜಗ್ರಾಮಂ ನಿಬೋಧತ ॥ ೩೯ ॥

ಉತ್ತರಮಂದ್ರಾ ರಜನೀ ತಥಾ ಯಾ ಚೋತ್ತರಾಯತಾ ।
ಶುದ್ಧಷಡ್ಜಾ ತಥಾ ಚೈವ ಜಾನೀಯಾತ್ ಸಪ್ತಮಾಂ ಚ ತಾಂ ॥ ೪೦ ॥

---

೩೬. ಗಾಂಧರ್ವವಿದ್ಯೆಯಲ್ಲಿ ಏಳು ಸ್ವರಗಳೂ, ಆರೋಹಣಾವರೋಹಣ ಸಮತೆಯೆಂಬ ಮೂರು ಗ್ರಾಮಗಳೂ, ಇಪ್ಪತ್ತೊಂದು ಮೂರ್ಛನೆಗಳೂ, ನಲವತ್ತೊಂಬತ್ತು ಕಾಲಗಳೂ, ಇವುಗಳು ಸ್ವರಗಳ ವಿಚಾರದಲ್ಲಿ ಉಕ್ತವಾಗಿವೆ.

೩೭. ಸಂಗೀತಶಾಸ್ತ್ರದಲ್ಲಿ ಸ್ವರಗಳು, ಷಡ್ಜ, ಋಷಭ, ಗಾಂಧಾರ, ಮಧ್ಯಮ, ಪಂಚಮ, ದೇವತ ನಿಷಾದವೆಂದು ಸಪ್ತವಿಧಗಳೆಂದು ಉಕ್ತವಾಗಿವೆ.

೩೮. ಸೌಬೀರೀ, ಹರಿಣಾಸ್ಯಾ ಎಂಬಿವು ಮಧ್ಯಮ ಗ್ರಾಮಕ್ಕೆ ಸೇರಿದವು. ಕಲೋಪಬಲೋಪೇತವಾದ ಶುದ್ಧ ಮತ್ತು ಮಧ್ಯವು ನಾಲ್ಕನೆಯದಾಗಿರುತ್ತದೆ.

೩೯. ಶಾರ್ಙ್ಗ, ಪಾವಿನೀ, ದೃಷ್ಟಾಕಾ ಎಂಬುವು ಯಥಾಕ್ರಮವಾಗಿ ಮಧ್ಯಮ ಗ್ರಾಮಕವೆಂಬುದಾಗಿ ಪ್ರಖ್ಯಾತವಾಗಿವೆ. ಈಗ ನಿಮಗೆ ಷಡ್ಜಗ್ರಾಮದ ಸ್ವರೂಪವನ್ನು ವಿವರಿಸುವೆನು, ಕೇಳಿರೆಂದನು.

೪೦. ಅವುಗಳಲ್ಲಿ ಯಾವುದು ಉತ್ತರಾಯತವಾಗಿಯೂ, ಉತ್ತರಮಂದ್ರಾ, ರಜನೀ ನಾಮದಿಂದ ಪ್ರಸಿದ್ಧವಾಗಿಯೂ, ಶುದ್ಧಷಡ್ಜವಾಗಿಯೂ, ಆಗಿದೆಯೋ, ಅದನ್ನು ಸಪ್ತಮವನ್ನಾಗಿ (ಏಳನೆಯದನ್ನಾಗಿ) ತಿಳಿಯಬೇಕು.

ಗಾಂಧಾರಗ್ರಾಮಿಕಾಂಶ್ಚಾನ್ಯಾನ್ ಕೀರ್ತ್ಯಮಾನಾನ್ ನಿಬೋಧತ ।
ಅಗ್ನಿಷ್ಟೋಮಿಕ್ರಮಾದ್ಯಂ ತು ದ್ವಿತೀಯಂ ವಾಜಪೇಯಿಕಂ ॥ ೪೧ ॥

ತೃತೀಯಂ ಪೌಂಡ್ರಕಂ ಪ್ರೋಕ್ತಂ ಚತುರ್ಥಂ ಚಾಶ್ವಮೇಧಿಕಂ ।
ಪಂಚಮಂ ರಾಜಸೂಯಂ ಚ ಷಷ್ಠಂ ಚಕ್ರಸುವರ್ಣಕಂ ॥ ೪೨ ॥

ಸಪ್ತಮಂ ಗೋಸವಂ ನಾಮ ಮಹಾವೃಷ್ಟಿಕಮಷ್ಟಮಂ ।
ಬ್ರಹ್ಮದಾನಂ ಚ ನವಮಂ ಪ್ರಾಜಾಪತ್ಯಮನಂತರಂ ॥ ೪೩ ॥

ನಾಗಪಕ್ಷಾಶ್ರಯಂ ವಿದ್ಯಾದ್ಗೋತರಂ ಚ ತಥೈವ ಚ ।
ಹಯಕ್ರಾಂತಂ ಮೃಗಕ್ರಾಂತಂ ವಿಷ್ಣುಕ್ರಾಂತಂ ಮನೋಹರಂ ॥ ೪೪ ॥

ಸೂರ್ಯಕ್ರಾಂತಂ ವರೇಣ್ಯಂ ಚ ಮತ್ತಕೋಕಿಲವಾದಿನಂ ।
ಸಾವಿತ್ರಮರ್ಧಸಾವಿತ್ರಂ ಸರ್ವತೋಮದ್ರಮೇವ ಚ ॥ ೪೫ ॥

---

೪೧-೪೩. ಗಾಂಧಾರಗ್ರಾಮಗಳನ್ನು ವರ್ಣಿಸುವೆನು ಕೇಳಿರೆಂದನು. ಅವುಗಳಲ್ಲಿ ಮೊದಲನೆಯದು ಅಗ್ನಿಷ್ಟೋಮಿಕ್ರಮವಾಗಿಯೂ, ಎರಡನೆಯದು ವಾಜಪೇಯಿಕವಾಗಿಯೂ, ಮೂರನೆಯದು ಪೌಂಡ್ರಕವಾಗಿಯೂ, ನಾಲ್ಕನೆಯದು ಅಶ್ವಮೇಧವಾಗಿಯೂ, ಐದನೆಯದು ರಾಜಸೂಯವಾಗಿಯೂ, ಆರನೆಯದು ಚಕ್ರಸುವರ್ಣಕವಾಗಿಯೂ, ಏಳನೆಯದು ಗೋಸವನಾಮಕವಾಗಿಯೂ, ಎಂಟನೆಯದು ಮಹಾವೃಷ್ಟಿಕವಾಗಿಯೂ, ಒಂಬತ್ತನೆಯದು ಬ್ರಹ್ಮದಾನನಾಮಕವಾಗಿಯೂ, ಹತ್ತನೆಯದು ಪ್ರಜಾಪತ್ಯನಾಮಧೇಯವಾಗಿಯೂ, ಇವೆಯೆಂದು ತಿಳಿಯಬೇಕು.

೪೪–೪೫. ಅನಂತರ ಅವು ನಾಗಪಕ್ಷಾಶ್ರಯ, ಗೋತರ, ಹಯಕ್ರಾಂತ, ಮೃಗಕ್ರಾಂತ, ವಿಷ್ಣುಕ್ರಾಂತ, ಮನೋಹರ, ಸೂರ್ಯಕ್ರಾಂತ, ವರೇಣ್ಯ, ಮತ್ತಕೋಕಿಲವಾದಿನ, ಸಾವಿತ್ರ, ಅರ್ಧಸಾವಿತ್ರ, ಸರ್ವತೋಮಂದ್ರವೆಂದು ಪ್ರಖ್ಯಾತವಾಗಿದೆ.

ಸುವರ್ಣಂ ಚ ಸುತಂದ್ರಂ ಚ ವಿಷ್ಣುರ್ವೈಷ್ಣು ಪರಾಪ್ರುಭೌ ।
ಸಾಗರಂ ವಿಜಯಂ ಚೈವ ಸರ್ವಭೂತಮನೋಹರಂ ॥ ೪೬ ॥

ಹಂಸಂ ಜ್ಯೇಷ್ಠಂ ವಿಜಾನೀಮುಸ್ತುಂಬುರುಪ್ರಿಯಮೇವ ಚ ।
ಮನೋಹರಮಧಾತ್ರ್ಯಂ ಚ ಗಂಧರ್ವಾನುಗತಶ್ಚ ಯಃ ॥ ೪೭ ॥

ಅಲಂಬುಷೇಷ್ಟಶ್ಚ ತಥಾ ನಾರದಪ್ರಿಯ ಏವ ಚ ।
ಕಥಿತೋ ಭೀಮಸೇನೇನ ನಾಗರಾಣಾಂ ಯಥಾ ಪ್ರಿಯಃ ॥ ೪೮ ॥

ಕರೋಪನೀತವಿನತಾ ಶ್ರೀರಾಖ್ಯೋ ಭಾರ್ಗವಪ್ರಿಯಃ ।
ವಿಂಶತಿರ್ಮಧ್ಯಮಗ್ರಾಮಃ ಷಡ್ಜಗ್ರಾಮಶ್ಚತುರ್ದಶ ॥ ೪೯ ॥

ತಥಾ ಪಂಚದಶೇಚ್ಛಂತಿ ಗಾಂಧಾರಗ್ರಾಮ ಸಂಸ್ಥಿತಾನ್ ।
ಸಸೌವೀರಾ ತು ಗಾಂಧಾರೀ ಬ್ರಹ್ಮಣಾ ಹ್ಯುಪಗೀಯತೇ ॥ ೫೦ ॥

ಉತ್ತರಾದಿಸ್ವರಸ್ಯೇವ ಬ್ರಹ್ಮಾ ವೈ ದೇವತಾತ್ರ ಚ ।
ಹರಿದೇಶಸಮುತ್ಪನ್ನಾ ಹರಿಣಾಸ್ಯಾ ವ್ಯಜಾಯತ ॥
ಮೂರ್ಚ್ಛನಾ ಹರಿಣಾಸ್ಯೇವ ಅಸ್ಯಾ ಇಂದ್ರೋಽಧಿದೈವತಂ ॥ ೫೧ ॥

---

೪೬–೫೦. ತರುವಾಯ ಮಧ್ಯಮಗ್ರಾಮವು ಸುವರ್ಣ, ಸುತಂತ, ವಿಷ್ಣು ವೈಷ್ಣವವರ, ಸಾಗರ, ವಿಜಯ, ಸರ್ವಭೂತ, ಮನೋಹರ, ಹಂಸ, ಜ್ಯೇಷ್ಠ, ತುಂಬುರುಪ್ರಿಯ, ಮನೋಹರ, ಅಧಾತ್ರ್ಯ, ಗಂಧರ್ವಾನುಗತ, ಅಲಂಬುಷೆಷ್ಟ, ನಾರದಪ್ರಿಯ, ನಾಗರಪ್ರಿಯ, ಕರೋಪನೀತ, ವಿನತಾ, ಶ್ರೀನಾಮಕ, ಭಾರ್ಗವಪ್ರಿಯ ವೆಂಬುದಾಗಿ ಇಪ್ಪತ್ತು ವಿಧವಾಗಿದೆ. ಷಡ್ಜಗ್ರಾಮವಾದರೋ ಹದಿನಾಲ್ಕು ಪ್ರಕಾರ ವಾಗಿದೆ. ಅದರಂತೆ ಗಾಂಧಾರಗ್ರಾಮದಲ್ಲಿ ಹದಿನೈದು ಪ್ರಭೇದಗಳಿವೆಯೆಂದು ಜ್ಞಾನಿಗಳು ಹೇಳುವರು. ಬ್ರಹ್ಮದೇವನು ಗಾಂಧಾರಿಯನ್ನು ಸಸೌವೀರವೆಂದು ವರ್ಣಿಸುವನು.

೫೧. ಈ ಸಂಗೀತಪ್ರಕರಣದಲ್ಲಿ ಉತ್ತರಾದಿ ಸ್ವರಕ್ಕೆ ಬ್ರಹ್ಮದೇವನು ದೇವತೆಯಾಗಿರುವನು. ಹರಿದೇಶದಲ್ಲಿ ಉತ್ಪನ್ನವಾಗಿರುವುದರಿಂದ ಅದು ಹರಿಣಾಸ್ಯಾ ನಾಮಕವಾಗಿದೆ. ಮೂರ್ಚ್ಛನೆಯೇ ಹರಿಣಾಸ್ಯವಾಗಿದೆ. ಇವಕ್ಕೆ ಇಂದ್ರನು ಅಧಿದೇವತೆಯಾಗಿರುವನು.

ಕರೋಪನೀತವಿತತಾ ಮರುದ್ಭಿಃ ಸ್ವರಮಂಡಲೇ ।
ಸಾ ಕಲೋಪನತಾ ತಸ್ಮಾನ್ಮಾರುತಶ್ಚಾತ್ರ ದೈವತಂ ॥ ೫೨ ॥

ಮನುದೇಶಸಮುತ್ಪನ್ನಾ ಮೂರ್ಛನಾಶುದ್ಧಮಧ್ಯಮಾ ।
ಮಧ್ಯಮೋಽತ್ರ ಸ್ವರಃ ಶುದ್ಧೋ ಗಂಧರ್ವಶ್ಚಾತ್ರ ದೇವತಾ ॥ ೫೩ ॥

ಮೃಗೈಃ ಸಹ ಸಂಚರತೇ ಸಿದ್ಧಾನಾಂ ಮಾರ್ಗದರ್ಶನೇ ।
ಯಸ್ಮಾತ್ತಸ್ಮಾತ್ ಸ್ಮೃತಾ ಮಾರ್ಗೀ ಮೃಗೇಂದ್ರೋಽಸ್ಯಾಶ್ಚ ದೇವತಾ॥೫೪॥

ಸಾ ಚಾಶ್ರಮಸಮಾಯುಕ್ತಾ ಅನೇಕಾಃ ಪೌರವಾನ್ ರವಾನ್ ।
ಮೂರ್ಛನಾ ಯೋಜನಾ ಹ್ಯೇಷಾ ರಜಸಾ ರಜನೀ ತತಃ ॥ ೫೫ ॥

---

೫೨. ಸ್ವರಮಂಡಲದಲ್ಲಿ, ಸ್ವರಗಳು ಹಸ್ತಚಮತ್ಕಾರಗಳಿಂದ ವ್ಯಕ್ತವಾಗುವುದರಿಂದ ಕರೋಪನೀತವಿತತವೆಂದೂ, ಕಲೋಪಗತವೆಂದೂ, ಪ್ರಖ್ಯಾತವಾಗಿವೆ. ಇವಕ್ಕೆ ಮರುತ್ತುಗಳೇ ದೇವತೆಗಳಾಗಿರುವರು.

೫೩. ಮನುದೇಶಸಮುತ್ಪನ್ನವಾದ ಮೂರ್ಛನೆಯು ಶುದ್ಧಮಧ್ಯಮವೆಂದು ಪ್ರಖ್ಯಾತವಾಗಿದೆ. ಅವುಗಳಲ್ಲಿ ಮಧ್ಯಮಸ್ವರವು ಶುದ್ಧವಾಗಿದೆ. ಇದಕ್ಕೆ ಗಂಧರ್ವರು ದೇವತೆಗಳಾಗಿರುವರು.

೫೪. ಸಿದ್ಧರಿಗೆ ಮಾರ್ಗದರ್ಶಕಗಳಾದ ಮೃಗಗಳ ಸಂಗಡ ಸಂಚರಿಸುವುದರಿಂದ ಅಂದರೆ ಮೃಗಗಳಿಗೆ ಆನಂದಕರವಾಗಿರುವುದರಿಂದ ಅದಕ್ಕೆ ಮಾರ್ಗೀ ಎಂಬ ನಾಮವು ಸಂಭವಿಸಿದೆ. ಇದಕ್ಕೆ ಮೃಗೇಂದ್ರನು ದೇವತೆಯಾಗಿರುವನು.

೫೫. ಆ ಸ್ವರವು ಮಹರ್ಷಿಗಳ ಆಶ್ರಮಗಳಲ್ಲಿ ಜನಿಸಿ, ಅಸಂಖ್ಯಾತ ಪೌರವರ ಸ್ವರಗಳನ್ನು ಸೇರಿ ಮೂರ್ಛೆಗೊಳಿಸುವುದರಿಂದ, ರಜನೀ ಎಂದು ರಜೋಗುಣದಿಂದ ಪ್ರಖ್ಯಾತವಾಗಿದೆ.

ತಾಲ ಉತ್ತರಮಂದ್ರಾಂಶಃ ಷಡ್ಜದೈವತಕಾಂ ವಿದುಃ ।
ತಸ್ಮಾದುತ್ತರತಾಲಂ ಚ ಪ್ರಥಮಂ ಸ್ವಾಯತಂ ವಿದುಃ ॥
ತಸ್ಮಾದುತ್ತರಮಂದ್ರೋಯಂ ದೇಕೆತಾಸ್ಯ ಧ್ರುವೋ ಧ್ರುವಂ ॥ ೫೬ ॥

ಅಪಾನಾದುತ್ತರತ್ವಾಚ್ಚ ದೈವತಸ್ಯೋತ್ತರಾಯಣಃ ।
ಸ್ಯಾದಿಯಂ ಮೂರ್ಛನಾ ಹ್ಯೇವಂ ಪಿತರಃ ಶ್ರಾದ್ಧದೇವತಾಃ ॥ ೫೭ ॥

ಶುದ್ಧಷಡ್ಜಸ್ವರಂ ಕೃತ್ವಾ ಯಸ್ಮಾದಗ್ನಿಂ ಮಹರ್ಷಯಃ ।
ಉಪತಿಷ್ಠಂತಿ ತಸ್ಮಾತ್ತಂ ಜಾನೀಯಾಚ್ಛುದ್ಧಷಡ್ಜಕಂ ॥ ೫೮ ॥

ಯಃ ಸತಾಂ ಮೂರ್ಛನಾಂ ಕೃತ್ವಾ ಪಂಚಮಸ್ವರಕೋ ಭವೇತ್ ।
ಯಕ್ಷೀಣಾಂ ಮೂರ್ಛನಾ ಸಾ ತು ಯಾಕ್ಷಿಕಾ ಮೂರ್ಛನಾ ಸ್ಮೃತಾ॥೫೯॥

---

೫೬. ತಾಲವು ಉತ್ತರಮದ್ರಾಂಶವು ಷಡ್ಜದೈವತವಾಗಿದೆ. ಆದುದರಿಂದ ಉತ್ತರಕಾಲವನ್ನು ಮೊದಲನೆಯ ಸ್ವಾಯತವೆಂದು ಕರೆಯುವರು. ಅದೇ ಉತ್ತರ ಮಂದ್ರವಾಗಿದೆ. ಇದಕ್ಕೆ ಧ್ರುವರಾಯನೇ ದೇವತೆಯಾಗಿರುವನು. ಇದು ನಿಜವಾಗಿದೆ.

೫೭. ಅದು ಅಪಾನಕ್ಕಿಂತಲೂ ಉತ್ತರವಾಗಿರುವುದರಿಂದ ರೈವತವು ಉತ್ತರಾಯಣವೆಂದು ಸಂಜ್ಞೆಯಾಗಿದೆ. ಮೂರ್ಛನೆಯೆಂಬುದು ಹೀಗೆ ವರ್ಣಿತವಾಗಿದೆ. ಈ ಸ್ವರಗಳಿಗೆ ಶ್ರಾದ್ಧದೇವತೆಗಳಾದ ಪಿತೃಗಳೇ ದೇವತೆಗಳಾಗಿರುವರು.

೫೮. ಮಹರ್ಷಿಗಳು ಶುದ್ಧವಾದ ಷಡ್ಜಸ್ವರವನ್ನು ಉಚ್ಚರಿಸುತ್ತಾ ಅಗ್ನಿದೇವನನ್ನು ಪೂಜಿಸುವರು. ಅದರಿಂದ ಆ ಸ್ವರಕ್ಕೆ ಶುದ್ಧಷಡ್ಜಸ್ವರವೆಂದು ನಾಮವು ಸಂಭವಿಸಿದೆ.

೫೯. ಯಾವುದು ಸತ್ಪುರುಷರಿಗೆ ಆನಂದವನ್ನು ಉಂಟುಮಾಡುವುದೋ ಅದಕ್ಕೆ ಪಂಚಮಸ್ವರವೆಂಬ ನಾಮವು ಸಂಭವಿಸಿರುತ್ತದೆ. ಯಕ್ಷಿಗಳಿಗೆ ಮೂರ್ಛನೆಯನ್ನುಂಟುಮಾಡುವ ಆ ಸ್ವರವು, ಯಕ್ಷಿಕಾನಾಮದಿಂದ ಪ್ರಖ್ಯಾತವಾಗಿದೆ. ಯಕ್ಷಿಕಾ ಮೂರ್ಛನೆಯೆಂಬುದಾಗಿ ಖ್ಯಾತಿಗೊಂಡಿದೆ.

ನಾಗದೃಷ್ಟಿರ್ವಿಷಾ ಗೀತಾ ನೋಪಸರ್ಪಂತಿ ಮೂರ್ಛನಾಂ |
ಭವಂತೀವ ಹೃತಾ ಹ್ಯೇತೇ ಬ್ರಹ್ಮಣಾ ನಾಗದೇವತಾಃ |
ಅಹೀನಾಂ ಮೂರ್ಛನಾ ಹ್ಯೇಷಾ ವರುಣಶ್ಚಾತ್ರ ದೇವತಾ || ೬೦ ||

ಶಕುಂತಕಾನಾಂ ಕೃತ್ವಾ ಚ ಉಪಮಾಂ ಯಾಂತಿ ಕಿನ್ನರಾಃ |
ಉತ್ತಮಾಂ ಮೂರ್ಛನಾ ತಸ್ಮಾತ್ ಪಕ್ಷಿರಾಜೋತ್ರ ದೇವತಾ || ೬೧ ||

ಗಾಂಧಾರರಾಗಶಬ್ದೇನ ಗಾಂ ಧಾರಯತೇರ್ಥತಃ |
ತಸ್ಮಾದ್ವಿಶುದ್ಧಗಾಂಧಾರೀ ಗಂಧರ್ವಶ್ಚಾಧಿದೈವತಂ || ೬೨ ||

ಗಾಂಧಾರಾನಂತರಂ ಗತ್ವಾ ಸೃಷ್ಟೇಯಂ ಮೂರ್ಛನಾ ಯತಃ |
ತಸ್ಮಾದುತ್ತರಗಾಂಧಾರೀ ವಸವಶ್ಚಾತ್ರ ದೇವತಾಃ || ೬೩ ||

---

೬೦. ಯಾವ ರಾಗವನ್ನು ಹಾಡುವುದರಿಂದ ಸರ್ಪಗಳು ಆನಂದವನ್ನು ಪಡೆಯುತ್ತವೆಯೋ ಅದಕ್ಕೆ ನಾಗದೃಷ್ಟಿಯೆಂದು ಹೆಸರು ಬಂದಿದೆ. ಅದು ನಾಗ ದೇವತಾಕವಾಗಿದೆ. ಯಾವುದು ಸರ್ಪಗಳಿಗೆ ಮೂರ್ಛೆಯನ್ನುಂಟುಮಾಡುವುದೋ ಅದು ನಾಗಸ್ವರವಾಗಿದೆ. ಇದಕ್ಕೆ ವರುಣನೇ ದೇವತೆಯಾಗಿರುವನು.

೬೧. ಕಿನ್ನರರು ಯಾವುದನ್ನು ಪಕ್ಷಿಗಳಿಗೆ ಹೋಲಿಕೆಯನ್ನಾಗಿ ಹೇಳುತ್ತಾರೋ, ಅದಕ್ಕೆ ಉತ್ತಮಮೂರ್ಛನೆಯೆಂಬ ನಾಮವು ಉಂಟಾಗಿದೆ. ಅದಕ್ಕೆ, ಪಕ್ಷಿಗಳಿಗೆ ರಾಜನಾದ ಗರುಡದೇವನೇ ಅಧಿಪತಿಯಾಗಿರುವನು.

೬೨. ಯಾವ ರಾಗವು ಗೋವುಗಳನ್ನು ಸಹ ನಿಜವಾಗಿಯೂ, ವಶಪಡಿಸಿ ಕೊಳ್ಳುತ್ತದೆಯೋ ಆ ರಾಗಕ್ಕೆ ವಿಶುದ್ಧ ಗಾಂಧಾರಿಯೆಂಬ ನಾಮವು ಉಂಟಾಗಿದೆ. ಅದಕ್ಕೆ ಗಂಧರ್ವರೇ, ಅಧಿದೇವತೆಗಳಾಗಿರುವರು.

೬೩. ಗಾಂಧಾರರಾಗವು ಉತ್ಪನ್ನವಾದ ನಂತರ ಉತ್ಪನ್ನವಾದ ರಾಗಕ್ಕೆ ಉತ್ತರಗಾಂಧಾರವೆಂಬ ನಾಮವು ಸಂಭವಿಸಿದೆ. ಈ ಉತ್ತರಗಾಂಧಾರವೆಂಬ ರಾಗಕ್ಕೆ ವಸುಗಳೇ ದೇವತೆಗಳಾಗಿರುವರು.

**ಸೇಯಂ ಖಲು ಮಹಾ ಭೂತಾ ಪಿತಾಮಹಮುಪಾಸ್ಥಿತಾ ।**
**ಷಡ್ಜೇಯಂ ಮೂರ್ಛನಾ ತಸ್ಮಾತ್ ಸ್ಮೃತಾ ಹ್ಯನಲದೇವತಾ ॥ ೬೪ ॥**

**ದಿವ್ಯೇಯಂ ಚಾಯತಾ ತೇನ ಮಂದಷಷ್ಠಾ ಚ ಮೂರ್ಚ್ಛನೇ ।**
**ನಿವೃತ್ತಗುಣನಾಮಾನಂ ಪಂಚಮಂಚಾತ್ರ ದೈವತಂ ॥ ೬೫ ॥**

**ಪೂರ್ಣಾಃ ಸಪ್ತಸ್ವರಾ ಹ್ಯೇವಂ ಮೂರ್ಚ್ಛನಾಃ ಸಂಪ್ರಕೀರ್ತಿತಾಃ ।**
**ನಾನಾಸಾಧಾರಣಾಶ್ಚೈವ ಷಡೇವಾನುವಿಧಸ್ತಥೇತಿ ॥ ೬೬ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ವೈವಸ್ವತವಂಶಗಾಂಧರ್ವ ಮೂರ್ಚ್ಛನಾಲಕ್ಷಣಕಥನಂ" ನಾಮ ಚತುರ್ವಿಂಶೋಽಧ್ಯಾಯಃ**

---

೬೪. ಈ ಮಹಾಭೂತವೇ ಬ್ರಹ್ಮದೇವನ ಬಳಿಗೆ ಹೋದುದರಿಂದ ಅದು ಷಡ್ಜಮೂರ್ಚ್ಛನೆಂದು ಪ್ರಖ್ಯಾತವಾಗಿದೆ. ಇದಕ್ಕೆ ಅಗ್ನಿದೇವನೇ ಮುಖ್ಯ ದೇವತೆಯಾಗಿರುವನು.

೬೫. ದಿವ್ಯವೂ ವಿಶಾಲವೂ ಆದ ಸ್ವರವು ಮೂರ್ಚ್ಛನೆಯಲ್ಲಿ ಮಂದವೂ, ಆರನೆಯದೂ, ಆಗಿರುವುದರಿಂದ ಈ ಸ್ವರಕ್ಕೆ, ಪ್ರಾಕೃತಗುಣ ನಾಮಗಳಿಂದ ರಹಿತನಾದ ಶ್ರೀ ಭಗವಂತನೇ ದೇವತೆಯಾಗಿರುವನು.

೬೬. ಪೂರ್ಣವಾದ ಸಪ್ತಸ್ವರಗಳೂ, ಮೂರ್ಚ್ಛನೆಗಳೂ, ಹೀಗೆ ಸಾಂಗವಾಗಿಯೂ, ವಿಸ್ತಾರವಾಗಿಯೂ, ವರ್ಣಿತವಾಗಿವೆ. ಇದರಿಂದ ಅನೇಕ ವಿಧವಾದ ಸ್ವರಗಳು ಉತ್ಪನ್ನಗಳಾಗಿದ್ದರೂ, ಈ ಆರು ಸ್ವರಗಳೇ ಮೂಲಕಾರಣಗಳೆಂದು ಜ್ಞಾನಿಗಳು ಹೇಳುವರು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ವೈವಸ್ವತಮನುವಂಶ ಕಥನ ಮತ್ತು ಗಾಂಧರ್ವಮೂರ್ಚ್ಛನಾಲಕ್ಷಣ ನಿರೂಪಣ"ವೆಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು ಸಮಾಪ್ತವು.



# ಇಪ್ಪತ್ತನಾಲ್ಕನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ವೈವಸ್ವತಮನುವಿನ ವಂಶವೂ, ಗಾಂಧಾರಾದಿ ಸ್ವರಗಳ ಉತ್ಪತ್ತಿಕ್ರಮವೂ ಉಕ್ತವಾಗಿವೆ. ಆ ಮನುವಿನ ವಂಶದಲ್ಲಿ ರೇವತರಾಜನೂ, ಅವನಿಗೆ ರೇವತಿಯೆಂಬ ಪುತ್ರಿಯೂ, ಆವಿರ್ಭವಿಸಿದರು. ಆ ರೇವತರಾಜನು ತನ್ನ ಕುಮಾರಿಯಾದ ರೇವತೀದೇವಿಯನ್ನು ದ್ವಾರಕಾನಗರದಲ್ಲಿ ವಾಸಿಸುವ ಬಲರಾಮನಿಗೆ ಕೊಟ್ಟು ವಿವಾಹ ಮಹೋತ್ಸವವನ್ನು ನೆರವೇರಿಸಿದನು.

ತರುವಾಯ ನಿಷಾಧಾದಿ ಸಪ್ತಸ್ವರಗಳೂ, ಇಪ್ಪತ್ತೊಂದು ಮೂರ್ಚ್ಛನೆಗಳೂ, ನಲವತ್ತೊಂಬತ್ತು ತಾಳಗಳೂ, ಉತ್ಪನ್ನಗಳಾದುವು. ಈ ಸ್ವರಗಳಿಗೆ ಅಧಿಪತಿಗಳಾದ ದೇವತಾಸ್ವರೂಪವೂ ಕೂಡ ಈ ಅಧ್ಯಾಯದಲ್ಲಿ ನಿರೂಪಿತವಾಗಿವೆ.



—: ಶ್ರೀಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ಪಂಚವಿಂಶೋಽಧ್ಯಾಯಃ

**ಪೂರ್ವಾಚಾರ್ಯಮತಂ ಬುದ್ಧ್ವಾ ಪ್ರವಕ್ಷ್ಯಾಮ್ಯನುಪೂರ್ವಶಃ ।**
**ತ್ರಿಶತಂ ವೈ ಅಲಂಕಾರಾಂಸ್ತಾನ್ಮೇನಿಗದತಃ ಶೃಣು ॥ ೧ ॥**

**ಅಲಂಕಾರಸ್ತು ವಕ್ತವ್ಯಾಃ ಸ್ವೈಃಸ್ವೈರ್ವರ್ಣೈಃ ಪ್ರಹೇತವಃ ।**
**ಸಂಸ್ಥಾನಯೋಗೈಶ್ಚ ತಥಾ ಪಾದಾನಾಂ ಚಾನ್ವವೇಕ್ಷಯಾ ॥ ೨ ॥**

**ವಾಕ್ಯಾರ್ಥಪದಯೋಗಾರ್ಥೈರಲಂಕಾರಸ್ಯ ಪೂರಣಂ ।**
**ಪದಾನಿ ಗೀತಕಸ್ಯಾಹುಃ ಪುರಸ್ತಾತ್ ಪೃಷ್ಠತೋಽಥವಾ ॥ ೩ ॥**

---

## ಇಪ್ಪತ್ತೈದನೆಯ ಅಧ್ಯಾಯವು

೧. ಪೂರ್ವಾಚಾರ್ಯರ ಮತವನ್ನು ಸಂಪೂರ್ಣವಾಗಿ ತಿಳಿದು ಕ್ರಮವಾಗಿ ತಿಳಿಸುವೆನು ಕೇಳಿರಿ. ಲೋಕದಲ್ಲಿ ಅಲಂಕಾರಗಳು ಮೂವತ್ತಿವೆ. ಅವುಗಳನ್ನು ಕ್ರಮವಾಗಿ ನಿರೂಪಿಸುವೆನು ಕೇಳಿರೆಂವನು.

೨. ಈ ಅಲಂಕಾರಗಳಿಗೆ ತಮ್ಮ ತಮ್ಮ ವರ್ಣಗಳೇ ಮುಖ್ಯಕಾರಣಗಳಾಗಿವೆ. ಈ ಅಲಂಕಾರಗಳು ಆಯಾ ವರ್ಣಗಳ ಉತ್ಪತ್ತಿಯಾಗುವ ಸ್ಥಾನಗಳ ಸಂಬಂಧದಿಂದಲೂ, ಪಾದಗಳ ವಿವಕ್ಷೆಯಿಂದಲೂ ಉಂಟಾಗುತ್ತವೆ.

೩. ಅಲಂಕಾರಗಳು, ವಾಕ್ಯಾರ್ಥ, ಪಾದಯೋಗ, ಅರ್ಥ ಇವುಗಳ ಸಂಬಂಧದಿಂದ ಪೂರ್ಣವಾಗುವುವು. ಗೀತದ ಪೂರ್ವಾಪರಸಂಬಂಧದಿಂದ ಪದಗಳು ಉದ್ಭವಿಸುತ್ತವೆ.

ಸ್ಥಾನಾನಿ ತ್ರೀಣಿ ಜಾನೀಯಾದುರಃ ಕಂಠಶಿರಸ್ತಥಾ ।
ಏತೇಷು ತ್ರಿಷು ಸ್ಥಾನೇಷು ಪ್ರವೃತ್ತೋ ವಿಧಿರುತ್ತಮಃ ॥ ೪ ॥

ಚತ್ವಾರಃ ಪ್ರಕೃತೌ ವರ್ಣಾಃ ಪ್ರವಿಚಾರಶ್ಚತುರ್ವಿಧಃ ।
ವಿಕಲ್ಪಮಷ್ಟಧಾ ಚೈವಾ ದೇವಾಃ ಷೋಡಶಧಾ ವಿದುಃ ॥ ೫ ॥

ಸ್ಥಾಯಿಾ ವರ್ಣಃ ಪ್ರಸಂಚಾರೀ ತೃತೀಯಮವರೋಹಣಂ ।
ಆರೋಹಣಂ ಚತುರ್ಥಂ ತು ವರ್ಣಂ ವರ್ಣವಿದೋ ವಿದುಃ ॥ ೬ ॥

ತತ್ರೈಕಃ ಸಂಚರಸ್ಥಾಯಿಾ ಸಚರಾಸ್ತುಚರೀಭವನ್ ।
ಅಥ ರೋಹಣವರ್ಣಾನಾಮವರೋಹಂ ವಿನಿರ್ದಿಶೇತ್ ॥ ೭ ॥

ಆರೋಹಣೇನಚಾರೋಹವರ್ಣಂ ವರ್ಣವಿದೋ ವಿದುಃ ।
ಏತೇಷಾಮೇವ ವರ್ಣಾನಾಮಲಂಕಾರಾನ್ನಿಬೋಧತ ॥ ೮ ॥

---

೪. ಸ್ಥಾನಗಳು, ಉರಸ್ಸು, ಕಂಠ, ಶಿರಸ್ಸು, ಎಂದು ಮೂರು ವಿಧವಾಗಿವೆ. ಈ ಮೂರು ಸ್ಥಾನಗಳಲ್ಲಿ ಉದ್ಭವಿಸುವ ಕ್ರಮವು ಉತ್ತಮವೆಂದು ತಿಳಿಯಬೇಕು.

೫. ಪ್ರಾಕೃತವರ್ಣಗಳು ನಾಲ್ಕು ವಿಧಗಳಾಗಿವೆ. ಇದರಂತೆಯೇ ಪ್ರವಿಚಾರವು ನಾಲ್ಕು ವಿಧವಾಗಿವೆ. ವಿಕಲ್ಪಗಳು ಎಂಟು ವಿಧಗಳು. ಹೀಗೆ ಒಟ್ಟು ಹದಿನಾರು ವಿಧಗಳೆಂದು ದೇವತೆಗಳು ಹೇಳುವರು.

೬. ವರ್ಣಜ್ಞಾನಿಗಳಾದ ಮಹಾತ್ಮರು ವರ್ಣವನ್ನು ಸ್ಥಾಯಿಾ, ಪ್ರಸಂಚಾರೀ, ಅವರೋಹಣ, ಆರೋಹಣವೆಂಬುದಾಗಿ ನಾಲ್ಕು ಹೇಳುವರು. ವಿಧವೆಂದು ವರ್ಣವು ಹೀಗೆ ನಾಲ್ಕು ವಿಧವಾಗಿದೆ.

೭. ಅದರಲ್ಲಿ ಸಂಚರಸ್ಥಾಯಿಯು ಚರಾಚರಾತ್ಮಕವಾಗಿದೆ. ವರ್ಣಗಳೂ ಸಹ ಆರೋಹಣ, ಅವರೋಹಣವೆಂಬ ಎರಡು ವಿಧಗಳಾಗಿವೆ.

೮. ವರ್ಣಜ್ಞಾನಿಗಳು ವರ್ಣವನ್ನು ಆರೋಹಣಾವರೋಹಣ ಕ್ರಮವುಳ್ಳದ್ದೆಂದು ಹೇಳುವರು. ಈ ರೀತಿಯಾದ ವರ್ಣಗಳ ಅಲಂಕಾರಗಳನ್ನು ಹೇಳುವೆನು ಕೇಳಿರೆಂದನು.

ಅಲಂಕಾರಸ್ತು ಚತ್ವಾರಃ ಸ್ಥಾಪನೀ ಕ್ರಮರೇಜಿನಃ ।
ಪ್ರಮಾದಶ್ಚಾಪ್ರಮಾದಶ್ಚ ತೇಷಾಂ ವಕ್ಷ್ಯಾಮಿ ಲಕ್ಷಣಂ ॥ ೯ ॥

ವಿಸ್ವರೋಪ್ಪ್ಯಕಲಾಶ್ಚೈವ ಸ್ಥಾನಾದೇಕಾಂತರಂ ಗತಾಃ ।
ಆವರ್ತಸ್ಯಾಕ್ರಮೋತ್ಪತ್ತೀ ದ್ವೇ ಕಾರ್ಯೇ ಪರಿಮಾಣತಃ ॥ ೧೦ ॥

ಕುಮಾರಮುಪರಂ ವಿದ್ಯಾದ್ವಿಸ್ತರಂ ವಮನಂ ಗತಂ ।
ಏಷ ವೈ ಚಾಪ್ಯಪಾಂಗಸ್ತು ಕುತಾರೇಕಃ ಕಲಾಧಿಕಃ ॥ ೧೧ ॥

ಶ್ಯೇನಸ್ತ್ವೇಕಾಂತರೇ ಜಾತಃ ಕಲಾಮಾತ್ರಾಂತರೇ ಸ್ಥಿತಃ ।
ತಸ್ಮಿಂಶ್ಚೈವ ಸ್ವರೇ ವೃದ್ಧಿಸ್ತಿಷ್ಠತೇ ತದ್ವಿಲಕ್ಷಣಾ ॥ ೧೨ ॥

---

೯. ಅಲಂಕಾರಗಳು ಸ್ಥಾಪನೀ, ಕ್ರಮರೇಜಿನ, ಪ್ರಮಾದ, ಅಪ್ರಮಾದವೆಂಬು ದಾಗಿ ನಾಲ್ಕು ವಿಧಗಳಾಗಿವೆ. ಅವುಗಳ ಲಕ್ಷಣಗಳನ್ನು ಹೇಳುವೆನು.

೧೦. ವರ್ಣಗಳು ಸ್ವಸ್ಥಾನಗಳಿಂದ ಸ್ಥಾನಾಂತರಗಳನ್ನು ಹೊಂದಿ, ವಿಸ್ವರ ಗಳಾಗಿಯೂ. ಉಪ್ಪ್ಯಕಲಗಳಾಗಿಯೂ, ಇರುತ್ತವೆ. ಆವರ್ತನದ ಕ್ರಮೋತ್ಪತ್ತಿಗಳು ಇದಕ್ಕೆ ಕಾರಣಗಳು. ಹೀಗೆ ಎರಡು ಕಾರಣಗಳಿಂದ ಎರಡು ಕಾರ್ಯಗಳು ಉಂಟಾಗಿವೆ.

೧೧. ಅತಿ ವಿಶಾಲವಾಗಿ ಹೊರಡುವ ಸ್ವರಗಳನ್ನು, ಅಪಾರವಾದ ಕುಮಾರ ಸ್ವರವೆಂದು ಕರೆಯುತ್ತಾರೆ. ಈ ಅಪಾಂಗಸ್ವರವೇ ಕಲಾಧಿಕವಾದರೆ ಕುತಾರೇಕವೆಂದು ಪ್ರಖ್ಯಾತಿಗೊಳ್ಳುತ್ತದೆ.

೧೨. ಕೇವಲ ಕಲಾಂತರದಲ್ಲಿರತಕ್ಕ ಏಕಾಂತರದಲ್ಲಿ ಉತ್ಪನ್ನವಾದ ಸ್ವರಕ್ಕೆ ಶ್ಯೇನವೆಂಬ ನಾಮವು ಸಂಭವಿಸಿರುತ್ತದೆ. ಅದೇ ಸ್ವರದಲ್ಲಿಯೇ ಅದಕ್ಕೆ ವಿರುದ್ಧವಾದ (ಅಭಿವೃದ್ಧಿಯು) ವಿಲಕ್ಷಣವಾದ ಕಾರ್ಯವು ಇರುತ್ತದೆ.

ಶ್ಯೇನಸ್ತು ಅಪರೋಹಸ್ತು ಉತ್ತರಃ ಪರಿಕೀರ್ತಿತಃ ।
ಕಲಾಕಲಪ್ರಮಾಣಾಂಚ್ಚ ಸ ಬಿಂದುರ್ನಾಮ ಜಾಯತೇ || ೧೩ ||

ಬಿಂದುರೇಕಕಲಾ ಕಾರ್ಯಾ ವರ್ಣಾಂತಸ್ಥಾಯಿನೀಭವೇತ್ ।
ವಿಪರ್ಯಯಸ್ವರೋಽಪಿ ಸ್ಯಾದ್ಯಸ್ಯ ದುರ್ಘಟಿತೋಽಪಿ ನ || ೧೪ ||

ಏಕಾಂತರಾ ತು ವಾದ್ಯಂ ತು ಷಡ್ಜತಃ ಪರಮಃ ಸ್ವರಃ ।
ಆಕ್ಷೇಪಾಸ್ಕಂಧನಃ ಕಾರ್ಯಂ ಕಾಕಸ್ಯೇವೋಚ್ಚಪುಷ್ಕಲಂ || ೧೫ ||

ಸಂತಾರೌ ತೌ ತು ಸಂಚಾರ್ಯೌ ಕಾರ್ಯಂ ವಾ ಕಾರಣಂ ತಥಾ ।
ಆಕ್ಷಿಪ್ತಮವರೋಹ್ಯಾಪಿ ಪ್ರೋಕ್ಷಮಾದ್ಯಂ ತಥೈವ ಚ || ೧೬ ||

---

೧೩. ಶ್ಯೇನ ಮತ್ತು ಅಪರೋಹಕ್ಕೆ ಉತ್ತರವೆಂಬ ಸಂಜ್ಞೆಯು ಪ್ರಾಪ್ತವಾಗಿದೆ. ಅದು ಕಲೆಯ ಏಕದೇಶದಿಂದ ಬಿಂದುನಾಮಕವಾಗುತ್ತದೆ. ಅದರಿಂದ ಬಿಂದುನಾಮಕ ಸ್ವರವು ಉತ್ಪನ್ನವಾಗುವುದು.

೧೪. ಬಿಂದುವನ್ನು ಏಕ ಕಲೆಯನ್ನಾಗಿ ಮಾಡಬೇಕು. ಅದು ಇತರ ವರ್ಣಕ್ಕೆ ಸ್ಥಾಯಿಯಾಗುವುದು. ಮತ್ತು ವಿಲಕ್ಷಣ ಸ್ವರವೂ ಆಗುವುದು. ಅದು ದುರ್ಘಟನ ವಲ್ಲವೆಂದು ತಿಳಿಯಬೇಕು.

೧೫. ಏಕಾಂತರ ವಾದ್ಯವಾದರೋ, ಷಡ್ಜಸ್ವರಕ್ಕಿಂತಲೂ ಉತ್ತಮವಾದ ಸ್ವರವಾಗಿದೆ. ಕಾಗೆಯು ಉನ್ನತಪ್ರದೇಶದಲ್ಲಿ ಹಾರುವಂತೆ ಉನ್ನತಸ್ಥಾನದಲ್ಲಿ ಈ ಷಡ್ಜಸ್ವರವನ್ನು ಹಾಡಬೇಕು.

೧೬. ಸಂತಾರನಾಮಕಗಳಾದ ಸ್ವರಗಳು ಸಂಚಾರ್ಯಗಳಾಗಿಯೂ, ಕಾರ್ಯ ಕಾರಣಗಳಾಗಿಯೂ, ಇರುತ್ತವೆ. ಆಕ್ಷಿಪ್ತವಾದದ್ದು ಆರೋಹಾರ್ಹವಾಗಿಯೂ, ಪ್ರೋಕ್ಷವು ಪ್ರಥಮವಾಗಿಯೂ, ಆಗಿವೆ.

ದ್ವಾದಶಂ ಚ ಕಲಾಸ್ಥಾನಮೇಕಾಂತರಗತಂತತಃ ।
ಪ್ರೇಂಖೋಲಿತಮಲಂಕಾರಮೇವಂ ಸ್ವರಸಮನ್ವಿತಂ ॥ ೧೭ ॥

ಸ್ವರಸಂಕ್ರಾಮಕಾಚ್ಚೈವ ತತಃ ಪ್ರೋಕ್ತಂ ತು ಪುಷ್ಕಲಂ ।
ಪ್ರಕ್ಷಿಪ್ತಮೇವ ಕಲಯಾ ಪಾದಾನೀತರಯೋರ್ಭವೇತ್ ॥ ೧೮ ॥

ದ್ವಿಕಲಂ ವಾ ಯಥಾ ಭೂತಂ ಯತ್ತದ್ ಹ್ರಾಸಿತಮುಚ್ಯತೇ ।
ಉಚ್ಚಾರಾದ್ವಿಸ್ವರಾರೂಢಾ ತಥಾ ಚಾಷ್ಟಸ್ವರಾಂತರಂ ॥ ೧೯ ॥

ಯಸ್ತು ಸ್ಯಾದವರೋಹೋ ವಾ ತಾರತೋ ಮಂದ್ರತೋಽಪಿ ವಾ ।
ಏಕಾಂತರಹಿತಾ ಹ್ಯೇತೇ ತಮೇವ ಸ್ವರಮಂತತಃ ॥ ೨೦ ॥

---

೧೭. ಹನ್ನೆರಡನೆಯ ಕಲಾಸ್ಥಾನವು ಏಕಾಂತರಗತವಾದರೂ ಪ್ರಖ್ಯಾತವಾದ ಪ್ರೇಂಖೋಲಿತವಾಗುವುದು. ಅದು ಅಲಂಕಾರರೂಪವೂ ಆಗುವುದು. ಹೇಗೆ ಸ್ವರಸಮುದಾಯದಿಂದ ಅಲಂಕಾರವು ಉತ್ಪನ್ನವಾಗುವುದು.

೧೮. ತರುವಾಯ ಸ್ವರಸಂಕ್ರಮದಿಂದ ಪುಷ್ಕಲವು ಸಂಭವಿಸುವುದು. ಕಲಾಸಹಿತವಾದ ಸ್ವರವು ಪ್ರಕ್ಷಿಪ್ತವಾಗಿ ಇತರ ಸ್ವರಗಳಿಗೆ ಪಾದಗಳಾಗುವುದು. ಅಂದರೆ ಇತರ ಸ್ವರಗಳಿಗೆ ಕಾರಣವಾಗುತ್ತದೆ.

೧೯. ದ್ವಿಕಲವಾದ ಅದೇ ಸ್ವರವೇ, ಹ್ರಾಸಿತವೆಂದು ಪ್ರಖ್ಯಾತವಾಗಿದೆ. ಅದು ಉಚ್ಚಾರದಿಂದ ದ್ವಿಸ್ವರವಾಗಿ ಕೊನೆಗೆ ಅಷ್ಟಸ್ವರಗಳಾಗಿಯೂ ಪರಿಣಮಿಸುತ್ತದೆ. ಅಷ್ಟಸ್ವರಾಂತರವೂ ಆಗುವುದು.

೨೦. ಯಾವ ಸ್ವರವು ತಾರದಿಂದಲೂ, ಮಂದ್ರದಿಂದಲೂ ಅವರೋಹಣ ವಾಗುವುದೋ, ಅವು ಏಕಾಂತರಹಿತಗಳಾಗಿ ಆ ಸ್ವರವನ್ನೇ ಅನುಸರಿಸುವುವು.

ಮುಕ್ಷಿಪ್ರಚ್ಛೇದನೋ ನಾಮ ಚತುಷ್ಕಲಗಣಃ ಸ್ಮೃತಃ ।
ಅಲಂಕಾರಾ ಭವಂತ್ಯೇತೇ ತ್ರಿಂಶದ್ಯೇ ವೈ ಪ್ರಕೀರ್ತಿತಾಃ ॥
ವರ್ಣಸ್ಥಾನಪ್ರಯೋಗೇಣ ಕಲಮಾತ್ರಾ ಪ್ರಮಾಣತಃ ॥ ೨೧ ॥

ಸಂಸ್ಥಾನಂ ಚ ಪ್ರಮಾಣಂ ಚ ವಿಕಾರೋ ಲಕ್ಷಣಂ ತಥಾ ।
ಚತುರ್ವಿದಮಿದಂ ಜ್ಞೇಯಮಲಂಕಾರಪ್ರಯೋಜನಂ ॥ ೨೨ ॥

ಯಥಾತ್ಮನೋಽಹ್ಯಲಂಕಾರೋ ವಿಪರ್ಯಸ್ತೋತಿಗರ್ಹಿತಃ ।
ವರ್ಣಮೇವಾಪ್ಯಲಂಕರ್ತುಂ ವಿಷಮಂ ಹ್ಯಾತ್ಮಸಂಭವಾತ್ ॥ ೨೩ ॥

ನಾನಾಭರಣಸಂಯೋಗಾದ್ಯಥಾ ನಾರ್ಯಾ ವಿಭೂಷಣಂ ।
ವರ್ಣಸ್ಯ ಚೈವಾಲಂಕಾರೋ ವಿಪರ್ಯಸ್ತೋತಿಗರ್ಹಿತಃ ॥ ೨೪ ॥

---

೨೧. ಚತುಷ್ಕಲಗಣವೇ ಅಕ್ಷಿಪ್ರಚ್ಛೇದನವೆಂದು ಪ್ರಖ್ಯಾತವಾಗಿದೆ. ಇವೇ ಮೂವತ್ತು ಅಲಂಕಾರಗಳಾಗಿರುತ್ತವೆ. ವರ್ಣಗಳು ಉತ್ಪನ್ನವಾಗುವ ಸ್ಥಾನಗಳ ಸಂಬಂಧದಿಂದಲೂ, ಕಲಾಮಾತ್ರ ಪ್ರಮಾಣದಿಂದಲೂ, ಅಲಂಕಾರಗಳು ಸಂಭವಿಸುತ್ತವೆ.

೨೨. ಸಂಸ್ಥಾನ, ಪ್ರಮಾಣ, ವಿಕಾರ ಮತ್ತು ಲಕ್ಷಣಗಳೆಂಬ ಇವು ನಾಲ್ಕೂ ಅಲಂಕಾರ ಪ್ರಯೋಜನಗಳಾಗಿವೆ. ಇವು ನಾಲ್ಕೂ ಅಲಂಕಾರದ ಫಲಗಳಾಗಿವೆ.

೨೩. ಮನುಷ್ಯರ ಅಲಂಕಾರಗಳು ವ್ಯತ್ಯಾಸವಾದರೆ, ಪುರುಷರು ಲೋಕದಲ್ಲಿ ಹೇಗೆ ನಿಂದಿತರಾಗುವರೋ, ಹಾಗೆಯೇ ವರ್ಣವ್ಯತ್ಯಾಸದಿಂದ ಅಲಂಕಾರವು ಬದಲಾಯಿಸಿದರೆ ವಿಷಮವಾಗುವುದು.

೨೪. ನಾನಾಭರಣಗಳ ಸಂಬಂಧದಿಂದ ನಾರೀಮಣಿಯು ಪ್ರಕಾಶಿಸುವಂತೆ ಅಲಂಕಾರಗಳಿಂದ ವರ್ಣಗಳು ಪ್ರಕಾಶಿಸುವುವು. ಆಭರಣಗಳ ಬದಲಾವಣೆಯಿಂದ ನಾರಿಯು ದೂಷ್ಯವಾಗುವಂತೆ ಅಲಂಕಾರಗಳ ವ್ಯತ್ಯಾಸದಿಂದ ವರ್ಣಗಳು ದೂಷ್ಯವಾಗುವುವು.

ನ ಪಾದೇ ಕುಂಡಲೇ ದೃಷ್ಟೇ ನ ಕಂಠೇ ರಸನಾ ಯಥಾ ।
ಏವಮೇವ ಹ್ಯಲಂಕಾರೋ ವಿಪರ್ಯಸ್ತೋ ವಿಗರ್ಹಿತಃ ॥ ೨೫ ॥

ಕ್ರಿಯಮಾಣೋಽಪ್ಯಲಂಕಾರೋ ರಾಗಂ ಯಚ್ಚೈವ ದರ್ಶಯೇತ್ ।
ಯಾಥೋದ್ದಿಷ್ಟಸ್ಯ ಮಾರ್ಗಸ್ಯ ಕರ್ತವ್ಯಸ್ಯ ವಿಧೀಯತೇ ॥ ೨೬ ॥

ಲಕ್ಷಣಂ ಪರ್ಯವಸ್ಥಾಪಿ ವರ್ಣಿಕಾಭಿಃ ಪ್ರವರ್ತನಂ ।
ಯಥಾತಥ್ಯೇನ ವಕ್ಷ್ಯಾಮಿ ಮಾಸೋದ್ಭವಮುಖೋದ್ಭವೇ ॥ ೨೭ ॥

ತ್ರಯೋವಿಂಶತ್ಯಶೀತಿಸ್ತು ತೇಷಾಮೇತದ್ವಿಪರ್ಯಯಃ ।
ಷಡ್ಜಪಕ್ಷೋಽಪಿ ತತ್ತ್ವಾದೌ ಮಧ್ಯೋ ಹೀನಸ್ವರೋ ಭವೇತ್ ॥ ೨೮ ॥

---

೨೫ ಈ ಲೋಕದಲ್ಲಿ ಸ್ತ್ರೀಯರು ಕಾಲಿಗೆ ಕರ್ಣಾಭರಣವನ್ನೂ (ಬೆಂಡೋಲೆಯನ್ನೂ) ಕಂಠಕ್ಕೆ ಡಾಬನ್ನೂ ಹಾಕಿಕೊಳ್ಳುವುದು ಹಾಸ್ಯಾಸ್ಪದವಾಗುವುದು. ಹಾಗೆ ಹಾಕಿಕೊಂಡರೆ ಹೇಗೆ ನಿಂದಿತರಾಗುವರೋ ಹಾಗೆಯೇ ಅಲಂಕಾರವೂ ಸಹ ವಿಪರ್ಯವಾದರೆ ದೂಷ್ಯವಾಗುವುದು.

೨೬. ಯಾವ ಅಲಂಕಾರವನ್ನು ಮಾಡಿಕೊಂಡರೆ ದ್ರಷ್ಟೃಗಳಿಗೆ ರಾಗೋದಯವಾಗುವುದೋ ಅಂತಹ ಅಲಂಕಾರಗಳನ್ನು ಮಾಡಿಕೊಳ್ಳಬೇಕು. ಅಂತಹ ಭೂಷಣಗಳಿಂದ ಗೌರವವೂ ಸಂಭವಿಸುತ್ತದೆ. ಅದರಂತೆ ಸಂಗೀತದಲ್ಲಿಯೂ ಮರ್ಯಾದೆಯುಂಟಾಗುವುದು.

೨೭. ವರ್ಣಗಳಿಂದ ಲಕ್ಷಣಗಳು ಪರ್ಯವಸಾನವಾಗುವುವು. ಮಾಸೋದ್ಭವ, ಮುಖೋದ್ಭವಗಳಾದ ಲಕ್ಷಣಗಳನ್ನು ಯಥಾಸ್ಥಿತವಾಗಿ ವರ್ಣಿಸುವೆನು ಕೇಳಿರೆಂದನು.

೨೮. ಅವುಗಳ ಪ್ರಭೇದವು ಹೀಗೆ ವಿಪರ್ಯಗಳಿಂದ ಉಂಟಾಗುವುದು. ಅದು ನೂರಮೂರುವಿಧಗಳಾಗಿದೆ. ತತ್ತ್ವವಿಚಾರ ಮಾಡಿದರೆ ಷಡ್ಜಪಕ್ಷದಲ್ಲಿಯೂ ಕೂಡ ಮಧ್ಯಸ್ವರವು ಹೀನಸ್ವರವಾಗುವುದು.

ಷಡ್ಜಮಧ್ಯಮಯೋಶ್ಚೈವ ಗ್ರಾಮಯೋಃ ಪರ್ಯಯಸ್ತಥಾ ।
ಮಾನೋಯೋತ್ತರಮಂದ್ರಸ್ಯ ಷಡೇವಾತ್ರಾವಿಕಸ್ಯ ಚ ॥ ೨೯ ॥

ಸ್ವರಾಲಂ ಪ್ರತ್ಯಯಶ್ಚೈವ ಸರ್ವೇಷಾಂ ಪ್ರತ್ಯಯಃ ಸ್ಮೃತಃ ।
ಅನುಗಮ್ಯ ಬಹಿರ್ಗೀತಂ ವಿಜ್ಞಾತಂ ಪಂಚದೈವತಂ ॥ ೩೦ ॥

ಗೋರೂಪಾಣಾಂ ಪುರಸ್ತಾತ್ತು ಮಧ್ಯಮಾಂಶಸ್ತು ಪರ್ಯಯಃ ।
ತಯೋರ್ವಿಭಾಗೋ ಗೀತಾನಾಂ ಲಾವಣ್ಯಮಾರ್ಗಸಂಸ್ಥಿತಃ ॥ ೩೧ ॥

ಅನುಷಂಗಂ ಮಯೋದ್ದಿಷ್ಟಂ ಸ್ವಸಾರಂಚ ಸ್ವರಾಂತರಂ ।
ಪರ್ಯಯಃ ಸಂಪ್ರವರ್ತೇತ ಸಪ್ತಸ್ವರಪದಕ್ರಮಂ ॥ ೩೨ ॥

---

೨೯. ಷಡ್ಜಮಧ್ಯಮಸ್ವರಗಳ ಆರೋಹಣಾವರೋಹಣಕ್ರಮದಲ್ಲಿಯೂ ವ್ಯತ್ಯಾಸವಾಗುವುದು. ಇದರಂತೆ ಉತ್ತರಮಂದ್ರದ ಪ್ರಮಾಣವೂ ಕೂಡ ಆರು ವಿಧವಾಗಿದೆ.

೩೦. ಸ್ವರದ ಜ್ಞಾನವೇ, ಸರ್ವಜ್ಞಾನಗಳಿಗೂ ಆಧಾರವಾಗಿದೆ. ಅದರಿಂದಲೇ ರಾಗಾಲಂಕಾರಗಳ ಜ್ಞಾನವಾಗುವುದು. ಇದನ್ನು ಅನುಸರಿಸಿ ಉಂಟಾಗುವ ಗಾನವು ಪಂಚದೇವತಾಕವಾಗಿದೆ.

೩೧. ಗೋರೂಪಗಳ ಮುಂಭಾಗದಲ್ಲಿ ಮಧ್ಯಮಾಂಶವು ವ್ಯತ್ಯಾಸವಾಗುವುದು. ಆ ಜ್ಞಾನಗಳ ವಿಭಾಗವೇ ಸೌಂದರ್ಯವನ್ನುಂಟುಮಾಡಲು ಕಾರಣವಾಗಿರುತ್ತದೆ.

೩೨. ಎಲೈ ಮುನಿವರ್ಯರೇ, ನಾನು ನಿಮಗೆ ಸ್ವರಗಳ ಪರಸ್ಪರ ಸಂಬಂಧವನ್ನು ಮಾತ್ರ ತಿಳಿಸುವೆನು. ಇತರ ಸ್ವರಗಳು ಸಹೋದರಿಯರಂತಿವೆ. ಸಪ್ತಸ್ವರಗಳ ಪದಕ್ರಮಗಳು ವಿಪರ್ಯಯನ್ನು ಹೊಂದುವುವು.

ಗಾಂಧಾರಾಂಶೇನ ಗೀಯಂತೇ ಚತ್ವಾರಿ ಮಂದ್ರಕಾಣಿಚ ।
ಪಂಚಮೋ ಮಧ್ಯಮಶ್ಚೈವ ಧೈವತೇತು ನಿಷಾದಜೈಃ ।
ಷಡ್ಜರ್ಷಭೈಶ್ಚ ಜಾನೀಮೋ ಮಂದ್ರಕೇಷ್ವೇವನಾಂತರೇ ॥ ೩೩ ॥

ದ್ವೇ ಚಾಪರಾಂತಿಕೇ ವಿದ್ಯಾದ್ಧಯಶುಲ್ಲಾಷ್ಟಕಸ್ಯ ತು ।
ಪಾಕೃತೇ ವೈಣವೈಶ್ಚೈವ ಗಾಂಧಾರಾಂಶೇ ಪ್ರಯುಜ್ಯತೇ ॥ ೩೪ ॥

ಪದಸ್ಯ ತು ತ್ರಯಂ ರೂಪಂ ಸಪ್ತರೂಪಂತು ಕೌಶಿಕಂ ।
ಗಾಂಧಾರಾಂಶೇನ ಕಾರ್ತ್ಸ್ನ್ಯೇನ ಪರ್ಯಾಯಸ್ಯ ವಿಧಿಃ ಸ್ಮೃತಃ ।
ಏವಂಚೈವ ಕ್ರಮೋದ್ದಿಷ್ಟೋ ಮಧ್ಯಮಾಂಶಸ್ಯ ಮಧ್ಯಮಃ ॥ ೩೫ ॥

ಯಾನಿ ಗೀತಾನಿ ಪ್ರೋಕ್ತಾನಿ ರೂಪೇಣ ತು ವಿಶೇಷತಃ ।
ತತ್ತು ಸಪ್ತಸ್ವರಂ ಕಾರ್ಯಂ ಸಪ್ತರೂಪಂಚ ಕೌಶಿಕಂ ॥ ೩೬ ॥

---

೩೩. ನಾಲ್ಕು ಮಂತ್ರಗಳೂ ಕೂಡ, ಗಾಂಧಾರದ ಅಂಶದಿಂದ ಗಾನಮಾಡಲ್ಪಡುತ್ತವೆ. ಪಂಚಮಮಧ್ಯಮ ಸ್ವರಗಳು ಧೈವತವಿಷಯದಲ್ಲಿ ನಿಷಾದಜನ್ಯವಾದ ಅಂಶಗಳಿಂದ ಗಾನಮಾಡಲ್ಪಡುತ್ತವೆ. ಷಡ್ಜಋಷಭಗಳಿಂದಲೂ, ಮಂತ್ರದಲ್ಲಿಯೂ, ಹಾಗೆಯೇ ಉಂಟಾಗುವುದು. ಮಧ್ಯದಲ್ಲಿ ಉಂಟಾಗುವುದಿಲ್ಲ.

೩೪. ಹಯ ಶುಲ್ಲಾಷ್ಟಕಗಳೆರಡನ್ನೂ ಅಪರಾಂತಿಕವೆಂದು ತಿಳಿಯಬೇಕು. ಪ್ರಾಕೃತವಾದ ಗಾಂಧಾರಾಂಶದಲ್ಲಿ ವೇಣುವಿನ ಅಂಶಗಳಿಂದ ಸ್ವರಗಳನ್ನುಪಯೋಗಿಸಬೇಕು.

೩೫. ಪದಕ್ಕೆ ಮೂರು ರೂಪಗಳಿವೆ. ಕೌಶಿಕಕ್ಕೆ ಏಳು ರೂಪಗಳಿರುತ್ತವೆ. ಇವು ಗಾಂಧಾರಾಂಶದಿಂದ ಸಂಪೂರ್ಣವಾಗಿಯೂ ಬದಲಾಯಿಸುತ್ತವೆ. ಹೀಗೆ ಕ್ರಮವು ಉಕ್ತವಾಗಿದೆ. ಮಧ್ಯಮಾಂಶಕ್ಕೆ ಮಧ್ಯಮಭಾಗವೂ ವಿಹಿತವಾಗಿದೆ.

೩೬. ಯಾವ ಗಾನಗಳು ವಿಶೇಷ ರೂಪದಿಂದ ಪ್ರೋಕ್ತವಾಗಿವೆಯೋ ಅದು ಸಪ್ತಸ್ವರವುಳ್ಳದ್ದಾಗಿವೆ. ಕೌಶಿಕಸ್ವರವೂ ಸಹ ಸಪ್ತಸ್ವರೂಪವಾಗಿದೆ.

ಅಂಗದರ್ಶನಮಿತ್ಯಾಹುರ್ನಾರ್ನೇ ದ್ವೇ ಸಮುಕೇ ತಥಾ ।
ದ್ವಿತೀಯ ಭಾವಾಚರಣಾ ಮಾತ್ರಾ ನಾಭಿಪ್ರಿತಿಷ್ಠಿತಾ ॥ ೩೭ ॥

ಉತ್ತರೇ ಚ ಪ್ರಕೃತ್ಯೇವಂ ಮಾತ್ರಾ ತಲ್ಲೀಯತೇ ತಥಾ ।
ಹಂತಾರಃ ಪಿಂಡಕೋ ಯತ್ರಮಾತ್ರಾಯಾಂ ನಾತಿವರ್ತತೇ ॥ ೩೮ ॥

ಪಾದೇನೈಕೇನ ಮಾತ್ರಾಯಾಂ ಪಾದೋನಾಮತಿ ವೀರಣಾ ।
ಸಂಖ್ಯಾಯಾಶ್ಚೋಪಹನನಂ ತತ್ರ ಯಾನಮಿತಿ ಸ್ಮೃತಂ ॥ ೩೯ ॥

ದ್ವಿತೀಯಂ ಪಾದಭಂಗಂಚ ಗ್ರಹೇಣಾಭಿ ಪ್ರತಿಷ್ಠಿತಂ ।
ಪೂರ್ವಮಷ್ಟತೃತೀಯೇ ತು ದ್ವಿತೀಯಂ ಚಾ ಪರೀತಕೇ ॥ ೪೦ ॥

---

೩೭. ಎರಡು ಪ್ರಮಾಣಗಳು ಸಮವಾಗಿದ್ದರೆ ಅಂಗದರ್ಶನವೆಂದು ಹೇಳುವರು. ದ್ವಿತೀಯಭಾವಾಚರಣೆಯಿಂದ ಕೂಡಿದ ಮಾತ್ರೆಯು ಅಪ್ರತಿಷ್ಠಿತವಾಗಿದೆ. ಅಂದರೆ ಸ್ಥಿರವಾಗಿಲ್ಲ.

೩೮. ಉತ್ತರಗಳು ಸ್ವಾಭಾವಿಕವಾಗಿ ತೋರುತ್ತವೆ. ಅದು ಮಾತ್ರೆಯಿಂದ ಹಾಗೆ ಲೀನವಾಗುತ್ತದೆ. ಪ್ರತಿಬಂದಕಗಳು ಕೂಡಿ ಮಾತ್ರೆಯಲ್ಲಿ ಅತಿಕ್ರಮವಾಗುವುದಿಲ್ಲ.

೩೯. ಮಾತ್ರೆಯಲ್ಲೂ ಒಂದು ಪಾದದಿಂದ ಹೀನವಾಗಿದ್ದರೆ, ಪಾದೋನನಾಮಕವಾಗಿಯೂ, ಅತಿವೀರಣಾನಾಮಕವಾಗಿಯೂ, ಆಗುವುವು. ಯಾವ ಸ್ವರದಲ್ಲಿ ಸಂಖ್ಯಾನ್ಯೂನತೆಯು ಸಂಭವಿಸುತ್ತದೆಯೋ ಅದು ಯಾನವೆಂದು ಪ್ರಸಿದ್ಧವಾಗುವುದು.

೪೦. ದ್ವಿತೀಯವಾದ ಹಾನಿಯು ಗ್ರಹಗಳಿಂದ ಸ್ಥಾಪಿತವಾಗಿದೆ. ಒಂದು ಎರಡು ಮೂರು ಎಂಟು ಇವುಗಳು ಅಪರೀತಕವಾಗುವುವು.

ಅರ್ದ್ಧೇನ ಪಾದಸಾಮ್ಯಸ್ಯ ಪಾದಭಾಗಾಚ್ಚ ಪಂಚಕೇ ।
ಪಾದಭಾಗಂ ಸಪಾದಂ ತು ಪ್ರಕೃತ್ಯಾಮಪಿ ಸಂಸ್ಥಿತಂ ॥ ೪೧ ॥

ಚತುರ್ಥಮುತ್ತರೇ ಚೈವ ಮಾದ್ರವತ್ಯಾಂ ಚ ಮದ್ರಕೇ ।
ಮದ್ರಕೇ ದಕ್ಷಿಣಸ್ಯಾಪಿ ಯಥೋಕ್ತಾ ವರ್ತತೇ ಕಲಾ ॥ ೪೨ ॥

ಪೂರ್ವಮೇವಾನುಯೋಗಂತು ದ್ವಿತೀಯಾ ಬುದ್ಧಿ ರಿಷ್ಯತೇ ।
ಪಾದೌ ಚಾಹರಣಂ ಸಚ್ಚಾಂತ್ ಪಾರಂ ನಾತ್ರ ವಿಧೀಯತೇ ॥ ೪೩ ॥

ಏಕತ್ವಮುಪಯೋಗಸ್ಯ ದ್ವಯೋಯದ್ಧಿ ದ್ವಿಜೋತ್ತಮ ।
ಅನೇಕ ಸಮವಾಯಸ್ತು ಪತಾಕಾಹರಿಣಂ ಸ್ಮೃತಂ ॥ ೪೪ ॥

---

೪೧. ಅರ್ಧದಿಂದ ಪಾದಸಾಮ್ಯವಾಗಿದ್ದರೂ, ಪಾದ ಭಾಗಕ್ಕಿಂತಲೂ, ಐದನೆಯದಲ್ಲಿದ್ದರೂ ಕೂಡ ಪಾದಭಾಗ ಸಪಾದ ಇವೆರಡೂ, ಸ್ವಾಭಾವಿಕವಾಗಿಯೇ ಇರುವುದು.

೪೨. ಉತ್ತರ ಮದ್ರವತೀ ಮದ್ರಕ, ದಕ್ಷಿಣ ಮದ್ರಕ, ಇವುಗಳಲ್ಲಿ ಪೂರ್ವೋಕ್ತವಾದ ನಾಲ್ಕನೆಯ ಕಲೆಯು ಸುಪ್ರಸಿದ್ಧವಾಗಿದೆ.

೪೩. ಪೂರ್ವಸ್ವರದ ಸಂಬಂಧವು ಉತ್ತರಸ್ವರದಲ್ಲಿ ಸಹಜವಾಗಿಯೇ ಸಿದ್ಧವಾಗಿದೆ. ಅದು ದ್ವಿತೀಯ ಬುದ್ಧಿಯಾಗುವುದು. ಮೊದಲನೆಯ ಎರಡು ಪಾದಗಳು ಉತ್ತರತ್ರ ಅನುವರ್ತಿತವಾಗುವುವು. ಅದರಲ್ಲಿ ಅಂತ್ಯವು ಕಾಣುವುದಿಲ್ಲ.

೪೪. ಎಲೈ ವಿಪ್ರೋತ್ತಮನೇ, ಎರಡು ಸ್ವರಗಳಿಗೂ ಒಂದೇ ಪ್ರಯೋಜನ ವಿದ್ದಲ್ಲಿ ಅನೇಕ ಸ್ವರಗಳ ಸಮವಾಯವು ಪತಾಕಾಹಾರಿಯೆಂದು ಹಿರಿಯರು ಹೇಳುವರು.

**ತಿಸ್ರೃಾಣಾಂ ಚೈವ ವೃತ್ತೀನಾಂ ವೃತ್ತೌ ವೃತ್ತಾ ಚ ದಕ್ಷಿಣಾ ।**
**ಅಷ್ಟೌ ತು ಸಮವಾಯಾಸ್ತೇ ಸೌವೀರಾ ಮೂರ್ಛನಾ ತಥಾ ।**
**ಕುಶತ್ಯನುತ್ತರಃ ಸತ್ಯಂ ಸಪ್ತ ಸತ್ಪಸ್ವರಂ ತು ಯಃ ॥ ೪೫ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಗೀತಾಲಂಕಾರ ನಿರ್ದೇಶೋ" ನಾಮ ಷಂಚವಿಂಶೋಽಧ್ಯಾಯಃ**

---

೪೫. ಮೂರು ವೃತ್ತಗಳಲ್ಲಿಯೂ ದಕ್ಷಿಣಾನಾಮಕ ವೃತ್ತವು ಸುಪ್ರಸಿದ್ಧವಾಗಿದೆ. ಸಮವಾಯಗಳು ಎಂಟೂ ಸೌವೀರಾನಾಮಕ ಮೂರ್ಛನೆಯಾಗುವುದು. ಸಪ್ತಸ್ವರಗಳು ಯಾವುವು ಇವೆಯೋ, ಕುಶತಿ ಅನುತ್ತರವೆಂದುಸತ್ಯವಾಗಿಯೂ, ಪ್ರಖ್ಯಾತವಾಗಿವೆ.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಗಿತಾಲಂಕಾರ ನಿರೂಪಣ"ವೆಂಬ ಇಪ್ಪತ್ತೈದನೆಯ ಅಧ್ಯಾಯವು ಸಮಾಪ್ತವು.

## ಇಪ್ಪತ್ತೈದನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಸ್ವರಗಳ ವಿಷಯಗಳು ವರ್ಣಿತವಾಗಿವೆ. ಸಪ್ತಸ್ವರಗಳು ಪ್ರಸಿದ್ಧವಾಗಿದ್ದರೂ ಆರೋಹಣಾವರೋಹಣ ಸಮತಾರೂಪಾದಿಗಳಿಂದ ಅನೇಕ ವಿಧಗಳಾಗಿರುತ್ತವೆ.



—॥ ಹರಿಃ ಓಂ ॥—

—॥ ಶ್ರೀ ವೇದವ್ಯಾಸಾಯ ನಮಃ ॥—

# ಶ್ರೀಮದ್ವಾಯು ಮಹಾಪುರಾಣಂ

## ಷಡ್‌ವಿಂಶೋಽಧ್ಯಾಯಃ

### ॥ ಸೂತ ಉವಾಚ ॥

**ಕಕುದ್ಮಿನಸ್ತು ತಂ ಲೋಕಂ ರೈವತಸ್ಯ ಗತಸ್ಯಹ ।**
**ಹತಾಃ ಪುಣ್ಯಜನ್ಯೈಃ ಸರ್ವಾ ರಾಕ್ಷಸ್ಯೈಃ ಸಾ ಕುಶಸ್ಥಲೀ ॥ ೧ ॥**

**ತದ್ವೈ ಭ್ರಾತೃಶತಂ ತಸ್ಯ ಧಾರ್ಮಿಕಸ್ಯ ಮಹಾತ್ಮನಃ ।**
**ನಿಬಧ್ಯಮಾನಾ ರಕ್ಷೋಭಿರ್ದಿಶಃ ಸಂಪ್ರಾದ್ರುವನ್ ಭಯಾತ್ ॥ ೨ ॥**

**ತೇಷಾಂ ತು ತೇ ಭಯಾಕ್ರಾಂತಾಃ ಕ್ಷತ್ರಿಯಾಸ್ತತ್ರ ತತ್ರ ಹಿ ।**
**ಅನ್ವವಾಯುಸ್ತು ಸುಮಹಾನ್ ಮಹಾಂಸ್ತತ್ರ ದ್ವಿಜೋತ್ತಮಾಃ ॥ ೩ ॥**

---

### ಇಪ್ಪತ್ತಾರನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :—ರೈವತನ ಪುತ್ರನಾದ ಕಕುದ್ಮಿಯು ಕುಶಸ್ಥಳವನ್ನು ಹೊಂದಿ ತಮ್ಮ ಪ್ರಜೆಗಳ ಸಂಗಡ ಸುಖವಾಗಿ ವಾಸಮಾಡುತ್ತಿದ್ದನು. ಆಗ ದುಷ್ಟರಾದ ರಾಕ್ಷಸರು ಅಲ್ಲಿಗೆ ಬಂದು ಅವನ್ನು ಆಕ್ರಮಿಸಿ ಅಲ್ಲಿದ್ದವರೆಲ್ಲರನ್ನೂ ಓಡಿಸಿದರು.

೨. ಧಾರ್ಮಿಕನೂ, ಮಹಾತ್ಮನೂ ಆದ ಆ ಕಕುದ್ಮಂತನಿಗೆ ನೂರಾರು ಜನ ಸಹೋದರರು ಇದ್ದರು. ಅವರೆಲ್ಲರೂ ರಾಕ್ಷಸರಿಂದ ಪೀಡಿತರಾಗಿ ಭಯದಿಂದ ದಿಕ್ಕುದಿಕ್ಕಿಗೂ ಓಡಿಹೋದರು.

೩. ಎಲೈ ವಿಪ್ರೋತ್ತಮರೇ, ಆ ಕ್ಷತ್ರಿಯೋತ್ತಮರೆಲ್ಲರೂ ರಾಕ್ಷಸರ ಭಯದಿಂದ ಪೀಡಿತರಾಗಿ ಅಲ್ಲಲ್ಲಿರುವ ಗವಿಗಳಲ್ಲಿ ಅವಿತುಕೊಂಡರು. ಅವರ ವಂಶವಾದರೋ ಈ ಲೋಕದಲ್ಲಿ ಬಹಳ ವಿಸ್ತಾರವಾಗಿ ಹರಡಿತ್ತು.

ಪ್ರಯುತಾ ಇತಿ ವಿಖ್ಯಾತಾ ದಿಕ್ಷು ಸರ್ವಾಸು ಧಾರ್ಮಿಕಾಃ ।
ಧೃಷ್ಟಸ್ಯ ಧಾರ್ಷ್ಟಕಂ ಕ್ಷತ್ರಂ ರಣಧೃಷ್ಟಂ ಬಭೂವ ಹ ॥ ೪ ॥

ತ್ರಿಸಾಹಸ್ರಂತು ಸಗಣಂ ಕ್ಷತ್ರಿಯಾಣಾಂ ಮಹಾತ್ಮನಾಂ । -
ನಭಗಸ್ಯ ಚ ದಾಯಾದೋ ನಾಭಾಗೋ ನಾಮ ವೀರ್ಯವಾನ್ ॥ ೫ ॥

ಅಂಬರೀಷಸ್ತು ನಾಭಾಗಿರ್ವಿರೂಪಸ್ತಸ್ಯ ಚಾತ್ಮಜಃ ।
ಪೃಷದಶ್ವೋ ವಿರೂಪಸ್ಯ ತಸ್ಯ ಪುತ್ರೋ ರಥೀತರಃ ॥ ೬ ॥

ಏತೇ ಕ್ಷತ್ರಪ್ರಸೂತಾ ವೈ ಪುನಶ್ಚಾಂಗಿರಸಃ ಸ್ಮೃತಾಃ ।
ರಥೀತರಾಣಾಂ ಪ್ರವರಾಃ ಕ್ಷಾತ್ರೋಪೇತಾ ದ್ವಿಜಾತಯಃ ॥ ೭ ॥

---

೪. ಧರ್ಮಿಷ್ಟರಾದ ಆ ರಾಜರೆಲ್ಲರೂ ಪ್ರಯತರೆಂದು ಸರ್ವ ದಿಕ್ಕುಗಳಲ್ಲೂ ಪ್ರಖ್ಯಾತರಾದರು. ದುಷ್ಟರನ್ನು ನಿಗ್ರಹಮಾಡುವ ಆ ಕ್ಷತ್ರಿಯ ವರ್ಗವು ಯುದ್ಧದಲ್ಲಿ ಶೂರರೆಂದು ಪ್ರಖ್ಯಾತವಾಗಿತ್ತು.

೫. ಮಹಾತ್ಮರಾದ ಆ ಕ್ಷತ್ರಿಯರ ಮೂರುಸಹಸ್ರ ಗಣಗಳು ವಿಖ್ಯಾತವಾಗಿದ್ದುವು. ಅದರಲ್ಲಿ ನಭಗನೆಂಬುವನಿಗೆ ನಾಭಾಗನೆಂಬ ಅತ್ಯಂತ ಶೂರನಾದ ಕುಮಾರನು ಜನಿಸಿ ಲೋಕದಲ್ಲಿ ಪ್ರಖ್ಯಾತನಾದನು.

೬. ಆ ನಾಭಾಗನಿಗೆ ಮಹಾತ್ಮನಾದ ಅಂಬರೀಷನೆಂಬ ಕುಮಾರನೂ, ಅವನಿಗೆ ವಿರೂಪನೆಂಬ ಪುತ್ರನೂ, ಅವನಿಗೆ ಪೃಷದಶ್ವನೆಂಬ ಸುತನೂ, ಅವನಿಗೆ ರಥೀತರನೆಂಬ ಮಗನೂ ಜನಿಸಿದರು.

೭. ಇವರು ಕ್ಷತ್ರಿಯೋತ್ತಮರಾಗಿಯೂ, ಆಂಗಿರಸರೆಂದು ಪ್ರಖ್ಯಾತರಾಗಿಯೂ ಇದ್ದರು. ರಥೀತರರಿಗೆ ಉತ್ತಮರಾದ ಕ್ಷತ್ರಿಯರೂ, ದ್ವಿಜರೂ ಸಹ ಪುತ್ರರಾಗಿ ಜನಿಸಿ ಪ್ರಖ್ಯಾತರಾದರು.

ಕ್ಷುವತಸ್ತು ಮನೋಃ ಪೂರ್ವಮಿಕ್ಷ್ವಾಕುರಭಿನಿಃ ಸೃತಃ ।
ತಸ್ಯ ಪುತ್ರಶತಂ ತ್ವಾಸೀ ದಿಕ್ಷ್ವಾಕೋರ್ಭೂರಿದಕ್ಷಿಣಂ ॥ ೮ ॥

ತೇಷಾಂ ಜ್ಯೇಷ್ಠೋ ವಿಕುಕ್ಷಿಶ್ಚ ನೇಮಿರ್ದಂಡಶ್ಚ ತೇ ತ್ರಯಃ ।
ಶಕುನಿಪ್ರಮುಖಾಸ್ತಸ್ಯ ಪುತ್ರಾಃ ಪಂಚಾಶತಸ್ತು ತೇ ॥ ೯ ॥

ಉತ್ತರಾಪಥದೇಶಸ್ಯ ರಕ್ಷಿತಾರೋ ಮಹೀಕ್ಷಿತಃ ।
ಚತ್ವಾರಿಂಶತ್ತಥಾಷ್ಟೌ ಚ ದಕ್ಷಿಣಾಸ್ಯಾಂಚ ತೇದಿಶಿ ॥ ೧೦ ॥

ವಿಂಶತಿಪ್ರಮುಖಾಸ್ತೇ ತು ದಕ್ಷಿಣಾಪಥಾ ರಕ್ಷಿಣಃ ।
ಇಕ್ಷ್ವಾಕುಸ್ತು ವಿಕುಕ್ಷಿಂ ವೈ ಅಷ್ಟಕಾಯಾಮಥಾದಿಶೇತ್ ॥ ೧೧ ॥

---

೮. ಪೂರ್ವದಲ್ಲಿ ಈ ವಂಶದಲ್ಲಿದ್ದ ಮನುಚಕ್ರವರ್ತಿಯು ಶೀನಲಾಗಿ ಇಕ್ಷ್ವಾಕುಮಹಾರಾಜನು ಜನಿಸಿದನು. ಆ ಮಹಾರಾಜನಿಗೆ ನೂರಾರುಜನ ಮಹಾತ್ಮರಾದ ಮಕ್ಕಳು ಹುಟ್ಟಿದರು. ಆ ರಾಯನು ಭೂರಿದಕ್ಷಿಣೆಯುಳ್ಳ ಯಾಗವನ್ನು ಮಾಡಿದನು.

೯. ಅವರಲ್ಲಿ ವಿಕುಕ್ಷಿಮಹಾರಾಜನು ಹಿರಿಯಮಗನಾಗಿದ್ದನು. ಅವನಿಗೆ ನೇಮಿ, ದಂಡರೆಂಬ ಇಬ್ಬರು ಸಹೋದರರಿದ್ದರು. ಅವರಿಗೆ ಶಕುನಿಯೇ ಮೊದಲಾದ ಐವತ್ತು ಜನ ಸುಪ್ರಸಿದ್ಧರಾದ ಕುಮಾರರು ಇದ್ದರು.

೧೦. ಆ ರಾಜರು ಉತ್ತರದೇಶಗಳನ್ನು ಧರ್ಮದಿಂದ ಪಾಲಿಸುತ್ತಿದ್ದರು. ದಕ್ಷಿಣದಿಕ್ಕಿನಲ್ಲಿರುವ ನಲವತ್ತೆಂಟು ದೇಶಗಳಿಗೂ ಅವರು ಯಜಮಾನರಾಗಿ ಧರ್ಮದಿಂದ ರಕ್ಷಿಸುತ್ತಿದ್ದರು.

೧೧. ಅವರಲ್ಲಿ ಇಪ್ಪತ್ತುಜನ ಮಹಾರಾಜರು ದಕ್ಷಿಣದೇಶಗಳನ್ನು ಆಳುತ್ತಿದ್ದರು. ಇಕ್ಷ್ವಾಕುಮಹಾರಾಜನು ವಿಕುಕ್ಷಿರಾಜನನ್ನು ಅಷ್ಟಕದೇಶದಲ್ಲಿ ಸ್ಥಾಪಿಸಿ ರಾಜ್ಯವನ್ನಾಳುವಂತೆ ಏರ್ಪಡಿಸಿದನು.

|| ರಾಜೋವಾಚ ||

ಮಾಂಸಪೂನಾಯ ಶ್ರಾದ್ಧೇಯಂ ಮೃಗಾನ್ ಹತ್ವಾ ಮಹಾಬಲ ।
ಶ್ರಾದ್ಧಮದ್ಯ ನು ಕರ್ತವ್ಯಮಷ್ಟಕಾಯಾಂ ನ ಸಂಶಯಃ || ೧೨ ||

ಸ ಗತಸ್ತು ಮೃಗವ್ಯಾಂ ವೈ ವಚನಾತ್ತಸ್ಯ ಧೀಮತಃ ।
ಮೃಗಾನ್ ಸಹಸ್ರಶೋ ಹತ್ವಾ ಪರಿಶ್ರಾಂತಶ್ಚ ವೀರ್ಯವಾನ್ ॥
ಭಕ್ಷಯಚ್ಛಶಕಂತತ್ರ ವಿಕುಕ್ಷಿರ್ಮೃಗಯಾಂಗತಃ || ೧೩ ||

ಆಗತೇ ಸ ವಿಕುಕ್ಷೌ ತು ಸಮಾಂ ಸೇ ಸಹಸೈನಿಕೇ ।
ವಸಿಷ್ಠಂಚೋದಯಾಮಾಸ ಮಾಂಸಂ ಪ್ರೋಕ್ಷಯತಾಮಿತಿ || ೧೪ ||

ತಥೇತಿ ಚೋದಿತೋ ರಾಜ್ಞಾ ವಿಧಿವತ್ಸಮುಪಸ್ಥಿತಃ ।
ಸ ದೃಷ್ಟ್ವೋಪಹತಂ ಮಾಂಸಂ ಕ್ರುದ್ಧೋ ರಾಜಾನಮಬ್ರವೀತ್ || ೧೫ ||

---

೧೨. ರಾಜನು ಹೇಳಿದನು :—ಎಲೈ ಕುಮಾರನೇ, ಈ ದಿವಸ ಶ್ರಾದ್ಧವನ್ನು ಮಾಡಬೇಕಾಗಿದೆ. ಶೂರನಾದ ನೀನು, ಮೃಗಗಳನ್ನು ಸಂಹರಿಸಿ ಮಾಂಸವನ್ನು ತೆಗೆದುಕೊಂಡು ಬಾ. ಈ ಅಷ್ಟಕೆಯಲ್ಲಿಯೇ, ಶ್ರಾದ್ಧವನ್ನು ಮಾಡಬೇಕಾಗಿದೆ ಯೆಂದು ರಾಜನು ಕುಮಾರನಿಗೆ ತಿಳಿಸಿದನು.

೧೩. ಆಗ ವಿಕುಕ್ಷಿಮಹಾರಾಜನು, ತಂದೆಯ ಅಪ್ಪಣೆಯಂತೆ ಬೇಟೆಗೆ ಹೋಗಿ ತಂದೆಯ ಆಜ್ಞೆಯಂತೆ ಅನೇಕ ಮೃಗಗಳನ್ನು ಸಂಹರಿಸಿದನು. ವಿಕುಕ್ಷಿಯು ಸಾವಿರಾರು ಮೃಗಗಳನ್ನು ಸಂಹಾರಮಾಡಿದ ಆಯಾಸದಿಂದ ಬಳಲಿ ಹಸಿವಿನಿಂದ ಪೀಡಿತನಾಗಿ, ಅವುಗಳಲ್ಲಿ ಒಂದು ಮೊಲವನ್ನು ಭಕ್ಷಿಸಿದನು.

೧೪. ವಿಕುಕ್ಷಿಮಹಾರಾಜನು ಸೈನಿಕರೊಡನೆ ಅನೇಕ ಮೃಗಮಾಂಸವನ್ನು ತರಲು ಇಕ್ಷ್ವಾಕುಮಹಾರಾಯನು ವಸಿಷ್ಠಮುನಿಗೆ ಈ ಮಾಂಸವನ್ನು ಪ್ರೋಕ್ಷಿಸಿ ಶುದ್ಧಿಮಾಡುವಂತೆ ಹೇಳಿದನು.

೧೫. ಹಾಗೆಯೇ ಆಗಲೆಂದು ರಾಜನಿಂದ ಪ್ರೇರಿತನಾದ ವಸಿಷ್ಠಮುನಿಯು, ನಿಯಮದಿಂದ ಶಾಸ್ತ್ರೋಕ್ತಕ್ರಮದಿಂದ ಬಂದು ನೋಡಲಾಗಿ ಆ ಮಾಂಸವು ಅಪರಿಗೆ ಅಶುದ್ಧವಾಗಿದೆಯೆಂದು ತಿಳಿದು, ಕೋಪದಿಂದ ರಾಜನಿಗೆ ಇಂತೆಂದನು.

ಶೂದ್ರೇಣೋಪಹತಂ ಮಾಂಸಂ ಪುತ್ರೇಣ ತವ ಪಾರ್ಥಿವ ।
ಶಶಭಕ್ಷ್ನಾದಭೋಜ್ಯಂ ವೈ ತವ ಮಾಂಸಂ ಮಹಾದ್ಯುತೇ ॥ ೧೬ ॥

ಶಶೋ ದುರಾತ್ಮನಾ ಪೂರ್ವಮರಣ್ಯೇ ಭಕ್ಷಿತೋಽನಘ ।
ತೇನ ಮಾಂಸಮಿದಂ ದುಷ್ಟಂ ಪಿತೄಣಾಂ ನೃಪಸತ್ತಮ ॥ ೧೭ ॥

ಇಕ್ಷ್ವಾಕುಸ್ತು ತತಃ ಕ್ರುದ್ಧೋ ವಿಕುಕ್ಷಿಮಿದಮಬ್ರವೀತ್ ।
ಪಿತೃಕರ್ಮಣಿ ನಿರ್ದಿಷ್ಟೋ ಮಯಾ ತ್ವಂ ಮೃಗಯಾಂಗತಃ ॥
ಶಶಂ ಭಕ್ಷಯಸೇಽರಣ್ಯೇ ನಿರ್ಘೃಣಃ ಪೂರ್ವಮದ್ಯ ನು ॥ ೧೮ ॥

ತಸ್ಮಾತ್ಪರಿತ್ಯಜಾಮಿ ತ್ವಾಂ ಗಚ್ಛ ತ್ವಂ ಸ್ವೇನ ಕರ್ಮಣಾ ।
ಏವಮಿಕ್ಷ್ವಾಕುನಾ ತ್ಯಕ್ತೋ ವಸಿಷ್ಠವಚನಾತ್ ಸುತಃ ॥ ೧೯ ॥

---

೧೬. ಎಲೈ ಜ್ಞಾನಿಯಾದ ಮಹಾರಾಜನೇ, ಈ ಮಾಂಸವು ಶೂದ್ರಸಂಪರ್ಕದಿಂದ ದೂಷ್ಯವಾಗಿಯೂ, ನಿನ್ನ ಕುಮಾರನು ಶಶವನ್ನು ಭಕ್ಷಿಸಿರುವುದರಿಂದಲೂ ಈ ಮಾಂಸವು ಶ್ರಾದ್ಧಕ್ಕೆ ಅನರ್ಹವಾಗಿಯೂ, ಅಭೋಜ್ಯವಾಗಿಯೂ, ಆಗಿದೆ ಎಂದನು.

೧೭. ಮಹಾಕಾಂತಿವಂತನೂ, ನಿರ್ದೋಷಿಯೂ ಆದ ಮಹಾರಾಯನೇ, ದುಷ್ಟನಾದ ನಿನ್ನ ಕುಮಾರನು, ಅರಣ್ಯದಲ್ಲಿ ಮೊದಲೇ ಮೊಲದ ಮಾಂಸವನ್ನು ಭಕ್ಷಿಸಿರುವುದರಿಂದ ಈ ಮಾಂಸವೆಲ್ಲವೂ ಉಚ್ಛಿಷ್ಟವಾಗಿ ದೂಷ್ಯವಾಗಿದೆ. ಆದುದರಿಂದ ಇದು ಶ್ರಾದ್ಧಕರ್ಮದಲ್ಲಿ ಪಿತೃಗಳಿಗೆ ಅರ್ಪಿಸಲು ಅನರ್ಹವಾಗಿದೆಯೆಂದು ಮುನಿಯು ಹೇಳಿದನು.

೧೮. ಅನಂತರ ಇಕ್ಷ್ವಾಕುಮಹಾರಾಜನು ವಿಕುಕ್ಷಿಮಹಾರಾಜನನ್ನು ಕುರಿತು ಕೋಪಗೊಂಡು ಎಲೈ ಕುಮಾರನೇ, ಈ ದಿವಸ ಶ್ರಾದ್ಧವು ನಡೆಯಬೇಕಾಗಿದೆ. ಅದಕ್ಕಾಗಿ ನಿನ್ನನ್ನು ಮಾಂಸವನ್ನು ತರಬೇಕೆಂದು ಬೇಟೆಗೆ ಕಳುಹಿಸಿಕೊಟ್ಟೆನು. ನೀನು ಅಲ್ಲಿ ಮೊದಲೇ ಶಶವನ್ನು ಭಕ್ಷಿಸಿ, ಶ್ರಾದ್ಧವನ್ನೇ ದೂಷಿಸಿರುವುದರಿಂದ ಅವಿವೇಕಿಯಾಗಿರುವೆ. ನಿನಗೆ ಸ್ವಲ್ಪವೂ ವಿವೇಕವಿಲ್ಲವೆಂದು ತಿರಸ್ಕರಿಸಿದನು.

೧೯. ನೀನು ಶ್ರಾದ್ಧಘಾತುಕನಾಗಿರುವುದರಿಂದ ನಿನ್ನನ್ನು ತ್ಯಾಗಮಾಡುವೆನು. ನೀನು ಸ್ವೇಚ್ಛೆಯಾಗಿ ಎಲ್ಲಿಗೆ ಬೇಕಾದರೂ ಹೋಗಬಹುದು. ಎಂದು ಹೇಳಿ ರಾಜನು ವಸಿಷ್ಠಮುನಿಯ ಮಾತಿನಂತೆ ಕುಮಾರನನ್ನು ತ್ಯಜಿಸಿದನು.

ಇಕ್ಷ್ವಾಕೌ ಸಂಸ್ಥಿತೇ ತಸ್ಮಿಂಚ್ಛಶೀ ಸ ಪೃಥಿವೀಮಿಮಾಂ |
ಪ್ರಾಪ್ತಃ ಪರಮಧರ್ಮಾತ್ಮಾ ಸ ಚಾಯೋಧ್ಯಾಧಿಪೋಽಭವತ್ || ೨೦ ||

ತದಾಕರೋತ್ಸ ರಾಜ್ಯಂ ವೈ ವಸಿಷ್ಠಪರಿನೋದಿತಃ |
ತತಃ ಸ್ತೇನೇನ ಸಾ ಪೂರ್ಣೋ ರಾಜ್ಯಾವಸ್ಥಾ ಮಹೀಪತೇಃ || ೨೧ ||

ಕಾಲೇನ ಗತವಾಂಸ್ತತ್ರ ಸ ಚ ನ್ಯೂನತರಾಂಗತಿಂ |
ಜ್ಞಾತ್ವೈವಮೇತದಾಖ್ಯಾನಂ ನಾ ವಿಧಿರ್ಭಕ್ಷಯೇತ್ತು ವೈ || ೨೨ ||

ಮಾಂಸ ಭಕ್ಷಯಿತಾಮುತ್ರ ಯಸ್ಯ ಮಾಂಸಮಿಹಾದ್ಮ್ಯಹಂ |
ಏತನ್ಮಾಂಸಸ್ಯ ಮಾಂಸತ್ವಂ ಪ್ರವದಂತಿ ಮನೀಷಿಣಃ || ೨೩ ||

---

೨೦. ಇಕ್ಷ್ವಾಕುಮಹಾರಾಜನು ಹೀಗೆ ಹೇಳಿ, ಸುತನನ್ನು ತ್ಯಜಿಸಲು ಆ ಪರಮಧರ್ಮಿಷ್ಠನಾದ ಕುಮಾರನು ಭೂಮಂಡಲದಲ್ಲಿ ಸಂಚರಿಸಿ ಅಯೋಧ್ಯಾ ನಗರಕ್ಕೆ ಅಧಿಪತಿಯಾಗಿದ್ದನು.

೨೧. ಅನಂತರ ಇಕ್ಷ್ವಾಕುಮಹಾರಾಜನು ವಸಿಷ್ಠರಿಂದ ಪ್ರೇರಿತನಾಗಿ ರಾಜ್ಯವನ್ನಾಳುತ್ತಿದ್ದನು. ತರುವಾಯ ಆ ರಾಜ್ಯವು ಕಳ್ಳಕಾಕರಿಂದ ಪೂರ್ಣವಾಗಿ ಅವ್ಯವಸ್ಥಿತವಾಗಿತ್ತು.

೨೨. ಅನಂತರ ಕೆಲವು ಕಾಲದ ಮೇಲೆ ಆ ರಾಜನು ಅಲ್ಲಿಗೆ ಬಂದನು. ಅಲ್ಲಿರುವ ಹೀನಸ್ಥಿತಿಯನ್ನು ನೋಡಿ ಇದಕ್ಕೆ ಕಾರಣವೇನೆಂದು ಯೋಚಿಸಲು ಹಿಂದಿನ ಆ ಖ್ಯಾನವನ್ನು ಹಿರಿಯವರಿಂದ ಕೇಳಿದನು. ಸರ್ವಜ್ಞ್ಯ ದೈವವೇ ಕಾರಣವೆಂದು ಅರಿತನು.

೨೩. ಈ ಲೋಕದಲ್ಲಿ ನಾನು ಯಾವನ ಮಾಂಸವನ್ನು ಭಕ್ಷಿಸಿರುವೆನೋ ಅವನು ಪರಲೋಕದಲ್ಲಿ ನನ್ನನ್ನು ಭಕ್ಷಿಸುವನು. ಜ್ಞಾನಿಗಳು ಮಾಂಸಭಕ್ಷಣಕ್ಕೆ ಮಾಂಸಭಕ್ಷಣವೇ ಚಿಕಿತ್ಸೆಯೆಂದು ಹೇಳುವರು.

**ಶಶಾದಸ್ಯ ತು ದಾಯಾದಃ ಕಕುಸ್ಥೋ ನಾಮ ವೀರ್ಯವಾನ್ ।**
**ಇಂದ್ರಸ್ಯ ವೃಷಭೂತಸ್ಯ ಕಕುಸ್ಥೋ ಜಾಯತೇ ಪುರಾ ॥ ೨೪ ॥**

**ಪೂರ್ವಮಾಡೀಬಕೇ ಯುದ್ಧೇ ಕಕುಸ್ಥಸ್ತೇನ ಸಸ್ಮೃತಃ ।**
**ಅನೇನಾಸ್ತು ಕಕುಸ್ಥಸ್ಯ ಪೃಥುರೋಮಾ ಚ ಸ ಸ್ಮೃತಃ ॥ ೨೫ ॥**

**ವೃಷದಶ್ವಃ ಪೃಥೋಃ ಪುತ್ರಸ್ತಸ್ಮಾದಂಧ್ರಸ್ತು ವೀರ್ಯವಾನ್ ।**
**ಆಂಧ್ರಸ್ತು ಯುವನಾಶ್ವಸ್ತು ಶ್ರಾವಸ್ತಸ್ತಸ್ಯ ಚಾತ್ಮಜಃ ॥ ೨೬ ॥**

**ಜಜ್ಞೇ ಶ್ರಾವಸ್ತಕೋ ರಾಜಾ ಶ್ರಾವಸ್ತೀ ಯೇನ ನಿರ್ಮಿತಾ ।**
**ಶ್ರಾವಸ್ತಸ್ಯ ತು ದಾಯಾದೋ ಬೃಹದಶ್ವೋ ಮಹಾಯಶಾಃ ॥ ೨೭ ॥**

---

೨೪. ಆ ಶಶಾದನನಿಗೆ ಶೂರನಾದ ಕಕುಸ್ಥನೆಂಬ ಕುಮಾರನು ಜನಿಸಿದನು. ಪೂರ್ವದಲ್ಲಿ ಆ ರಾಜನು ಅಸುರರೊಡನೆ ಯುದ್ಧವನ್ನು ಮಾಡುವುದಕ್ಕಾಗಿ, ವೃಷಭ ರೂಪವನ್ನು ಹೊಂದಿ, ಇಂದ್ರನ ಡುಬ್ಬದ ಮೇಲೆ ಕುಳಿತು ಯುದ್ಧಮಾಡಿದ್ದರಿಂದ ಅವನಿಗೆ ಕಕುಸ್ಥನೆಂಬ ನಾಮವು ಪ್ರಾಪ್ತವಾಗಿದೆ.

೨೫. ಪೂರ್ವದಲ್ಲಿ ಆ ಕಕುಸ್ಥಮಹಾರಾಜನು ಆಡೀಬಕವೆಂಬ ಯುದ್ಧದಲ್ಲಿ ಎತ್ತಿನ ಡುಬ್ಬದ ಮೇಲೆ ಕುಳಿತು ಯುದ್ಧಮಾಡಿದ್ದರಿಂದ ಆ ನಾಮವು ಪ್ರಾಪ್ತವಾಗಿದೆ. ಮತ್ತು ಪೃಥುರೋಮವೆಂಬ ನಾಮಾಂತರವೂ ಪ್ರಖ್ಯಾತವಾಗಿದೆ.

೨೬. ಪೃಥುಮಹಾರಾಜನಿಗೆ ವೃಷದಶ್ವನೆಂಬ ಕೀರ್ತಿವಂತನಾದ ಪುತ್ರನೂ, ಅವನಿಗೆ ಅತ್ಯಂತ ಶೂರನಾದ ಆಂಧ್ರನೆಂಬ ಸುತನೂ, ಆ ಆಂಧ್ರನಿಗೆ ಯವನಾಶ್ವ ನೆಂಬ ಕುಮಾರನೂ, ಅವನಿಗೆ ಶ್ರಾವಸ್ತನೆಂಬ ಮಗನೂ ಹುಟ್ಟಿದರು.

೨೭. ಆ ಶ್ರಾವಸ್ತಮಹಾರಾಜನು ಹುಟ್ಟಿದ ಬಳಿಕ, ಶ್ರಾವಸ್ತೀನಾಮಕವಾದ ನಗರಿಯು ನಿರ್ಮಿತವಾಯಿತು. ಆ ಶ್ರಾವಸ್ತನಿಗೆ ಅತ್ಯಂತ ಕೀರ್ತಿವಂತನಾದ ಬೃಹದಶ್ವನೆಂಬ ಕುಮಾರನು ಹುಟ್ಟಿದನು.

ಬೃಹದಶ್ವಸುತಶ್ಚಾಪಿ ಕುಬಲಾಶ್ವ ಇತಿ ಶ್ರುತಿಃ |
ಯಃ ಸ ಧುಂಧುವಧಾದ್ರಾಜಾ ಧುಂಧುಮಾರತ್ವಮಾಗತಃ || ೨೮ ||

|| ಋಷಯ ಊಚುಃ ||

ಧುಂಧುವಧಂ ಮಹಾಪ್ರಾಜ್ಞ ಶ್ರೋತುಮಿಚ್ಛಾಮಿ ವಿಸ್ತರಾತ್ |
ಯದರ್ಥಂ ಕುಬಲಾಶ್ವಃ ಸ ಧುಂಧುಮಾರತ್ವಮಾಗತಃ || ೨೯ ||

|| ಸೂತ ಉವಾಚ ||

ಬೃಹದಶ್ವಸ್ಯ ಪುತ್ರಾಣಾಂ ಸಹಸ್ರಾಣ್ಯೇಕವಿಂಶತಿಃ |
ಸರ್ವೇ ವಿದ್ಯಾಸು ನಿಷ್ಣಾತಾ ಬಲವಂತೋ ದುರಾಸದಾಃ || ೩೦ ||

ಬಭೂವುರ್ಧಾರ್ಮಿಕಾಃ ಸರ್ವೇ ಯಜ್ವಾನೋ ಭೂರಿದಕ್ಷಿಣಾಃ |
ಕುಬಲಾಶ್ವಂ ಮಹಾವೀರ್ಯಂ ಶೂರಮುತ್ತಮಧಾರ್ಮಿಕಂ || ೩೧ ||

ಬೃಹದಶ್ವೋಽಭ್ಯಷಿಂಚತ್ತಂ ತಸ್ಮಿನ್ ರಾಷ್ಟ್ರೇ ನರಾಧಿಪಃ |
ಪುತ್ರಸಂಕ್ರಾಮಿತಶ್ರೀಸ್ತು ವನಂ ರಾಜಾ ವಿವೇಶ ಹ || ೩೨ ||

---

೨೮. ಆ ಬೃಹದಶ್ವನಿಗೆ ಕಬಲಾಶ್ವನೆಂಬ ಪ್ರಖ್ಯಾತನಾದ ಸುತನು ಹುಟ್ಟಿದನು. ಅವನು ಧುಂಧುವೆಂಬ ರಾಕ್ಷಸನನ್ನು ಸಂಹಾರಮಾಡಿದ್ದರಿಂದ ಧುಂಧುಮಾರನೆಂಬ ನಾಮದಿಂದ ಪ್ರಖ್ಯಾತನಾದನು.

೨೯. ಮುನಿಗಳು ಕೇಳಿದರು :—ಎಲೈ ಸೂತಪುರಾಣೀಕನೇ, ಕಬಲಾಶ್ವ ಮಹಾರಾಜನು ಧುಂಧುವೆಂಬ ರಾಕ್ಷಸನನ್ನು ಏತಕ್ಕಾಗಿ ಸಂಹಾರಮಾಡಿದನು. ಆ ಧುಂಧುರಾಕ್ಷಸನ ಸಂಹಾರವನ್ನು ಕೇಳಲು ಬಯಸುತ್ತೇವೆ. ಜ್ಞಾನಿಯಾದ ನೀನು ಅದನ್ನು ತಿಳಿಸು ಎಂದು ಮುನಿಗಳು ಸೂತಪುರಾಣೀಕನನ್ನು ಕೇಳಿಕೊಂಡರು.

೩೦. ಸೂತಮುನಿಯು ಹೇಳಿದನು :—ಬೃಹದಶ್ವ ರಾಜನಿಗೆ ಇಪ್ಪತ್ತೊಂದು ಸಹಸ್ರ ಸಂಖ್ಯಾಕರಾದ ಪುತ್ರರು ಲೋಕವಿಖ್ಯಾತರಾಗಿದ್ದರು. ಅವರೆಲ್ಲರೂ ವಿದ್ಯಾ ಪಾರಂಗತರೂ. ಅತ್ಯಂತ ಬಲಿಷ್ಠರೂ, ಶತ್ರುಸಂಹಾರಕರೂ, ಇತರರಿಂದ ಹೆದರಿಸಲ ಶಕ್ಯರೂ ಆಗಿದ್ದರು.

೩೧–೩೨. ಅವರೆಲ್ಲರೂ ಧಾರ್ಮಿಕರೂ, ಯಜ್ವಿಗಳೂ, ದಾನಶೂರರೂ ಆಗಿದ್ದರು ಆ ಬಳಿಕ ನರಪತಿಯಾದ ಬೃಹದಶ್ವನು ಮಹಾಶೂರನೂ, ಅತ್ಯಂತವೀರ್ಯವಂತನೂ, ಅತ್ಯಂತ ಧಾರ್ಮಿಕನೂ ಆದ ಕುಬಲಾಶ್ವನಿಗೆ ರಾಜ್ಯವನ್ನು ಅರ್ಪಿಸಿದನು. ಹೀಗೆ ಅವನನ್ನು ರಾಜ್ಯದಲ್ಲಿ ಸ್ಥಾಪಿಸಿದ ಬಳಿಕ ರಾಜನು ವನವನ್ನು ಪ್ರವೇಶಿಸಿದನು.

ಬೃಹದಶ್ವಂ ಮಹಾರಾಜಂ ಶೂರಮುತ್ತಮಧಾರ್ಮಿಕಂ ।
ಪ್ರಯಾತಂ ತಮುತ್ತಂಕಸ್ತು ಬ್ರಹ್ಮರ್ಷಿಃ ಪ್ರತ್ಯವಾರಯತ್ ॥ ೩೩ ॥

॥ ಉತ್ತಂಕ ಉವಾಚ ॥

ಭವತೋ ರಕ್ಷಣಂ ಕಾರ್ಯಂ ತತ್ತಾವತ್ ಕರ್ತುಮರ್ಹತಿ ।
ನಿರುದ್ವಿಗ್ನಸ್ತಪಃ ಕರ್ತುಂ ನ ಹಿ ಶಕ್ನೋಮಿ ಪಾರ್ಥಿವ ॥ ೩೪ ॥

ಮಮಾಶ್ರಮಸಮೀಪೇಷು ಸಮೇಷು ಮರುಧನ್ವಸು ।
ಸಮುದ್ರೋ ವಾಲುಕಾಪೂರ್ಣಸ್ತತ್ರ ತಿಷ್ಠತಿ ಭೂಪತೇ ॥ ೩೫ ॥

ದೇವತಾನಾಮವಧ್ಯಸ್ತು ಮಹಾಕಾಯೋ ಮಹಾಬಲಃ ।
ಅಂತರ್ಭೂಮಿಗತಸ್ತತ್ರ ವಾಲುಕಾಂತರ್ಹಿತೋ ಮಹಾನ್ ॥ ೩೬ ॥

ಸ ಮನೋಸ್ತನಯಃ ಕ್ರೂರೋ ಧುಂಧುರ್ನಾಮ ಸುದಾರುಣಃ ।
ಶೇತಂ ಲೋಕವಿನಾಶಾಯ ತಪ ಆಸ್ಥಾಯ ದಾರುಣಂ ॥ ೩೭ ॥

---

೩೩. ಶೂರನೂ, ಧಾರ್ಮಿಕನೂ, ಉತ್ತಮನೂ ಆದ ಬೃಹದಶ್ವಮಹಾರಾಜನು. ವಾನಪ್ರಸ್ಥಾಶ್ರಮಕ್ಕಾಗಿ ವನಕ್ಕೆ ಹೊರಡಲು ಬ್ರಹ್ಮರ್ಷಿಯಾದ ಉದಂಕನು ಅವನನ್ನು ತಡೆಮಾಡಿದನು.

೩೪. ಉದಂಕ ಮುನಿಯು ಹೇಳಿದನು !—ಎಲೈ ಮಹಾರಾಜನೇ ನೀನು ನನ್ನನ್ನು ರಕ್ಷಿಸಬೇಕು. ನೀನು ಆವಶ್ಯಕವಾಗಿಯೂ ಅದನ್ನು ರಕ್ಷಿಸಬೇಕು. ಏಕೆಂದರೆ ಭಯದಿಂದ ತಪ್ಪಸ್ಸನ್ನು ಮಾಡಲು ಸಾಧ್ಯವೇ ಇಲ್ಲ. ನಿರ್ಭೀತಿಯಿಂದಲೇ ತಪಸ್ಸನ್ನು ಮಾಡಿದರೆ, ಅದು ಸಾರ್ಥಕವಾಗುವುದು. ಆದುದರಿಂದ ನೀನು ರಕ್ಷಿಸಬೇಕೆಂದನು.

೩೫. ಎಲೈ ಮಹಾರಾಜನೇ ನನ್ನಾಶ್ರಮದ ಸಮೀಪದಲ್ಲಿ ಸಮವೂ ಸಮುದ್ರದ ಮರುಳಿನಿಂದ ಪೂರ್ಣವೂ ಅತಿ ವಿಶಾಲವೂ ಆದ ಮರುಭೂಮಿಯು ಸುಪ್ರಸಿದ್ಧವಾಗಿದೆ.

೩೬–೩೭. ಆ ಮರಳು ಕಾಡಿನ ಮರಳುಗಳ ಕೆಳಭಾಗದಲ್ಲಿ ದೇವತೆಗಳಿಂದ ಅವಧ್ಯನೂ, ಮಹಾಕಾಯನೂ, ಅತಿ ಬಲಾಢ್ಯನೂ, ಕ್ರೂರಿಯೂ, ಅತ್ಯಂತ ದಾರುಣನೂ, ಮನುಕುಮಾರನೂ ಆದ ಧುಂಧುವೆಂಬ ರಾಕ್ಷಸನು ಲೋಕವಿನಾಶಕ್ಕಾಗಿ ತಪಸ್ಸನ್ನು ನೂರಾರು ವರ್ಷಗಳಿಂದಲೂ ಮಾಡುತ್ತಿರುವನು. ಆ ತಪಸ್ಸು ಅತ್ಯಂತ ಘೋರವಾಗಿರುವುದು.

ಸಂವತ್ಸರಸ್ಯ ಪರ್ಯಂತೇ ಸ ನಿಃಶ್ವಾಸಂ ಪ್ರಮುಂಚತಿ ।
ಯದಾ ತದಾ ಮಹೀ ತತ್ರ ಚಲಿತಾ ಸ್ಮ ಸಕಾನನಾ ॥ ೩೮ ॥

ತಸ್ಯ ನಿಃಶ್ವಾಸವಾತೇನ ರಜ ಊದ್ಧೂಯತೇ ಮಹತ್ ।
ಆದಿತ್ಯಪಥಮಾವೃತ್ಯ ಸಪ್ತಾಹಂ ಭೂಮಿಕಂಪನಃ ॥ ೩೯ ॥

ಸವಿಷ್ಫುಲಿಂಗಂ ಸಜ್ವಾಲಂ ಸಧೂಮಮತಿದಾರುಣಂ ।
ತೇನ ರಾಜನ್ನ ಶಕ್ನೋಮಿ ತಸ್ಮಿನ್ ಸ್ಥಾತುಂ ಸ್ವ ಆಶ್ರಮೇ ॥ ೪೦ ॥

ತಂ ವಾರಯ ಮಹಾಬಾಹೋ ಲೋಕಾನಾಂ ಹಿತಕಾಮ್ಯಯಾ ।
ತೇಜಸ್ತೇ ಸುಮಹಾವಿಷ್ಣುಸ್ತೇಜಸಾಪ್ಯಾಯಯಿಷ್ಯತಿ ॥ ೪೧ ॥

---

೩೮. ಆ ರಾಕ್ಷಸನು ಒಂದು ವರ್ಷದ ಕೊನೆಯಲ್ಲಿ ಯಾವಾಗ ನಿಶ್ವಾಸವನ್ನು ಬಿಡುವನೋ, ಆಗ ಪರ್ವತಕಾನನಗಳಿಂದ ಸಹಿತವಾದ ಭೂಮಂಡಲವು ಕಂಪಿತವಾಗುವುದು.

೩೯. ಆ ನಿಶ್ವಾಸವಾತದಿಂದ ಉಂಟಾದ ಧೂಳು, ಅತಿಮಹತ್ತಾಗಿ ಸೂರ್ಯಮಂಡಲವನ್ನೇ ಮುಚ್ಚುವುದು. ಇದರಿಂದ ಏಳು ದಿವಸಗಳವರೆಗೂ ಭೂಕಂಪವಾಗುವುದು.

೪೦. ಆ ನಿಶ್ವಾಸದ ಜೊತೆಯಲ್ಲಿ ಅಗ್ನಿಕಣಗಳೂ, ಜ್ವಾಲೆಗಳೂ ಸಹ ಅತಿ ಭಯಂಕರವಾಗಿ ಉದ್ಭವಿಸುವುವು. ಅದರಿಂದ ಎಲೈ ಮಹಾರಾಜನೇ, ನಾನು ನನ್ನ ಆಶ್ರಮದಲ್ಲಿ ನಿಶ್ಚಿಂತನಾಗಿ ತಪಸ್ಸುಮಾಡಲು ಅವಕಾಶವೇ ಇಲ್ಲದಂತಾಗಿದೆ.

೪೧. ಆದುದರಿಂದ ಶೂರನಾದ ಎಲೈ ಮಹಾರಾಜನೇ ಲೋಕಕಲ್ಯಾಣಕ್ಕಾಗಿ ನೀನು ಆ ರಾಕ್ಷಸನನ್ನು ಸಂಹರಿಸು ನಿನಗೆ ಲೋಕದೊಡೆಯನೂ, ಮಹಾನುಭಾವನೂ ಆದ ಶ್ರೀಹರಿಯು ಸಂಪೂರ್ಣವಾದ ಶಕ್ತಿಯನ್ನು ದಯಪಾಲಿಸುವನು.

ಲೋಕಾ ಸ್ವಸ್ಥಾ ಭವಂತ್ಯದ್ಯ ತಸ್ಮಿನ್ ವಿನಿಹತೇಽಸುರೇ ।
ತ್ವಂ ಹಿ ತಸ್ಯ ವಧಾಯಾದ್ಯಾ ಸಮರ್ಥಃ ಪೃಥಿವೀಪತೇ ॥ ೪೨ ॥

ವಿಷ್ಣುನಾ ಚ ವರೋ ದತ್ತೋ ಮಮ ಪೂರ್ವಂ ತತೋಽನಘ ।
ನ ಹಿ ಧುಂಧುರ್ಮಹಾವೀರ್ಯಸ್ತೇಜಸಾಲ್ಪೇನ ಶಕ್ಯತೇ ॥ ೪೩ ॥

ನಿರ್ದಗ್ಧುಂ ಪೃಥಿವೀಪಾಲಾ ಅಪಿ ವರ್ಷಶತೈರಿಹ ।
ವೀರ್ಯಂ ಹಿ ಸುಮಹತ್ತಸ್ಯ ದೇವೈರಪಿ ದುರಾಸಹಂ ॥ ೪೪ ॥

ಏವಮುಕ್ತಸ್ತು ರಾಜರ್ಷಿರುತ್ತಂಕೇನ ಮಹಾತ್ಮನಾ ।
ಕುಬಲಾಶ್ವಂ ಸುತಂ ಪ್ರಾದಾತ್ತಸ್ಮಿನ್ ಧುಂಧುನಿವಾರಣೇ ॥ ೪೫ ॥

---

೪೨. ಎಲೈ ಭೂಪತಿಯೇ, ಲೋಕಕಂಟಕನಾದ ಆ ರಾಕ್ಷಸನು ಮೃತನಾಗಲು ಲೋಕಗಳೆಲ್ಲವೂ (ಪ್ರಜೆಗಳೆಲ್ಲರೂ) ಕ್ಷೇಮವಾಗಿರುವರು. ಆದುದರಿಂದ ನೀನೊಬ್ಬನೇ ಅವನನ್ನು ಸಂಹರಿಸಲು ಅರ್ಹನಾಗಿರುತ್ತೀಯೆ ಎಂದನು.

೪೩. ಎಲೈ ಮಹಾರಾಜನೇ, ಶ್ರೀಮಹಾವಿಷ್ಣುವೇ ಪೂರ್ವದಲ್ಲಿ ಸಾಕ್ಷಾತ್ತಾಗಿ ನನಗೆ ವರವನ್ನು ಕೊಟ್ಟಿರುವನು. ಆ ಧುಂಧುವಾರ ರಾಕ್ಷಸನನ್ನು ಸಂಹರಿಸಲು ಅಲ್ಪಶಕ್ತಿಯುಳ್ಳ ರಾಜರಿಂದ ಸಾಧ್ಯವಿಲ್ಲ.

೪೪. ಎಲೈ ಮಹಾರಾಜನೇ, ಸಾಮಾನ್ಯ ರಾಜರು ನೂರಾರು ವರ್ಷಗಳು ಅವನೊಡನೆ ಹೋರಾಡಿದರೂ ಅವನನ್ನು ಸಂಹರಿಸಲು ಸಾಧ್ಯವಿಲ್ಲ. ಏಕೆಂದರೆ ಆ ರಾಕ್ಷಸನು ಮಹಾಬಲಿಷ್ಠನು. ಮತ್ತು ಅವನ ಶಕ್ತಿಯು ಅನಾದೃಶ್ಯವಾಗಿದೆ. ಅವನನ್ನು ಸಂಹರಿಸಲು ದೇವತೆಗಳಿಗೂ ಅಸಾಧ್ಯವು.

೪೫. ಮಹಾತ್ಮನಾದ ಉತ್ತಂಕನು ಹೀಗೆ ಹೇಳಲಾಗಿ ಶೂರನಾದ ಆ ರಾಜರ್ಷಿಯು ಆ ಧುಂಧುವಾರನನ್ನು ಸಂಹಾರಮಾಡುವುದಕ್ಕಾಗಿ ತನ್ನ ಕುಮಾರನಾದ ಕುಬಲಾಶ್ವನನ್ನು ನೇಮಿಸಿದನು.

ರಾಜಾ ಸಂನ್ಯಸ್ತಶಸ್ತ್ರೋಽಹಮುಯಂತು ತನಯೋ ಮಮ ।
ಭವಿಷ್ಯತಿ ದ್ವಿಜಶ್ರೇಷ್ಠ ಧುಂಧುಮಾರೋ ನ ಸಂಶಯಃ ॥ ೪೬ ॥

ಸ ತಂ ವ್ಯಾದಿಶ್ಯ ತನಯುಂ ಧುಂಧುಮಾರಣ ಮುದ್ಯತಂ ।
ಜಗಾಮ ಪರ್ವತಾಯೈವ ತಪಸೇ ಶಂಸಿತವ್ರತಃ ॥ ೪೭ ॥

ಕುಬಲಾಶ್ವಸ್ತು ಧರ್ಮಾತ್ಮಾ ಪಿತುರ್ವಚನಮಾಸ್ಥಿತಃ ।
ಸಹಸ್ರೈರೇಕವಿಂಶತ್ಯ ಪುತ್ರಾಣಾಂ ಸಹ ಪಾರ್ಥಿವಃ ॥
ಪ್ರಾಯಾದುತ್ತಂಕಸಹಿತೋ ಧುಂಧೋಸ್ತಸ್ಯ ನಿವಾರಣೇ ॥ ೪೮ ॥

ತಮಾವಿಶತ್ತತೋ ವಿಷ್ಣುರ್ಭಗವಾನ್ ಸ್ವೇನ ತೇಜಸಾ ।
ಉತ್ತಂಕಸ್ಯ ನಿಯೋಗಾತ್ತು ಲೋಕಾನಾಂ ಹಿತಕಾಮ್ಯಯಾ ॥ ೪೯ ॥

---

೪೬. ಎಲೈ ವಿಪ್ರೋತ್ತಮನೇ, ನಾನು ಶಸ್ತ್ರತ್ಯಾಗವನ್ನು ಮಾಡಿರುವೆನು. ಈ ನನ್ನ ಕುಮಾರನು ನನ್ನ ಸ್ಥಳದಲ್ಲಿದ್ದುಕೊಂಡು, ದುಷ್ಟನಾದ ಧುಂಧುಮಾರನನ್ನು ಖಂಡಿತವಾಗಿಯೂ ಸಂಹರಿಸುವನು. ಇದರಲ್ಲಿ ಸಂದೇಹವಿಲ್ಲ ಎಂದನು.

೪೭. ಆ ಮಹಾರಾಜನು ಧುಂಧುಮಾರ ರಾಕ್ಷಸನನ್ನು ಸಂಹಾರಮಾಡಲು ಮಗನನ್ನು ಕಳುಹಿಸಿದನು. ತರುವಾಯ ಮಹಾನುಭಾವನೂ, ಅತಿ ನಿಯಮವುಳ್ಳವನೂ ಆದ ಆ ರಾಯನು ತಪ್ಪಸ್ಸನ್ನು ಮಾಡುವುದಕ್ಕಾಗಿ ಆಶ್ರಮಕ್ಕೆ ತೆರಳಿದನು.

೪೮. ಧರ್ಮಾತ್ಮನಾದ ಕುಬಲಾಶ್ವರಾಯನು ತನ್ನ ಪಿತೃವಚನದಂತೆ ಇಪ್ಪತ್ತೊಂದು ಸಹಸ್ರ ಪುತ್ರರಿಂದ ಒಡಗೂಡಿ, ಉತ್ತಂಕ ಮಹರ್ಷಿಯನ್ನು ಮುಂದಿಟ್ಟುಕೊಂಡು ಆ ರಾಕ್ಷಸನನ್ನು ಸಂಹರಿಸಲು ಹೊರಟನು.

೪೯. ಅನಂತರ ಸ್ವಾಮಿಯಾದ ಶ್ರೀಹರಿಯು ಲೋಕಕಲ್ಯಾಣಕ್ಕಾಗಿ ಉತ್ತಂಕಋಷಿಯ ಪ್ರಾರ್ಥನೆಯಂತೆ ದಿವ್ಯತೇಜಸ್ಸಿನೊಡನೆ ಮಹಾರಾಜನನ್ನು ಪ್ರವೇಶಿಸಿದನು.

ತಸ್ಮಿನ್ ಪ್ರಯಾತೇ ದುರ್ಧರ್ಷೇ ದಿವಿ ಶಬ್ದೋ ಮಹಾನಭೂತ್ ।
ಅದ್ಯಪ್ರಭೃತ್ಯೇಷ ನೃಪೋ ಧುಂಧುಮಾರೋ ಭವಿಷ್ಯತಿ ॥ ೫೦ ॥

ದಿವ್ಯೈಃ ಪುಷ್ಪೈಶ್ಚ ತಂ ದೇವಾಃ ಸಮವಾಂಸತ ಅದ್ಭುತಂ ।
ಸ ಗತ್ವಾ ಪುರುಷ ವ್ಯಾಘ್ರಸ್ತನಯೈಃ ಸಹ ವೀರ್ಯವಾನ್ ॥ ೫೧ ॥

ಸಮುದ್ರಂ ಖನಯಾಮಾಸ ವಾಲುಕಾರ್ಣವಮವ್ಯಯಂ ।
ನಾರಾಯಣೇನ ರಾಜರ್ಷಿಸ್ತೇಜಸಾಪ್ಯಾಯಿತೋ ಹಿ ಸಃ ॥ ೫೨ ॥

ಬಭೂವಾತಿಬಲೋ ಭೂಯ ಉತ್ತಂಕಸ್ಯ ವಶೇ ಸ್ಥಿತಃ ।
ತಸ್ಯ ಪುತ್ರೈಃ ಖನದ್ಭಿಶ್ಚ ವಾಲುಕಾಂತರ್ಹಿತಸ್ತದಾ ॥ ೫೩ ॥

---

೫೦. ಮಹಾಶೂರನಾದ ಆ ಮಹಾರಾಜನು ರಾಕ್ಷಸನ ಸಂಹಾರಕ್ಕಾಗಿ ಹೊರಡಲು, ಸ್ವರ್ಗದಲ್ಲಿ ಮಹಾಧ್ವನಿಯು ಉಂಟಾಯಿತು. ಆ ದಿವಸ ಮೊದಲು ಗೊಂಡು ಆ ರಾಜನು ಧುಂಧುಮಾರನೆಂಬ ನಾಮದಿಂದ ಪ್ರಖ್ಯಾತನಾದನು

೫೧. ಆಗ ದೇವತೆಗಳು ದಿವ್ಯವಾದ ಕಲ್ಪವೃಕ್ಷಗಳ ಕುಸುಮಗಳನ್ನು ಅವನ ಮೇಲೆ ಎರಚಿದರು. ದಿವ್ಯ ದುಂದುಭಿಗಳು ಮೊಳಗಿದುವು. ಆ ಆಶ್ಚರ್ಯವು ಜನರಂಜಕ ವಾಗಿದ್ದಿತು. ಆಗ ಅತ್ಯಂತ ಶೂರನಾದ ಮಹಾರಾಜನು ಪುರುಷ ಶ್ರೇಷ್ಠರಾದ ತನ್ನ ಮಕ್ಕಳ ಸಂಗಡ ಸಮುದ್ರದ ಬಳಿಗೆ ಹೋದನು

೫೨. ಆ ರಾಜರ್ಷಿಯು, ಶ್ರೀಮನ್ನಾರಾಯಣನ ದಿವ್ಯತೇಜಸ್ಸಿನಿಂದ ಭೂಷಿತ ನಾಗಿ ಅಗಾಧವೂ, ನಾಶರಹಿತವೂ ಆದ ಆ ಮರಳುಮಯವಾದ ಸಮುದ್ರವನ್ನು ಅಗಿದನು.

೫೩. ಆಗ ಮಹಾರಾಜನು ಅತ್ಯಂತ ಬಲಿಷ್ಠನಾಗಿ, ಉತ್ತಂಕಮಹರ್ಷಿಯ ವಶದಲ್ಲಿ ಇದ್ದುಗೊಂಡು ಶೂರರಾದ ತನ್ನ ಕುಮಾರರೊಡನೆ ಸಮುದ್ರವನ್ನು ಅಗಿದನು. ಅಗ ಆ ರಾಕ್ಷಸನು ಆ ಮರಳಿನ ರಾಶಿಯಲ್ಲಿ ಅವಿತುಕೊಂಡಿದ್ದನು.

ಧುಂಧುರಾಸಾದಿತಸ್ತತ್ರ ದಿಶಮಾಶ್ರಿತ್ಯ ಪಶ್ಚಿಮಾಂ ।
ಮುಖಜೇನಾಗ್ನಿನಾಕ್ರುದ್ಧೋ ಲೋಕಾನುದ್ವರ್ತಯನ್ನಿವ || ೫೪ ||

ವಾರಿ ಶುಶ್ರಾವ ಯೋಗೇನ ಮಹೋದಧಿರಿವೋದಯೇ ।
ಸೋಮಸ್ಯ ಸೋಮಪಶ್ರೇಷ್ಠ ಧಾರೋರ್ಮಿಕಲಿಲೋ ಮಹಾನ್ || ೫೫ ||

ತಸ್ಯ ಪುತ್ರಾಸ್ತು ನಿರ್ದಗ್ಧಾಸ್ತ್ರಿಭಿರೂನಾಸ್ತು ರಾಕ್ಷಸಾಃ ।
ತತಃ ಸ ರಾಜಾತಿಬಲೋ ಧುಂಧುಬಂಧುನಿಬರ್ಹಣಃ || ೫೬ ||

ತಸ್ಯ ವಾರಿಮಯಂ ವೇಗಮಪಿಬತ್ ಸ ನರಾಧಿಪಃ ।
ಯೋಗೀ ಯೋಗೇನ ವಹ್ನಿಂ ಚ ಶಮಯಾಮಾಸ ವಾರಿಣಾ || ೫೭ ||

---

೫೪. ಹೀಗೆ ಅವರು ಆ ಮರಳುಸಾಗರವನ್ನು ಅಗಿಯಲು ಧುಂಧುರಾಕ್ಷಸನು ಸಿಕ್ಕಿದನು. ಅವನು ಪಶ್ಚಿಮಾಭಿಮುಖವಾಗಿ ಕುಳಿತುಕೊಂಡು ಕ್ರೋಧಾವಿಷ್ಟನಾಗಿ ಲೋಕಗಳನ್ನು ಭಸ್ಮೀಕರಿಸುವ ಮುಖದಿಂದ ಅಗ್ನಿಯನ್ನು ಸುರಿಸುತ್ತಿದ್ದನು.

೫೫. ಸೋಮವಂಶಕ್ಕೆ ತಿಲಕನಾದ ಎಲೈ ಮಹಾರಾಜನೇ, ಚಂದ್ರೋದಯವಾದರೆ ಮಹಾಸಮುದ್ರವು ಉಕ್ಕಿ, ಮಹತ್ತಾದ ಅಲೆಗಳಿಂದ ಎಲ್ಲೆಯನ್ನು ಮೀರುವಂತೆ ಅವನು ಯೋಗಮಹಿಮೆಯಿಂದ ಮಹಾಸಮುದ್ರವನ್ನೇ ಸೃಷ್ಟಿಸಿದನು.

೫೬. ಆಗ ಆ ರಾಕ್ಷಸನ ಮಹಾತೇಜಸ್ಸಿನಿಂದ ಆ ರಾಜನ ಮೂರು ಮಕ್ಕಳು ಹೊರತು ಉಳಿದವರೆಲ್ಲರೂ ದಗ್ಧರಾದರು. ಅನಂತರ ಅತಿಬಲಿಷ್ಠನಾದ ಮಹಾರಾಜನು ಧುಂಧುರಾಕ್ಷಸನ ಬಂಧುಗಳನ್ನು ಸಂಹರಿಸಿದನು.

೫೭. ಆಗ ಆ ಮಹಾರಾಜನು, ರಾಕ್ಷಸನ ಪ್ರಭಾವದಿಂದುಂಟಾದ ಪ್ರಲಯವಾರಿಯನ್ನು ತನ್ನ ಯೋಗಶಕ್ತಿಯಿಂದ ಪಾನಮಾಡಿದನು. ಅನಂತರ ಪ್ರಲಯಾಗ್ನಿಯು ಅವನ ಶಕ್ತಿಯಿಂದ ಸಂಭವಿಸಿತು. ಆ ರಾಜನು ತನ್ನ ಶಕ್ತಿಯಿಂದುಂಟಾದ ಜಲದಿಂದ ಆ ಅಗ್ನಿಯನ್ನು ಶಮನಮಾಡಿದನು.

ನಿರಸ್ಯ ಕ್ತಂ ಮಹಾಕಾಯಂ ಬಲೇನೋದಕರಾಕ್ಷಸಂ ।
ಉತ್ತಂಕಂ ದರ್ಶಯಾಮಾಸ ಕೃತಕರ್ಮಾ ನರಾಧಿಪಃ ॥ ೫೮ ॥

ಉತ್ತಂಕಶ್ಚ ವರಂ ಪ್ರಾದಾತ್ತಸ್ಮೈ ರಾಜ್ಞೇ ಮಹಾತ್ಮನೇ ।
ಆದಾತ್ತಸ್ಯಾಕ್ಷಯಂ ವಿತ್ತಂ ಶತ್ರುಭಿಶ್ಚಾಪ್ಯ ಧೃಷ್ಯತಾಂ ॥ ೫೯ ॥

ಧರ್ಮೇ ರತಿಂ ಚ ಸತತಂ ಸ್ವರ್ಗೇ ವಾಸಂ ತಥಾಕ್ಷಯಂ ।
ಪುತ್ರಾಣಾಂ ಚಾಕ್ಷಯಾಂಲ್ಲೋಕಾನ್ ಸ್ವರ್ಗೇ ಯೇ ರಾಕ್ಷಸಾ ಹತಾಃ ॥ ೬೦ ॥

ತಸ್ಯ ಪುತ್ರಾಸ್ತ್ರಯಃ ಶಿಷ್ಟಾ ಧೃಡಾಶ್ವೋ ಜ್ಯೇಷ್ಠ ಉಚ್ಯತೇ ।
ಭದ್ರಾಶ್ವಃ ಕಪಿಲಾಶ್ವಶ್ಚ ಕನೀಯಾಂಸೌ ತು ತೌ ಸ್ಮೃತೌ ॥ ೬೧ ॥

---

೫೮. ಆಗ ಮಹಾರಾಜನು, ಜಲಮಯನಾದ ರಾಕ್ಷಸನನ್ನು ಸ್ವಶಕ್ತಿಯಿಂದ ನಿರಾಕರಿಸಿ ಆ ರಾಕ್ಷಸನನ್ನು ಆ ಉತ್ತಂಕಮುನಿಗೆ ತೋರಿಸಿದನು.

೫೯. ರಾಕ್ಷಸನು ಹತವಾಗಲು ಆ ಉತ್ತಂಕ ಮಹಾಮುನಿಯು ಮಹಾತ್ಮನಾದ ಮಹಾರಾಜನಿಗೆ ವರವನ್ನು ಕೊಟ್ಟನು. ಎಲೈ ಮಹಾರಾಜನೇ, ನೀನು ಮಹದೈಶ್ವರ್ಯವನ್ನೂ ಶತ್ರುಗಳಿಂದ ತಿರಸ್ಕರಿಸಲು ಅಸಾಧ್ಯವಾದ ಶಕ್ತಿಯನ್ನೂ ಪಡೆಯೆಂದು ವರವನ್ನು ದಯಪಾಲಿಸಿದನು.

೬೦. ಮತ್ತು ಆ ಮುನಿಯು ಮಹಾರಾಜನಿಗೆ ಧರ್ಮದಲ್ಲಿ ಆಸಕ್ತಿಯನ್ನೂ, ಅಕ್ಷಯವಾದ ಸ್ವರ್ಗವಾಸಸೌಖ್ಯವನ್ನೂ, ಮಹಾಶಕ್ತಿಯನ್ನೂ ವರವಾಗಿ ಕೊಟ್ಟನು. ಮತ್ತು ರಾಕ್ಷಸರಿಂದ ಹತರಾದ ಅವನ ಕುಮಾರರಿಗೆ ಸ್ವರ್ಗಸುಖವನ್ನೂ ದಯಪಾಲಿಸಿದನು.

೬೧. ಆ ಮಹಾರಾಜನಿಗೆ ಮೂವರು ಮಕ್ಕಳು ಮಾತ್ರ ಉಳಿದಿದ್ದರು. ಅವರಲ್ಲಿ ದೃಢಾಶ್ವನೆಂಬುವನು ಜ್ಯೇಷ್ಠನಾಗಿಯೂ, ಭದ್ರಾಶ್ವ ಕಪಿಲಾಶ್ವರೆಂಬುವರು ಕಿರಿಯವರಾಗಿಯೂ ಇದ್ದರು. ಹೀಗೆ ಈ ಮೂವರು ಪುತ್ರರೂ ಲೋಕವಿಖ್ಯಾತರಾಗಿದ್ದರು.

ಧೌಂಧುಮಾರೀದ್ಧೃಡಾಶ್ವಸ್ತು ಹರ್ಯಶ್ವಸ್ತಸ್ಯ ಚಾತ್ಮಜಃ ।
ಹರ್ಯಶ್ವಸ್ಯ ನಿಕುಂಭೋಽಭೂತ್ ಕ್ಷತ್ರಧರ್ಮರತಃ ಸದಾ ॥ ೬೨ ॥

ಸಂಹತಾಶ್ವೋ ನಿಕುಂಭಸ್ಯ ಶ್ರುತೋ ರಣವಿಶಾರದಃ ।
ಕೃಶಾಶ್ವಶ್ಚಾಕ್ಷಯಾಶ್ವಶ್ಚ ಸಂಹತಶ್ಚ ಸುತಾವುಭೌ ॥ ೬೩ ॥

ತಸ್ಯ ಪತ್ನೀ ಹೈಮವತೀ ಸತಾಂ ಮತಿದೃಷದ್ವತೀ ।
ವಿಖ್ಯಾತಾ ತ್ರಿಷು ಲೋಕೇಷು ಪುತ್ರಸ್ತಸ್ಯಾಃ ಪ್ರಸೇನಜಿತ್ ॥ ೬೪ ॥

ಯುವನಾಶ್ವಃ ಸುತಸ್ತಸ್ಯ ತ್ರಿಷುಲೋಕೇಷ್ವತಿದ್ಯುತಿಃ ।
ಅತ್ಯಂತ ಧಾರ್ಮಿಕೋ ಗೌರೀ ತಸ್ಯ ಪತ್ನೀ ಪತಿವ್ರತಾ ॥ ೬೫ ॥

---

೬೨. ರಾಜಕುಮಾರನಾದ ದೃಢಾಶ್ವನಿಗೆ ಹರ್ಯಶ್ವನೆಂಬ ಕುಮಾರನೂ ಆ ಹರ್ಯಶ್ವನಿಗೆ ನಿಕುಂಭನೆಂಬ ಕುಮಾರನೂ, ಜನಿಸಿದರು. ಅವರೆಲ್ಲರೂ ಕ್ಷತ್ರಿಯ ಧರ್ಮದಲ್ಲಿಯೇ ಆಸಕ್ತರಾಗಿ ಪ್ರಜಾಪಾಲನೆಯನ್ನು ಮಾಡಿದರು.

೬೩. ಆ ನಿಕುಂಭನಿಗೆ ಯುದ್ಧ ವಿಶಾರದನಾದ ಸಂಹತಾಶ್ವನೆಂಬ ಕುಮಾರನೂ ಅವನಿಗೆ ಕೃತಾಶ್ವ ಅಕ್ಷಯಾಶ್ವನೆಂಬ ಇಬ್ಬರು ಪುತ್ರರೂ ಜನಿಸಿದರು.

೬೪. ಅವನಿಗೆ ಹಿಮವಂತನ ಕುಮಾರಿಯೂ, ಸಜ್ಜನಪ್ರಿಯಳೂ, ಮೂರುಲೋಕ ಪ್ರಖ್ಯಾತಳೂ ಆದ ದೃಷದ್ವತಿಯೆಂಬ ಪತ್ನಿಯು ಇದ್ದಳು. ಅವಳಿಗೆ ಪ್ರಸೇನಜಿತನೆಂಬ ಕುಮಾರನು ಜನಿಸಿದನು.

೬೫. ಪ್ರಸೇನಜಿತನಿಗೆ ಮೂರು ಲೋಕಗಳಲ್ಲಿಯೂ ಪ್ರಖ್ಯಾತನಾದ ಯುವನಾಶ್ವನೆಂಬ ಕುಮಾರನಿದ್ದನು. ಅವನು ಅತ್ಯಂತ ಧಾರ್ಮಿಕನಾಗಿರುವನು. ಆ ಮಹಾರಾಜನು ಸಾಧ್ವೀಮಣಿಯಾದ ಗೌರೀ ಎಂಬ ಕುಮಾರಿಯನ್ನು ಮದುವೆ ಯಾದನು.

ಅಭಿಶಪ್ತಾ ತು ಸಾ ಭರ್ತ್ರಾ ನದೀ ಸಾ ಬಾಹುದಾ ಕೃತಾ ।
ತಸ್ಯಾಸ್ತು ಗೌರಿಕಃ ಪುತ್ರಶ್ಚಕ್ರವರ್ತೀ ಬಭೂವ ಹ ॥ ೬೬ ॥

ಮಾಂಧಾತಾ ಯೌವನಾಶ್ವೋ ವೈ ತ್ರೈಲೋಕ್ಯವಿಜಯೀ ನೃಪಃ ।
ಅತ್ರಾಪ್ಯುದಾಹರಂತೀಮೌ ಶ್ಲೋಕೌ ಪೌರಾಣಿಕಾ ದ್ವಿಜಾಃ ॥ ೬೭ ॥

ಯಾವತ್ಸೂರ್ಯ ಉದಯತಿ ಯಾವಚ್ಚ ಪ್ರತಿತಿಷ್ಠತಿ ।
ಸರ್ವಂ ತದ್ಯೌವನಾಶ್ವಸ್ಯ ಮಾಂಧಾತುಃ ಕ್ಷೇತ್ರಮುಚ್ಯತೇ ॥ ೬೮ ॥

ಅತ್ರಾಪ್ಯುದಾಹರಂತೀಮೌ ಶ್ಲೋಕಂ ವಂಶವಿದೋ ಜನಾಃ ।
ಯಾವನಾಶ್ವಂ ಮಹಾತ್ಮಾನಂ ಯಜ್ವಾನಮಮಿತೌಜಸಂ ॥
ಮಾಂಧಾತಾ ತು ತನುರ್ವಿಷ್ಣೋಃ ಪುರಾಣಜ್ಞಾಃ ಪ್ರಚಕ್ಷತೇ ॥ ೬೯ ॥

---

೬೬. ಆ ನಾರೀಮಣಿಯು ಪತಿಯಿಂದ ನಾನಾ ರೀತಿಯಾಗಿ ಆಜ್ಞಾಪಿಸಲ್ಪಟ್ಟಳು. ಅವನ ದೇಶದಲ್ಲಿದ್ದ ನದಿಯನ್ನು ಅನೇಕ ಭಾಗಗಳನ್ನಾಗಿ ಮಾಡಿ ಕ್ಷೇತ್ರಗಳಿಗೆ ಉಪಯೋಗವಾಗುವಂತೆ ಮಾಡಿದನು. ಆ ಗೌರೀದೇವಿಗೆ ಗೌರಿಕನೆಂಬ ಚಕ್ರವರ್ತಿಯಾದ ಕುಮಾರನು ಜನಿಸಿದನು.

೬೭. ಆ ಯುವನಾಶ್ವನಿಗೆ ಯೌವನಾಶ್ವನಾಮಕನೂ, ಮಾಂಧಾತನೆಂದು ಲೋಕವಿಖ್ಯಾತನೂ, ತ್ರೈಲೋಕ್ಯ ವಿಜಯಿಯೂ, ಆದ ರಾಜಕುಮಾರನು ಉತ್ಪನ್ನನಾದನು. ಈ ಮಾಂಧಾತರಾಯನ ವಿಷಯದಲ್ಲಿ ಪೌರಾಣೀಕರಾದ ಬ್ರಾಹ್ಮಣರು ಈ ಎರಡು ಪದ್ಯಗಳನ್ನು ಹೇಳುವರು.

೬೮. ಸೂರ್ಯನು ಉದಯಿಸಿ, ಯಾವ ಯಾವ ದೇಶಗಳಲ್ಲಿ ಸಂಚರಿಸುವನೋ ಅವನ ಕಾಂತಿಯು ಯಾವ ದೇಶಗಳಲ್ಲಿ ಬೆಳಗುತ್ತದೆಯೋ, ಆ ದೇಶಗಳೆಲ್ಲಾ ಯುವನಾಶ್ವನ ಕುಮಾರನಾದ ಮಾಂಧಾತರಾಜನ ದೇಶಗಳಾಗಿದ್ದುವು.

೬೯. ಈ ವಿಷಯದಲ್ಲಿ ವಂಶಜ್ಞಾನಿಗಳಾದ ಜನಗಳು ಈ ಪದ್ಯವನ್ನು ಹೇಳುವರು. ಯುವನಾಶ್ವನ ಕುಮಾರನಾದ ಮಾಂಧಾತ ಮಹಾರಾಜನು ಮಹಾತ್ಮನೂ ಮಹಾಯಾಗ ಶೀಲನೂ ಅತಿತೇಜಸ್ವಿಯೂ, ಮಹಾವಿಷ್ಣುವಿನ ಅಂಶಸಂಭೂತನೂ, ಆಗಿರುವನೆಂದು ಪುರಾಣೀಕರು ಹೊಗಳುವರು.

ತಸ್ಯ ಚೈತ್ರರಥೀ ಭಾರ್ಯಾ ಶಶಬಿಂದೋಃ ಸುತಾಽಭವತ್ ।
ಸಾಧ್ವೀ ಬಿಂಧುಮತೀ ನಾಮ ರೂಪೇಣಾಪ್ರತಿಮಾ ಭುವಿ ॥ ೭೦ ॥

ಪತಿವ್ರತಾ ಚ ಜ್ಯೇಷ್ಠಾ ಚ ಭ್ರಾತೄಣಾಮಯುತಸ್ಯ ಸಾ ।
ತಸ್ಯಾಮುತ್ಪಾದಯಾಮಾಸ ಮಾಂಧಾತಾ ತ್ರೀನ್ ಸುತಾನ್ ಪ್ರಭುಃ ॥ ೭೧ ॥

ಪುರುಕುತ್ಸಮಂಬರೀಷಂ ಮುಚುಕುಂದಂ ಚ ವಿಶ್ರುತಂ ।
ಅಂಬರೀಷಸ್ಯ ದಾಯಾದೋ ಯುವನಾಶ್ವೋಽಪರಃ ಸ್ಮೃತಃ ॥ ೭೨ ॥

ಹರಿತೋ ಯುವನಾಶ್ವಸ್ಯ ಹಾರಿತಾಃ ಶೂರಯಃ ಸ್ಮೃತಾಃ ।
ಏತೇ ಹ್ಯಂಗಿರಸಃ ಪುತ್ರಾಃ ಕ್ಷಾತ್ರೋಪೇತಾ ದ್ವಿಜಾತಯಃ ॥ ೭೩ ॥

---

೭೦. ಆ ಮಾಂದಾತಮಹಾರಾಜನಿಗೆ ಶಶಬಿಂದುವಿನ ಕುಮಾರಿಯೂ, ಚೈತ್ರರಥೀನಾಮಕಳೂ ಆದ ಪತ್ನಿಯು ಇದ್ದಳು. ಆ ನಾರೀಮಣಿಯು ಪತಿವ್ರತಾ ಶಿರೋಮಣಿಯೂ, ಬಿಂದುಮತಿಯೆಂಬ ನಾಮಾಂತರವುಳ್ಳವಳೂ, ಲೋಕದಲ್ಲಿ ಸೌಂದರ್ಯ ವಿಷಯದಲ್ಲಿ ಅಸದೃಶಳೂ ಆಗಿದ್ದಳು.

೭೧. ಆ ನಾರೀಮಣಿಯು ಪತಿವ್ರತೆಯಲ್ಲಿ ಅಗ್ರಗಣ್ಯಳೂ, ಹತ್ತುಸಾವಿರ ಸಹೋದರಿಯರಿಗೆ ಜ್ಯೇಷ್ಠಳೂ ಆಗಿದ್ದಳು. ಮಾಂಧಾತ ಮಹಾಪ್ರಭುವು ಆಕೆಯಲ್ಲಿ ಲೋಕವಿಖ್ಯಾತರಾದ ಮೂವರು ಕುಮಾರರನ್ನು ಪಡೆದನು.

೭೨. ಆ ಮಾಂಧಾತನ ಕುಮಾರರು ಪುರುಕುತ್ಸ, ಅಂಬರೀಷ, ಮುಚುಕುಂದ ರೆಂದು ಪ್ರಖ್ಯಾತರಾಗಿದ್ದರು. ಆ ಅಂಬರೀಷನಿಗೆ ಯುವನಾಶ್ವನೆಂದು ಪ್ರಸಿದ್ಧನಾದ ಕುಮಾರನು ಜನಿಸಿದನು.

೭೩. ಯುವನಾಶ್ವನಿಗೆ ಹರಿತನಾಮಕರಾದ ಕುಮಾರರು ಜನಿಸಿದರು. ಆ ಕುಮಾರರು ಅತಿಶೂರರಾಗಿದ್ದರು. ಇವರು ಅಂಗಿರಸ ವಂಶಸಂಭೂತರೂ, ಕ್ಷಾತ್ರ ಧರ್ಮದಿಂದ ಸಹಿತರೂ ಆದ ಬ್ರಾಹ್ಮಣರಾಗಿದ್ದರು.

ಪುರುಕುತ್ಸಸ್ಯ ದಾಯಾದಸ್ತ್ರಸದ್ದಸ್ಯುರ್ಮಹಾಯಶಾಃ ।
ನರ್ಮದಾಯಾಂ ಸಮುತ್ಪನ್ನಃ ಸಂಭೂತಸ್ತಸ್ಯ ಚಾತ್ಮಜಃ ॥ ೭೪ ॥

ಸಂಭೂತಸ್ಯಾತ್ಮಜಃ ಪುತ್ರೋ ಹ್ಯನರಣ್ಯಃ ಪ್ರತಾಪವಾನ್ ।
ರಾವಣೋ ನಿಹತೋ ಯೇನ ತ್ರಿಲೋಕೀವಿಜಯೇ ಪುರಾ ॥ ೭೫ ॥

ತ್ರಸದಶ್ವೋಽನರಣ್ಯಸ್ಯ ಹರ್ಯಶ್ವಸ್ತಸ್ಯ ಚಾತ್ಮಜಃ ।
ಹರ್ಯಶ್ವಾತ್ತು ದೃಶದ್ವತ್ಯಾಂ ಜಜ್ಞೇ ವಸುಮತೋ ನೃಪಃ ॥ ೭೬ ॥

ತಸ್ಯ ಪುತ್ರೋಽಭವದ್ರಾಜಾ ತ್ರಿಧನ್ವಾ ನಾಮ ಧಾರ್ಮಿಕಃ ।
ಆಸೀತ್ ತ್ರೈಧನ್ವನಶ್ಚಾಪಿ ವಿದ್ವಾಂಸ್ತ್ರಯ್ಯಾಂ ರಣಪ್ರಭುಃ ॥ ೭೭ ॥

---

೭೪. ಪುರುಕುತ್ಸನಿಗೆ ಕೀರ್ತಿಯುತನಾದ ತ್ರಸದ್ದಸ್ಯುವೆಂಬ ಕುಮಾರನು ಜನಿಸಿದನು. ಅವನು ನರ್ಮದೆಯ ಸುತನಾಗಿದ್ದನು. ಅವನಿಗೆ ಸಂಭೂತನೆಂಬ ಕುಮಾರನು ಉದ್ಭವಿಸಿದನು.

೭೫. ಆ ಸಂಭೂತಮಹಾರಾಜನಿಗೆ ಪ್ರತಾಪವಂತನಾದ ಅನರಣ್ಯನೆಂಬ ಪುತ್ರನು ಸಂಭವಿಸಿದನು. ಅವನು ಪೂರ್ವದ ತ್ರಿಲೋಕವಿಜಯದ ಸಂದರ್ಭದಲ್ಲಿ ಶೂರನಾದ ರಾವಣನನ್ನೂ ಜಯಿಸಿ, ಪ್ರಖ್ಯಾತನಾಗಿದ್ದನು.

೭೬. ಪ್ರಖ್ಯಾತನಾದ ಅನರಣ್ಯನಿಗೆ ತ್ರಸದಶ್ವನೆಂಬ ಕುಮಾರನೂ, ಆ ಮಹಾ ರಾಜನಿಗೆ ಹರ್ಯಶ್ವನೆಂಬ ಪುತ್ರನೂ, ಆವಿರ್ಭವಿಸಿದರು. ಆ ಹರ್ಯಶ್ವನು ದೃಷದ್ವತಿಯನ್ನು ಮದುವೆಯಾದನು. ಆ ದಂಪತಿಗಳಿಗೆ ವಸುಮತನೆಂಬ ಲೋಕಮಾನ್ಯನಾದ ರಾಜಕುಮಾರನು ಜನಿಸಿದನು.

೭೭. ವಸುಮತ ಮಹಾರಾಜನಿಗೆ ಧಾರ್ಮಿಕನಾದ ತ್ರಿಧನ್ವನೆಂಬ ರಾಜ ಕುಮಾರನು ಉತ್ಪನ್ನನಾದನು. ಅವನಿಗೆ ವಿದ್ವಾಂಸನೂ, ಮೂರುವೇದ ಪಾರಂಗತನೂ, ರಣಪ್ರಿಯನೂ, ಆದ ಸತ್ಯವ್ರತನೆಂಬ ಕುಮಾರನು ಜನಿಸಿದನು.

**ತಸ್ಯ ಸತ್ಯವ್ರತೋ ನಾಮ ಕುಮಾರೋಽಭೂನ್ಮಹಾಬಲಃ ।**
**ತೇನ ಭಾರ್ಯಾ ವಿದರ್ಭಸ್ಯ ಹೃತಾ ಹತ್ವಾ ದಿವೌಕಸಃ ॥ ೭೮ ॥**

**ಪಾಣಿಗ್ರಹಣಮಂತ್ರೇಷು ನಿಷ್ಠಾಂ ಸಂಪ್ರಾಪಿತೇಷ್ವಿಹ ।**
**ವಿಷ್ಣುವೃದ್ಧಃ ಸುತಸ್ತಸ್ಯ ವಿಷ್ಣುವೃದ್ಧೋಽಯತಃ ಸ್ಮೃತಃ ।**
**ಏತೇ ಹ್ಯಂಗಿರಸಃ ಪುತ್ರಾಃ ಕ್ಷಾತ್ರೋಪೇತಾಃ ಸಮಾಶ್ರಿತಾಃ ॥ ೭೯ ॥**

**ಕಾಮಾದ್ಬಲಾಚ್ಚ ಮೋಹಾಚ್ಚ ಸಂಕರ್ಷಣಬಲೇನ ಚ ।**
**ಭಾವಿನೋಽರ್ಥಸ್ಯ ಚ ಬಲಾತ್ ತತ್ಕೃತಂ ತೇನ ಧೀಮತಾ ॥ ೮೦ ॥**

**ತಮಧರ್ಮೇಣ ಸಂಯುಕ್ತಂ ಪಿತಾ ತ್ರಯ್ಯಾಗುಣೋಽತ್ಯಜತ್ ।**
**ಅಪಧ್ವಂಸೇತಿ ಬಹುಶೋಽವದತ್ ಕ್ರೋಧಸಮನ್ವಿತಃ ॥ ೮೧ ॥**

---

೭೮. ಆ ಸತ್ಯವ್ರತಮಹಾರಾಯನು ಮಹಾಬಲಶಾಲಿಯಾಗಿದ್ದನು. ಅವನು ದೇವತೆಗಳ ಸಂಗಡ ಹೋರಾಡಿ ವಿದರ್ಭರಾಜಕುಮಾರಿಯಾದ ನಾರೀಮಣಿಯನ್ನು ಅಪಹರಿಸಿ ಮದುವೆಯಾದನು.

೭೯. ಮತ್ತು ಅವನು ವಿವಾಹಮಂತ್ರಗಳಲ್ಲಿ ಅತ್ಯಂತ ನಿಷ್ಣಾತನಾಗಿದ್ದನು. ಅವನಿಗೆ ವಿಷ್ಣುವರ್ಧನನೆಂಬ ಕುಮಾರನು ಜನಿಸಿದನು. ಇವನಿಂದ ವೈಷ್ಣವ ಧರ್ಮವು ವೃದ್ಧಿಯಾಯಿತು. ಇವರೆಲ್ಲರೂ ಅಂಗಿರಸನ ವಂಶದವರೂ, ಕ್ಷತ್ರಿಯ ಧರ್ಮೋಪೇತರೂ, ಲೋಕವಿಖ್ಯಾತರೂ ಆಗಿದ್ದರು.

೮೦. ಆ ಮಹಾರಾಜನು ಜ್ಞಾನಿಯಾಗಿದ್ದನು. ಆದರೂ ಸ್ವೇಚ್ಛಾಚಾರ ದಿಂದಲೂ, ಬಲಾತ್ಕಾರದಿಂದಲೂ, ಅಜ್ಞಾನದಿಂದಲೂ, ಸಂಕರ್ಷಣಶಕ್ತಿಯಿಂದಲೂ, ಭಾವಿಯಾಗಿ ಉಂಟಾಗಬೇಕಾದ ಅನರ್ಥಾನುಗುಣದಿಂದಲೂ ಅವನು ಅಕಾರ್ಯ ಪ್ರವರ್ತಕನಾಗಿದ್ದನು.

೮೧. ಮೂರು ವೇದಗಳಲ್ಲಿ ಪಾರಂಗತನೂ, ಧರ್ಮಾತ್ಮನೂ ಆದ ಮಹಾ ರಾಜನು, ಕ್ರೋಧಾಕುಲನಾಗಿ ಅಧರ್ಮಯುಕ್ತನಾದ ಕುಮಾರನನ್ನು ನೋಡಿ ನೀನು ಹಾಳಾಗು. ಅಂದರೆ ಲೋಕದಲ್ಲಿ ಎಲ್ಲರಂತೆ ಬಾಳಬೇಡವೆಂದು ಹೇಳಿ ತ್ಯಾಗಮಾಡಿದನು.

ಪಿತರಂ ಸೋಽಬ್ರವೀದೇಕಃ ಕ್ವ ಗಚ್ಛಾಮೀತಿ ವೈ ಮುಹುಃ ।
ಪಿತಾ ಚೈನಮಥೋವಾಚ ಶ್ವಪಾಕೈಃ ಸಹ ವರ್ತಯ ॥ ೮೨ ॥

ನಾಹಂ ಪುತ್ರೇಣ ಪುತ್ರಾರ್ಥೀ ತ್ವಯಾದ್ಯ ಕುಲಪಾಂಸನ ।
ಇತ್ಯುಕ್ತಃ ಸ ನಿರಾಕ್ರಾಮನ್ನಗರಾದ್ವಚನಾದ್ವಿಭೋಃ ॥ ೮೩ ॥

ನ ಚೈನಂ ಧಾರಯಾಮಾಸ ವಸಿಷ್ಠೋ ಭಗವಾನೃಷಿಃ ।
ಸ ತು ಸತ್ಯವ್ರತೋ ಧೀಮಾಂಚ್ಛ್ವಪಾಕಾವಸಥಾಂತಿಕಂ ॥
ಪಿತ್ರಾ ಮುಕ್ತೋಽವಸದ್ವೀರಃ ಪಿತಾ ಚಾಸ್ಯ ವನಂ ಯಯೌ ॥ ೮೪ ॥

ತಸ್ಮಿಂಸ್ತು ವಿಷಯೇ ತಸ್ಯ ನಾವರ್ಷತ್ ಪಾಕಶಾಸನಃ ।
ಸಮಾ ದ್ವಾದಶ ಸಂಪೂರ್ಣಾಸ್ತೇನಾಧರ್ಮೇಣ ವೈ ತದಾ ॥ ೮೫ ॥

---

೮೨. ತಂದೆಯು ಹೊರಟುಹೋಗುವಂತೆ ಆಜ್ಞಾಪಿಸಲು, ಕುಮಾರನು ತಂದೆಯನ್ನು ಕುರಿತು ನಾನೊಬ್ಬನೇ ಎಲ್ಲಿಗೆ ಹೋಗಲೆಂದು ಬಾರಿಬಾರಿಗೂ ತಂದೆಯನ್ನು ನಿರ್ಬಂಧಮಾಡಿದನು. ಆಗ ತಂದೆಯು ಕೋಪದಿಂದ ನೀನು ಚಂಡಾಲರ ಸಹ ವಾಸವನ್ನು ಮಾಡೆಂದು ಆಜ್ಞಾಪಿಸಿದನು.

೮೩. ಎಲೈ ದುಷ್ಟನೇ ನಮ್ಮ ಕುಲಾಧಮನಾದ ನೀನು ನನ್ನ ಮಗನಲ್ಲ ಹೊರಟುಹೋಗೆಂದು ನಿರಾಕರಿಸಿದನು. ಆಗ ಅವನು ತಿರಸ್ಕೃತನಾಗಿ ತಂದೆಯ ಆಜ್ಞೆಯಂತೆ ಊರಿಂದ ಹೊರಟುಹೋದನು.

೮೪. ಅವನು ವಸಿಷ್ಠರ ಬಳಿಗೆ ಹೋಗಲು, ಪೂಜ್ಯರಾದ ಮುನಿಗಳು ಅವನನ್ನು ತಿರಸ್ಕರಿಸಿದರು. ಆಗ ಜ್ಞಾನಿಯೂ, ಯೋಗ್ಯನೂ ಆದ ಆ ಸತ್ಯವ್ರತನು ತಂದೆಯಿಂದ ತ್ಯಕ್ತನಾಗಿ, ಚಂಡಾಲರು ವಾಸಿಸುವ ಸ್ಥಳಕ್ಕೆ ಹೋಗಿ ಅವರ ಸಂಗಡ ವಾಸಿಸಿದನು. ಅನಂತರ ತಂದೆಯೂ ಸಹ ವನಕ್ಕೆ ಹೋದನು.

೮೫. ಅವನಿರುವ ದೇಶದಲ್ಲಿ ಅಧರ್ಮವು ಅಧಿಕವಾಗಿರುವುದರಿಂದ ಇಂದ್ರನು ಹನ್ನೆರಡು ವರ್ಷಗಳು ಮಳೆಯನ್ನು ಕರೆಸಲಿಲ್ಲ. ಇದರಿಂದ ಆ ದೇಶವು ಅತ್ಯಂತ ಕ್ಷಾಮಪೀಡಿತವಾಗಿತ್ತು.

ದಾರಾಂಸ್ತು ತಸ್ಯ ವಿಷಯೇ ವಿಶ್ವಾಮಿತ್ರೋ ಮಹಾತಪಾಃ ।
ಸಂನ್ಯಸ್ಯ ಸಾಗರಾನೂಪೇ ಚಚಾರ ವಿಪುಲಂ ತಪಃ ॥ ೮೬ ॥

ತಸ್ಯ ಪತ್ನೀ ಗಲೇ ಬದ್ಧ್ವಾ ಮಧ್ಯಮಂ ಪುತ್ರಮೌರಸಂ ।
ಶಿಖಯಾ ಭರಣಾರ್ಥಾಯ ವ್ಯಕ್ರೀಣಾದ್ಗೋಶತೇನ ವೈ ॥ ೮೭ ॥

ತಂ ತು ಬದ್ಧಂ ಗಲೇ ದೃಷ್ಟ್ವಾ ವಿಕ್ರೀತಂ ತಂ ನರೋತ್ತಮಃ ।
ಮಹರ್ಷಿ ಪುತ್ರಂ ಧರ್ಮಾತ್ಮಾ ಮೋಕ್ಷಯಾಮಾಸ ಸುವ್ರತಃ ॥ ೮೮ ॥

ಸತ್ಯವ್ರತೋ ಮಹಾಬುದ್ಧಿರ್ಭರಣಂ ತಸ್ಯ ಚಾಕರೋತ್ ।
ವಿಶ್ವಾಮಿತ್ರಸ್ಯ ತುಷ್ಟ್ಯರ್ಥಂ ಮನುಕಂಪಾರ್ಥಮೇವ ಚ ॥ ೮೯ ॥

---

೮೬. ಮಹಾತಪಸ್ವಿಯಾದ ವಿಶ್ವಾಮಿತ್ರಮುನಿಯು ಆ ದೇಶಗಳಲ್ಲಿಯೇ ಪತ್ನಿಯನ್ನು ಸ್ಥಾಪಿಸಿ ಸಮುದ್ರಗಳೇ ಎಲ್ಲೆಯಾಗಿರುವ ಆ ದೇಶದಲ್ಲಿ ಮಹತ್ತಾದ ತಪಸ್ಸನ್ನು ಮಾಡಿದನು.

೮೭. ಅವನು ತನ್ನ ಪತ್ನಿಯ ಕತ್ತಿಗೆ ಮಧ್ಯಮ ಕುಮಾರನನ್ನು ಬಂಧಿಸಿದನು. ಶಿಖಾಭರಣಕ್ಕಾಗಿ ಅವನನ್ನು ನೂರಾರು ಗೋವುಗಳಿಗೆ ಮಾರಿದನು. ಪತ್ನೀಪುತ್ರರನ್ನು ಕೊಟ್ಟು ನೂರಾರು ಗೋವುಗಳನ್ನು ಕೊಂಡುಕೊಂಡನು.

೮೮. ನರೋತ್ತಮನೂ, ಧರ್ಮಾತ್ಮನೂ ಆದ ಮಹಾರಾಜನು ಇವರಿಬ್ಬರನ್ನೂ ಕ್ರಯಕ್ಕೆ ಕೊಂಡುಕೊಂಡು ಕತ್ತಿಗೆ ಹುರಿಯನ್ನು ಕಟ್ಟಿರುವ ಮುನಿಕುಮಾರನನ್ನು ದಯೆಯಿಂದ ಸ್ವೀಕರಿಸಿದನು. ನಿಯಮವಂತನಾದ ರಾಯನು ಬಂಧನದಿಂದ ಅವನನ್ನು ಬಿಡಿಸಿದನು.

೮೯. ಮಹಾಜ್ಞಾನಿಯಾದ ಸತ್ಯವ್ರತಮಹಾರಾಜನು, ವಿಶ್ವಾಮಿತ್ರಮಹಾಮುನಿಯ ಸಂತೋಷಾರ್ಥವಾಗಿಯೂ, ಅತ್ಯಂತ ದಯಾಪರತೆಯಿಂದಲೂ, ಅವನನ್ನು ರಕ್ಷಿಸಿದನು.

**ಸೋಭವದ್ಗಾಲವೋ ನಾಮ ಗಲೇ ಬದ್ಧೋ ಮಹಾತಪಾಃ ।**
**ಮಹರ್ಷಿಃ ಕಾಶಿಕಸ್ತಾತಸ್ತೇನ ವೀರ್ಯೇಣ ಮೋಕ್ಷಿತಃ ॥ ೯೦ ॥**

**ತಸ್ಯ ವ್ರತೇನ ಭಕ್ತ್ಯಾ ಚ ಕೃಪಯಾ ಚ ಪ್ರತಿಜ್ಞಯಾ ।**
**ವಿಶ್ವಾಮಿತ್ರ ಕಲತ್ರಂ ಚ ಬಭಾರ ವಿನಯೇ ಸ್ಥಿತಃ ॥ ೯೧ ॥**

**ಹತ್ವಾ ಮೃಗಾನ್ ವರಾಹಾಂಶ್ಚ ಮಹಿಷಾಂಶ್ಚ ವನೇಚರಾನ್ ।**
**ವಿಶ್ವಾಮಿತ್ರಾಶ್ರಮಾಭ್ಯಾಸೇ ತನ್ಮಾಂಸಮುಪಚತ್ತತಃ ॥ ೯೨ ॥**

**ಉಪಾಂಶುವ್ರತಮಾಸ್ಥಾಯ ದೀಕ್ಷಾಂ ದ್ವಾದಶವಾರ್ಷಿಕೀಂ ।**
**ಪಿತುರ್ನಿಯೋಗಾದಭಜನ್ನೃಪೇ ತು ವನಮಾಸ್ಥಿತೇ ॥ ೯೩ ॥**

---

೯೦. ತಾಯಿಯು ಕತ್ತಿಗೆ ಕಟ್ಟಲ್ಪಟ್ಟವನೂ, ಮಹಾತಪಸ್ವಿಯೂ ಆದ ಮುನಿ ಕುಮಾರನು ಗಾಲವನೆಂಬ ನಾಮದಿಂದ ಪ್ರಖ್ಯಾತನಾದನು. ಮಹರ್ಷಿಯಾದ ಮುನಿಪುತ್ರನನ್ನು ಸ್ವಶಕ್ತಿಯಿಂದ ರಕ್ಷಿಸಿದನು.

೯೧. ಆ ಮಹಾರಾಜನು ವ್ರತನಿಯಮಗಳು, ಭಕ್ತಿ, ಕೃಪೆ, ಪ್ರತಿಜ್ಞೆ, ಇವುಗಳಿಂದ ನಮ್ರನಾಗಿ, ವಿಶ್ವಾಮಿತ್ರಮುನಿಯ ಪತ್ನಿಯನ್ನೂ ಸಹ ವಿನಯದಿಂದ ರಕ್ಷಿಸಿದನು.

೯೨. ಅನಂತರ ಮಹಾರಾಜನು, ಮೃಗಯಾವಿಹಾರಕ್ಕಾಗಿ ಹೊರಟು ಅರಣ್ಯದಲ್ಲಿ ಜಿಂಕೆ, ವನವರಾಹ, ಕಾಡುಕೋಣ, ವನ್ಯಪಶು, ಇವುಗಳನ್ನು ಸಂಹರಿಸಿ ವಿಶ್ವಾಮಿತ್ರಮುನಿಯ ಆಶ್ರಮದ ಬಳಿಯಲ್ಲಿ ಕೂಡಿಹಾಕಿ. ಆ ಮಾಂಸವನ್ನು ಪಚನಮಾಡಿದನು.

೯೩. ರಾಜನು ವನವನ್ನು ಹೊಂದಲಾಗಿ ಕುಮಾರನು ಪಿತೃವಾಕ್ಯದಂತೆ ಹನ್ನೆರಡು ವರ್ಷಗಳವರೆಗೂ ಮಾಡಬೇಕಾದ ಯಾಗದಲ್ಲಿ ದೀಕ್ಷೆಯನ್ನು ವಹಿಸಿ ಉಪಾಂಶುವ್ರತವನ್ನು ಆರಂಭಮಾಡಿದನು.

ಅಯೋಧ್ಯಾಂಚೈವ ರಾಜ್ಯಂ ಚ ತಥೈವಾಂತಃಪುರಂ ಮುನಿಃ ।
ಯಾಜ್ಯೋಪಾಧ್ಯಾಯಸಂಯೋಗಾದ್ವಸಿಷ್ಠಃ ಪರಿರಕ್ಷಿತಃ ॥ ೯೪ ॥

ಸತ್ಯವ್ರತಸ್ತು ಬಾಲ್ಯಾತ್ತು ಭಾವಿನೋರ್ಥಸ್ಯ ವೈ ಬಲಾತ್ ।
ವಸಿಷ್ಠೇಭ್ಯಧಿಕಂ ಮನ್ಯುಂ ಧಾರಯಾಮಾಸ ಮನ್ಯುನಾ ॥ ೯೫ ॥

ಪಿತ್ರಾ ರುದ್ರುಂಸ್ತದಾ ರಾಷ್ಟ್ರಾತ್ ಪರಿತ್ಯಕ್ತಂ ಸ್ವಮಾತ್ಮಜಂ ।
ನ ವಾರಯಾಮಾಸ ಮುನಿರ್ವಸಿಷ್ಠಃ ಕಾರಣೇನ ವೈ ॥ ೯೬ ॥

ಪಾಣಿಗ್ರಹಣಮಂತ್ರಾಣಾಂ ನಿಷ್ಠಾ ಸ್ಯಾತ್ ಸಪ್ತಮೇ ಪದೇ ।
ಏವಂ ಸತ್ಯವ್ರತಸ್ತಾನ್ ವೈ ಕೃತವಾನ್ ಸಪ್ತಮೇ ಪದೇ ॥ ೯೭ ॥

ಜಾನನ್ ಧರ್ಮಾನ್ ವಸಿಷ್ಠಸ್ತು ನ ಚ ಮಂತ್ರಾನಿಹೇಚ್ಛತಿ ।
ಇತಿ ಸತ್ಯವ್ರತೇ ರೋಷಂ ವಸಿಷ್ಠೋ ಮನಸಾಕರೋತ್ ॥ ೯೮ ॥

---

೮೪. ತರುವಾಯ ವಸಿಷ್ಠಮಹಾಮುನಿಯು ಯಾಗವಮಾಡುವ ಮುನಿಗಳ ಅಪ್ಪಣೆಯಂತೆ ಅಯೋಧ್ಯಾನಗರೀ, ಅಂತಃಪುರ, ರಾಜ್ಯಕೋಶಗಳು ಇವುಗಳನ್ನು ರಕ್ಷಿಸಿದನು.

೯೫. ಆಗ ಸತ್ಯವ್ರತ ರಾಯನು ಬಾಲ್ಯದಿಂದಲೂ ಭಾವಿಯಾದ ಅನರ್ಥದ ಬಲದಿಂದಲೂ, ವಸಿಷ್ಠಮುನಿಯು ರಾಜ್ಯವನ್ನು ಅಪಹರಿಸಿದನೆಂಬ ಕಾರಣದಿಂದಲೂ ಮುನಿಯ ಮೇಲೆ ಬಹಳವಾಗಿ ಕೋಪಮಾಡಿದನು.

೯೬. ವಸಿಷ್ಠಮಹಾಮುನಿಯು ತಂದೆಯಿಂದ ತ್ಯಕ್ತನಾಗಿ ರೋದನೆಮಾಡುವ ರಾಜಕುಮಾರನಾದ ಸತ್ಯವ್ರತನನ್ನು, ಕಾರಣಾಂತರದಿಂದ ತಡೆಯಲಿಲ್ಲ.

೯೭. ಪ್ರಾಣಿಗ್ರಹಣ ಸಪ್ತಪದೀ ಮಾಡುವಾಗ ಹೇಳುವ ಮಂತ್ರವೇ ಮುಖ್ಯವಾಗಿರುವುದು. ಹೀಗೆಂದು ಭಾವಿಸಿ, ಅವನು ಆ ಸಪ್ತಪದೀ ಪ್ರಕರಣದಲ್ಲಿ ಆ ಮಂತ್ರವನ್ನು ವಿಶೇಷವಾಗಿ ಕಲಿಸಿದನು.

೯೮. ವಸಿಷ್ಠಮುನಿಯು ಸಕಲ ಧರ್ಮಗಳನ್ನರಿತವನಾದುದರಿಂದ ಆ ಮಂತ್ರವನ್ನು ಮಾತ್ರವೇ ಗೌರವಿಸಲಿಲ್ಲ. ಸರ್ವಮಂತ್ರಗಳನ್ನು ಗೌರವಿಸಿದ್ದನು. ಆದುದರಿಂದ ವಸಿಷ್ಠಮುನಿಗೆ ಅವನ ಮೇಲೆ ಕೋಪವು ಮನಸ್ಸಿನಲ್ಲೇ ಇತ್ತು.

ಗುರುರ್ಬುದ್ಧ್ಯಾ ತು ಭಗವಾನ್ ವಸಿಷ್ಠಃ ಕೃತವಾಂಸ್ತದಾ ।
ನ ತು ಸತ್ಯವ್ರತೋ ಬುದ್ಧ್ಯಾ ಉಪಾಂಶುವ್ರತಮಸ್ಯ ವೈ ॥ ೯೯ ॥

ತಸ್ಮಿಂಶ್ಚೋಪರತೇ ಯೋ ಯುತ್ಸಿತುರಾಸೀನ್ಮಹಾಮನಾಃ ।
ತೇನ ದ್ವಾದಶವರ್ಷಾಣಿ ನಾವರ್ಷತ್ ಪಾಕಶಾಸನಃ ॥ ೧೦೦ ॥

ತೇನ ತ್ವಿದಾನೀಂ ಬಹುಧಾ ದೀಕ್ಷಾಂ ತಾಂ ದುರ್ಬಲಾಂ ಭುವಿ ।
ಕುಲಸ್ಯ ನಿಷ್ಕೃತಿಃ ಸ್ವಸ್ಯ ಕೃತೇಯಂ ಚ ಭವೇದಿತಿ ॥ ೧೦೧ ॥

ತತೋ ವಸಿಷ್ಠೋ ಭಗವಾನ್ ಪಿತ್ರಾ ತ್ಯಕ್ತಂ ನ್ಯವಾರಯತ್ ।
ಅಭಿಷೇಕ್ಷ್ಯಾಮ್ಯಹಂ ರಾಜ್ಯೇ ಪಶ್ಚಾದೇನಮಿತಿ ಪ್ರಭುಃ ॥ ೧೦೨ ॥

---

೯೯. ಗುರುವೂ, ಪೂಜ್ಯನೂ, ಮಹಾತ್ಮನೂ ಆದ ವಸಿಷ್ಠನು ಯುಕ್ತಿಯಿಂದ ರಾಜ್ಯವನ್ನು ಆಳಿದನು. ಸತ್ಯವ್ರತನಾದರೋ ಅವನ ಉಪಾಂಶುವ್ರತವನ್ನು ವಿವೇಕ ದಿಂದ ಆಚರಿಸಲಿಲ್ಲ.

೧೦೦. ತಂದೆಯಾದ ಮಹಾರಾಜನು ಮೃತನಾದರೂ ವಿಶಾಲಹೃದಯನಾದ ಮಹಾರಾಜನು ತಂದೆಯ ಮತವನ್ನೇ ಅನುಸರಿಸಿದನು. ಇದರಿಂದ ಪಾಕಶಾಸಕ ನಾದ ದೇವೇಂದ್ರನು ಅವನ ದೇಶದಲ್ಲಿ ಹನ್ನೆರಡು ವರ್ಷಗಳು ವೃಷ್ಟಿಯನ್ನು ಸುರಿಸಲಿಲ್ಲ.

೧೦೧. ಆದುದರಿಂದ ಆ ಕಾಲದಲ್ಲಿ ಮಾಡಿದ ಅವನ ದೀಕ್ಷೆಯು ಭೂಮಿಯಲ್ಲಿ ಈಗಲೂ ಸಹ ದುರ್ಬಲವಾಗಿಯೇ ಉಳಿದಿರುವುದು. ಹಿರಿಯರು ಮಾಡಿದ ಅಪಚಾರವು ವಂಶಪರಂಪರೆಯಾಗಿಯೂ ಅನುಸ್ಯೂತವಾಗುವುದು. ಹಿರಿಯರು ಮಾಡಿದ ದುಷ್ಕೃತ್ಯದ ಫಲವನ್ನು ಆ ವಂಶೀಕರು ಅನುಭವಿಸಲೇ ಬೇಕಾಗುವುದು.

೧೦೨. ಅನಂತರ ಪೂಜ್ಯನಾದ ವಸಿಷ್ಠಮುನಿಯು ತಂದೆಯು ಬಿಟ್ಟಿರುವ ರಾಜಕುಮಾರನನ್ನು ತಡೆದು ನಿಲ್ಲಿಸಿದನು. ಇವನಿಗೆ ಉಪದೇಶವನ್ನು ಮಾಡಿ ರಾಜ್ಯದಲ್ಲಿ ಅಭಿಷೇಕಮಾಡುವೆನೆಂದು ಯೋಚಿಸಿದನು.

**ಸ ತು ದ್ವಾದಶವರ್ಷಾಣಿ ದೀಕ್ಷಾಂತಾಮುದ್ವಹನ್ ಬಲೀ ।**
**ಅವಿದ್ಯಮಾನೇ ಮಾಂಸೇ ತು ವಸಿಷ್ಠಸ್ಯ ಮಹಾತ್ಮನಃ ॥ ೧೦೩ ॥**

**ಸರ್ವಕಾಮದುಘಾಂ ಧೇನುಂ ಸಂದದರ್ಶ ನೃಪಾತ್ಮಜಃ ।**
**ತಾಂ ವೈ ಕ್ರೋಧಾಚ್ಚ ಮೋಹಾಚ್ಚ ಶ್ರಮಾಚ್ಚೈವ ಕ್ಷುಧಾನ್ವಿತಃ ॥ ೧೦೪ ॥**

**ದಸ್ಯುಧರ್ಮಂ ಗತೋ ದೃಷ್ಟ್ವಾ ಜಘಾನ ಬಲಿನಾಂ ವರಃ ।**
**ಸ ತು ಮಾಂಸಂ ಸ್ವಯಂ ಚೈವ ವಿಶ್ವಾಮಿತ್ರಸ್ಯ ಚಾತ್ಮಜಾನ್ ॥ ೧೦೫ ॥**

**ಭೋಜಯಾಮಾಸ ತಚ್ಛ್ರುತ್ವಾ ವಸಿಷ್ಠಸ್ತಂ ತದಾತ್ಮಜತ್ ।**
**ಪ್ರೋವಾಚ ಚೈವ ಭಗವಾನ್ ವಸಿಷ್ಠಸ್ತಂ ನೃಪಾತ್ಮಜಂ ॥ ೧೦೬ ॥**

**ಪಾತಯೇ ಕ್ರೂರ ಹೇ ಕ್ರೂರ ತವ ಶಂಕುಮಯೋಮಯಂ ।**
**ಯದಿ ತೇ ತ್ರೀಣಿ ಶಂಕೂನಿ ನ ಸ್ಯುರ್ಹಿ ಪುರುಷಾಧಮ ॥ ೧೦೭ ॥**

---

೧೦೩–೧೦೬. ಆ ನೃಪಕುಮಾರನು ಬಹಳ ಬಲಿಷ್ಠನಾದುದರಿಂದ ಹನ್ನೆರಡು ವರ್ಷಗಳು ದೀಕ್ಷೆಯನ್ನು ವಹಿಸಿದನು. ಅನಂತರ ಎಲ್ಲಿಯೂ ಮಾಂಸವು ಸಿಕ್ಕದಿರಲು ಆ ರಾಜಕುಮಾರನು ಮಹಾತ್ಮರಾದ ವಸಿಷ್ಠಮುನಿಯ ಸಕಲೇಷ್ಟಾರ್ಥದಾಯಕವಾದ ಕಾಮಧೇನುವನ್ನು ನೋಡಿದನು. ಅನಂತರ ಅವನು ಕೋಪ, ಮೋಹ, ಶ್ರಮ, ಕ್ಷುತ್ಪಿಪಾಸೆ ಇವುಗಳಿಂದ ಕೂಡಿ ಚೋರಧರ್ಮವನ್ನು ಆಶ್ರಯಿಸಿ ಅತ್ಯಂತ ಬಲಶಾಲಿಯಾದ ಕಾರಣ ಆ ಧೇನುವನ್ನು ಸಂಹಾರಮಾಡಿದನು. ಅದರ ಮಾಂಸವನ್ನು ತಿಂದಿದ್ದಲ್ಲದೇ ವಿಶ್ವಾಮಿತ್ರನ ಕುಮಾರರಿಗೂ ಕೊಟ್ಟನು. ಇದನ್ನು ತಿಳಿದ ಕೂಡಲೇ ವಸಿಷ್ಠಮುನಿಯು ಕೋಪದಿಂದ ಅವನನ್ನು ತ್ಯಾಗಮಾಡಿದನು. ಪೂಜ್ಯನಾದ ವಸಿಷ್ಠನು ಕೋಪದಿಂದ ರಾಜಕುಮಾರನಿಗೆ ಇಂತೆಂದನು.

೧೦೭. ಎಲೈ ದುಷ್ಟ, ನೀಚ, ಪುರುಷಾಧಮನೂ ಆದ ರಾಜಕುಮಾರನೇ, ಅಯೋಮಯದಂತೆ ಲೋಕಕಂಟಕನಾದ ನಿನ್ನನ್ನು ಕಿತ್ತುಹಾಕುತ್ತೇನೆ. ನಾಶಮಾಡುವೆನು. ನಿನ್ನಲ್ಲಿ ಮೂರು ವಿಧಗಳಾದ ಅಪರಾಧಗಳು ಮಹತ್ತಾಗಿವೆ. ಆ ಮೂರು ಅಪರಾಧಗಳು ನಿಜವಾದರೆ ಕ್ಷಮ್ಯನಾಗುವುದಿಲ್ಲ.

ಪಿತುಶ್ಚಾಪರಿತೋಷೇಣ ಗುರೋರ್ದೋಗ್ಧ್ರಿವಧೇನ ಚ ।
ಅಪ್ರೋಕ್ಷಿತೋಪಯೋಗಾಚ್ಚ ತ್ರಿವಿಧಾಸ್ತೇ ವ್ಯತಿಕ್ರಮಃ ॥ ೧೦೮ ॥

ಏವಂ ಸ ತ್ರೀಣಿ ಶಂಕೂನಿ ದೃಷ್ಟ್ವಾ ತಸ್ಯ ಮಹಾತಪಾಃ ।
ತ್ರಿಶಂಕುರಿತಿ ಹೋವಾಚ ತ್ರಿಶಂಕುಸ್ತೇನ ಸ ಸ್ಮೃತಃ ॥ ೧೦೯ ॥

ವಿಶ್ವಾಮಿತ್ರಸ್ತು ದಾರಾಣಾಮಾಗತೋ ಭರಣೇ ಕೃತೇ ।
ತತಸ್ತಸ್ಮೈ ವರಂ ಪಾದಾತ್ತದಾಪ್ರೀತಸ್ತ್ರಿಶಂಕವೇ ॥ ೧೧೦ ॥

ಛಂದ್ಯಮಾನೋ ವರೇಣಾಥ ಗುರುಂ ವವ್ರೇ ನೃಪಾತ್ಮಜಃ ।
ಅನಾವೃಷ್ಟಿಭಯೇ ತಸ್ಮಿನ್ ಗತೇ ದ್ವಾದಶವಾರ್ಷಿಕೇ ॥ ೧೧೧ ॥

---

೧೦೮. ತಂದೆಯು ಬದುಕಿರುವವರೆಗೂ ಅವನಿಗೆ ಸಂತೋಷವನ್ನು ಮಾಡದ ಮಹಾಪರಾಧವು ಮೊದಲನೆಯದು. ಗುರುಗಳ ಕಾಮಧೇನುವನ್ನು ಅಪಹರಿಸಿದ ಅಪರಾಧವು ಎರಡನೆಯದು. ಪರರ ವಸ್ತುವನ್ನು ಉಪಯೋಗಿಸಿದ ಅಪರಾಧವು ಮೂರನೆಯದು. ಈ ಮೂರು ವಿಧಗಳಾದ ಅಪರಾಧಗಳಿಂದ ನೀನು ವಧ್ಯನಾಗಿರುತ್ತೀಯೆ ಎಂದನು.

೧೦೯. ಮಹಾತಪಸ್ವಿಯಾದ ಆ ವಸಿಷ್ಠಮುನಿಯು ಆ ರಾಜಕುಮಾರನಲ್ಲಿ ಮೂರು ವಿಧವಾದ ಮಹಾಪರಾಧಗಳನ್ನು ಎಣಿಸಿ ತ್ರಿಶಂಕುವೆಂದು ಅವನನ್ನು ಕರೆದನು. ಇವರಿಂದ ಅವನು ಈ ಲೋಕದಲ್ಲಿ ತ್ರಿಶಂಕುವೆಂದು ಪ್ರಖ್ಯಾತನಾದನು.

೧೧೦. ಅನಂತರ ವಿಶ್ವಾಮಿತ್ರಮುನಿಯು ಬಂದು ದಾರಾಪುತ್ರರು ತ್ರಿಶಂಕುವಿನಿಂದ ಬರಗಾಲದಲ್ಲಿ ರಕ್ಷಿಸಲ್ಪಟ್ಟರೆಂದು ತಿಳಿದು ಪ್ರೀತನಾಗಿ ತ್ರಿಶಂಕುರಾಯನಿಗೆ ವರವನ್ನು ಕೊಟ್ಟನು.

೧೧೧. ಹೀಗೆ ವಿಶ್ವಾಮಿತ್ರಮುನಿಯು ಹೇಳಲು ಆ ರಾಜಕುಮಾರನು ಸಂತೋಷಗೊಂಡು ಮುನಿಯನ್ನು ಬೇಡಿದನು. ಸ್ವಾಮಿ, ತಾವು ಪ್ರೀತರಾಗಿದ್ದರೆ ವಸಿಷ್ಠಮುನಿಯಿಂದ ಕಾಪಾಡಬೇಕು. ಮತ್ತು ಹನ್ನೆರಡು ವರ್ಷಗಳ ಕ್ಷಾಮವು ಕಳೆಯಲು ನನ್ನ ಯಾಗವನ್ನು ನೆರವೇರಿಸಿ ಉದ್ಧರಿಸಬೇಕೆಂದು ಬೇಡಿಕೊಂಡನು.

ಅಭಿಷಿಚ್ಯ ರಾಜ್ಯೇ ಪಿತ್ರ್ಯೇ ಯಾಜಯಾಮಾಸ ತಂ ಮುನಿಃ ।
ಮಿಷತಾಂ ದೈವತಾನಾಂ ಚ ವಸಿಷ್ಠಸ್ಯ ಚ ಕೌಶಿಕಃ ।
ಸಶರೀರಂ ತದಾ ತಂ ವೈ ದಿವಮಾರೋಪಯತ್ ಪ್ರಭುಃ ॥ ೧೧೨ ॥

ಮಿಷತಸ್ತು ವಸಿಷ್ಠಸ್ಯ ತದದ್ಭುತಮಿವಾಭವತ್ ।
ಅತ್ರಾಪ್ಯುದಾಹರಂತೀಮೌ ಶ್ಲೋಕೌ ಪೌರಾಣಿಕಾ ಜನಾಃ ॥ ೧೧೩ ॥

ವಿಶ್ವಾಮಿತ್ರಪ್ರಸಾದೇನ ತ್ರಿಶಂಕುರ್ದಿವಿ ರಾಜತೇ ।
ದೇವೈಃ ಸಾರ್ದ್ಧಂ ಮಹಾತೇಜಾನುಗ್ರಹಾತ್ತಸ್ಯ ಧೀಮತಃ ॥ ೧೧೪ ॥

ಶನೈರ್ಯಾತ್ಯಬಲಾ ರಮ್ಯಾ ಹೇಮಂತೇ ಚಂದ್ರಮಂಡಿತಾ ।
ಅಲಂಕೃತಾ ತ್ರಿಭಿರ್ಭಾವೈಸ್ತ್ರಿಶಂಕುಗ್ರಹಭೂಷಿತಾ ॥ ೧೧೫ ॥

---

೧೧೨. ಅನಂತರ ವಿಶ್ವಾಮಿತ್ರಮುನಿಯು, ತ್ರಿಶಂಕುವಿನ ಪ್ರಾರ್ಥನೆಯಂತೆ ತಂದೆಯ ರಾಜ್ಯದಲ್ಲಿ ಅವನನ್ನು ಅಭಿಷೇಕಮಾಡಿದನು. ಅವನಿಂದ ಯಾಗವನ್ನು ನೆರವೇರಿಸಿದನು. ತರುವಾಯ ತ್ರಿಶಂಕುರಾಯನು ಸಶರೀರನಾಗಿ ಸಮಸ್ತ ದೇವತೆಗಳು ನೋಡುತ್ತಿರುವಾಗಲೇ ಸ್ವರ್ಗಕ್ಕೆ ಹೋದನು. ಸಮರ್ಥನಾದ ವಿಶ್ವಾಮಿತ್ರಮುನಿಯು ತ್ರಿಶಂಕುವಿಗೆ ಸ್ವರ್ಗವನ್ನು ಕೊಟ್ಟನು.

೧೧೩. ವಸಿಷ್ಠಮುನಿಯು ನೋಡುತ್ತಿರುವಾಗಲೇ ತ್ರಿಶಂಕವು ಸ್ವರ್ಗಕ್ಕೆ ಹೋಗುವುದು ಅತ್ಯಾಶ್ಚರ್ಯಕರವಾಗಿದ್ದಿತು. ತ್ರಿಶಂಕುವು ಸ್ವರ್ಗಕ್ಕೆ ಹೋದ ವಿಷಯದಲ್ಲಿ ಪೌರಾಣೀಕರು ಈ ಎರಡು ಶ್ಲೋಕಗಳನ್ನೂ ಉದಾಹರಿಸಿರುವರು.

೧೧೪. ಮಹಾಜ್ಞಾನಿಯಾದ ವಿಶ್ವಾಮಿತ್ರಮುನಿಯ ಅನುಗ್ರಹದಿಂದ ಮಹಾ ತೇಜಸ್ವಿಯಾದ ತ್ರಿಶಂಕುಮಹಾರಾಯನು ದೇವತೆಗಳ ಸಂಗಡ ಸ್ವರ್ಗಲೋಕದಲ್ಲಿ ದಿವ್ಯಸೌಖ್ಯವನ್ನು ಹೊಂದಿ ಪ್ರಕಾಶಿಸಿದನು.

೧೧೫. ಹೇಮಂತಸಮಯದಲ್ಲಿ ಚಂದ್ರನಿಂದ ಮಂಡಿತಳೂ, ಅತ್ಯಂತ ಸುಂದರಿಯೂ, ತ್ರಿಶಂಕುವೆಂಬ ಗ್ರಹದಿಂದ ಭೂಷಿತಳೂ ಆದ ನಾರೀಮಣಿಯು ಮೂರು ವಿಧವಾದ ಭಾವದಿಂದಲಂಕೃತಳೂ ಆಗಿದ್ದಳು.

ತಸ್ಯ ಸತ್ಯರತಾನಾಮ ಭಾರ್ಯಾ ಕೇಕಯವಂಶಜಾ ।
ಕುಮಾರಂ ಜನಯಾಮಾಸ ಹರಿಶ್ಚಂದ್ರಮಕಲ್ಮಷಂ ॥ ೧೧೬ ॥

ಸ ತು ರಾಜಾ ಹರಿಶ್ಚಂದ್ರಸ್ತ್ರೈಶಂಕವ ಇತಿ ಶ್ರುತಃ ।
ಆಹರ್ತಾ ರಾಜಸೂಯಸ್ಯ ಸಮ್ರಾಡಿತಿ ಪರಿಶ್ರುತಃ ॥ ೧೧೭ ॥

ಹರಿಶ್ಚಂದ್ರಸ್ಯ ತು ಸುತೋ ರೋಹಿತೋ ನಾಮ ವೀರ್ಯವಾನ್ ।
ಹರಿತೋ ರೋಹಿತಸ್ಯಾಥ ಚಂಚುಹಾರೀತ ಉಚ್ಯತೇ ॥ ೧೧೮ ॥

ವಿಜಯಶ್ಚ ಸುದೇವಶ್ಚ ಚಂಚುಪುತ್ರೌ ಬಭೂವತುಃ ।
ಜೇತಾ ಸರ್ವಸ್ಯ ಕ್ಷತ್ರಸ್ಯ ವಿಜಯಸ್ತೇನ ಸಸ್ಮೃತಃ ॥ ೧೧೯ ॥

---

೧೧೬. ಆ ಮಹಾರಾಯನಿಗೆ ಕೇಕಯವಂಶಸಂಭೂತಳೂ, ಸತ್ಯರತಾನಾಮ ಕಳೂ ಆದ ಪತ್ನಿಯು ಇದ್ದಳು. ಆ ಸಾಧ್ವಿಶಿರೋಮಣಿಯು, ಸತ್ಯಸಂಧನೂ, ಮಹಾತ್ಮನೂ ಆದ ಹರಿಶ್ಚಂದ್ರಮಹಾರಾಜನನ್ನು ಪಡೆದಳು.

೧೧೭. ಆ ಹರಿಶ್ಚಂದ್ರಮಹಾರಾಜನು ತ್ರೈಶಂಕವನೆಂದು ಪ್ರಖ್ಯಾತನಾಗಿದ್ದನು. ಆ ಹರಿಶ್ಚಂದ್ರಮಹಾರಾಜನು ರಾಜಸೂಯಯಾಗವನ್ನು ಮಾಡಿ ಚಕ್ರವರ್ತಿ ಸಾರ್ವಭೌಮನೆಂದು ಖ್ಯಾತಿವಂತನಾದನು.

೧೧೮. ಹರಿಶ್ಚಂದ್ರಮಹಾರಾಜನಿಗೆ ಶೂರನಾದ ರೋಹಿತಾಶ್ವನೆಂಬ ಕುಮಾರನೂ, ಅವನಿಗೆ ಹರಿತನೆಂಬ ಪುತ್ರನೂ, ಆ ಹರಿತನಿಗೆ ಚಂಚುಹಾರೀ ಎಂಬ ಸುತನೂ ಜನಿಸಿದರು.

೧೧೯. ಆ ಚಂಚುಮಹಾರಾಜನಿಗೆ ವಿಜಯ, ಸುದೇವರೆಂಬ ಇಬ್ಬರು ಕುಮಾರರು ಉದ್ಭವಿಸಿದರು. ಅವರಿಬ್ಬರಲ್ಲಿ ವಿಜಯನೆಂಬುವನು ಸಕಲ ಕ್ಷತ್ರಿಯರನ್ನು ಜಯಿಸಿ, ವಿಜಯನೆಂಬ ಅನ್ವರ್ಥಕವಾದ ನಾಮವನ್ನು ಹೊಂದಿದನು.

ರುರುಕಸ್ತನಯಸ್ತತ್ರ ರಾಜಾ ಧರ್ಮಾರ್ಥಕೋವಿದಃ ।
ರುರು ಕಾದ್ಧೃತಕಃ ಪುತ್ರಸ್ತಸ್ಮಾದ್ಬಾಹುಶ್ಚ ಜಜ್ಞಿವಾನ್ ॥ ೧೨೦ ॥

ಹೈಹಯೈಸ್ತಾಲಜಂಘೈಶ್ಚ ನಿರಸ್ತೋ ವ್ಯಸನೀ ನೃಪಃ ।
ಶಕೈರ್ಯವನ ಕಾಂಬೋಜೈಃ ಪಾರದೈಃ ಪಹ್ಲವೈಸ್ತದಾ ॥ ೧೨೧ ॥

ನಾತ್ಯರ್ಥಂ ಧಾರ್ಮಿಕೋಭೂತ್ ಸ ಧರ್ಮೇ ಸತ್ಯಯುಗೇ ತಥಾ ।
ಸಗರಸ್ತು ಸುತೋ ಬಾಹೋರ್ಜಜ್ಞೇ ಸಹ ಗರೇಣ ವೈ ।
ಭೃಗೋರಾಶ್ರಮ ಮಾಸಾದ್ಯ ತುರ್ವೇಣ ಪರಿರಕ್ಷಿತಃ ॥ ೧೨೨ ॥

ಆಗ್ನೇಯಮಸ್ತ್ರಂ ಲಬ್ಧ್ವಾ ತು ಭಾರ್ಗವಾತ್ ಸಗರೋ ನೃಪಃ ।
ಜಘಾನ ಪೃಥಿವೀಂಗತ್ವಾ ತಾಲಜಂಘಾನ್ ಸಹೈಹಯಾನ್ ॥ ೧೨೩ ॥

ಶಕಾನಂ ಪಹ್ಲವಾನಾಂಚ ಧರ್ಮಾನ್ನಿರಸದಚ್ಯುತಃ ।
ಕ್ಷತ್ರಿಯಾಣಾಂ ತಥಾ ತೇಷಾಂ ಪಾರದಾನಾಂಚ ಧರ್ಮವಿತ್ ॥ ೧೨೪ ॥

---

೧೨೦. ಆ ವಿಜಯರಾಜನಿಗೆ ಧರ್ಮಾರ್ಥಕುಶಲನಾದ ರುರುಕನೆಂಬ ಕುಮಾರನೂ, ಅವನಿಗೆ ಹೃತಕನೆಂಬ ಪುತ್ರನೂ, ಅವನಿಗೆ ಬಾಹುಕನೆಂಬ ಸಂತನೂ ಹುಟ್ಟಿದರು.

೧೨೧. ಆ ಬಾಹುಕಮಹಾರಾಜನು ಧಾರ್ಮಿಕನಾಗಿದ್ದರೂ ಹೈಹಯ, ತಾಲಜಂಘ, ಶಕ, ಯವನ, ಕಾಂಬೋಜ, ಪಾರದ ಮತ್ತು ಪಹ್ಲವ ಇವರಿಂದ ಪೀಡಿತನಾಗಿ ದುಃಖಿಯಾಗಿದ್ದನು.

೧೨೨. ಆ ರಾಜನು ಹೈಹಯಾದಿಗಳಿಂದ ಪೀಡಿತನಾಗಿ, ಆ ಸತ್ಯಯುಗದಲ್ಲಿಯೂ ಕೂಡ ಅತ್ಯಂತ ಧಾರ್ಮಿಕನಾಗಿರಲು ಅವಕಾಶವಿಲ್ಲದಯೆ ಹೋಯಿತು. ಅವನಿಗೆ ವಿಷದಿಂದ ಕೂಡಿದ ಸಗರನೆಂಬ ಕುಮಾರನು ಜನಿಸಿದನು. ಅವನು ಭೃಗುಮುನಿಯ ಆಶ್ರಮಕ್ಕೆ ಹೋಗಿ ತುರ್ವನಿಂದ ರಕ್ಷಿತನಾದನು.

೧೨೩–೧೨೪. ಆ ಸಗರಮಹಾರಾಜನು ಪರಶುರಾಮನಿಂದ ಆಗ್ನೇಯಾಸ್ತ್ರವನ್ನು ಹೊಂದಿ ಹಿಂತಿರುಗಿ ಬಂದನು. ತರುವಾಯ ಭೂಮಂಡಲದಲ್ಲಿ ಸಂಚರಿಸಿ ತಾಲಜಂಘ, ಹೈಹಯ, ಶಕ, ಪಹ್ಲವ ಇವರೇ ಮೊದಲಾದ ದುಷ್ಟ ಕ್ಷತ್ರಿಯರನ್ನು ನಾಶಮಾಡಿದನು. ಮತ್ತು ಪಾರದಶೀ ಮೊದಲಾದ ಲೋಕಕಂಟಕರನ್ನು ಜಯಿಸಿ ಧರ್ಮವನ್ನು ಸ್ಥಾಪಿಸಿದನು.

|| ಋಷಯ ಉಚುಃ ||

ಕಥಂ ಸ ಸಾಗರೋ ರಾಜ ಗರೇಣ ಸಹ ಜಜ್ಞಿವಾನ್ ।
ಕಿಮರ್ಥಂಚ ಶಕಾದೀನಾಂ ಕ್ಷತ್ರಿಯಾಣಾಂ ಮಹೌಜಸಾಂ ।
ಧರ್ಮಾನ್ ಕುಲೋಚಿತಾನ್ ಕ್ರುದ್ಧೋ ರಾಜಾ ನಿರಸದಚ್ಯುತಃ || ೧೨೫ ||

|| ಸೂತ ಉವಾಚ ||

ಬಾಹೋರ್ವ್ಯಸನಿನಸ್ತಸ್ಯ ಹೃತಂ ರಾಜ್ಯಂ ಪುರಾ ಕಿಲ ।
ಹೈಯಯೈಸ್ತಾಲಜಂಘೈಶ್ಚ ಶಕೈಃ ಸಾರ್ಧಂ ಸಮಾಗತೈಃ || ೧೨೬ ||

ಯವನಾಃ ಪಾರದಾಶ್ಚೈವ ಕಾಂಬೋಜಾಃ ಪಹ್ಲವಾಸ್ತಥಾ ।
ಹೈಯಯಾರ್ಥಂ ಪರಾಕ್ರಾಂತಾ ಏತೇ ಪಂಚಗಣಾಸ್ತದಾ || ೧೨೭ ||

ಹೃತಂ ರಾಜ್ಯಂ ಬಲಿಯೋಭಿರೇಭಿಃ ಕ್ಷತ್ರಿಯ ಪುಂಗವೈಃ ।
ಹೃತರಾಜ್ಯಸ್ತದಾ ಬಾಹುಃ ಸಂನಸ್ಯ ನು ತದಾ ನೃಪಃ ।
ವನಂ ಪ್ರವಿಶ್ಯ ಧರ್ಮಾತ್ಮಾ ಸಹ ಪತ್ನ್ಯಾ ತಪೋಚರತ್ || ೧೨೮ ||

---

೧೨೫. ಋಷಿಗಳು ಕೇಳಿದರು :—ಎಲೈ ಸೂತಮುನಿಯೇ, ಸಗರರಾಜನು ವಿಷಸಹಿತನಾಗಿ ಹುಟ್ಟಲು ಕಾರಣವೇನು ? ಏತಕ್ಕಾಗಿ ಅತ್ಯಂತ ಶೂರರಾದ ಶಕನೇ ಮೊದಲಾದ ದುಷ್ಟಕ್ಷತ್ರಿಯರನ್ನು ಹೇಗೆ ಸ್ಥಾಪಿಸಿದನು ? ಎಂದರು.

೧೨೬. ಸೂತಮುನಿಯು ಹೇಳಿದನು:—ಪೂರ್ವದಲ್ಲಿ ವ್ಯಸನಿಯಾದ ಬಾಹುರಾಜನ ರಾಜ್ಯವನ್ನು ಹೈಹಯ, ತಾಲಜಂಘ, ಶಕ, ಪಹ್ಲವ ಇವರೇ ಮೊದಲಾದವರು ಏತಕ್ಕಾಗಿ ಅಪಹರಿಸಿದರು. ಎಂಬುದನ್ನು ತಿಳಿಸುವೆನು.

೧೨೭. ಯವನರು, ಪಾರದರು, ಕಾಂಬೋಜರು, ಪಹ್ಲವರು, ಹೈಹಯರು ಈ ಐದು ಪಂಗಡದವರೂ ಲೋಕದಲ್ಲಿ ವಿಖ್ಯಾತರೂ, ಪರಾಕ್ರಮಿಗಳೂ ಆಗಿದ್ದರು.

೧೨೮. ಅತ್ಯಂತ ಶೂರರಾದ ಆ ಕ್ಷತ್ರಿಯ ಪಂಗಡದವರು ಬಾಹುರಾಜನ ರಾಜ್ಯವನ್ನು ಕಳೆದುಕೊಂಡು ಸನ್ಯಾಸವನ್ನು ಹೊಂದಿ ಪತ್ನೀಸಮೇತನಾಗಿ ವನಕ್ಕೆ ಹೋಗಿ ಘೋರವಾದ ತಪಸ್ಸನ್ನು ಮಾಡಿದನು.

ಕಸ್ಯಚಿತ್ತ್ವಥ ಕಾಲಸ್ಯ ತೋಯಾರ್ಥಂ ಪ್ರಸ್ಥಿತೋ ನೃಪಃ ।
ವೃದ್ಧತ್ವಾದ್ದುರ್ಬಲತ್ವಾಚ್ಚ ಅಂತರಾ ಸ ಮಮಾರ ಚ ॥ ೧೨೯ ॥

ಪತ್ನೀ ತು ಯಾದವೀ ತಸ್ಯ ಸಗರ್ಭಾಪೃಷ್ಠತೋ ನ್ವಗಾತ್ ।
ಸಪತ್ನ್ಯಾ ತು ಗರಸ್ತಸ್ಯೈ ದತ್ತೋ ಗರ್ಭಜಿಘಾಂಸಯಾ ॥ ೧೩೦ ॥

ಸಾ ತು ಭರ್ತುಶ್ಚಿತಾಂ ಕೃತ್ವಾ ವಹ್ನೌ ತಂ ಸಮರೋಹಯತ್ ।
ಔರ್ವಸ್ತಾಂ ಭಾರ್ಗವೋ ದೃಷ್ಟ್ವಾ ಕಾರುಣ್ಯಾದ್ವಿ ನ್ಯವರ್ತಯಾತ್ ॥ ೧೩೧ ॥

ತಸ್ಯಾಶ್ರಮೇ ತು ತಂಗರ್ಭಂ ಸಾಗರೇಣ ತದಾ ಸಹ ।
ವ್ಯಜಾಯತ ಮಹಾಬಾಹುಂ ಸಗರಂ ನಾಮ ಧಾರ್ಮಿಕಂ ॥ ೧೩೨ ॥

---

೧೨೯. ಕೆಲವು ಕಾಲದ ಮೇಲೆ ಒಂದಾನೊಂದು ದಿವಸ ಆ ಬಾಹುರಾಜನು ನೀರಿಗೋಸ್ಕರ ಹೊರಟು ಬಹಳ ವಯಸ್ಸಾದುದರಿಂದಲೂ, ದುರ್ಬಲನಾಗಿರುವುದರಿಂದಲೂ ಮಾರ್ಗದಲ್ಲಿಯೇ ಮೃತನಾದನು.

೧೩೦. ಬಾಹುರಾಜನ ಪತ್ನಿಯೂ ಸಹ, ಯಾದವವಂಶೋತ್ಪನ್ನಳಾದ ಕಾರಣ ಗರ್ಭವತಿಯಾಗಿದ್ದರೂ ಸಹ ಗಮನವನ್ನು ಮಾಡಲು ನಿಶ್ಚಯಿಸಿದಳು. ಅವಳ ಸವತಿಯು ಆ ಗರ್ಭವನ್ನು ಸಂಹರಿಸುವುಕ್ಕಾಗಿ ವಿಷವನ್ನು ಕೊಟ್ಟಳು.

೧೩೧. ಆಕೆಯು, ಪತಿಯ ದಹನಕ್ಕಾಗಿ ಚಿತಿಯನ್ನು ಸಿದ್ಧಗೊಳಿಸಿ ಆ ಚಿತಾಗ್ನಿಯಲ್ಲಿ ಪತಿಯ ದೇಹವನ್ನು ಇರಿಸಿ ಸಹಗಮನಕ್ಕಾಗಿ ಉದ್ಯುಕ್ತಳಾದಳು. ಆಗ ಭೃಗುವಂಶೋತ್ಪನ್ನನಾದ ಔರ್ವನು ಅವಳನ್ನು ನೋಡಿ ದಯೆಯಿಂದ ತಪ್ಪಿಸಿದನು.

೧೩೨. ಅನಂತರ ಅವಳು ಆ ಆಶ್ರಮದಲ್ಲಿಯೆ ವಿಷಸಮೇತನಾದ ಕುಮಾರನನ್ನು ಪಡೆದಳು. ಆ ಸುತನು ಕ್ರಮವಾಗಿ ವೃದ್ಧಿಯನ್ನು ಪಡೆದು ಮಹಾಬಾಹುವೂ, ಧಾರ್ಮಿಕನೂ ಆದ ಸಗರನೆಂದು ಪ್ರಸಿದ್ಧನಾದನು.

ಔರ್ವಸ್ತು ಜಾತಕರ್ಮಾದೀನ್ ಕೃತ್ವಾ ತಸ್ಯ ಮಹಾತ್ಮನಃ ।
ಅಧ್ಯಾಪ್ಯ ವೇದಶಾಸ್ತ್ರಾಣಿ ತತೋಽಸ್ತ್ರಂ ಪ್ರತ್ಯಪಾದಯತ್ ॥ ೧೩೩ ॥

ಜಾಮದಗ್ನ್ಯಾತ್ತದಾಗ್ನೇಯಮಸುರೈರಪಿ ದುಃಸಹಂ ।
ಸ ತೇನಾಸ್ತ್ರಬಲೇನೈವ ಬಲೇನ ಚ ಸಮನ್ವಿತಃ ।
ಜಘಾನ ಹೈಹಯಾನ್ ಕ್ರುದ್ಧೋ ರುದ್ರಃ ಪಶುಗಣಾನಿವ ॥ ೧೩೪ ॥

ತತಃ ಶಕಾನ್ ಸಯವನಾನ್ ಕಾಂಭೋಜಾನ್ ಪಾರದಾಂಸ್ತಥಾ ।
ಪಲ್ಹವಾಂಶ್ಚೈವ ನಿಃಶೇಷಾನ್ ಕರ್ತುಂ ವ್ಯವಸಿತೋ ನೃಪಃ ॥ ೧೩೫ ॥

ತೇ ವಧ್ಯಮಾನಾ ವೀರೇಣ ಸಗರೇಣ ಮಹಾತ್ಮನಾ ।
ವಸಿಷ್ಠಂ ಶರಣಂ ಸರ್ವೇ ಪ್ರಪನ್ನಾಃ ಶರಣೈಷಿಣಃ ॥ ೧೩೬ ॥

---

೧೩೩. ತರುವಾಯ ಔರ್ವನು ಆ ಸಗರನಿಗೆ ಜಾತಕರ್ಮವೇ ಮೊದಲಾದ ಸಂಸ್ಕಾರಗಳನ್ನು ಮಾಡಿ, ವೇದಶಾಸ್ತ್ರಗಳನ್ನೂ ಅಸ್ತ್ರವಿದ್ಯೆಯನ್ನೂ ಕಲಿಸಿ ಶೂರನನ್ನಾಗಿ ಮಾಡಿದನು.

೧೩೪. ಅನಂತರ ಸಗರನು ಪರಶುರಾಮನಿಂದ ಅಸುರರಿಂದಲೂ ಸಹಿಸಲಶಕ್ಯವಾದ ಆಗ್ನೇಯಾಸ್ತ್ರವನ್ನು ಪಡೆದು ಆ ವಿದ್ಯೆಯ ಸಾಮರ್ಥ್ಯದಿಂದಲೂ ಸ್ವಭುಜಪರಾಕ್ರಮದಿಂದಲೂ ಕೂಡಿ ಕುಪಿತನಾದ ರುದ್ರದೇವನು ಪಶುಗಳನ್ನು ಸಂಹರಿಸುವಂತೆ ಹೈಹರೇ ಮೊದಲಾದ ದುಷ್ಟ ಕ್ಷತ್ರಿಯರನ್ನು ಕೊಂದನು.

೧೩೫. ಅನಂತರ ಸಗರರಾಜನು ಕ್ರಮವಾಗಿ ಶಕರು, ಯವನರು, ಕಾಂಬೋಜರು, ಪಾರದರು, ಪಹ್ಲವರು ಇವರೇ, ಮೊದಲಾದ ದುಷ್ಟಕ್ಷತ್ರಿಯನ್ನು ನಿಶ್ಶೇಷವಾಗಿ ನಿರ್ಮೂಲಮಾಡಬೇಕೆಂದು ಯೋಚಿಸಿದನು.

೧೩೬. ಆ ರಾಜರು ವೀರನೂ, ಮಹಾತ್ಮನೂ ಆದ ಸಗರ ಚಕ್ರವರ್ತಿಯಿಂದ ಪೀಡಿತರಾಗಿ ಸರ್ವರೂ ಕೂಡಿ ಶರಣಾರ್ಥಿಗಳಾಗಿ ವಸಿಷ್ಠರನ್ನು ಮೊರೆಹೊಕ್ಕರು.

ವಸಿಷ್ಠಸ್ತಾನ್ ತಥೇತ್ಯುಕ್ತ್ವಾ ಸಮಯೇನ ಮಹಾಮುನಿಃ ।
ಸಗರಂ ವಾರಯಾಮಾಸ ತೇಷಾಂದತ್ವಾಽಭಯಂತದಾ ॥ ೧೩೭ ॥

ಸಗರಃಸ್ವಾಂಪ್ರತಿಜ್ಞಾಂಚ ಗುರೋರ್ವಾಕ್ಯಂ ನಿಶಮ್ಯ ಚ ।
ಧರ್ಮಂ ಜಘಾನ ತೇಷಾಂ ವೈ ವೇಷಾನ್ಯತ್ವಂ ಚಕಾರ ಹ ॥ ೧೩೮ ॥

ಅರ್ಧಂ ಶಕಾನಾಂ ಶಿರಸೋ ಮುಂಡಯಿತ್ವಾ ವ್ಯಸರ್ಜಯತ್ ।
ಯವನಾನಾಂ ಶಿರಃ ಸರ್ವಂ ಕಾಂಬೋಜಾನಾಂತಥೈವಚ ॥ ೧೩೯ ॥

ಪಾರದಾ ಮುಕ್ತಕೇಶಾಶ್ಚ ಪಹ್ಲವಾಃ ಶ್ಮಶ್ರುಧಾರಿಣಃ ।
ನಿಃಸ್ವಾಧ್ಯಾಯವಷಂಟ್ಕಾರಾಃ ಕೃತಾಸ್ತೇನ ಮಹಾತ್ಮನಾ ॥ ೧೪೦ ॥

---

೧೩೭. ಆಗ ವಸಿಷ್ಠಮುನಿಯು ಹಾಗೆಯೇ ಆಗಲೆಂದು ಅವರಿಗೆ ಮಾತು ಕೊಟ್ಟು ಅಭಯಪ್ರದಾನಮಾಡಿ ಸಗರರಾಜನನ್ನು ತಡೆದನು.

೧೩೮. ಸಗರ ಮಹಾರಾಜನು ತಮ್ಮ ಗುರುಗಳಾದ ವಸಿಷ್ಠಮುನಿಯ ಪ್ರತಿಜ್ಞೆಯನ್ನು ಕೇಳಿ ಅವರ ಮಾತನ್ನು ನೆರವೇರಿಸುವುದಕ್ಕಾಗಿ ಅವರನ್ನು ಸಂಹರಿಸದೇ ವೇಷಾಂತರವನ್ನು ಮಾಡಿ ಜೀವಚ್ಛವವನ್ನಾಗಿ ಮಾಡಿದನು.

೧೩೯–೧೪೦. ಸಗರರಾಜನು ಯುದ್ಧದಲ್ಲಿ ಶಕರಾಜರ ಅರ್ಧಶಿರಸ್ಸುಗಳನ್ನು ಮುಂಡನಮಾಡಿ ಜೀವಸಹಿತವಾಗಿ ಓಡಿಸಿದನು. ಅನಂತರ ಯವನ, ಕಾಂಬೋಜರ ತಲೆಯನ್ನು ಸಂಪೂರ್ಣ ಮುಂಡನಮಾಡಿ ಪಲಾಯನಮಾಡಿಸಿದನು. ಪಾರದರು ಪಹ್ಲವರೇ ಮೊದಲಾದವರಿಗೆ ಮೀಸೆದಾಡಿಗಳನ್ನು ಬೋಳಿಸಿ, ಕೇಶಸಹಿತರಾಗಿ ಕಳುಹಿಸಿದನು. ಹೀಗೆ ಸಗರರಾಜನಿಂದ ಅವಮಾನಿತರಾದ ರಾಜರೆಲ್ಲರೂ ಪಲಾಯನ ಮಾಡಿದರು. ಅನಂತರ ಮಹಾತ್ಮನಾದ ಸಗರು ಆ ರಾಜರೆಲ್ಲರಿಗೂ ವೇದಾಧ್ಯಯನ ಸ್ವಾಹಾಕಾರ, ಸ್ವಧಾಕಾರಗಳು ಇಲ್ಲದೇ ಹೋಗಲೆಂದು ಶಾಪವನ್ನು ಕೊಟ್ಟನು.

**ಶಕಾ ಯುವನಕಾಂಬೋಜಾಃ ಪಹ್ಲವಾಃ ಪಾರದೈಃ ಸಹ ।**
**ಕೋಲಿಸ್ಸರ್ಪಾ ಮಾಹಿಷಿಕಾ ದಾರ್ವಾಶ್ಚೋಲಾಃ ಖಸಾಸ್ತಥಾ ॥ ೧೪೧ ॥**

**ಸರ್ವೇ ತೇ ಕ್ಷತ್ರಿಯಗಣಾ ಧರ್ಮಸ್ತೇಷಾಂ ನಿರಾಕೃತಃ ।**
**ವಸಿಷ್ಠವಚನಾತ್ಪೂರ್ವಂ ಸಗರೇಣ ಮಹಾತ್ಮನಾ ॥ ೧೪೨ ॥**

**ಸ ಧರ್ಮವಿಜಯೀ ರಾಜಾ ವಿಜಿತ್ಯೇಮಾಂ ವಸುಂಧರಾಂ ।**
**ಅಶ್ವಂ ವಿಚಾರಯಾಮಾಸ ವಾಜಿಮೇಧಾಯ ದೀಕ್ಷಿತಃ ॥ ೧೪೩ ॥**

**ತಸ್ಯ ಚಾರಯತಃ ಸೋಽಶ್ವಃ ಸಮುದ್ರೇ ಪೂರ್ವದಕ್ಷಿಣೇ ।**
**ವೇಲಾ ಸಮೀಪೇಽಪಹೃತೌ ಭೂಮಿಂ ಚೈವ ಪ್ರವೇಶಿತಃ ॥ ೧೪೪ ॥**

**ಸ ತಂ ದೇಶಂ ಸುತೈಃ ಸರ್ವೈಃ ಖನಯಾಮಾಸ ಪಾರ್ಥಿವಃ ।**
**ಆಸೇದುಶ್ಚ ತತಸ್ತಸ್ಮಿಂಸ್ತದಂತಸ್ತೇ ಮಹಾರ್ಣವೇ ॥ ೧೪೫ ॥**

---

೧೪೧–೧೪೨. ಪೂರ್ವದಲ್ಲಿ ಸಗರಮಹಾರಾಜನು ವಸಿಷ್ಠಮಹರ್ಷಿಯ ಮಾತಿನಂತೆ ಶಕರು, ಯವನರು, ಕಾಂಬೋಜರು, ಪಹ್ಲವರು, ಪಾರದರು, ಕೋಲಿಸ್ಸರ್ಪರು, ಮಾಹಿಷರು. ದಾರ್ವರು, ಚೋಲರು, ಖಸರು ಎಂಬ ಸಮಸ್ತರಾದ ದುಷ್ಟಕ್ಷತ್ರಿಯರನ್ನು ನಾಶಮಾಡಿ ಅಧರ್ಮವನ್ನು ನಿರಾಕರಿಸಿ ಧರ್ಮವನ್ನು ಸ್ಥಾಪಿಸಿದನು.

೧೪೩. ಸಗರಚಕ್ರವರ್ತಿಯು ಹೀಗೆ ಧರ್ಮದಿಂದ ಸಮಸ್ತರನ್ನೂ ಜಯಿಸಿ, ಈ ಭೂಮಿಯನ್ನೂ ಜಯಿಸಿ, ಅಶ್ವಮೇಧಯಾಗವನ್ನು ಮಾಡುವುದಕ್ಕಾಗಿ ದೀಕ್ಷೆಯನ್ನು ಹೊಂದಿ, ಕುದುರೆಯನ್ನು ಭೂಮಿಯಲ್ಲಿ ಸಂಚರಿಸಲು ಬಿಟ್ಟನು.

೧೪೪. ಹೀಗೆ ಸಗರನು ಅಶ್ವವನ್ನು ಸಂಚರಿಸಲು ಬಿಡಲಾಗಿ ಪೂರ್ವ ಪಶ್ಚಿಮ ದಡಗಳಲ್ಲಿ ಸಂಚರಿಸಿತು. ಆಗ ದೇವೇಂದ್ರನು ಆ ಅಶ್ವವನ್ನು ಅಪಹರಿಸಿ ಪಾತಾಳ ಲೋಕಕ್ಕೆ ಕರೆದೊಯ್ದನು.

೧೪೫. ಅನಂತರ ಸಗರರಾಜನ ಮಕ್ಕಳು ಆ ಅಶ್ವವನ್ನು ಹುಡಿಕಿ, ಆ ಸಮುದ್ರ ದಡವನ್ನು ಅಗಿದು, ಆಶ್ರಮದಲ್ಲಿ ಮುನಿಯ ಸಮೀಪಗತವಾದ ಅಶ್ವವನ್ನು ನೋಡಿದರು.

**ತಮಾದಿಪುರುಷಂ ದೇವಂ ಹರಿಂ ಕೃಷ್ಣಂ ಪ್ರಜಾಪತಿಂ ।**
**ವಿಷ್ಣುಂ ಕಪಿಲರೂಪೇಣ ಹಂಸಂ ನಾರಾಯಣಂ ಪ್ರಭುಂ ॥ ೧೪೬ ॥**

**ತಸ್ಯ ಚಕ್ಷುಃ ಸಮಾಸಾದ್ಯ ತೇಜಸ್ತತ್ ಪ್ರತಿಪದ್ಯತೇ ।**
**ದಗ್ಧಾಃ ಪುತ್ರಾಸ್ತದಾ ಸರ್ವೇ ಚತ್ವಾರಸ್ತ್ವವಶೇಷಿತಾಃ ॥ ೧೪೭ ॥**

**ಬರ್ಹಿಕೇತುಃ ಸುಕೇತುಶ್ಚ ತಥಾ ಧರ್ಮರತಸ್ತ್ರಯಃ ।**
**ಶೂರಃ ಪಂಚವನಶ್ಚೈವ ತಸ್ಯ ವಂಶಕರಾಃ ಪ್ರಭೋಃ ॥ ೧೪೮ ॥**

**ಪಾದಾಶ್ಚ ತಸ್ಯ ಭಗವಾನ್ ಹರಿರ್ನಾರಾಯಣೋ ವರಾನ್ ।**
**ಅಕ್ಷಯತ್ವಂ ಸ್ವವಂಶಸ್ಯ ವಾಜಿಮೇಧಶತಂ ತಥಾ ॥**
**ವಿಭುಂ ಪುತ್ರಂ ಸಮುದ್ರಂ ಚ ಸ್ವರ್ಗೇ ವಾಸಂ ತಥಾಕ್ಷಯಂ ॥ ೧೪೯ ॥**

---

೧೪೬. ಆ ಸಗರರಾಜರ ಕುಮಾರರು, ಸಮುದ್ರ ದಡದ ಆಶ್ರಮದಲ್ಲಿರುವ ಆದಿಪುರುಷನೂ, ಕೃಷ್ಣರೂಪಿಯೂ, ಪ್ರಜಾಪತಿಯೂ, ಸ್ವಾಮಿಯೂ, ಕಪಿಲ ರೂಪಿಯೂ, ಹಂಸನಾಮಕನೂ ಆದ ಶ್ರೀಮನ್ನಾರಾಯಣನನ್ನು ನೋಡಿ, ಈ ಮುನಿಯೇ ಅಶ್ವಚೋರನೆಂದು ಭಾವಿಸಿದರು.

೧೪೭. ಆಗ ಸಗರಕುಮಾರರು, ಕಪಿಲಮಹರ್ಷಿಯನ್ನು ಅಶ್ವಚೋರನೆಂದು ತಿಳಿದು, ಅಹಂಕಾರದಿಂದ ಕೂಡಿ ಕಶೆಯಿಂದ ಮುನಿಯನ್ನು ಹೊಡೆದರು. ಆ ಮುನಿಯು ನೇತ್ರವನ್ನು ತೆರೆದು ನೋಡಲಾಗಿ, ನೇತ್ರಾಗ್ನಿ ಜ್ವಾಲೆಯಿಂದ ನಾಲ್ವರು ವಿನಾ ಉಳಿದವರೆಲ್ಲರೂ ಸುಟ್ಟು ಬೂದಿಯಾದರು.

೧೪೮. ಆಗ ಸಗರನ ಕುಮಾರರಲ್ಲಿ ಬರ್ಹಿಕೇತು, ಸುಕೇತು, ಧರ್ಮರತ ಮತ್ತು ಶೂರನಾದ ಪಂಚವನರೆಂಬ ನಾಲ್ವರು ಮಾತ್ರ ಉಳಿದರು. ಇವರೇ ರಾಜನ ವಂಶವರ್ಧಕರಾಗಿರುವರು. ಮಿಕ್ಕವರು ಮೃತರಾದರು.

೧೪೯. ಆಗ ಶ್ರೀಭಗವಂತನಾದ ಶ್ರೀಮನ್ನಾರಾಯಣನು ಸಗರನಿಗೆ, ನಿನ್ನ ವಂಶವು ಅಕ್ಷಯವಾಗಲಿ. ನೂರಾರು ಅಶ್ವಮೇಧಯಾಗವನ್ನು ಮಾಡುವನಾಗು. ಸಮುದ್ರದವರೆಗೂ ಇರುವ ಭೂಮಂಡಲಕ್ಕೆ ಚಕ್ರವರ್ತಿಯಾಗು. ಲೋಕದಲ್ಲಿ ಕೀರ್ತಿ ವಂತನಾಗಿ ಅಕ್ಷಯವಾದ ಸ್ವರ್ಗಸುಖವನ್ನು ಪಡೆಯೆಂಬ ವರಗಳನ್ನು ಕೊಟ್ಟನು.

**ಸ ಸಮುದ್ರೋಽಶ್ವಮಾದಾಯ ವವಂದೇ ಸರಿತಾಂ ಪತಿಃ।**
**ಸಾಗರತ್ವಂ ಚ ಲೇಭೇ ಸ ಕರ್ಮಣಾ ತೇನ ತಸ್ಯ ವೈ ॥ ೧೫೦ ॥**

**ತಂ ಚಾಶ್ವಮೇಧಿಕಂ ಸೋಽಶ್ವಂ ಸಮುದ್ರಾತ್ ಪ್ರಾಪ್ಯ ಪಾರ್ಥಿವಃ।**
**ಆಜಹಾರಾಶ್ವಮೇಧಾನಾಂ ಶತಂ ಚೈವ ಪುನಃ ಪುನಃ ॥ ೧೫೧ ॥**

**ಷಷ್ಟಿಪುತ್ರಸಹಸ್ರಾಣಿ ದಗ್ಧಾನ್ಯಶ್ವಾನುಸಾರಿಣಾಂ।**
**ತೇಷಾಂ ನಾರಾಯಣಂ ತೇಜಃ ಪ್ರವಿಷ್ಟಾನಾಂ ಮಹಾತ್ಮನಾಂ ॥**
**ಪುತ್ರಾಣಾಂ ತು ಸಹಸ್ರಾಣಿ ಷಷ್ಟಿಸ್ತು ಇತಿ ನ ಶ್ರುತಂ ॥ ೧೫೨ ॥**

**॥ ಋಷಯ ಊಚುಃ ॥**

**ಸಗರಸ್ಯಾತ್ಮಜಾ ರಾಜ್ಞಃ ಕಥಂ ಜಾತಾ ಮಹಾಬಲಾಃ।**
**ವಿಕ್ರಾಂತಾಃ ಷಷ್ಟಿಸಾಹಸ್ರಾ ವಿಧಿನಾ ಕೇನ ವಾ ವದ ॥ ೧೫೩ ॥**

---

೧೫೦. ನದೀಪತಿಯಾದ ಸಮುದ್ರರಾಜನು, ಆ ಅಶ್ವವನ್ನು ತಂದುಕೊಟ್ಟಿದ್ದರಿಂದ ಸಾಗರವೆಂಬ ನಾಮವನ್ನು ಪಡೆದನು. ಸಮುದ್ರನು ಸಗರನ ಯಾಗಕ್ಕೆ ಅಶ್ವವನ್ನು ತಂದುಕೊಟ್ಟುದರಿಂದ ಸಾಗರವೆಂಬ ನಾಮವು ಅವನಿಗೆ ಸಂಭವಿಸಿತು.

೧೫೧. ಆ ಸಗರಚಕ್ರವರ್ತಿಯು ಅಶ್ವಮೇಧಯಾಗದ ಅಶ್ವವನ್ನು ಸಮುದ್ರದಡದಿಂದ ತಂದು, ಯಾಗವನ್ನು ಪೂರೈಸಿದನು. ಇದರಂತೆಯೇ ವೈಭವದಿಂದ ನೂರಾರು ಅಶ್ವಮೇಧಯಾಗವನ್ನು ಮಾಡಿದನು.

೧೫೨. ಮಹಾತ್ಮರೂ, ಅರವತ್ತು ಸಹಸ್ರಸಂಖ್ಯಾಕರೂ, ಅಶ್ವಾನುಯಾಯಿಗಳೂ ಆದ ಸಗರರಾಜಕುಮಾರರು ಶ್ರೀಮನ್ನಾರಾಯಣನ ದಿವ್ಯತೇಜಸ್ಸಿಗೆ ವಿಷಯರಾಗಿ ದಗ್ಧರಾದರು. ಅವರು ಅರವತ್ತು ಸಾವಿರ ಜನರೆಂದು ನಮಗೆ ಶ್ರುತವಾಗಿದೆಯೆಂಂದನು.

೧೫೩. ಋಷಿಗಳು ಹೇಳಿದರು:—ಎಲೈ ಸೂತಮುನಿಯೇ, ಸಗರ ಮಹಾರಾಜನಿಗೆ ಶೂರರಾದ ಅರವತ್ತು ಸಾವಿರ ಮಕ್ಕಳು ಜನಿಸಲು ಕಾರಣವೇನು? ಇದಕ್ಕೆ ಕಾರಣವನ್ನು ತಿಳಿಸಬೇಕೆಂದು ಕೇಳಿದರು.

॥ ಸೂತ ಉವಾಚ ॥

ದ್ವೌ ಪತ್ನ್ಯೌ ಸಗರಸ್ಯಾಸ್ತಾಂ ತಪಸಾ ದಗ್ಧಕಿಲ್ಬಿಷೇ ।
ಜ್ಯೇಷ್ಠಾ ವಿದರ್ಭದುಹಿತಾ ಕೇಶಿನೀ ನಾಮ ನಾಮತಃ । ॥ ೧೫೪ ॥

ಕನೀಯಸೀ ತು ಯಾ ತಸ್ಯ ಪತ್ನೀ ಪರಮಧರ್ಮಿಣೀ ।
ಅರಿಷ್ಟನೇಮಿದುಹಿತಾ ರೂಪೇಣಾಪ್ರತಿಮಾ ಭುವಿ ॥ ೧೫೫ ॥

ಔರ್ವಸ್ತಾಭ್ಯಾ ವರಂ ಪ್ರಾದಾತ್ ತಪಸಾರಾಧಿತಃ ಪ್ರಭುಃ ।
ಏಕ ಜನಿಷ್ಯೇತೇ ಪುತ್ರಂ ವಂಶಕರ್ತಾರಮೀಪ್ಸಿತಂ ॥
ಷಷ್ಟಿಂ ಪುತ್ರಸಹಸ್ರಾಣಿ ದ್ವಿತೀಯಾ ಜನಯಿಷ್ಯತಿ ॥ ೧೫೬ ॥

ಮುನೇಸ್ತು ವಚನಂ ಶ್ರುತ್ವಾ ಕೇಶಿನೀ ಪುತ್ರಮೇಕಕಂ ।
ವಂಶಸ್ಯ ಕಾರಣಂ ಶ್ರೇಷ್ಠಾ ಜಗ್ರಾಹ ನೃಪಸಂಸದಿ ॥ ೧೫೭ ॥

---

೧೫೪. ಸೂತಮುನಿಯು ಹೇಳಿದನು :—ಎಲೈ ಮುನಿಗಳಿರಾ, ಸಗರರಾಜನಿಗೆ ತಪಸ್ಸಿನಿಂದ ಪಾಪರಹಿತರಾದ ಇಬ್ಬರು ನಾರೀಮಣಿಗಳು ಪತ್ನಿಯರಾಗಿದ್ದರು. ಅವರಲ್ಲಿ ಹಿರಿಯವಳು ವಿದರ್ಭರಾಜಕುಮಾರಿಯೂ ಕೇಶಿನೀನಾಮಕಳೂ ಆಗಿದ್ದಳು.

೧೫೫. ಸಗರರಾಜನ ಎರಡನೆಯ (ಕಿರಿಯ) ಹೆಂಡತಿಯು ಪರಮಧಾರ್ಮಿಕಳೂ ರೂಪದಲ್ಲಿ ಅಸದೃಶಳೂ, ಅರಿಷ್ಟನೇಮಿ ಮಹಾರಾಯನ ಕುಮಾರಿಯೂ, ಅತಿ ಸುಂದರಿಯೂ, ಆಗಿದ್ದಳು.

೧೫೬. ಅವರಿಬ್ಬರೂ ತಪಸ್ಸಿನಿಂದ ಔರ್ವಮುನಿಯನ್ನು ತೃಪ್ತಿಪಡಿಸಿದರು. ಅದರಿಂದ ಪ್ರೀತರಾದ ಮುನಿಯು ಅವರಿಬ್ಬರಿಗೂ ವರವನ್ನು ಕೊಟ್ಟನು. ಅವರಲ್ಲಿ ಹಿರಿಯವಳಾದ ಕೇಶಿನಿಯು ವಂಶವಿಸ್ತಾರಕನೂ, ಸಮ್ಮತನೂ, ಆದ ಒಬ್ಬ ಕುಮಾರನನ್ನು ಪಡೆಯುವಳು. ಎರಡನೆಯವಳು ಅರವತ್ತು ಸಹಸ್ರ ಮಕ್ಕಳನ್ನು ಪಡೆಯುವಳು. ಎಂಬ ವರವನ್ನು ಕೊಟ್ಟನು.

೧೫೭. ಆಗ ಅವರಲ್ಲಿ ಹಿರಿಯವಳು ಮುನಿಯ ಆಜ್ಞೆಯಂತೆ ವಂಶಕರನಾದ ಒಬ್ಬ ಕುಮಾರನನ್ನೇ ರಾಜನ ಸಭೆಯಲ್ಲಿ ಬೇಡಿದಳು.

ಷಷ್ಟಿಂ ಪುತ್ರಸಹಸ್ರಾಣಿ ಸುಪರ್ಣಭಗಿನೀ ತಥಾ ।
ಮಹಾತ್ಮನಸ್ತು ಜಗ್ರಾಹ ಸುಮತಿಃ ಸ್ವಮತಿರ್ಯಥಾ ॥ ೧೫೮ ॥

ಅಥ ಕಾಲೇ ಗತೇ ಜ್ಯೇಷ್ಠಾ ಜ್ಯೇಷ್ಠಂ ಪುತ್ರಂ ವ್ಯಜಾಯತ ॥
ಅಸಮಂಜ ಇತಿ ಖ್ಯಾತಂ ಕಾಕುಸ್ಥಂ ಸಗರಾತ್ಮಜಂ ॥ ೧೫೯ ॥

ಸುಮತಿಸ್ತ್ವಪಿ ಜಜ್ಞೇ ವೈ ಗರ್ಭಂ ತುಂಬಂ ಯಶಸ್ವಿನೀ ।
ಷಷ್ಠಿಪುತ್ರಸಹಸ್ರಾಣಿ ತುಂಬುಮಧ್ಯಾದ್ವಿನಿಃಸೃತಾಃ ॥ ೧೬೦ ॥

ಘೃತಪೂರ್ಣೇಷು ಕುಂಭೇಷು ತಾನ್ ಗರ್ಭಾನ್ ನ್ಯದಧತ್ತತಃ ।
ಧಾತ್ರೀಶ್ಚೈಕೈಕಶಃ ಪ್ರಾದಾತ್ ತಾವತೀಃ ಪೋಷಣೇ ನೃಪಃ ॥ ೧೬೧ ॥

ತತೋ ನವಸು ಮಾಸೇಷು ಸಮುತ್ತಸ್ಥುರ್ಯಥಾಸುಖಂ ।
ಕುಮಾರಾಸ್ತೇ ಮಹಾಭಾಗಾಃ ಸಗರಪ್ರೀತಿವರ್ಧನಾಃ ॥ ೧೬೨ ॥

---

೧೫೮. ಗರುಡದೇವನ ಭಗಿನಿಯೂ, ಸುಮತಿ ನಾಮಕಳೂ, ಆದ ಕಿರಿಯವಳು ಅರವತ್ತು ಸಹಸ್ರ ಪುತ್ರರನ್ನು ಪಡೆಯುವ ವರಗಳನ್ನು ಬೇಡಿಕೊಂಡಳು.

೧೫೯. ಹೀಗೆ ಕೆಲವು ಕಾಲವು ಕಳೆಯಲು ಹಿರಿಯವಳಾದ ಕೇಶಿನಿಯು ವಂಶ ವಿಸ್ತಾರಕನಾದ ಹಿರಿಯ ಕುಮಾರನನ್ನು ಪಡೆದಳು. ಆ ಕುಮಾರನು ಅಸಮಂಜಸ ನಾಮಕನೂ, ಕಕುಸ್ಥವಂಶವರ್ಧಕನೂ, ಸಗರರಾಜಸುತನೂ, ಆಗಿದ್ದನು.

೧೬೦. ಕೀರ್ತಿವಂತಳಾದ ಸುಮತಿಯು ಸಕಾಲದಲ್ಲಿ ಸೋರೇಬುರುಡೆಯನ್ನು ಹೆತ್ತಳು. ತರುವಾಯ ಅದರಿಂದ ಅರವತ್ತು ಸಾವಿರ ಮಕ್ಕಳು ಉದ್ಭವಿಸಿದರು.

೧೬೧. ಅನಂತರ ಸಗರಮಹಾರಾಜನು ಘೃತಪೂರ್ಣವಾದ ಕುಂಭಗಳಲ್ಲಿ ಆ ಗರ್ಭಗಳನ್ನು ಇಟ್ಟು ಅವುಗಳನ್ನು ರಕ್ಷಿಸುವುದಕ್ಕಾಗಿ ಅರವತ್ತು ಸಾವಿರ ದಾದಿಯರನ್ನು ಏರ್ಪಡಿಸಿದನು.

೧೬೨. ಹೀಗೆ ನವಮಾಸಗಳು ಕ್ರಮವಾಗಿ ಪೂರ್ಣವಾಗಲು ಮಹಾನುಭಾವರೂ, ಸಗರರಾಜನಿಗೆ ಪ್ರೀತಿವರ್ಧಕರೂ ಆದ ಅರವತ್ತು ಸಾವಿರ ಕುಮಾರರು ಜನಿಸಿ, ಸುಖವಾಗಿ ವೃದ್ಧಿಯನ್ನು ಹೊಂದಿದರು.

**ಕಾಲೇನ ಮಹತಾ ಚೈವ ಯೌವನಂ ಪ್ರತಿಪೇದಿರೇ ।**
**ಷಷ್ಟಿಪುತ್ರಸಹಸ್ರಾಣಿ ತೇಷಾಮಶ್ವಾನುಸಾರಿಣಾಂ || ೧೬೩ ||**

**ಸ ತು ಜ್ಯೇಷ್ಠೋ ನರವ್ಯಾಘ್ರಃ ಸಗರಸ್ಯಾತ್ಮಸಂಭವಃ ।**
**ಅಸಮಂಜ ಇತಿ ಖ್ಯಾತೋ ಬರ್ಹಿಕೇತುರ್ಮಹಾಬಲಃ || ೧೬೪ ||**

**ಪೌರಾಣಾಮಹಿತೇ ಯುಕ್ತಃ ಪಿತ್ರಾ ನಿರ್ವಾಸಿತಃ ಪುರಾ ।**
**ತಸ್ಯ ಪುತ್ರೋಂಽಶುಮಾನ್ನಾಮ ಅಸಮಂಜಸ್ಯ ವೀರ್ಯವಾನ್ || ೧೬೫ ||**

**ತಸ್ಯ ಪುತ್ರಸ್ತು ಧರ್ಮಾತ್ಮಾ ದಿಲೀಪ ಇತಿ ವಿಶ್ರುತಃ ।**
**ದಿಲೀಪಾತ್ತು ಮಹಾತೇಜಾ ವೀರೋ ಜಾತೋ ಭಗೀರಥಃ || ೧೬೬ ||**

---

೧೬೩. ಆ ಸಗರಚಕ್ರವರ್ತಿಯ ಅರವತ್ತುಸಾವಿರ ಕುಮಾರರರೂ ಕ್ರಮವಾಗಿ ಬೆಳೆದು ಯೌವನವಂತರಾದರು. ತರುವಾಯ ರಾಯನ ಅಶ್ವಮೇಧಾಶ್ವವನ್ನು ರಕ್ಷಿಸುವುದಕ್ಕಾಗಿ ಆ ಅಶ್ವವನ್ನನುಸರಿಸಿ ಹೊರಟರು.

೧೬೪. ಸಗರರಾಯನ ಕುಮಾರರಲ್ಲಿ ಜ್ಯೇಷ್ಠನೂ, ಪುರುಷಶ್ರೇಷ್ಠನೂ, ಆದ ಅಸಮಂಜಸನೆಂಬ ಪುತ್ರನು ಮಯೂರಧ್ವಜನೆಂದೂ, ಮಹಾಶೂರನೆಂದೂ, ಪ್ರಖ್ಯಾತನಾದನು.

೧೬೫. ಹಿರಿಯಮಗನಾದ ಅಸಮಂಜಸನೆಂಬುವನು ಪ್ರಜಾಕಂಟಕನೂ, ಪ್ರಜಾವಿರೋಧಿಯೂ, ಆಗಿರುವುದರಿಂದ ತಂದೆಯು ಆ ಕುಮಾರನನ್ನು ಪೂರ್ವದಲ್ಲಿ ತ್ಯಾಗಮಾಡಿದನು. ಆ ಅಸಮಂಜಸನಿಗೆ ಅತ್ಯಂತ ಪರಾಕ್ರಮಿಯೂ, ವಿಖ್ಯಾತನೂ, ಆದ ಅಂಶುಮಂತನೆಂಬ ಕುಮಾರನು ಜನಿಸಿದನು.

೧೬೬. ಆ ಅಂಶುಮಂತನಿಗೆ ಧರ್ಮಾತ್ಮನೂ, ಪ್ರಜಾರಂಜಕನೂ, ಆದ ದಿಲೀಪನೆಂಬ ಮಹಾರಾಜನೂ, ಆ ದಿಲೀಪ ಮಹಾರಾಜನಿಗೆ ಮಹಾನುಭಾವನೂ, ಶೂರನೂ, ಆದ ಭಗೀರಥನೆಂಬ ಮಹಾರಾಜನೂ, ಉದ್ಭವಿಸಿದರು.

**ಯೇನ ಗಂಗಾ ಸರಿಚ್ಛ್ರೇಷ್ಠಾ ವಿಮಾನೈರುಪಶೋಭಿತಾ ।**
**ಈಜಾನೇನ ಸಮುದ್ರಾದ್ವೈ ದುಹಿತೃತ್ವೇನ ಕಲ್ಪಿತಾ ॥**
**ಅತ್ರಾಪ್ಯುದಾಹರಂತೀಮಂ ಶ್ಲೋಕಂ ಪೌರಾಣಿಕಾ ಜನಾಃ** ॥ ೧೬೭ ॥

**ಭಗೀರಥಸ್ತು ತಾಂ ಗಂಗಾಮಾನಯಾಮಾಸ ಕರ್ಮಭಿಃ ।**
**ತಸ್ಮಾದ್ಭಾಗೀರಥೀ ಗಂಗಾ ಕಥ್ಯತೇ ವಂಶವಿತ್ತಮೈಃ** ॥ ೧೬೮ ॥

**ಭಗೀರಥಸುತಶ್ಚಾಪಿ ಶ್ರುತೋ ನಾಮ ಬಭೂವ ಹ ।**
**ನಾಭಾಗಸ್ತಸ್ಯ ದಾಯಾದೋ ನಿತ್ಯಂ ಧರ್ಮಪರಾಯಣಃ** ॥ ೧೬೯ ॥

**ಅಂಬರೀಷಃ ಸುತಸ್ತಸ್ಯ ಸಿಂಧುದ್ವೀಪಸ್ತತೋಽಭವತ್ ।**
**ಏವಂ ವಂಶಪುರಾಣಜ್ಞಾ ಗಾಯಂತೀತಿ ಪರಿಶ್ರುತಂ** ॥ ೧೭೦ ॥

---

೧೬೭. ಯಾವ ಭಗೀರಥಮಹಾರಾಜನಿಗೆ ವಿಮಾನಗಳಿಂದ ರಂಜಿತಳೂ, ಅತ್ಯಂತ ಪೂಜ್ಯಳೂ, ಆದ ದೇವಗಂಗೆಯು ಕುಮಾರಿಯೆಂದು (ಭಾಗೀರಥಿಯೆಂದು) ಪ್ರಖ್ಯಾತಳಾಗಿದ್ದಳೋ, ಅಂತಹ ಭಗೀರಥಮಹಾರಾಜನು ಆಕಾಶಗಂಗೆಯನ್ನು ಭೂಮಿಗೆ ತಂದು ಪಿತೃಗಳನ್ನುದ್ಧರಿಸಿದನು. ಈ ಭಗೀರಥರಾಜನ ವಿಷಯದಲ್ಲಿ ಪೌರಾಣಿಕರು ಈ ಶ್ಲೋಕವನ್ನು ಹೇಳುವರು.

೧೬೮. ಭಗೀರಥಮಹಾರಾಜನು ತಮ್ಮ ಪಿತೃಗಳನ್ನುದ್ಧರಿಸುವುದಕ್ಕಾಗಿ ದೇವಗಂಗೆಯನ್ನು ಕುರಿತು ತಪಸ್ಸನ್ನು ಮಾಡಿ, ಪ್ರೀತಳಾದ ಆ ಆಕಾಶಗಂಗೆಯನ್ನು ಭೂಮಿಗೆ ತಂದು ಪಿತೃಗಳನ್ನುದ್ಧರಿಸಿದನು. ಎಂಬುದಾಗಿ ವಂಶಜ್ಞರಾದ ಮಹಾತ್ಮರು ಹೇಳುವರು.

೧೬೯. ಆ ಭಗೀರಥಮಹಾರಾಯನಿಗೆ ಶ್ರುತನೆಂಬ ಕುಮಾರನು ಜನಿಸಿದನು. ಆ ಶ್ರುತನಿಗೆ ಅತ್ಯಂತ ಧರ್ಮಪರಾಯಣನೂ, ಸುಪ್ರಸಿದ್ಧನೂ, ಆದ ನಾಭಾಗನೆಂಬ ಪುತ್ರನು ಉದ್ಭವಿಸಿದನು.

೧೭೦. ಆ ನಾಭಾಗಮಹಾರಾಯನಿಗೆ ಅಂಬರೀಷ ಮಹಾರಾಜನೂ ಅವನಿಗೆ ಸಿಂಧುದ್ವೀಪನೆಂಬ ಕುಮಾರನೂ ಉದ್ಭವಿಸಿದರು. ಹೀಗೆ ಮಹಾನುಭಾವರೂ, ಧಾರ್ಮಿಕರೂ, ಸುಪ್ರಸಿದ್ಧರೂ, ಆದ ಕುಮಾರರು ಆ ವಂಶದಲ್ಲಿ ಜನಿಸಿದ್ದರಿಂದ ಮಹಾತ್ಮರು ಈ ವಂಶವನ್ನು ಬಹಳವಾಗಿ ಪ್ರಶಂಸಿಸುವರು.

ನಾಭಾಗೇರಂಬರೀಷಸ್ಯ ಭುಜಾಭ್ಯಾಂ ಪರಿಪಾಲಿತಾ ।
ಬಭೂವ ವಸುಧಾತ್ಯರ್ಥಂ ತಾಪತ್ರಯವಿವರ್ಜಿತಾ ॥ ೧೭೧ ॥

ಅಯುತಾಯುಃ ಸುತಸ್ತಸ್ಯ ಸಿಂಧುದ್ವೀಪಸ್ಯ ವೀರ್ಯವಾನ್ ।
ಅಯುತಾಯೋಸ್ತು ದಾಯಾದ ಋತುಪರ್ಣೋ ಮಹಾಯಶಾಃ ॥ ೧೭೨ ॥

ದಿವ್ಯಾಕ್ಷಹೃದಯಜ್ಞೋಽಸೌ ರಾಜಾ ನಲಸಖೋ ಬಲೀ ।
ನಲೌ ದ್ವಾವಿತಿ ವಿಖ್ಯಾತೌ ಪುರಾಣೇಷು ಧೃಡವ್ರತೌ ॥ ೧೭೩ ॥

ವೀರಸೇನಾತ್ಮಜಶ್ಚೈವ ಯಶ್ಚೇಕ್ಷ್ವಾಕುಕುಲೋದ್ವಹಃ ।
ಋತುಪರ್ಣಸ್ಯ ಪುತ್ರೋಽಭೂತ್ ಸರ್ವಕಾಮೋ ಜನೇಶ್ವರಃ ॥ ೧೭೪ ॥

---

೧೭೧ ನಾಭಾಗರಾಜನ ಕುಮಾರನೂ, ಧರ್ಮಾತ್ಮನೂ, ಆದ ಅಂಬರೀಷ ಮಹಾರಾಜನ ಭುಜಪರಾಕ್ರಮದಿಂದ ಪಾಲಿತವಾದ ಈ ಭೂಮಂಡಲವು ತಾಪತ್ರಯ ರಹಿತವಾಗಿಯೂ, ಅತ್ಯಂತ ಸುಭಿಕ್ಷವಾಗಿಯೂ, ಧರ್ಮಪೂರ್ಣವಾಗಿಯೂ ಇತ್ತು.

೧೭೨. ಅಂಬರೀಷನ ಕುಮಾರನಾದ ಸಿಂಧುದ್ವೀಪನಿಗೆ ಶೂರನಾದ ಅಯುತಾಯುವೆಂಬ ಸುತನೂ, ಅವನಿಗೆ ಮಹಾಕೀರ್ತಿವಂತನಾದ ಋತುಪರ್ಣನೆಂಬ ಮಹಾರಾಜನೂ, ಉತ್ಪನ್ನರಾದರು.

೧೭೩. ಭೂಪತಿಯೂ, ಅತಿ ಬಲಶಾಲಿಯೂ, ಆದ ಋತುಪರ್ಣ ಮಹಾರಾಯನು ದಿವ್ಯವಾದ ಅಕ್ಷಹೃದಯವನ್ನು ತಿಳಿದವನೂ, ನಲಮಹಾರಾಜನಿಗೆ ಅತ್ಯಂತ ಪ್ರಿಯಮಿತ್ರನೂ, ಆಗಿದ್ದನು. ಆ ಕಾಲದಲ್ಲಿ ಋತುಪರ್ಣರಾಯನೂ, ನಲಮಹಾರಾಯನೂ, ಏಕಮನಸ್ಕರೂ, ದೃಢಚಿತ್ತರೂ, ಆಗಿರುವುದರಿಂದ ಇಬ್ಬರು ನಲರಾಯರಿರುವರೆಂದು ಪುರಾಣಗಳಲ್ಲಿ ಪ್ರಸಿದ್ಧವಾಗಿದೆ.

೧೭೪. ಆ ಋತುಪರ್ಣರಾಯನಿಗೆ ಇಕ್ಷ್ವಾಕುವಂಶವರ್ಧಕನಾದ ವೀರಸೇನನೆಂಬ ಕುಮಾರನು ಉದ್ಭವಿಸಿದನು. ಆ ಪ್ರಭುವು ಪ್ರಜೆಗಳಿಗೆ ಸಕಲೇಷ್ಟಾರ್ಥಪ್ರದನೂ ಮಹಾನುಭಾವನೂ ಆಗಿದ್ದನು.

**ಸುದಾಸಸ್ತಸ್ಯ ತನಯೋ ರಾಜಾ ಹಂಸಮುಖೋಭವತ್ ।**
**ಸುದಾಸಸ್ಯ ಸುತಃ ಪ್ರೋಕ್ತಃ ಸೌದಾಸೋ ನಾಮ ಪಾರ್ಥಿವಃ ॥ ೧೭೫ ॥**

**ಖ್ಯಾತಃ ಕಲ್ಮಾಷಪಾದೋ ವೈ ನಾಮ್ನಾ ಮಿತ್ರಸಹಶ್ಚ ಸಃ ।**
**ವಸಿಷ್ಠಸ್ತು ಮಹಾತೇಜಾಃ ಕ್ಷೇತ್ರೇ ಕಲ್ಮಾಷಪಾದಕೇ ॥**
**ಅಶ್ಮಕಂ ಜನಯಾಮಾಸ ಇಕ್ಷ್ವಾಕುಕುಲವೃದ್ಧಯೇ ॥ ೧೭೬ ॥**

**ಅಶ್ಮಕಸ್ಯೋರಕಾಮಸ್ತು ಮೂಲಕಸ್ತತ್ಸುತೋಭವತ್ ।**
**ಅತ್ರಾಪ್ಯುದಾಹರಂತೀಮಂ ಮೂಲಕಂ ವೈ ನೃಪಂ ಪ್ರತಿ ॥ ೧೭೭ ॥**

**ಸ ಹಿ ರಾಮಭಯಾದ್ರಾಜಾ ಸ್ತ್ರೀಭಿಃ ಪರಿವೃತೋವಸತ್ ।**
**ವಿವಸ್ತ್ರಸ್ತ್ರಾಣಮಿಚ್ಛನ್ ವೈ ನಾರೀಕವಚಮೀಶ್ವರಃ ॥ ೧೭೮ ॥**

---

೧೭೫. ಆ ವೀರಸೇನ ಮಹಾರಾಜನಿಗೆ ರಾಜಹಂಸನಾದ ಸುದಾಸನೆಂಬ ಕುಮಾರನು ಉದ್ಭವಿಸಿದನು. ಆ ಸುದಾಸನಿಗೆ ಸೌದಾಸನೆಂಬ ರಾಜಕುಮಾರನು ಆವಿರ್ಭವಿಸಿದನು.

೧೭೬. ಅವನಿಗೆ ಕಲ್ಮಾಷಪಾದನೆಂದು ಪ್ರಖ್ಯಾತನೂ, ಮಿತ್ರಸಹವೆಂಬ ನಾಮವುಳ್ಳವನೂ ಆದ ಕುಮಾರನು ಜನಿಸಿದನು. ಅವನಿಗೆ ಕಲ್ಮಾಷಪಾದಕವೆಂಬ ಕ್ಷೇತ್ರದಲ್ಲಿ ಮಹಾತೇಜಸ್ವಿಯಾದ ವಸಿಷ್ಠಮುನಿಯ ಅನುಗ್ರಹದಿಂದ ಇಕ್ಷ್ವಾಕು ಮಹಾರಾಜನ ವಂಶವಿಸ್ತಾರಕನಾದ ಅಶ್ಮಕನೆಂಬ ಕುಮಾರನು ಜನಿಸಿದನು.

೧೭೭. ಆ ಅಶ್ಮಕನಿಗೆ ಉರುಕಾಮನೆಂಬ ಕುಮಾರನೂ, ಅವನಿಗೆ ಮೂಲಕನೆಂಬ ಸುತನೂ ಉತ್ಪನ್ನರಾದರು. ಈ ಮೂಲಕನ ವಿಚಾರವಾಗಿ ಪ್ರಾಚೀನರು ಒಂದು ಇತಿಹಾಸವನ್ನು ಹೇಳುವರು.

೧೭೮. ಆ ಮೂಲಕ ಮಹಾರಾಜನು ಪರಶುರಾಮನ ಭಯದಿಂದ ಅತ್ಯಂತ ಪೀಡಿತನಾಗಿ, ವಸ್ತ್ರರಹಿತರಾದ ಸ್ತ್ರೀಯರೇ ತನಗೆ ವಜ್ರಕವಚವೆಂದು ಭಾವಿಸಿ ಅವರ ಮಧ್ಯದಲ್ಲಿಯೇ ಸದಾಕಾಲದಲ್ಲಿಯೂ ವಾಸಿಸಿದನು. ಏಕೆಂದರೆ, ಪರಶುರಾಮನು ವಸ್ತ್ರರಹಿತರಾದ ಸ್ತ್ರೀಯರನ್ನೇ ನೋಡುವುದಿಲ್ಲವೆಂದು ಶಪಥವನ್ನು ಮಾಡಿದ್ದನು.

ಮೂಲಕಸ್ಯಾಪಿ ಧರ್ಮಾತ್ಮಾ ರಾಜಾ ಶತರಥಃ ಸ್ಮೃತಃ ।
ತಸ್ಮಾಚ್ಛತರಥಾಜ್ಜಜ್ಞೇ ರಾಜಾ ಚೈಡಿವಿಡೋ ಬಲೀ ॥ ೧೭೯ ॥

ಆಸೀತ್ತ್ವೈಡಿವಿಡಃ ಶ್ರೀಮಾನ್ ಕೃತಶರ್ಮಾ ಪ್ರತಾಪವಾನ್ ।
ಪುತ್ರೋ ವಿಶ್ವಮಹತ್ತಸ್ಯ ಪುತ್ರೀಕಸ್ಯ ವ್ಯಜಾಯತ ॥ ೧೮೦ ॥

ದಿಲೀಪಸ್ತಸ್ಯ ಪುತ್ರೋಽಭೂತ್ ಖಟ್ವಾಂಗ ಇತಿ ವಿಶ್ರುತಃ ।
ಯೇನ ಸ್ವರ್ಗಾದಿಹಾಗಮ್ಯ ಮುಹೂರ್ತಂ ಪ್ರಾಪ್ಯ ಜೀವಿತಂ ।
ತ್ರಯೋಽಭಿಸಂಹಿತಾ ಲೋಕಾ ಬುದ್ಧ್ಯಾ ಸತ್ಯೇನ ಚೈವ ಹಿ ॥ ೧೮೧ ॥

ದೀರ್ಘಬಾಹುಃ ಸುತಸ್ತಸ್ಯ ರಘುಸ್ತಸ್ಮಾದಜಾಯತ ।
ಅಜಃ ಪುತ್ರೋ ರಘೋಶ್ಚಾಪಿ ತಸ್ಮಾಜಜ್ಞೇ ಸ ವೀರ್ಯವಾನ್ ॥
ರಾಜಾ ದಶರಥೋ ನಾಮ ಇಕ್ಷ್ವಾಕುಕುಲನಂದನಃ ॥ ೧೮೨ ॥

---

೧೭೯. ಅಂತಹ ಮೂಲಕನಿಗೆ ಧರ್ಮಾತ್ಮನಾದ ದಶರಥಮಹಾರಾಯನೂ, ಅವನಿಗೆ ಶತರಥನೆಂಬ ಕುಮಾರನೂ, ಅವನಿಗೆ ಏಡವಿಡನೆಂಬ ಶೂರನಾದ ಕುಮಾರನೂ ಜನಿಸಿದರು.

೧೮೦. ಏಡವಿಡ ಮಹಾರಾಯನಿಗೆ ಕಾಂತಿಯುಕ್ತನೂ, ಪ್ರತಾಪಶಾಲಿಯೂ ಆದ ಕೃತಶರ್ಮನೆಂಬ ಪುತ್ರನೂ, ಪುತ್ರವಂತರಲ್ಲಿ ಅಗ್ರಗಣ್ಯನಾದ ಕೃತಶರ್ಮನಿಗೆ ವಿಶ್ವಮಹತ್ತನೆಂಬ ಕುಮಾರನೂ ಜನಿಸಿದರು.

೧೮೧. ಆ ವಿಶ್ವಮಹತ್ತನಿಗೆ ದಿಲೀಪನೆಂಬ ಮಹಾರಾಜನೂ, ಅವನಿಗೆ ಖಟ್ವಾಂಗ ಮಹಾರಾಜನೂ, ಜನಿಸಿ ಸುಪ್ರಸಿದ್ಧರಾದರು. ಆ ರಾಯನು ಸ್ವರ್ಗಕ್ಕೆ ಹೋಗಿ, ಪುನಃ ಭೂಮಿಗೆ ಬಂದು ಮುಹೂರ್ತಕಾಲ ಜೀವಿಸಿದನು. ಅವನು ಬುದ್ಧಿಯಿಂದಲೂ ಸತ್ಯದಿಂದಲೂ ಮೂರು ಲೋಕದಲ್ಲಿಯೂ ಪ್ರಸಿದ್ಧನಾಗಿದ್ದನು.

೧೮೨. ಆ ಖಟ್ವಾಂಗ ಮಹಾರಾಯನಿಗೆ ದೀರ್ಘಬಾಹುವೆಂಬ ಕುಮಾರನೂ, ಅವನಿಗೆ ರಘುವೆಂಬ ಮಹಾರಾಜನೂ, ಅವನಿಗೆ ಅಜಮಹಾರಾಜನೂ, ಅವನಿಗೆ ಮಹಾಶೂರನೂ, ಇಕ್ಷ್ವಾಕುಕುಲಾನಂದಜನಕನೂ, ಆದ ದಶರಥರಾಜನೂ, ಉದ್ಭವಿಸಿದರು.

ರಾಮೋ ದಾಶರಥಿರ್ವೀರೋ ಧರ್ಮಜ್ಞೋ ಲೋಕವಿಶ್ರುತಃ ।
ಭರತೋ ಲಕ್ಷ್ಮಣಶ್ಚೈವ ಶತ್ರುಘ್ನಶ್ಚ ಮಹಾಬಲಃ ॥ ೧೮೩ ॥

ಮಾಧವಂ ಲವಣಂ ಹತ್ವಾ ಗತ್ವಾ ಮಧುವನಂ ಚ ತತ್ ।
ಶತ್ರುಘ್ನೇನ ಪುರೀ ತಸ್ಯ ಮಧುರಾ ಸನ್ನಿವೇಶಿತಾ ॥ ೧೮೪ ॥

ಸುಬಾಹುಃ ಶೂರಸೇನಶ್ಚ ಶತ್ರುಘ್ನಸಹಿತಾವುಭೌ ।
ಪಾಲಯಾಮಾಸತುಃ ಸೂನೂ ವೈದೇಹ್ಯೋ ಮಧುರಾಂ ಪುರೀಂ ॥ ೧೮೫ ॥

ಅಂಗದಶ್ಚಂದ್ರಕೇತುಶ್ಚ ಲಕ್ಷ್ಮಣಸ್ಯಾತ್ಮಜಾವುಭೌ ।
ಹಿಮವತ್ಪರ್ವತಾಭ್ಯಾಶೇ ಸ್ಫೀತೌ ಜನಪದೌ ತಯೋಃ ॥ ೧೮೬ ॥

೧೮೩. ಆ ದಶರಥಮಹಾರಾಜನಿಗೆ ವೀರನೂ, ಧರ್ಮಾತ್ಮನೂ, ಲೋಕ ವಿಖ್ಯಾತನೂ ಆದ ರಾಮಚಂದ್ರನೆಂಬ ಕುಮಾರನೂ, ಅವನಿಗೆ ಭರತ, ಲಕ್ಷ್ಮಣ, ಶತ್ರುಘ್ನನೆಂಬ ಮೂವರು ಸಹೋದರರೂ ಉದ್ಭವಿಸಿ ಶೂರರಾಗಿದ್ದರು.

೧೮೪. ಅವರಲ್ಲಿ ಶತ್ರುಘ್ನನು ಮಾಧವನಾಮಕ ಲವಣಾಸುರನನ್ನು ಸಂಹರಿಸಿ, ಮಧುವನಕ್ಕೆ ಹೋಗಿ ಅಲ್ಲಿಂದ ಹೊರಟು, ಸಮುದ್ರ ಸಮೀಪದಲ್ಲಿ ಅತಿರಮ್ಯವಾದ ಮಧುರಾನಗರಿಯನ್ನು ಸ್ಥಾಪಿಸಿದನು.

೧೮೫. ಈ ಶತ್ರುಘ್ನನಿಗೆ ಸುಬಾಹು, ಶೂರಸೇನನೆಂಬ ಇಬ್ಬರು ಪುತ್ರರು ಜನಿಸಿ, ತಂದೆಯೊಡನೆ ಮಧುರೆಯನ್ನು ಧರ್ಮದಿಂದ ಪಾಲಿಸಿದರು. ಅವರಿಬ್ಬರೂ ವಿದೇಹರಾಜನ ಮೊಮ್ಮಕ್ಕಳಾಗಿಯೂ ಪ್ರಸಿದ್ಧರಾದರು.

೧೮೬. ಲಕ್ಷ್ಮಣನಿಗೆ ಅಂಗದ ಚಂದ್ರಕೇತುವೆಂಬ ಇಬ್ಬರು ಪ್ರಖ್ಯಾತರಾದ ಕುಮಾರರಿದ್ದರು. ಅವರು ರಾಜ್ಯವಾಳಿದ ದೇಶಗಳು ಹಿಮಾಲಯದ ಸಮೀಪದಲ್ಲಿ ಸಕಲ ವಸ್ತುಗಳಿಂದ ಪೂರ್ಣವಾಗಿಯೂ, ಸಮೃದ್ಧವಾಗಿಯೂ ಇದ್ದುವು.

**ಅಂಗದಸ್ಯಾಂಗದೀಯಾ ತು ದೇಶೇ ಕಾರಪಥೇ ಪುರೀ ।**
**ಚಂದ್ರಕೇತೋಸ್ತು ಮಲ್ಲಸ್ಯ ಚಂದ್ರವಕ್ತ್ರಾ ಪುರೀ ಶುಭಾ ॥ ೧೮೭ ॥**

**ಭರತಸ್ಯಾತ್ಮಜೌ ವೀರೌ ತಕ್ಷಃ ಪುಷ್ಕರ ಏವ ಚ ।**
**ಗಾಂಧಾರವಿಷಯೇ ಸಿದ್ಧೇ ತಯೋಃ ಪುರ್ಯೌ ಮಹಾತ್ಮನೋಃ ॥ ೧೮೮ ॥**

**ತಕ್ಷಸ್ಯ ದಿಕ್ಷು ವಿಖ್ಯಾತಾ ರಮ್ಯಾ ತಕ್ಷಶಿಲಾ ಪುರೀ ।**
**ಪುಷ್ಕರಸ್ಯಾಪಿ ವೀರಸ್ಯ ವಿಖ್ಯಾತಾ ಪುಷ್ಕರಾವತೀ ॥ ೧೮೯ ॥**

**ಗಾಥಾಂ ಚೈವಾತ್ರ ಗಾಯಂತಿ ಯೇ ಪುರಾಣವಿದೋ ಜನಾಃ ।**
**ರಾಮೇ ನಿಬದ್ಧಾಸ್ತತ್ವಾರ್ಥಾ ಮಾಹಾತ್ಮ್ಯಾತ್ತಸ್ಯ ಧೀಮತಃ ॥ ೧೯೦ ॥**

---

೧೮೭. ಅಂಗದನ ಅಂಗದನಾಮಕ (ಪುರಿಯು) ನಗರಿಯು ಕಾರಪಥದೇಶದಲ್ಲಿ ಪ್ರಸಿದ್ಧವಾಗಿದ್ದಿತು. ಅತ್ಯಂತ ಶೂರನಾದ ಚಂದ್ರಕೇತುವಿನ ನಗರಿಯಾದರೋ ಚಂದ್ರವಕ್ತ್ರನಾಮಕವೂ ಮಂಗಳಕಾರಿಯೂ ಆಗಿದ್ದಿತು.

೧೮೮. ಭರತಮಹಾರಾಯನಿಗೆ ತಕ್ಷ, ಪುಷ್ಕರರೆಂಬ ಶೂರರಾದ ಇಬ್ಬರು ಮಕ್ಕಳು ಇದ್ದರು. ಮಹಾತ್ಮರಾದ ಅವರ ನಗರಿಗಳು ಗಾಂಧಾರದೇಶದಲ್ಲಿ ಸಿದ್ಧನಾಮಕಗಳಾಗಿದ್ದುವು.

೧೮೯. ಅವರಲ್ಲಿ ತಕ್ಷಕುಮಾರನಿಗೆ ಲೋಕವಿಖ್ಯಾತವಾದ ತಕ್ಷಶಿಲಾನಾಮಕ ನಗರಿಯು ರಾಜಧಾನಿಯಾಗಿತ್ತು. ವೀರನಾದ ಪುಷ್ಕರನಿಗೂ ಸಹ ಪುಷ್ಕರಾವತಿಯೆಂಬ ಪ್ರಸಿದ್ಧ ನಗರಿಯು ರಾಜಧಾನಿಯಾಗಿತ್ತು.

೧೯೦. ಪುರಾಣವೇತ್ತೃಗಳಾದ ಮಹಾತ್ಮರು ಈ ವಿಷಯದಲ್ಲಿ ಒಂದು ಐತಿಹ್ಯವನ್ನು ಹೇಳುವರು. ಶ್ರೀರಾಮನ ವಿಷಯದಲ್ಲಿ ಪ್ರಸಿದ್ಧವಾದ ತತ್ವಾರ್ಥಗಳೆಲ್ಲವೂ ಜ್ಞಾನಿಯಾದ ಆ ಮಹಾತ್ಮನ ದೇಶದಲ್ಲಿಯೂ ನಿರತವಾಗಿದ್ದುವು.

ಶ್ಯಾಮೋ ಯುವಾ ಲೋಹಿತಾಕ್ಷೋ ದೀಪ್ತಾಸ್ಯೋ ಮಿತಭಾಷಿತಃ ।
ಆಜಾನುಬಾಹುಃ ಸುಮುಖಃ ಸಿಂಹಸ್ಕಂಧೋ ಮಹಾಭುಜಃ ॥ ೧೯೧ ॥

ದಶವರ್ಷಸಹಸ್ರಾಣಿ ರಾಮೋ ರಾಜ್ಯಮಕಾರಯತ್ ।
ಋಕ್ಸಾಮ ಯಜುಷಾಂ ಘೋಷೋ ಜ್ಯಾಘೋಷಶ್ಚ ಮಹಾಸ್ವನಃ॥೧೯೨॥

ಅವಿಚ್ಛಿನ್ನೋಽಭವದ್ರಾಷ್ಟ್ರೇ ದೀಯತಾಂ ಭುಜ್ಯತಾಮಿತಿ ।
ಜನಸ್ಥಾನೇ ವಸನ್ ಕಾರ್ಯಂ ತ್ರಿದಶಾನಾಂ ಚಕಾರ ಸಃ ॥ ೧೯೩ ॥

ತಮಾಗಸ್ಕಾರಿಣಂ ಪೂರ್ವಂ ಪೌಲಸ್ತ್ಯಂ ಮನುಜರ್ಷಭಃ ।
ಸೀತಾಯಾಃ ಪದಮನ್ವಿಚ್ಛನ್ ನಿಜಘಾನ ಮಹಾಯಶಾಃ ॥ ೧೯೪ ॥

ಸತ್ವವಾನ್ ಗುಣಸಂಪನ್ನೋ ದೀಪ್ಯಮಾನಃ ಸ್ವತೇಜಸಾ ।
ಅತಿ ಸೂರ್ಯಂ ಚ ವಹ್ನಿಂ ಚ ರಾಮೋ ದಾಶರಥಿರ್ಬಭೌ ॥ ೧೯೫ ॥

---

೧೯೧–೧೯೩. ನೀಲಮೇಘಶ್ಯಾಮನೂ, ತರುಣನೂ, ಕಮಲಾಕ್ಷನೂ, ಸುಂದರಮುಖಿಯೂ, ಮಿತಭಾಷಿಯೂ, ಆಜಾನುಬಾಹುವೂ, ಸುಮುಖನೂ, ಸಿಂಹಸ್ಕಂದನೂ, ಮಹಾಭುಜಪರಾಕ್ರಮಿಯೂ ಆದ ಶ್ರೀರಾಮಚಂದ್ರನು ಹತ್ತುಸಹಸ್ರ ವರ್ಷಗಳು ಧರ್ಮದಿಂದ ರಾಜ್ಯವನ್ನಾಳಿದನು. ಆ ರಾಮರಾಜ್ಯದಲ್ಲಿ ಋಗ್ವೇದ, ಯಜುರ್ವೇದ, ಸಾಮವೇದಗಳ ಘೋಷಣಗಳೂ, ಧನುಷ್ಟಂಕಾರಗಳೂ, ಪರರಿಗೆ ದಾನಮಾಡಿರಿ, ಸುಖವನ್ನು ಅನುಭವಿಸಿ ಎಂಬುವ ಧ್ವನಿಯು ಅವಿಚ್ಛಿನ್ನವಾಗಿಯೂ, ಸತತವಾಗಿಯೂ ಇದ್ದುವು. ಇಂತಹ ಶ್ರೀರಾಮಚಂದ್ರನು ಜನಸ್ಥಾನದಲ್ಲಿ ವಾಸಿಸಿ, ದೇವಕಾರ್ಯಗಳನ್ನು ನೆರವೇರಿಸಿದನು.

೧೯೪. ಪುರುಷೋತ್ತಮನೂ, ಅತಿಕೀರ್ತಿವಂತನೂ ಆದ ಶ್ರೀರಾಮಚಂದ್ರನು ಸೀತಾಪಹಾರಿಯೂ, ದೇವಶತ್ರುವೂ, ಪಾಪಿಷ್ಠನೂ ಆದ ರಾವಣನು ಸೀತೆಯನ್ನು ಅಪಹರಿಸಿದ್ದರಿಂದ ಅವನನ್ನು ಸಂಹರಿಸಿದನು.

೧೯೫. ಅತ್ಯಂತ ಶೂರನೂ, ಮಹಾಗುಣವಂತನೂ, ದಿವ್ಯತೇಜಸ್ವಿಯೂ, ದಶರಥಕುಮಾರನೂ ಆದ ಶ್ರೀರಾಮನು ತನ್ನ ತೇಜಸ್ಸಿನಿಂದ ಸೂರ್ಯ, ಚಂದ್ರ, ಅಗ್ನಿ ಇವರನ್ನು ಮೀರಿ ಪ್ರಕಾಶಿಸುತ್ತಿದ್ದನು.

**ಏವಮೇವ ಮಹಾಬಾಹುರಿಕ್ಷ್ವಾಕುಕುಲನಂದನಃ ।**
**ರಾವಣಂ ಸಗಣಂ ಹತ್ವಾ ದಿವಮಾಚಕ್ರಮೇ ವಿಭುಃ ॥ ೧೯೬ ॥**

**ಶ್ರೀರಾಮಸ್ಯಾತ್ಮಜೋ ಜಜ್ಞೇ ಕುಶ ಇತ್ಯಭಿಧೀಯತೇ ।**
**ಲವಶ್ಚಾನ್ಯೋ ಮಹಾವೀರ್ಯಸ್ತಯೋರ್ದೇಶೌ ನಿಬೋಧತ ॥ ೧೯೭ ॥**

**ಕುಶಸ್ಯ ಕೋಶಲಾ ರಾಜ್ಯಂ ಪುರೀ ಚಾಪಿ ಕುಶಸ್ಥಲೀ ।**
**ರಮ್ಯಾ ನಿವೇಶಿತಾ ತೇನ ವಿಂಧ್ಯಪರ್ವತಸಾನುಷು ॥ ೧೯೮ ॥**

**ಉತ್ತರಾಕೋಶಲೇ ರಾಜ್ಯಂ ಲವಸ್ಯ ಚ ಮಹಾತ್ಮನಃ ।**
**ಶ್ರಾವಸ್ತೀ ಲೋಕವಿಖ್ಯಾತಾ ಕುಶವಂಶಂ ನಿಬೋಧತ ॥ ೧೯೯ ॥**

---

೧೯೬. ಮಹಾಬಾಹುವೂ, ಇಕ್ಷ್ವಾಕುವಂಶವರ್ಧಕನೂ, ಸ್ವಾಮಿಯೂ ಆದ ಶ್ರೀರಾಮನು ಪರಿವಾರಸಮೇತನೂ, ಲೋಕಕಂಟಕನೂ ಆದ ರಾವಣನನ್ನು ಸಂಹರಿಸಿ ಸ್ವರ್ಗಾರೋಹಣಮಾಡಿದನು.

೧೯೭. ಅಂತಹ ಶ್ರೀರಾಮನಿಗೆ ಮಹಾವೀರ್ಯವಂತರಾದ ಲವ, ಕುಶರೆಂಬ ಕುಮಾರರು ಜನಿಸಿ ವಿಖ್ಯಾತರಾಗಿದ್ದರು. ಅವರ ದೇಶಗಳನ್ನು ಈಗ ನಿರೂಪಿಸುವೆನು ಕೇಳಿರೆಂದನು.

೧೯೮. ಅವರಲ್ಲಿ ಕುಶನಿಗೆ ಕೋಶಲರಾಜ್ಯದಲ್ಲಿರುವ ಕುಶಸ್ಥಲೀ ನಗರವು ರಾಜಧಾನಿಯಾಗಿತ್ತು. ಆ ನಗರಿಯು ಅತಿರಮ್ಯವಾಗಿಯೂ, ವಿಂಧ್ಯಪರ್ವತದ ತಪ್ಪಲಿನಲ್ಲಿ ಪ್ರಖ್ಯಾತವಾಗಿಯೂ ಇದ್ದಿತು.

೧೯೯. ಮಹಾತ್ಮನಾದ ಲವನಿಗೆ ಉತ್ತರಾ ಕೋಶಲದೇಶದಲ್ಲಿ ಶ್ರಾವಸ್ತೀ ಎಂಬ ಲೋಕವಿಖ್ಯಾತವಾದ ನಗರಿಯು ರಾಜಧಾನಿಯಾಗಿತ್ತು. ಈಗ ಕುಶನ ವಂಶವನ್ನು ನಿರೂಪಿಸುವೆನು ಕೇಳಿರೆಂದನು.

ಕುಶಸ್ಯ ಪುತ್ರೋ ಧರ್ಮಾತ್ಮಾ ಹ್ಯತಿಥಿಃ ಸುಪ್ರಿಯಾತಿಥಿಃ ।
ಅತಿಥೇರಿಪಿ ವಿಖ್ಯಾತೋ ನಿಷಧೋ ನಾಮ ಪಾರ್ಥಿವಃ ॥ ೨೦೦ ॥

ನಿಷಧಸ್ಯ ನಲಃ ಪುತ್ರೋ ನಭಃ ಪುತ್ರೋ ನಲಸ್ಯ ತು ।
ನಭಸಃ ಪುಂಡರೀಕಸ್ತು ಕ್ಷೇಮಧನ್ವಾ ತತಃ ಸ್ಮೃತಃ ॥ ೨೦೧ ॥

ಕ್ಷೇಮಧನ್ವಸುತೋ ರಾಜಾ ದೇವಾನೀಕಃ ಪ್ರತಾಪವಾನ್ ।
ಆಸೀದಹೀನಗುರ್ನಾಮ ದೇವಾನೀಕಾತ್ಮಜಃ ಪ್ರಭುಃ ॥ ೨೦೨ ॥

ಅಹೀನಗೋಸ್ತು ದಾಯಾದಃ ಪಾರಿಯಾತ್ರೋ ಮಹಾಯಶಾಃ ।
ದಲಸ್ತಸ್ಯಾತ್ಮಜಶ್ಚಾಪಿ ತಸ್ಮಾಜ್ಜಜ್ಞೇ ಬಲೋ ನೃಪಃ ॥ ೨೦೩ ॥

ಔಂಕೋ ನಾಮ ಸ ಧರ್ಮಾತ್ಮಾ ಬಲಪುತ್ರೋ ಬಭೂವ ಹ ।
ವಜ್ರನಾಭಃ ಸುತಸ್ತಸ್ಯ ಶಂಖಣಸ್ತಸ್ಯ ಚಾತ್ಮಜಃ ॥ ೨೦೪ ॥

---

೨೦೦. ಆ ಕುಶನಿಗೆ ಧರ್ಮಾತ್ಮನೂ, ಅತಿಥಿಸತ್ಕಾರನಿರತನೂ ಆದ ಅತಿಥಿಯೆಂಬ ಕುಮಾರನು ಜನಿಸಿದನು. ಆ ಅತಿಥಿಗೆ ವಿಖ್ಯಾತನಾದ ನಿಷಧನೆಂಬ ರಾಜಕುಮಾರನು ಉದ್ಭವಿಸಿದನು.

೨೦೧. ನಿಷಧನಿಗೆ ನಳನೆಂಬ ಕುಮಾರನೂ, ಅವನಿಗೆ ನಭನೆಂಬ ಪುತ್ರನೂ, ಆ ನಭನಿಗೆ ಪುಂಡರೀಕನೆಂಬ ಸುತನೂ, ಅವನಿಗೆ ಕ್ಷೇಮಧನ್ವನೆಂಬ ಮಗನೂ, ಜನಿಸಿ ಪ್ರಖ್ಯಾತರಾಗಿದ್ದರು.

೨೦೨. ಆ ಕ್ಷೇಮಧನ್ವನಿಗೆ ಪ್ರತಾಪಶಾಲಿಯಾದ ದೇವಾನೀಕನೆಂಬ ಕುಮಾರನೂ, ಅವನಿಗೆ ಅಹೀನಗು ಎಂಬ ಪುತ್ರನೂ, ಜನಿಸಿ ಪ್ರಸಿದ್ಧರಾಗಿದ್ದರು.

೨೦೩. ಆ ಅಹೀನಗು ರಾಜನಿಗೆ ಅತ್ಯಂತ ಕೀರ್ತಿವಂತನಾದ ಪಾರಿಯಾತ್ರನೆಂಬ ಕುಮಾರನೂ, ಅವನಿಗೆ ದಲನೆಂಬ ಸುತನೂ, ಆ ದಲನಿಗೆ ಬಲನೆಂಬ ರಾಜ ಕುಮಾರನೂ ಹುಟ್ಟಿದರು.

೨೦೪. ಆ ಬಲನಿಗೆ ಧರ್ಮಾತ್ಮನಾದ ಔಂಕನೆಂಬ ಸುತನೂ, ಅವನಿಗೆ ವಜ್ರನಾಭನೆಂಬ ಮಗನೂ, ಅವನಿಗೆ ಶಂಖಣನೆಂಬ ಪುತ್ರನೂ ಜನಿಸಿದರು.

ಶಂಖಣಸ್ಯ ಸುತೋ ವಿದ್ವಾನ್ ಧ್ಯುಷಿತಾಶ್ವ ಇತಿ ಶ್ರುತಃ ।
ಧ್ಯುಷಿತಾಶ್ವಸುತಶ್ಚಾಪಿ ರಾಜಾ ವಿಶ್ವಸಹಃ ಕಿಲ ॥ ೨೦೫ ॥

ಹಿರಣ್ಯನಾಭಃ ಕೌಶಲ್ಯೋ ವಸಿಷ್ಠಸ್ತತ್ಸುತೋಽಭವತ್ ।
ಪೌತ್ರಸ್ಯ ಜೈಮಿನೇಃ ಶಿಷ್ಯಃ ಸ್ಮೃತಃ ಸರ್ವೇಷು ಶರ್ಮಸು ॥ ೨೦೬ ॥

ಶತಾನಿ ಸಂಹಿತಾನಾಂತು ಪಂಚ ಯೋಽಧೀತವಾಂಸ್ತತಃ ।
ತಸ್ಮಾದಧಿಗತೋ ಯೋಗೋ ಯಾಜ್ಞವಲ್ಕ್ಯೇನ ಧೀಮತಾ ॥ ೨೦೭ ॥

ಪುಷ್ಯಸ್ತಸ್ಯ ಸುತೋ ವಿದ್ವಾನ್ ಧ್ರುವಸಂಧಿಶ್ಚ ತತ್ಸುತಃ ।
ಸುದರ್ಶನಸ್ತಸ್ಯ ಸುತೋ ಅಗ್ನಿವರ್ಣಃ ಸುದರ್ಶನಾತ್ ॥ ೨೦೮ ॥

---

೨೦೫. ಆ ಶಂಖಣನಿಗೆ ಅತ್ಯಂತ ಪಂಡಿತನಾದ ಧ್ಯುಷಿತಾಶ್ವನೆಂಬ ಪ್ರಖ್ಯಾತನಾದ ಕುಮಾರನೂ, ಅವನಿಗೆ ವಿಶ್ವಸಹನೆಂಬ ಮಗನೂ ಜನಿಸಿ ಲೋಕಮಾನ್ಯರಾಗಿದ್ದರು.

೨೦೬. ಅವನಿಗೆ ಹಿರಣ್ಯನಾಭನೆಂಬ ಕುಮಾರನೂ, ಅವನಿಗೆ ಕೌಶಲ್ಯನೆಂಬ ಸುತನೂ, ಆ ಕೌಶಲ್ಯನಿಗೆ ವಸಿಷ್ಠನೆಂಬ ಪುತ್ರನೂ ಉದ್ಭವಿಸಿದರು. ಆ ವಸಿಷ್ಠನು ಜೈಮಿನಿಮುನಿಯ ಪೌತ್ರನಿಗೆ ಶಿಷ್ಯನಾಗಿಯೂ, ಸಕಲ ಸುಖಸಂಪತ್ತುಗಳಿಗೆ ಆಶ್ರಯನಾಗಿಯೂ ಇದ್ದನು.

೨೦೭. ಆ ಮಹಾರಾಜನು ನೂರೈದು ಸಂಹಿತೆಗಳನ್ನು ಅಧ್ಯಯನಮಾಡಿ ಜ್ಞಾನಿಯಾಗಿದ್ದನು. ಅವನಿಂದ ಜ್ಞಾನಿಯಾದ ಯಾಜ್ಞವಲ್ಕ್ಯಮುನಿಯು ಯೋಗಾಭ್ಯಾಸವನ್ನು ಕಲಿತನು.

೨೦೮. ಆ ರಾಯನಿಗೆ ವಿದ್ವಾಂಸನಾದ ಪುಷ್ಯನೆಂಬ ಸುತನೂ, ಆ ಪುಷ್ಯನಿಗೆ ಧ್ರುವಸಂಧಿಯೆಂಬ ಪುತ್ರನೂ, ಅವನಿಗೆ ಸುದರ್ಶನನೆಂಬ ಕುಮಾರನೂ, ಅವನಿಗೆ ಅಗ್ನಿವರ್ಣನೆಂಬ ಮಗನೂ ಜನಿಸಿದರು.

ಅಗ್ನಿವರ್ಣಸ್ಯ ಶೀಘ್ರಸ್ತು ಶೀಘ್ರಕಸ್ಯ ಮನುಃ ಸ್ಮೃತಃ ।
ಮನುಸ್ತು ಯೋಗಮಾಸ್ಥಾಯ ಕಲಾಪಗ್ರಾಮಮಾಸ್ಥಿತಃ ॥
ಏಕೋನವಿಂಶಪ್ರಯುಗೇ ಕ್ಷತ್ರಪ್ರಾವರ್ತಕಃ ಪ್ರಭುಃ ॥ ೨೦೯ ॥

ಪ್ರಸುಶ್ರುತೋ ಮನೋಃ ಪುತ್ರಃ ಸುಸಂಧಿಸ್ತಸ್ಯ ಚಾತ್ಮಜಃ ।
ಸುಸಂಧೇಶ್ಚ ತಥಾಮರ್ಷಃ ಸಹಸ್ವಾನ್ನಾಮ ನಾಮತಃ ॥ ೨೧೦ ॥

ಆಸೀತ್ಸಹಸ್ವತಃ ಪುತ್ರೋ ರಾಜಾ ವಿಶ್ರುತವಾನಿತಿ ।
ತಸ್ಯಾಸೀದ್ವಿಶ್ರುತವತಃ ಪುತ್ರೋ ರಾಜಾ ಬೃಹದ್ಬಲಃ ॥ ೨೧೧ ॥

ಏತೇ ಇಕ್ಷ್ವಾಕುದಾಯಾದಾಃ ರಾಜಾನಃ ಪ್ರಾಯಶಃ ಸ್ಮೃತಾಃ ।
ವಂಶೇ ಪ್ರಧಾನಾ ಯೇ ತೇಽಸ್ಮಿನ್ ಪ್ರಾಧಾನ್ಯೇನ ತು ಕೀರ್ತಿತಾಃ ॥ ೨೧೨ ॥

---

೨೦೯. ಆ ಅಗ್ನಿವರ್ಣನಿಗೆ ಶೀಘ್ರನೆಂಬ ಸುತನೂ, ಅವನಿಗೆ ಮನುವೆಂಬ ಪುತ್ರನೂ ಉದ್ಭವಿಸಿದರು. ಆ ಮನುಚಕ್ರವರ್ತಿಯು ಕಲಾಪಗ್ರಾಮವಾಸಿಯೂ, ಯೋಗಾಭ್ಯಾಸನಿರತನೂ, ಹತ್ತೊಂಭತ್ತನೆಯ ಯುಗದಲ್ಲಿ ಕ್ಷಾತ್ರಧರ್ಮಪ್ರವರ್ತಕನೂ, ಪ್ರಜಾರಂಜಕನೂ ಆಗಿದ್ದನು.

೨೧೦. ಅಂತಹ ಮನುವಿಗೆ ಪ್ರಸುಶ್ರುತನೆಂಬ ಮಗನೂ, ಅವನಿಗೆ ಸುಸಂಧಿಯೆಂಬ ಸುತನೂ, ಅವನಿಗೆ ಅಮರ್ಷನೆಂಬ ಕುಮಾರನೂ, ಅವನಿಗೂ ಸಹಸ್ವಂತನೆಂಬ ಪುತ್ರನೂ ಜನಿಸಿ ಕೀರ್ತಿವಂತರಾಗಿದ್ದರು.

೨೧೧. ಆ ಸಹಸ್ವಂತನಿಗೆ ವಿಶ್ರುವಂತನೆಂಬ ರಾಜಕುಮಾರನೂ, ಆ ವಿಶ್ರುವಂತನಿಗೆ ಬೃಹದ್ಬಲನೆಂಬ ಸುತನೂ ಜನಿಸಿ, ಲೋಕಮಾನ್ಯರೂ ಮಹಾಯಶಸ್ವಿಗಳೂ ಆಗಿದ್ದರು.

೨೧೨. ಈ ಮೇಲೆ ನಿರೂಪಿಸಿದ ರಾಜರು, ಇಕ್ಷ್ವಾಕುವಂಶಸಂಭೂತರೂ, ಪ್ರಧಾನರೂ, ಮಾನ್ಯರೂ ಆದ ಪ್ರಭುಗಳಾಗಿರುವರು. ಈ ಇಕ್ಷ್ವಾಕುಮಹಾರಾಯನ ವಂಶದಲ್ಲಿ ಇನ್ನೂ ಅನೇಕರಾದ ರಾಜರು ಜನಿಸಿದ್ದರೂ, ಪ್ರಧಾನರೂ, ಪ್ರಖ್ಯಾತರೂ ಆದ ರಾಜರನ್ನು ಮಾತ್ರ ನಿಮಗಾಗಿ ನಿರೂಪಿಸಿರುವೆನು.

ಪಠನ್ ಸಮ್ಯಗಿಮಾಂ ಸೃಷ್ಟಿಮಾದಿತ್ಯಸ್ಯ ವಿವಸ್ವತಃ ।
ಪ್ರಜಾವಾನೇತಿ ಸಾಯುಜ್ಯಂ ಮನೋರ್ವೈವಸ್ವತಸ್ಯ ಸಃ ॥ ೨೧೩ ॥

ಶ್ರಾದ್ಧದೇವಸ್ಯ ದೇವಸ್ಯ ಪ್ರಜಾನಾಂ ಪುಷ್ಟಿದಸ್ಯ ಚ ।
ವಿಪಾಪ್ಮಾ ವಿರಜಾಶ್ಚೈವ ಆಯುಷ್ಮಾನ್ ಭವತೇಽಚ್ಯುತಃ ॥ ೨೧೪ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ವೈವಸ್ವತಮನುವಂಶ ವರ್ಣನಂ" ನಾಮ ಷಡ್ವಿಂಶೋಽಧ್ಯಾಯಃ

---

೨೧೩. ಯಾವನು, ವೈವಸ್ವತ ಪುತ್ರನಾದ ಸೂರ್ಯದೇವನ ವಂಶದ ಸೃಷ್ಟಿ ಕ್ರಮವನ್ನು ನಿರೂಪಿಸುವ ಈ ಪುರಾಣವನ್ನು ಕ್ರಮವಾಗಿ ಪಠನಮಾಡುವನೋ, ಅಂತಹ ಪುರುಷನು ಈ ಲೋಕದಲ್ಲಿ ಪುತ್ರವಂತನಾಗಿ, ಸಕಲ ಸುಖವನ್ನೂ ಅನುಭವಿಸಿ, ಪರದಲ್ಲಿಯೂ ಸಾಯುಜ್ಯರೂಪವಾದ ಪರಮಪದವಿಯನ್ನು ಹೊಂದುವನು.

೧೧೪. ಯಾವನು, ಪ್ರಜೆಗಳಿಗೆ ಸಕಲ ಮನೋಭೀಷ್ಟಗಳನ್ನು ಕೊಡುವವನೂ ಸ್ವಾಮಿಯೂ ಆದ ಶ್ರಾದ್ಧದೇವನ ಮಾಹಾತ್ಮ್ಯಗಳನ್ನು ತಿಳಿಯುವನೋ, ಅವನು ಪಾಪರಹಿತನೂ, ದೋಷಶೂನ್ಯನೂ, ಆಯುಷ್ಮಂತನೂ, ನಾಶರಹಿತನೂ, ಪರಮ ಸುಖಿಯೂ ಆಗುವನು.

ಇಲ್ಲಿಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ವೈವಸ್ವತಮನುವಿನ ವಂಶವರ್ಣನೆ"ಯೆಂಬ ಇಪ್ಪತ್ತಾರನೆಯ ಅಧ್ಯಾಯವು ಸಮಾಪ್ತವಾದುದು.

## ಇಪ್ಪತ್ತಾರನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ವೈವಸ್ವತಮನುವಿನ ವಂಶವು ವರ್ಣಿತವಾಗಿದೆ. ಆ ಮನು ವಂಶದಲ್ಲಿ ನಾಭಾಗ, ಅಂಬರೀಷ, ರಥೀತರ, ವಿಕುಕ್ಷಿ ಮೊದಲಾದ ಸುಪ್ರಸಿದ್ಧ ಮಹಾರಾಜರು ಜನಿಸಿ ಪ್ರಖ್ಯಾತರಾಗಿದ್ದರು. ಈ ಪರಂಪರೆಯಲ್ಲಿಯೇ ಮುಂದುವರಿದು, ತ್ರಿಶಂಕು, ಹರಿಶ್ಚಂದ್ರ, ಸಗರ ಮೊದಲಾದ ಚಕ್ರವರ್ತಿಗಳು ಅವತರಿಸಿದರು. ಆ ಸಗರನಿಗೆ, ಹಿರಿಯ ಹೆಂಡತಿಯಲ್ಲಿ ಅಸಮಂಜಸನೂ, ಕಿರಿಯ ಪತ್ನಿಯಲ್ಲಿ ಅರವತ್ತು ಸಹಸ್ರ ಮಕ್ಕಳೂ ಜನಿಸಿ, ಯಾಗದ ಅಶ್ವನಿಮಿತ್ತವಾಗಿ ಕಪಿಲದೇವನ ಕೋಪದಿಂದ ಭಸ್ಮೀಭೂತರಾದರು. ತರುವಾಯ ಭಗೀರಥಮಹಾರಾಯನು ತಪಸ್ಸನ್ನು ಮಾಡಿ, ದೇವಗಂಗಾಜಲದಿಂದ ಪಿತೃಗಳನ್ನು ಉದ್ಧರಿಸಿದನು. ತರುವಾಯ ದಿಲೀಪ, ರಘು, ಅಜ, ದಶರಥ, ರಾಮ, ಲಕ್ಷ್ಮಣ, ಭರತ, ಶತ್ರುಘ್ನ, ಕುಶಲವರು ಇವರು ಉದ್ಭವಿಸಿ ಮನುವಂಶವನ್ನು ವಿಸ್ತರಿಸಿದರು. ಎಂಬ ವಿಷಯಗಳು ಈ ಅಧ್ಯಾಯದಲ್ಲಿ ವರ್ಣಿತವಾಗಿವೆ.



—॥ ಹರಿಃ ಓಂ ॥—

—॥ ಶ್ರೀ ವೇದವ್ಯಾಸಾಯ ನಮಃ ॥—

# ಶ್ರೀಮದ್ವಾಯು ಮಹಾಪುರಾಣಂ

## ಸಪ್ತವಿಂಶೋಽಧ್ಯಾಯಃ

**॥ ಸೂತ ಉವಾಚ ॥**

**ಅನುಜಸ್ಯ ವಿಕುಕ್ಷೇಸ್ತು ನಿಮೇರ್ವಂಶಂ ನಿಬೋಧತ ।**
**ಯೋಽಸೌ ನಿವೇಶಯಾಮಾಸ ಪುರಂ ದೇವಪುರೋಪಮಂ ॥ ೧ ॥**

**ಜಯಂತಮಿತಿವಿಖ್ಯಾತಂ ಗೌತಮಸ್ಯಾಶ್ರಮಾಭಿತಃ ।**
**ಯಸ್ಯಾನ್ವವಾಯೇ ಯಜ್ಞೇ ವೈ ಜನಕಾದೃಷಿಸತ್ತಮಾತ್ ॥ ೨ ॥**

**ನೇಮಿರ್ನಾಮ ಸುಧರ್ಮಾತ್ಮಾ ಸರ್ವಸತ್ವನಮಸ್ಕೃತಃ ।**
**ಆಸೀತ್ ಪುತ್ರೋಮಹಾಪ್ರಾಜ್ಞ ಇಕ್ಷ್ವಾಕೋಭೂರಿತೇಜಸಃ ॥ ೩ ॥**

---

## ಇಪ್ಪತ್ತೇಳನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :—ವಿಕುಕ್ಷಿಮಹಾರಾಯನ ತಮ್ಮನಾದ ನಿಮಿಚಕ್ರವರ್ತಿಯ ವಂಶವನ್ನು ವಿಸ್ತಾರವಾಗಿ ಹೇಳುವೆನು ಸಾವಧಾನವಾಗಿ ಕೇಳಿರಿ. ನಿಮಿಮಹಾರಾಜನು, ದೇವೇಂದ್ರನ ಅಮರಾವತೀನಗರಿಗೆ ಸಮಾನವಾದ ದಿವ್ಯನಗರಿಯನ್ನು ನಿರ್ಮಾಣಮಾಡಿದನು.

೨–೩. ಜಯಂತನಾಮಕವಾದ ನಿಮಿರಾಜನ ಪಟ್ಟಣವು ಗೌತಮಮುನಿಯ ಆಶ್ರಮದ ಸುತ್ತಲೂ ವ್ಯಾಪಿಸಿಕೊಂಡಿತ್ತು. ಅವನ ಕುಲದಲ್ಲಿ, ರಾಜರ್ಷಿಯಾದ ಜನಕಮಹಾರಾಜನಿಗೆ ಅತ್ಯಂತ ಧರ್ಮಾತ್ಮನೂ, ಸರ್ವಪ್ರಾಣಿಗಳಿಂದ ವಂದಿತನೂ, ಮಹಾಜ್ಞಾನಿಯೂ ಆದ ನೇಮಿಯೆಂಬ ಮಹಾರಾಜನು ಜನಿಸಿದನು. ಅವನು ಮಹಾತೇಜಸ್ವಿಯಾದ ಇಕ್ಷ್ವಾಕುಮಹಾರಾಜನ ವಂಶಕ್ಕೆ ಕೀರ್ತಿದಾಯಕನಾಗಿದ್ದನು.

ಸ ಶಾಪೇನ ವಸಿಷ್ಠಸ್ಯ ವಿದೇಹಃ ಸಮಪದ್ಯತ ।
ತಸ್ಯ ಪುತ್ರೋ ಮಿಥಿರ್ನಾಮ ಜನಿತಃ ಪರ್ವಭಿಸ್ತ್ರಿಭಿಃ ॥ ೪ ॥

ಅರಣ್ಯಾಂ ಮಥ್ಯಮಾನಾಯಾಂ ಪ್ರಾದುರ್ಭೂತೋ ಮಹಾಯಶಾಃ ।
ನಾಮ್ನಾ ಮಿಥಿರಿತಿ ಖ್ಯಾತೋ ಜನನಾಜ್ಜನಕೋಽಭವತ್ ॥ ೫ ॥

ಮಿಥಿರ್ನಾಮ ಮಹಾವೀರ್ಯೋ ಯೇನಸೌ ಮಿಥಿಲಾಭವತ್ ।
ರಾಜಾಸೌ ಜನಕೋ ನಾಮ ಜನಕಾಚ್ಚಾಪ್ಯುದಾವಸುಃ ॥ ೬ ॥

ಉದಾವಸೋಃ ಸುಧರ್ಮಾತ್ಮಾ ಜನಿತೋ ನಂದಿವರ್ಧನಃ ।
ನಂದಿವರ್ಧನತಃ ಶೂರಃ ಸುಕೇತುರ್ನಾಮ ಧಾರ್ಮಿಕಃ ॥ ೭ ॥

---

೪. ಆ ನಿಮಿರಾಜನು ವಸಿಷ್ಠಮುನಿಯ ಶಾಪದಿಂದ ವಿದೇಹನಾಮಕನಾದನು. ಅವನಿಗೆ ಮಿಥಿಯೆಂಬ ಕುಮಾರನು ಜನಿಸಿದನು. ಅವನು ಮೂರು ಗಂಟುಗಳಿಂದ ಯುಕ್ತನಾಗಿದ್ದನು.

೫. ಅರಣಿಯನ್ನು ಮಥಿಸಲಾಗಿ, ಮಹಾಯಶಸ್ಕನಾದ ಮಿಥಿರಾಜನು ಉದ್ಭವಿಸಿದನು. ಅವನು ಅರಣಿಯ ಮಥನದಿಂದ ಉದ್ಭವಿಸಿರುವುದರಿಂದ ಮಿಥಿಯೆಂದೂ, ಜನನದಿಂದ ಜನಕನೆಂದೂ ಪ್ರಸಿದ್ಧನಾಗಿದ್ದನು.

೬. ಮಿಥಿಯೆಂಬ ಮಹಾರಾಜನು ಅತ್ಯಂತ ವೀರ್ಯವಂತನಾಗಿದ್ದನು. ಅವನಿಂದಲೇ, ಅವನ ನಗರಿಗೆ ಮಿಥಿಲಾ ಎಂಬ ನಾಮವು ಪ್ರಾಪ್ತವಾಗಿರುತ್ತದೆ. ಆ ಮಿಥಿಲಾನಗರಿಗೆ ಜನಕಮಹಾರಾಜನೇ ಪ್ರಭುವಾಗಿದ್ದನು. ಆ ಜನಕರಾಯನಿಗೆ ಉದಾವಸುವೆಂಬ ಕುಮಾರನು ಜನಿಸಿದನು.

೭. ಆ ಉದಾವಸುವಿಗೆ ಅತ್ಯಂತ ಧರ್ಮಪುರುಷನಾದ ನಂದಿವರ್ಧನನೆಂಬ ಕುಮಾರನೂ, ಅವನಿಗೆ ಧಾರ್ಮಿಕನೂ, ಶೂರನೂ ಆದ ಸುಕೇತುವೆಂಬ ಸುತನೂ ಉದ್ಭವಿಸಿದರು.

**ಸುಕೇತೋರಪಿ ಧರ್ಮಾತ್ಮಾ ದೇವರಾತೋ ಮಹಾಬಲಃ ।**
**ದೇವರಾತಸ್ಯ ಧರ್ಮಾತ್ಮಾ ಬೃಹದುಚ್ಛ ಇತಿ ಶ್ರುತಿಃ ॥ ೮ ॥**

**ಬೃಹದುಚ್ಛಸ್ಯ ತನಯೋ ಮಹಾವೀರ್ಯಃ ಪ್ರತಾಪವಾನ್ ।**
**ಮಹಾವೀರ್ಯಸ್ಯ ಧೃತಿಮಾನ್ ಸುಧೃತಿಸ್ತಸ್ಯ ಚಾತ್ಮಜಃ ॥ ೯ ॥**

**ಸುಧೃತೇರಪಿ ಧರ್ಮಾತ್ಮಾ ಧೃಷ್ಟಕೇತುಃ ಪರಂತಪಃ ।**
**ಧೃಷ್ಟಕೇತುಸುತಶ್ಚಾಪಿ ಹರ್ಯಶ್ವೋ ನಾಮ ವಿಶ್ರುತಃ ॥ ೧೦ ॥**

**ಹರ್ಯಶ್ವಸ್ಯ ಮರುಃ ಪುತ್ರೋ ಮರೋಃ ಪುತ್ರಃ ಪ್ರತಿತ್ವಕಃ ।**
**ಪ್ರತಿತ್ವಕಸ್ಯ ಧರ್ಮಾತ್ಮಾ ರಾಜಾ ಕೀರ್ತಿರಥಃ ಸುತಃ ॥ ೧೧ ॥**

---

೮. ಆ ಸುಕೇತುವಿಗೆ ಧರ್ಮಾತ್ಮನೂ, ಮಹಾಬಲಿಷ್ಠನೂ, ಆದ ದೇವರಾತನೆಂಬ ಪುತ್ರನೂ, ಆ ದೇವರಾತನಿಗೆ ಧರ್ಮಸ್ವರೂಪಿಯಾದ ಬೃಹದುಚ್ಛನೆಂಬ ಕುಮಾರನೂ ಜನಿಸಿದರೆಂದು ಪುರಾಣಿಕರು ಹೇಳುವರು.

೯. ಆ ಬೃಹದುಚ್ಛನಿಗೆ ಪ್ರತಾಪಶಾಲಿಯಾದ ಮಹಾವೀರ್ಯನೆಂಬ ಸುತನೂ, ಅವನಿಗೆ ಧೃತಿಮಂತನೆಂಬ ಪುತ್ರನೂ, ಅವನಿಗೆ ಸುಧೃತಿಯೆಂಬ ಮಗನೂ ಉದ್ಭವಿಸಿದರು.

೧೦. ಆ ಸುಧೃತಿ ಮಹಾರಾಯನಿಗೆ ಧರ್ಮಾತ್ಮನೂ, ಶತ್ರುಸಂಹಾರಕನೂ ಆದ ಧೃಷ್ಟಕೇತುವೆಂಬ ಕುಮಾರನೂ, ಅವನಿಗೆ ಲೋಕವಿಖ್ಯಾತನೂ, ಧರ್ಮಾತ್ಮನೂ ಆದ ಹರ್ಯಶ್ವನೆಂಬ ಪುತ್ರನೂ ಜನಿಸಿ, ಮಾನ್ಯರಾಗಿದ್ದರು.

೧೧. ಹರ್ಯವಶ್ವನಿಗೆ ಮರುವೆಂಬ ಕುಮಾರನೂ, ಆ ಮರುವೆಂಬುವನಿಗೆ ಪ್ರತಿತ್ವಕನೆಂಬ ಪುತ್ರನೂ, ಅವನಿಗೆ ಧರ್ಮಾತ್ಮನೂ ಪ್ರಭುವೂ ಆದ ಕೀರ್ತಿರಥನೆಂಬ ಸುತನೂ ಉತ್ಪನ್ನರಾದರು.

ಪುತ್ರಃ ಕೀರ್ತಿರಥಸ್ಯಾಪಿ ದೇವಮೀಢ ಇತಿ ಶ್ರುತಃ ।
ದೇವಮೀಢಸ್ಯ ವಿಬುಧೋ ವಿಬುಧಸ್ಯ ಸುತೋ ಧೃತಿಃ ॥ ೧೨ ॥

ಮಹಾಧೃತಿಸುತೋ ರಾಜಾ ಕೀರ್ತಿರಾಜಃ ಪ್ರತಾಪವಾನ್ ।
ಕೀರ್ತಿರಾಜಾತ್ಮಜೋ ವಿದ್ವಾನ್ ಮಹಾರೋಮೇತಿ ವಿಶ್ರುತಃ ॥ ೧೩ ॥

ಮಹಾರೋಮ್ಣಸ್ತು ವಿಖ್ಯಾತಃ ಸ್ವರ್ಣರೋಮಾ ವ್ಯಜಾಯತ ।
ಸ್ವರ್ಣರೋಮಾತ್ಮಜಶ್ಚಾಪಿ ಹ್ರಸ್ವರೋಮಾಭವನ್ನೃಪಃ ॥ ೧೪ ॥

ಹ್ರಸ್ವರೋಮಾತ್ಮಜೋ ವಿದ್ವಾನ್ ಸೀರಧ್ವಜ ಇತಿ ಶ್ರುತಿಃ ।
ಉದ್ಭಿನ್ನಾ ಕೃಷತಾ ಯೇನ ಸೀತಾ ರಾಜ್ಞಾ ಯಶಸ್ವಿನೀ ॥
ರಾಮಸ್ಯ ಮಹಿಷೀ ಸಾಧ್ವೀ ಸುವ್ರತಾತಿಪತಿವ್ರತಾ ॥ ೧೫ ॥

---

೧೨. ಅಂತಹ ಕೀರ್ತಿವಂತನಿಗೆ ದೇವಮೀಢನೆಂಬ ಪ್ರಖ್ಯಾತನಾದ ರಾಜಕುಮಾರನೂ, ಆ ದೇವಮೀಢನಿಗೆ ವಿಬುಧನೆಂಬ ಸುತನೂ, ಅವನಿಗೆ ಧೃತಿಯೆಂಬ ಮಗನೂ, ಜನಿಸಿ ಪ್ರಖ್ಯಾತರಾಗಿದ್ದರು.

೧೩. ಆ ಮಹಾಧೃತಿರಾಜನಿಗೆ ಪ್ರತಾಪಶಾಲಿಯಾದ ಕೀರ್ತಿರಾಜನೆಂಬ ಪುತ್ರನೂ, ಅವನಿಗೆ ವಿದ್ವಾಂಸನೂ, ಶೂರನೂ ಆದ ಮಹಾರೋಮನೆಂದು ಪ್ರಖ್ಯಾತನಾದ ರಾಜಕುಮಾರನೂ ಉದ್ಭವಿಸಿದರು.

೧೪. ಆ ಮಹಾರೋಮನಿಗೆ, ಪ್ರಸಿದ್ಧನಾದ ಸ್ವರ್ಣರೋಮನೆಂಬ ಸುತನೂ, ಆ ಮಹಾರಾಜನಿಗೆ ಹ್ರಸ್ವರೋಮನೆಂದು ಪ್ರಖ್ಯಾತನಾದ ರಾಜಕುಮಾರನೂ ಉದ್ಭವಿಸಿದರು.

೧೫. ಆ ಹ್ರಸ್ವರೋಮನಿಗೆ, ಪಂಡಿತನಾದ ಸೀರಧ್ವಜನೆಂಬ ಸುಪ್ರಸಿದ್ಧನಾದ ರಾಜಪುತ್ರನು ಉದ್ಭವಿಸಿದನು. ಆ ಸೀರಧ್ವಜಮಹಾರಾಜನು ಕೃಷಿಯನ್ನು ಮಾಡಿದಾಗ, ಕೀರ್ತಿವಂತಳೂ, ನಿಯಮವಂತಳೂ, ಪತಿವ್ರತಾಶಿರೋಮಣಿಯೂ, ರಾಮಪತ್ನಿಯೂ, ಸೀತಾನಾಮಕಳೂ ಆದ ನಾರೀಮಣಿಯು ಅವತರಿಸಿ, ದೃಷ್ಟಿಗೋಚರಳಾದಳು.

|| ಶಾಂಶಪಾಯನ ಉವಾಚ ||

ಕಥಂ ಸೀತಾ ಸಮುತ್ಪನ್ನಾ ಕೃಷ್ಯಮಾಣಾ ಯಶಸ್ವಿನೀ |
ಕಿಮರ್ಥಂ ಚಾಕೃಷದ್ರಾಜಾ ಕ್ಷೇತ್ರಂ ಯಸ್ಮಿನ್ ಬಭೂವ ಹ || ೧೬ ||

|| ಸೂತ ಉವಾಚ ||

ಅಗ್ನಿಕ್ಷೇತ್ರೇ ಕೃಷ್ಯಮಾಣೇ ಅಶ್ವಮೇಧೇ ಮಹಾತ್ಮನಃ |
ವಿಧಿನಾ ಸುಪ್ರಯುಕ್ತೇನ ತಸ್ಮಾತ್ಸಾತು ಸಮುತ್ಥಿತಾ || ೧೭ ||

ಸೀರಧ್ವಜಾತ್ತು ಜಾತಸ್ತು ಭಾನುಮಾನ್ನಾಮ ಮೈಥಿಲಃ |
ಭ್ರಾತಾ ಕುಶಧ್ವಜಸ್ತಸ್ಯ ಸ ಕಾಶ್ಯಧಿಪತಿರ್ನೃಪಃ || ೧೮ ||

ತಸ್ಯ ಭಾನುಮತಃ ಪುತ್ರಃ ಪ್ರದ್ಯುಮ್ನಶ್ಚ ಪ್ರತಾಪವಾನ್ |
ಮುನಿಸ್ತಸ್ಯ ಸುತಶ್ಚಾಪಿ ತಸ್ಮಾದೂರ್ಜವಹಃ ಸ್ಮೃತಃ || ೧೯ ||

---

೧೬. ಶಾಂಶಪಾಯನಮುನಿಯು ಕೇಳಿದನು :—ಎಲೈ ವಾಯುದೇವನೇ, ಸೀರಧ್ವಜರಾಜನೇ, ಕೃಷಿಯನ್ನು ಮಾಡಿಸುವಾಗ ಮಹಾಯಶಸ್ವಿನಿಯಾದ ಸೀತಾದೇವಿಯು ಹೇಗೆ ಉತ್ಪನ್ನಳಾದಳು ? ಆ ಮಹಾರಾಜನು ಭೂಮಿಯನ್ನೂ, ಆ ಕ್ಷೇತ್ರವನ್ನೂ ಉತ್ತು ಹದಮಾಡಲು ಕಾರಣವೇನು ? ಯಾವ ಕ್ಷೇತ್ರದಲ್ಲಿ ಸೀತಾದೇವಿಯು ವ್ಯಕ್ತಳಾದಳು ? ಇವೆಲ್ಲವನ್ನೂ ತಿಳಿಸಬೇಕೆಂದು ಬೇಡಿಕೊಂಡನು.

೧೭. ಆ ಸೂತಮುನಿಯು ಹೇಳಿದನು :—ಆ ಮಹಾರಾಜನು ಅಶ್ವಮೇಧ ಯಾಗವನ್ನು ಮಾಡುವುದಕ್ಕಾಗಿ ತನ್ನ ಅಗ್ನಿನಾಮಕ ಕ್ಷೇತ್ರವನ್ನು ಶಾಸ್ತ್ರೋಕ್ತವಾಗಿ ಉಳಿಸಲು ಅಲ್ಲಿ ಸೀತಾದೇವಿಯು (ವ್ಯಕ್ತಳಾದಳು) ಅವತರಿಸಿದಳು.

೧೮. ಆ ಸೀರಧ್ವಜನಾಮಕನಾದ ಜನಕಮಹಾರಾಜನಿಗೆ, ಭಾನುಮಂತನೆಂಬ ಮಿಥಿಲಾರಾಜನು ಜನಿಸಿದನು. ಆ ಜನಕಮಹಾರಾಜನಿಗೆ ಕುಶಧ್ವಜನೆಂಬ ಸಹೋದರನು ಇದ್ದನು. ಅವನು ಕಾಶೀನಗರಕ್ಕೆ ಅಧಿಪತಿಯಾಗಿದ್ದನು.

೧೯. ಆ ಭಾನುಮಂತರಾಜನಿಗೆ ಪ್ರದ್ಯುಮ್ನನೆಂಬ ಪ್ರತಾಪಶಾಲಿಯಾದ ಕುಮಾರನೂ, ಅವನಿಗೆ ಮುನಿಯೆಂಬ ಪುತ್ರನೂ ಅವನಿಗೆ ಊರ್ಜವಹನೆಂಬ ಸುತನೂ ಉದ್ಭವಿಸಿದರು.

ಊರ್ಜವಹಾತ್ ಸುತದ್ಭಾಜಃ ಶಕುನಿಸ್ತಸ್ಯ ಚಾತ್ಮಜಃ ।
ಸ್ವಾಗತಃ ಶಕುನೇಃ ಪುತ್ರಃ ಸುವರ್ಚಾಸ್ತತ್ಸುತಃ ಸ್ಮೃತಃ ॥ ೨೦ ॥

ಶ್ರುತೋ ಯಸ್ತಸ್ಯ ದಾಯಾದಃ ಸುಶ್ರುತಸ್ತಸ್ಯ ಚಾತ್ಮಜಃ ।
ಸುಶ್ರುತಸ್ಯ ಜಯಃ ಪುತ್ರೋ ಜಯಸ್ಯ ವಿಜಯಃ ಸುತಃ ॥ ೨೧ ॥

ವಿಜಯಸ್ಯ ಋತಃ ಪುತ್ರಃ ಋತಸ್ಯ ಸುನಯಃ ಸ್ಮೃತಃ ।
ಸುನಯಾದ್ವೀತಹವ್ಯಸ್ತು ವೀತಹವ್ಯಾತ್ಮಜೋ ಧೃತಿಃ ॥ ೨೨ ॥

ಧೃತೇಸ್ತು ಬಹುಲಾಶ್ವೋಽಭೂದ್ಬಹುಲಾಶ್ವಸುತಾಃ ಕೃತಿಃ ।
ತಸ್ಮಿನ್ ಸಂತಿಷ್ಠತೇ ವಂಶೋ ಜನಕಾನಾಂ ಮಹಾತ್ಮನಾಂ ॥
ಇತ್ಯೇತೇ ಮೈಥಿಲಾಃ ಪ್ರೋಕ್ತಾಃ ಸೋಮಸ್ಯಾಪಿ ನಿಬೋಧತ ॥ ೨೩ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ವೈವಸ್ವತಮನುವಂಶ ಕೀರ್ತನಂ " ನಾಮ ಸಪ್ತವಿಂಶೋಽಧ್ಯಾಯಃ

---

೨೦. ಆ ಊರ್ಜವಹನಿಗೆ ಶಕುನಿಯೆಂಬ ಮಹಾರಾಜನೂ, ಆ ಶಕುನಿಗೆ ಸ್ವಾಗತನೆಂಬ ಪುತ್ರನೂ, ಅವನಿಗೆ ಸುವರ್ಚಸನೆಂಬ ಮಗನೂ ಉದ್ಭವಿಸಿದರು.

೨೧. ಅವನಿಗೆ ಶ್ರುತನೆಂಬ ಸುತನೂ, ಅವನಿಗೆ ಸುಶ್ರುತನೆಂಬ ಕುಮಾರನೂ, ಸುಶ್ರುತನಿಗೆ ಜಯನೆಂಬ ಮಗನೂ, ಜಯನಿಗೆ ವಿಜಯನೆಂಬ ಆತ್ಮಜನೂ, ಉತ್ಪನ್ನರಾದರು.

೨೨. ಆ ವಿಜಯನಿಗೆ ಋತನೆಂಬ ಕುಮಾರನೂ, ಅವನಿಗೆ ಸುನಯನೆಂಬ ಪುತ್ರನೂ, ಅವನಿಗೆ ವೀತಹವ್ಯನೆಂಬುವನೂ. ಅವನಿಗೆ ಧೃತಿಯೆಂಬುವನೂ ಕುಮಾರರಾಗಿ ಜನಿಸಿದರು.

೨೩. ಆ ಧೃತಿಯೆಂಬುವನಿಗೆ ಬಹುಲಾಶ್ವನೆಂಬ ಕುಮಾರನೂ, ಅವನಿಗೆ ಕೃತಿಯೆಂಬ ಸುತನೂ ಜನಿಸಿದರು. ಮಹಾತ್ಮರಾದ ವಿದೇಹರಾಜರ ವಂಶವು ಆ ಕೃತಿಯಲ್ಲಿ ಸ್ಥಾಪಿತವಾಗಿದೆ. ಈ ಮೇಲೆ ವರ್ಣಿಸಿರುವ ರಾಜರು ಮಿಥಿಲಾರಾಜರ ಮನೆತನಕ್ಕೆ ಸೇರಿರುತ್ತಾರೆ. ಈಗ ಸೋಮವಂಶವನ್ನು ವರ್ಣಿಸುವೆನು ಕೇಳಿರೆಂದನು.

ಇಲ್ಲಿಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ವೈವಸ್ವತಮನುವಿನ ವಂಶ ಕೀರ್ತನೆ "ಯೆಂಬ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

## ಇಪ್ಪತ್ತೇಳನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ, ವಿಕುಕ್ಷಿರಾಯನ ತಮ್ಮನಾದ ನಿಮಿರಾಯನ ವಂಶವು ವರ್ಣಿತವಾಗಿದೆ. ಅಂತಹವನಿಗೆ ಮಿಥಿರಾಯನು ಜನಿಸಿದನು. ಅವನ ರಾಜಧಾನಿಯು ಮಿಥಿಲಾನಗರವಾಗಿತ್ತು. ಅವನೇ ಜನಕರಾಜನಾಗಿದ್ದನು. ಅವನಿಗೆ ಉದವಾಸನೂ, ನಂದಿವರ್ಧನನೂ, ಸುಕೇತುರಾಯನೂ ಜನಿಸಿ ಆ ವಂಶವು ಅಭಿವೃದ್ಧಿಯಾಯಿತು.

ಜನಕ ಮಹಾರಾಯನು ಯಾಗವನ್ನು ಮಾಡಲು ಭೂಮಿಯನ್ನು ನೇಗಿಲಿನಿಂದ ಶೋಧಿಸಿದಾಗ ಪತಿವ್ರತೆಯೂ, ಸಾಧ್ವೀಮಣಿಯೂ ಆದ ಸೀತಾದೇವಿಯು ಅವತರಿಸಿ ಶ್ರೀರಾಮಚಂದ್ರನನ್ನು ಮದುವೆಯಾದಳು. ತರುವಾಯ ಆ ವಂಶದಲ್ಲಿ ಭಾನುಮಂತನೇ ಮೊದಲಾದವರು ಜನಿಸಿ ಆ ವಂಶವು ಅಭಿವೃದ್ಧಿಯಾಯಿತು ಎಂಬ ವಿಷಯವು ವರ್ಣಿತವಾಗಿದೆ.



—: ಹರಿಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಮಹಾಪುರಾಣಂ

## ಅಷ್ಟವಿಂಶೋಽಧ್ಯಾಯಃ

|| ಸೂತ ಉವಾಚ ||

**ಪಿತಾ ಸೋಮಸ್ಯ ವೈ ವಿಪ್ರಾ ಜಜ್ಞೇಽತ್ರಿರ್ಭಗವಾನೃಷಿಃ ।**
**ಸೋಽತಿ ತಸ್ಥೌ ಸರ್ವಲೋಕಾಂಭಗವಾನ್ಸ್ವೇನ ತೇಜಸಾ ॥ ೧ ॥**

**ಕರ್ಮಣಾ ಮನಸಾ ವಾಚಾ ಶುಭಾನ್ಯೇವ ಸಮಾಚರನ್ ।**
**ಕಾಷ್ಠಕುಡ್ಯಶಿಲಾಭೂತ ಊರ್ಧ್ವಬಾಹುರ್ಮಹಾದ್ಯುತಿಃ ॥ ೨ ॥**

**ಸುದಶ್ಚರಂ ನಾಮ ತಪೋ ಯೇನ ತಪ್ತಂ ಮಹತ್ಪುರಾ ।**
**ತ್ರೀಣಿ ವರ್ಷ ಸಹಸ್ರಾಣಿ ದಿವ್ಯಾನೀತಿ ಹಿ ನಃ ಶ್ರುತಂ ॥ ೩ ॥**

---

## ಇಪ್ಪತ್ತೆಂಟನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :—ಎಲೈ ವಿಪ್ರೋತ್ತಮರೇ, ತರುವಾಯ ಸೋಮದೇವನ ತಂದೆಯೂ, ಮಹಾತ್ಮನೂ ಆದ ಅತ್ರಿಮಹರ್ಷಿಯು ಉತ್ಪನ್ನನಾಗಿ ತನ್ನ ದಿವ್ಯ ತೇಜಸ್ಸಿನಿಂದ ಸರ್ವಲೋಕಗಳನ್ನೂ ಅತಿಕ್ರಮಿಸಿ ಪ್ರಕಾಶಿಸಿದನು.

೨–೩. ಆ ಅತ್ರಿಮುನಿಯು ಮನೋವಾಕ್ಕಾಯಕರ್ಮಗಳಿಂದ ಶುಭಕರ್ಮಗಳನ್ನೇ ಆಚರಿಸುತ್ತಾ, ಊರ್ಧ್ವಬಾಹುವೂ, ಮಹಾಕಾಂತಿವಂತನೂ ಆಗಿ ಕಡ್ಡಿ, ಗೋಡೆ, ಶಿಲೆ ಇವುಗಳಂತೆ ನಿಶ್ಚಲನಾಗಿ ಮೂರು ಸಾವಿರ ವರ್ಷಗಳವರೆಗೂ ಅತಿ ಭಯಂಕರವಾದ ತಪಸ್ಸನ್ನು ಮಾಡಿದನೆಂದು ಪೂರ್ವಿಕರು ನಮಗೆ ಹೇಳಿರುವರು.

ತಸ್ಯೋರ್ಧ್ವರೇತಸಸ್ತತ್ರ ಸ್ಥಿತಸ್ಯಾನಿಮಿಷಸ್ಪೃಹಂ ।
ಸೋಮತ್ವಂತನುರಾಪೇದೇ ಮಹಾಬುದ್ಧಿಃ ಸ ವೈ ದ್ವಿಜಃ || ೪ ||

ಊರ್ಧ್ವಮಾಚಕ್ರಮೇ ತಸ್ಯ ಸೋಮತ್ವಂ ಭಾವಿತಾತ್ಮನಃ ।
ಸೋಮಃ ಸುಸ್ರಾವ ನೇತ್ರಾಭ್ಯಾಂ ದಶಧಾದ್ಯೋತಯನ್ ದಿಶಃ || ೫ ||

ತಂ ಗರ್ಭಂ ವಿಧಿನಾದಿಷ್ಟಾ ದಶ ದೇವ್ಯೋ ದಧುಸ್ತದಾ ।
ಸಮೇತ್ಯ ಧಾರಯಾಮಾಸರ್ನ ಚ ತಾ ಸಮಶಕ್ನುವನ್ || ೬ ||

ಸ ತಾಭ್ಯಃ ಸಹಸೈವಾಥ ದಿಗ್ಭ್ಯೋ ಗರ್ಭಃ ಪ್ರಭಾನ್ವಿತಃ ।
ಯಥಾವಭಾಸಯಂಲ್ಲೋಕಾಞ್ಛೀತಾಂಶುಃ ಸರ್ವಭಾವನಃ || ೭ ||

ಯದಾ ನ ಧಾರಣೇ ಶಕ್ತಾಸ್ತಸ್ಯ ಗರ್ಭಸ್ಯ ತಾಃ ಸ್ತ್ರಿಯಃ ।
ತತಃ ಸ ತಾಭಿಃ ಶೀತಾಂಶುರ್ನಿಪಪಾತ ವಸುಂಧರಾಂ || ೮ ||

---

೪. ಊರ್ಧ್ವರೇತಸ್ಕನೂ, ಮಹಾಬುದ್ಧಿವಂತನೂ ಆದ ಆ ಮುನಿಯು ದೇವತೆಗಳ ಮಹಾತೇಜಸ್ವಿಯಾದ ಸೋಮದೇವನನ್ನು ಪಡೆಯಲು ಮನಸಾಧ್ಯಾನ ಮಾಡಿದನು.

೫. ಹೀಗೆ ಚಂದ್ರನನ್ನು ಮನಸ್ಸಿನಿಂದ ಭಾವಿಸಿದ ಆ ಮುನಿಯು, ಊರ್ಧ್ವ ಲೋಕವನ್ನು ಆಕ್ರಮಿಸಿದನು. ತರುವಾಯ ಆ ಅತ್ರಿಮಹರ್ಷಿಯ ನೇತ್ರಗಳಿಂದ ಚಂದ್ರನು ಉದ್ಭವಿಸಿ, ಹತ್ತು ದಿಕ್ಕುಗಳನ್ನೂ ತನ್ನ ದಿವ್ಯತೇಜಸ್ಸಿನಿಂದ ಪ್ರಕಾಶ ಗೊಳಿಸಿದನು.

೬. ವಿಧಿಯಿಂದ ಪ್ರೇರಿತರಾದ ಹತ್ತು ಜನ ದಿವ್ಯನಾರಿಯರು, ಚಂದ್ರರೂಪಿ ಯಾದ ಆ ಗರ್ಭವನ್ನು ಧರಿಸಿದರು. ಆ ದೇವಿಯರೆಲ್ಲರೂ ಒಟ್ಟುಗೂಡಿದರೂ ಸಹ ಆ ಗರ್ಭವನ್ನು ಧರಿಸಲು ಸಮರ್ಥರಾಗಲಿಲ್ಲ.

೭. ಆ ಹತ್ತು ಜನ ದಿಗ್ದೇವಿಯರಿಂದ ಧರಿಸಲ್ಪಟ್ಟ ಆ ಸೋಮನು, ಆ ದೇವಿಯ ಸಂಗಡ ದಿವ್ಯತೇಜಸ್ಸಿನಿಂದ ದೇದೀಪ್ಯಮಾನನಾಗಿದ್ದನು.

೮. ಯಾವಾಗ ಆ ದೇವನಾರಿಯರು ದಿವ್ಯಕಾಂತಿಯಿಂದ ಯುಕ್ತನಾದ ಚಂದ್ರನನ್ನು ಧರಿಸಲು ಶಕ್ತರಾಗಲಿಲ್ಲವೋ, ಆಗ ಸೋಮದೇವನು ಆಕಾಶದಿಂದ ಭೂಮಿಯಲ್ಲಿ ಬಿದ್ದನು.

ಪತಂತಂ ಸೋಮಮಾಲೋಕ್ಯ ಬ್ರಹ್ಮಾ ಲೋಕ ಪಿತಾಮಹಃ ।
ರಥಮಾರೋಪಯಾಮಾಸ ಲೋಕಾನಾಂ ಹಿತಕಾಮ್ಯಯಾ ॥ ೯ ॥

ಸ ಹಿ ದೇವಮಯೋ ವಿಪ್ರಾಃ ಧರ್ಮಾತ್ಮಾ ಸತ್ಯಸಂಗರಃ ।
ಯುಕ್ತೋ ವಾಜಿಸಹಸ್ರೇಣ ಸಿತೇನೇತಿ ಹಿ ನಃ ಶ್ರುತಂ ॥ ೧೦ ॥

ತಸ್ಮಿನ್ನಿಪತಿತೇ ದೇವಾಃ ಪುತ್ರೇಽತ್ರೇಃ ಪರಮಾತ್ಮನಿ ।
ತುಷ್ಟುವುರ್ಬ್ರಹ್ಮಣಃ ಪುತ್ರಾಃ ಮಾನಸಾಃ ಸಪ್ತ ವಿಶ್ರುತಾಃ ॥ ೧೧ ॥

ತತ್ರೈವಾಂಗಿರಸಸ್ತಸ್ಯ ಭೃಗೋಶ್ಚೈವಾತ್ಮಜಸ್ತಥಾ ।
ಋಗ್ಭಿರ್ಯಜುರ್ಭಿರ್ಬಹುಭಿರಥರ್ವಾಂಗಿರಸೈರಪಿ ॥ ೧೨ ॥

---

೯. ಹೀಗೆ ಚಂದ್ರನು ಕಾಂತಿಯುತನಾಗಿ ಆಕಾಶದಿಂದ ಭೂಮಿಯಲ್ಲಿ ಬೀಳಲಾಗಿ, ಅವನನ್ನು ಲೋಕಕ್ಕೆ ಪಿತಾಮಹನಾದ ಬ್ರಹ್ಮದೇವನು ನೋಡಿ ಲೋಕಗಳ ಕಲ್ಯಾಣಕ್ಕಾಗಿ ದಿವ್ಯರಥದಲ್ಲಿ ಧರಿಸಿದನು.

೧೦. ಎಲೈ ವಿಪ್ರೋತ್ತಮರೇ, ಆ ಸೋಮದೇವನೇ ಧರ್ಮಾತ್ಮನೂ, ಸತ್ಯಸಂಧನೂ, ಶುಭ್ರವಾದ ಅಶ್ವಸಹಸ್ರಗಳಿಂದ ಯುಕ್ತನೂ ಆಗಿ, ಆಕಾಶದಲ್ಲಿ ಪ್ರಕಾಶಿಸುತ್ತಿರುವನೆಂದು ನಾವು ಹಿರಿಯರಿಂದ ಕೇಳಿರುತ್ತೇವೆಯೆಂದರು.

೧೧. ಅತ್ರಿಮುನಿಯ ಪುತ್ರನೂ, ದಿವ್ಯರೂಪಿಯೂ ಆದ ಚಂದ್ರನು ಭೂಮಿಯಲ್ಲಿ ಬೀಳುತ್ತಿರಲಾಗಿ, ಅವನನ್ನು ಬೀಳದ ಹಾಗೆ ದಿವ್ಯರಥದಲ್ಲಿ ರಕ್ಷಿಸಿದ ಬ್ರಹ್ಮನನ್ನು ಬ್ರಹ್ಮದೇವನ ಏಳುಜನ ಮಾನಸಪುತ್ರರೂ ವಿಶೇಷವಾಗಿ ಹೊಗಳಿದರು.

೧೨. ಅನಂತರ ಅಲ್ಲಿಯೇ ಇದ್ದ ಆಂಗಿರಸ ಮತ್ತು ಭೃಗುಗಳ ಕುಮಾರರು ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದವೇ ಮೊದಲಾದವುಗಳಿಂದ ಸೋಮದೇವನನ್ನು ವಿಶೇಷವಾಗಿ ಹೊಗಳಿದರು.

**ತತಃ ಸಂಸ್ತೂಯಮಾನಸ್ಯ ತೇಜಃ ಸೋಮಸ್ಯ ಭಾಸ್ವತಃ |**
**ಆಪ್ಯಾಯಮಾನಂ ಲೋಕಾಂಸ್ತ್ರೀನ್ ಭಾವಯಾಮಾಸ ಸರ್ವಶಃ || ೧೩ ||**

**ಸಮೇನ ರಥಮುಖ್ಯೇನ ಸಾಗರಾಂತಾಂ ವಸುಂಧರಾಂ |**
**ತ್ರಿಃ ಸಪ್ತಕೃತ್ವೋ ವಿಪುಲಶ್ಚಕಾರಾಭಿಪ್ರದಕ್ಷಿಣಂ || ೧೪ ||**

**ತಸ್ಯ ಯಚ್ಚಾಪಿ ತತ್ತೇಜಃ ಪೃಥಿವೀಮನ್ವಪದ್ಯತ |**
**ಓಷಧ್ಯಸ್ತಾಃ ಸಮುದ್ಭೂತಾಸ್ತೇಜಸಾ ಸಂಜ್ವಲಂತ್ಯುತ || ೧೫ ||**

**ತಾಭಿರ್ಧಾರ್ಯತ್ಯಯಂ ಲೋಕಾನ್ ಪ್ರಜಾಶ್ಚಾಪಿ ಚತುರ್ವಿಧಾಃ |**
**ಪೋಷ್ಟಾ ಹಿ ಭಗವಾನ್ ಸೋಮೋ ಜಗತೋ ಹಿ ದ್ವಿಜೋತ್ತಮಾಃ || ೧೬ ||**

**ಸ ಲಬ್ಧತೇಜಾಸ್ತಪಸಾ ಸಂಸ್ತವೈಸ್ತೈಶ್ಚ ಕರ್ಮಭಿಃ |**
**ತಪಸ್ತೇಪೇ ಮಹಾಭಾಗಃ ಪದ್ಮಾನಾಂ ದಶತೀರ್ದಶ || ೧೭ ||**

---

೧೩. ಅನಂತರ ಸರ್ವರಿಂದ ಸ್ತುತಿಸಲ್ಪಟ್ಟ ಚಂದ್ರನ (ದಿವ್ಯತೇಜಸ್ಸು) ಅಮೃತಮಯವಾದ ದಿವ್ಯಕಿರಣಗಳು ಮೂರು ಲೋಕಗಳನ್ನೂ ಆನಂದಗೊಳಿಸುವುವೆಂದು ಸರ್ವರೂ ಭಾವಿಸಿದರು.

೧೪. ಅಂತಹ ಸೋಮದೇವನು ತನ್ನ ದಿವ್ಯರಥದಲ್ಲಿ ಕುಳಿತು, ಸಮುದ್ರಾಂತವಾದ ಭೂಮಂಡಲದಲ್ಲಿ ಇಪ್ಪತ್ತೊಂದಾವೃತ್ತಿ ವಿಶಾಲವಾಗಿಯೂ, ಪ್ರದಕ್ಷಿಣಾಕಾರವಾಗಿಯೂ ಸಂಚರಿಸುವನು.

೧೫. ಹೀಗೆ ಸಂಚರಿಸುವಾಗ, ಅವನ ಯಾವ ದಿವ್ಯತೇಜಸ್ಸುಗಳು ಭೂಮಿಯಲ್ಲಿ ಬೀಳುವುವೋ, ಅವುಗಳಿಂದ ದಿವ್ಯಲತೆಗಳು ಉದ್ಭವಿಸಿ, ದಿವ್ಯಕಾಂತಿಯಿಂದ ಹೊಳೆಯುವುವು.

೧೬. ಎಲೈ ವಿಪ್ರೋತ್ತಮರೇ, ಪೂಜ್ಯನಾದ ಈ ಚಂದ್ರನು ಆ ದಿವ್ಯೌಷಧಿಗಳ ಮೂಲಕ, ಮೂರು ಲೋಕಗಳನ್ನೂ, ಚತುರ್ವಿಧ ವರ್ಣಾಶ್ರಮಗಳನ್ನೂ ರಕ್ಷಿಸಿ ಪುಷ್ಟಿಯನ್ನುಂಟುಮಾಡುವನು.

೧೭. ಮಹಾನುಭಾವನೂ, ತಪಸ್ಸಿನಿಂದಲೂ, ಆಸ್ತುತಿಗಳಿಂದಲೂ, ಕರ್ಮಗಳಿಂದಲೂ ಪ್ರಾಪ್ತವಾದ ದಿವ್ಯಕಾಂತಿಯುತನೂ ಆದ ಚಂದ್ರನು ನೈದಿಲೆಗಳಿಗೆ ದಿವ್ಯಾನಂದವನ್ನುಂಟುಮಾಡುವನು.

ಹಿರಣ್ಯವರ್ಣಾ ಯಾ ದೇವ್ಯೋ ಧಾರಯಂತ್ಯಾತ್ಮನಾ ಜಗತ್ ।
ವಿಭುಸ್ತಾಸಾಂಭವತ್ಸೋಽಪಃ ಪ್ರಖ್ಯಾತಃ ಸ್ವೇನ ಕರ್ಮಣಾ ॥ ೧೮ ॥

ತತಸ್ತಸ್ಮೈ ದದೌ ರಾಜ್ಯಂ ಬ್ರಹ್ಮಾ ಬ್ರಹ್ಮವಿದಾಂವರಃ ।
ಬೀಜೌಷಧೀಷು ವಿಪ್ರಾಣಾಮಪಾಂ ಚ ದ್ವಿಜಸತ್ತಮಾಃ ॥ ೧೯ ॥

ಸೋಽಭಿಷಿಕ್ತೋ ಮಹಾತೇಜಾ ಮಹಾರಾಜ್ಯೇನ ರಾಜರಾಟ್ ।
ಲೋಕಾನಾಂ ಭಾವಯಾಮಾಸ ಸ್ವಭಾವಾತ್ತಪತಾಂವರಃ ॥ ೨೦ ॥

ಸಪ್ತವಿಂಶತಿರಿಂದೋಸ್ತು ದಾಕ್ಷಾಯಣ್ಯೋ ಮಹಾವ್ರತಾಃ ।
ದದೌ ಪ್ರಾಚೇತಸೋ ದಕ್ಷೋ ನಕ್ಷತ್ರಾಣೀತಿ ಯಾ ವಿದುಃ ॥ ೨೧ ॥

---

೧೮. ಸುವರ್ಣಮಯರಾದ ಯಾವ ದೇವಿಯರು ಈ ಲೋಕಗಳನ್ನು ಧರಿಸುವರೋ, ಅವರೆಲ್ಲರಿಗೂ ಸೋಮದೇವನೇ ಪ್ರಭುವಾಗಿರುವನು. ತನ್ನ ಲೋಕ ರಕ್ಷಕವಾದ ದಿವ್ಯಕರ್ಮಗಳಿಂದ ಪ್ರಖ್ಯಾತನಾಗಿರುವನು.

೧೯. ಎಲೈ ವಿಪ್ರೋತ್ತಮರೇ, ಪರಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಬ್ರಹ್ಮ ದೇವನು ತರುವಾಯ ಚಂದ್ರನಿಗೆ ಬೀಜಗಳು, ಲತೆಗಳು, ವಿಪ್ರರು, ಮತ್ತು ಜಲ ಇವುಗಳ ಸಾಮ್ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದನು.

೨೦. ಹೀಗೆ ಮಹಾರಾಜ್ಯದಲ್ಲಿ ಅಭಿಷಿಕ್ತನೂ, ಮಹಾತೇಜಸ್ವಿಯೂ, ದ್ವಿಜರಾಜನೂ, ಕಾಂತಿಯುತರಲ್ಲಿ ಶ್ರೇಷ್ಠನೂ, ಆದ ಚಂದ್ರನು ಲೋಕಕಲ್ಯಾಣವೇ ಸ್ವಹಿತವೆಂದು ಭಾವಿಸಿದ್ದನು.

೨೧. ಪ್ರಚೇತಸನ ಪುತ್ರನಾದ ದಕ್ಷಪ್ರಜಾಪತಿಯು, ತನ್ನ ಪುತ್ರಿಯರಾದ ಇಪ್ಪತ್ತೇಳುಜನ ದಾಕ್ಷಾಯಣಿಯರನ್ನು ಚಂದ್ರನಿಗೆ ಕೊಟ್ಟು, ವಿವಾಹ ಮಹೋತ್ಸವ ವನ್ನು ನೆರವೇರಿಸಿದನು. ಅವರು ಅತ್ಯಂತ ನಿಯಮವುಳ್ಳವರೂ, ನಕ್ಷತ್ರನಾಮಕರೂ ಆಗಿರುವರು.

**ಸ ತತ್ಪ್ರಾಪ್ಯ ಮಹಾದ್ರಾಜ್ಯಂ ಸೋಮಃ ಸೋಮವತಾಂ ಪ್ರಭುಃ ।**
**ಸಮಾಜಹ್ನೇ ರಾಜಸೂಯಂ ಸಹಸ್ರಶತದಕ್ಷಿಣಂ ॥ ೨೨ ॥**

**ಹಿರಣ್ಯಗರ್ಭಶ್ಚೋದ್ಗಾತಾ ಬ್ರಹ್ಮಾ ಬ್ರಹ್ಮತ್ವಮೇಯಿವಾ಼ ।**
**ಸದಸ್ಯಪುತ್ರ ಭಗವಾನ್ ಹರಿರ್ನಾರಾಯಣಃ ಪ್ರಭುಃ ॥**
**ಸನತ್ಕುಮಾರಪ್ರಮುಖೈರಾದ್ಯೈರ್ಬ್ರಹ್ಮರ್ಷಿಭಿರ್ವೃತಃ ॥ ೨೩ ॥**

**ದಕ್ಷಿಣಾಮದದತ್ಸೋಮಸ್ತ್ರೀಂಲ್ಲೋಕಾನಿತಿ ನಃ ಶ್ರುತಂ ।**
**ತೇಭ್ಯೋ ಬ್ರಹ್ಮರ್ಷಿಮುಖ್ಯೇಭ್ಯಃ ಸದಸ್ಯೇಭಶ್ಚ ವೈ ದ್ವಿಜಾಃ ॥ ೨೪ ॥**

**ತಂ ಸಿನೀ ಚ ಕುಹೂಶ್ಚೈವ ವಪುಃ ಪುಷ್ಟಿಃ ಪ್ರಭಾವಸುಃ ।**
**ಕೀರ್ತಿರ್ಧೃತಿಶ್ಚ ಲಕ್ಷ್ಮೀಶ್ಚ ನವ ದೇವ್ಯಃ ಸಿಷೇವಿರೇ ॥ ೨೫ ॥**

---

೨೨. ಸೋಮಪಾಯಿಗಳಲ್ಲಿ ಶ್ರೇಷ್ಠನೂ, ದ್ವಿಜೋತ್ತಮನೂ ಆದ ಚಂದ್ರನು ಅಂತಹ ಮಹದ್ರಾಜ್ಯವನ್ನು ಹೊಂದಿ, ಹತ್ತು ಸಾವಿರ ದ್ರವ್ಯಗಳು ದಕ್ಷಿಣೆಯಾಗಿ ಉಳ್ಳ ರಾಜಸೂಯ ಯಾಗವನ್ನು ಮಾಡಿದನು.

೨೩. ಆ ಯಾಗದಲ್ಲಿ ಹಿರಣ್ಯಗರ್ಭನು ಉದ್ಗಾತೃವಾಗಿಯೂ, ಬ್ರಹ್ಮದೇವನು ಯಜಮಾನನಾಗಿಯೂ, ಭಗವಂತನೂ, ದುರಿತಹರನೂ, ಸರ್ವಶಕ್ತನೂ ಆದ ಶ್ರೀಮನ್ನಾರಾಯಣನು ಸ್ವಾಮಿಯಾಗಿಯೂ, ಸನತ್ಕುಮಾರರೇ ಮೊದಲಾದ ಬ್ರಹ್ಮರ್ಷಿಗಳೇ, ಸದಸ್ಯರಾಗಿಯೂ ಇದ್ದರು. ಇವರಿಂದ ಕೂಡಿ ಯಾಗವನ್ನು ಮಾಡಿದನು.

೨೪. ಎಲೈ ವಿಪ್ರವರ್ಯರೇ, ಆ ಸೋಮದೇವನು ಮೂರು ಲೋಕಗಳಲ್ಲಿರುವ ಸಮಸ್ತ ದ್ರವ್ಯಗಳನ್ನೂ ಆ ಯಾಗದಲ್ಲಿ ಆ ಬ್ರಹ್ಮರ್ಷಿಗಳೇ ಮೊದಲಾದ ಸಕಲ ಸದಸ್ಯರಿಗೂ ದಕ್ಷಿಣೆಯಾಗಿ ಕೊಟ್ಟು ಯಾಗವನ್ನು ನೆರವೇರಿಸಿದನು.

೨೫. ಆ ಯಾಗದಲ್ಲಿ ಸಿನೀ, ಕುಹೂ, ವಪು, ಪುಷ್ಟಿ, ಪ್ರಭಾವಸು, ಕೀರ್ತಿ, ಧೃತಿ, ಲಕ್ಷ್ಮೀ ಇವರೇ ಮೊದಲಾದ ಒಂಭತ್ತು ಜನ ದೇವಿಯರು ಸೋಮದೇವನನ್ನು ಸೇವಿಸಿದರು.

ಪ್ರಾಪ್ಯಾವಭೃಥಮುವ್ಯಗ್ರಃ ಸರ್ವದೇವರ್ಷಿಪೂಜಿತಃ ।
ಅತಿರಾಜಾತಿರಾಜೇಂದ್ರೋ ದಶಧಾತಾಪಯದ್ದಿಶಃ ॥ ೨೬ ॥

ತದಾ ತತ್ ಪ್ರಾಪ್ಯ ದುಷ್ಪ್ರಾಪಮೈಶ್ವರ್ಯ ಮೃಷಿಸಂಸ್ತುತಂ ।
ಸ ವಿಭ್ರಮಮತಿರ್ವಿಪ್ರಾ ವಿನಯೋ ವಿನಯೋ ಹತಃ ॥ ೨೭ ॥

ಬೃಹಸ್ಪತೇಃ ಸ ವೈ ಭಾರ್ಯಾಂ ತಾರಾಂ ನಾಮ ಯಶಸ್ವಿನೀಂ ।
ಜಹಾರ ಸಹಸಾ ಸರ್ವಾನವಮತ್ಯಾಂಗಿರಃಸುತಾನ್ ॥ ೨೮ ॥

ಸ ಯಾಚ್ಯಮಾನೋ ದೇವೈಶ್ಚ ತಥಾ ದೇವರ್ಷಿಭಿಶ್ಚ ಹ ।
ನೈವ ವ್ಯಸರ್ಜಯತ್ತಾರಾಂ ತಸ್ಮಾ ಯಾಂಗಿರಸೇ ತದಾ ॥ ೨೯ ॥

---

೨೬. ಅತ್ಯಂತ ಜಾಗರೂಕನಾದ ಆ ಸೋಮದೇವನು, ಆ ದೇವಿಯರೊಡನೆ ಸಮಸ್ತ ದೇವರ್ಷಿಗಳಿಂದ ಪೂಜಿತನಾಗಿ, ಅವಭೃತಸ್ನಾನವನ್ನು ಹೊಂದಿ, ಸಕಲ ರಾಜರನ್ನೂ ಮೀರಿದವನೆಂದೂ, ದ್ವಿಜರಾಜನೆಂದೂ, ಪ್ರಖ್ಯಾತನಾಗಿ ದಶದಿಕ್ಕುಗಳನ್ನು ಬಹಳವಾಗಿ ಪ್ರಕಾಶಗೊಳಿಸಿದನು.

೨೭. ಆಗ ಆ ಚಂದ್ರನು, ಇತರರಿಂದ ಹೊಂದಲಸಾಧ್ಯವಾದ ಮಹದೈಶ್ವರ್ಯವನ್ನು ಹೊಂದಿ, ಮಹರ್ಷಿಗಳಿಂದ ಸ್ತುತ್ಯನೂ, ಭ್ರಾಂತನೂ ಆಗಿ, ವಿನಯವನ್ನೂ ತ್ಯಜಿಸಿ, ಅವಿನಯದಿಂದ ಅಮಾರ್ಗಿಯಾದನು.

೨೮. ಅನಂತರ ಆ ಚಂದ್ರನು ಅಂಗಿರಸನ ಪುತ್ರರೆಲ್ಲರನ್ನೂ ತಿರಸ್ಕರಿಸಿ, ಕೀರ್ತಿವಂತಳೂ, ತಾರಾನಾಮಕಳೂ ಆದ ಬೃಹಸ್ಪತಿಯ ಪತ್ನಿಯನ್ನು ಅಪಹರಿಸಿದನು.

೨೯. ಅನಂತರ ದೇವತೆಗಳೂ, ಮಹರ್ಷಿಗಳೂ, ಬಂದು ಅಂಗಿರಸರಿಗೆ ಬೃಹಸ್ಪತಿಯ ಪತ್ನಿಯಾದ ತಾರೆಯನ್ನು ಅರ್ಪಿಸುವಂತೆ ಎಷ್ಟೇ ಬೇಡಿಕೊಂಡರೂ ಕೂಡ, ಆಕೆಯನ್ನು ಬಿಟ್ಟುಕೊಡಲಿಲ್ಲ.

ಉಶನಾಸ್ತಸ್ಯ ಜಗ್ರಾಹ ಪಾರ್ಷ್ಣಿಮಂಗಿರಸೋ ದ್ವಿಜಾಃ ।
ಸಹಿ ಶಿಷ್ಯೋ ಮಹಾತೇಜಾಃ ಪಿತುಃ ಪೂರ್ವಂ ಬೃಹಸ್ಪತೇಃ ॥ ೩೦ ॥

ತೇನ ಸ್ನೇಹೇನ ಭಗವಾನ್ ರುದ್ರಸ್ತಸ್ಯ ಬೃಹಸ್ಪತೇಃ ।
ಪಾರ್ಷ್ಣಿಗ್ರಾಹೋಽಭವದ್ದೇವಃ ಪ್ರಗೃಹ್ಯಾಜಗವಂಧನುಃ ॥ ೩೧ ॥

ತೇನ ಬ್ರಹ್ಮರ್ಷಿಮುಖ್ಯೇಭ್ಯಃ ಪರಮಾಸ್ತ್ರಂ ಮಹಾತ್ಮನಾ ।
ಉದ್ದಿಶ್ಯ ದೇವಾನುತ್ಸೃಷ್ಟಂ ಯೇನೈಷಾಂ ನಾಶಿತಂ ಯಶಃ ॥ ೩೨ ॥

ತತ್ರ ತದ್ಯುದ್ಧಮಭವತ್ ಪ್ರತ್ಯಕ್ಷಂತಾರಕಾಮಯಂ ।
ದೇವಾನಾಂ ದಾನವಾನಾಂ ಚ ಲೋಕಕ್ಷಯಕರಂ ಮಹತ್ ॥ ೩೩ ॥

---

೩೦. (ಎಲೈ ವಿಪ್ರವರ್ಯರೇ), ತರುವಾಯ ಅಂಗಿರಸಕುಮಾರರು ಶುಕ್ರಾಚಾರ್ಯನ ಬಳಿಗೆ ಹೋಗಿ ಅವನ ಪಾದಗಳಿಗೆ ವಂದನೆಯನ್ನು ಮಾಡಿದರು. ಅನಂತರ ಮಹಾತೇಜಸ್ವಿಯಾದ ಶುಕ್ರನು ಶಿಷ್ಯಸಮೇತನಾಗಿ ಅಂಗಿರಸರ ತಂದೆಯಾದ ಬೃಹಸ್ಪತಿಯೊಡನೇ ರುದ್ರದೇವನ ಬಳಿಗೆ ಹೋದರು.

೩೧. ಬೃಹಸ್ಪತಿಯ ಅಂತಹ ಸ್ನೇಹದಿಂದ ಪ್ರೀತನಾದ ಸ್ವಾಮಿಯಾದ ರುದ್ರದೇವನು ಅಜಗವವೆಂಬ ಧನುಸ್ಸನ್ನು ಸ್ವೀಕರಿಸಿ ಬೃಹಸ್ಪತಿಯನ್ನು ಮರ್ಯಾದಿಸಿದನು.

೩೨. ತರುವಾಯ ಮಹಾತ್ಮನಾದ ರುದ್ರದೇವನು ದೇವತೆಗಳೊಡನೆ ಹೋರಾಡುವುದಕ್ಕಾಗಿ ಪರಮಾಸ್ತ್ರವನ್ನು ಮಹರ್ಷಿಗಳಿಗೆ ಕೊಟ್ಟನು. ದೇವಗಣವು ಮಹರ್ಷಿಗಳ ಕೀರ್ತಿಗೆ ಭಂಗವನ್ನುಂಟುಮಾಡಿತು. ಅದರಿಂದ ಅವರಿಗೆ ಹೋರಾಟವುಂಟಾಯಿತು.

೩೩. ಆಗ ದೇವತೆಗಳಿಗೂ ದಾನವರಿಗೂ ಲೋಕಕ್ಷಯಕರವಾದ ಮಹಾಯುದ್ಧವು, ತಾರಕಾಸುರನ ಯುದ್ಧದಂತೆ, ಅತಿಭಯಂಕರವಾಗಿಯೂ, ಪ್ರತ್ಯಕ್ಷವಾಗಿಯೂ, ನಡೆಯಿತು.

ತತ್ರ ಶಿಷ್ಟಾಸ್ತ್ರಯೋ ದೇವಾಸ್ತುಷಿತಾಶ್ಚೈವ ಯೇ ಸ್ಮೃತಾಃ ।
ಬ್ರಹ್ಮಾಣಂ ಶರಣಂ ಜಗ್ಮುರಾದಿದೇವಂ ಪಿತಾಮಹಂ ॥ ೩೪ ॥

ತತೋ ನಿವಾರ್ಯೋಶನಸಂ ರುದ್ರಂ ಜ್ಯೇಷ್ಠಂ ಚ ಶಂಕರಂ ।
ದದಾವಾಂಗಿರಸೇ ತಾರಾಂ ಸ್ವಯಮೇವ ಪಿತಾಮಹಃ ॥ ೩೫ ॥

ಅಂತರ್ವತ್ನೀಂ ಚ ತಾಂ ದೃಷ್ಟ್ವಾ ತಾರಾಂತಾರಾಧಿಪಾನನಾಂ ।
ಗರ್ಭಮುತ್ಸೃಜಸೇ ನ ತ್ವಂ ವಿಪ್ರಃ ಪ್ರಾಹ ಬೃಹಸ್ಪತಿಃ ॥ ೩೬ ॥

ಮದೀಯಾಯಾಂ ತನೌ ಯೋನೌ ಗರ್ಭೋ ಧಾರ್ಯಃ ಕಥಂಚನ ।
ಅಥೋ ನಾವಸ್ತೃಜತ್ತಂ ತು ಕುಮಾರಂ ದಸ್ಯುಹಂತಮಂ ॥ ೩೭ ॥

ಈಷಿಕಾಸ್ತಂಬಮಾಸಾದ್ಯ ಜ್ವಲಂತಮಿವ ಪಾವಕಂ ।
ಜಾತಮಾತ್ರೋsಥ ಭಗವಾನ್ ದೇವಾನಾಮಾಕ್ಷಿಪದ್ವಪುಃ ॥ ೩೮ ॥

---

೩೪. ಆ ಯುದ್ಧಕ್ಕೆ ಸೇರದೇ ಉಳಿದ ತುಷಿತನಾಮಕರಾದ ಮೂವರು ದೇವತೆಗಳು, ದೇವದೇವನೂ, ಪಿತಾಮಹನೂ ಆದ ಬ್ರಹ್ಮದೇವನಿಗೆ ಶರಣಾಗತ ರಾದರು.

೩೫. ಅನಂತರ ಬ್ರಹ್ಮದೇವನು ತಾನೇ ಸಾಕ್ಷಾತ್ತಾಗಿ ಬಂದು, ಅತಿಭಯಂಕರ ನಾದ ಶುಕ್ರನನ್ನೂ, ಹಿರಿಯವನಾದ ಈಶ್ವರನನ್ನೂ ತಡೆದು, ಸಮಾಧಾನ ಹೇಳಿ ಅಂಗಿರಸರಿಗೆ ತಾರಾದೇವಿಯನ್ನು ಕೊಡಿಸಿದನು.

೩೬. ಅನಂತರ ಬೃಹಸ್ಪತಿಯು ಚಂದ್ರಮುಖಿಯಾದ ಆ ತಾರೆಯು ಸೌಂದರ್ಯದಿಂದ ಗರ್ಭವತಿಯೆಂದು ಭಾವಿಸಿ, ಆ ಗರ್ಭವನ್ನು ತ್ಯಜಿಸುವಂತೆ ಆಜ್ಞಾಪಿಸಿದನು.

೩೭. ಸ್ತ್ರೀಯರು ಗರ್ಭವನ್ನು ಧರಿಸುವುದು ಸಹಜವಾಗಿದೆ. ಆದುದರಿಂದ ನಾನು ಗರ್ಭವತಿಯಾಗಿರುವೆನು. ಇದರಲ್ಲಿ ದೋಷವೇನಿದೆಯೆಂದು ಹೇಳಿ ಶತ್ರು ನಾಶಕನಾದ ಆ ಕುಮಾರನನ್ನು ತ್ಯಜಿಸಲಿಲ್ಲ.

೩೮ ಅನಂತರ ಪೂಜ್ಯನಾದ ಬೃಹಸ್ಪತಿಯು, ಆನೆಯ ಗುಡ್ಡೆಯಂತೆ ಪ್ರಕಾಶಕವೂ ಅಗ್ನಿಯಂತೆ ಪ್ರಜ್ವಲಿಸುತ್ತಲೂ ಇರುವ ಆ ಮಗುವು ಜನನವಾದ ಕೂಡಲೇ ದೇವತೆಗಳ ಮುಂದೆ ತಂದು ಎಸೆದನು.

ತತಃ ಸಂಶಯಮಾಪನ್ನಾಸ್ತಾರಾಮಕಥಯನ್ ಸುರಾಃ ।
ಸತ್ಯಂ ಬ್ರೂಹಿ ಸುತಃ ಕಸ್ಯ ಸೋಮಸ್ಯಾಥ ಬೃಹಸ್ಪತೇಃ ॥ ೩೯ ॥

ಹ್ರೀಯಮಾಣಾ ಯದಾ ದೇವಾನ್ನಾಹ ಸಾ ಸಾಧ್ವಸಾಧು ವಾ ।
ತದಾ ತಾಂ ಶಪ್ತುಮಾರಬ್ಧಃ ಕುಮಾರೋ ದಸ್ಯುಹಂತಮಃ ॥ ೪೦ ॥

ಸನ್ನಿವಾರ್ಯ ತದಾ ಬ್ರಹ್ಮಾ ತಾರಾಂ ಚಂದ್ರಸ್ಯ ಸಂಶಯಃ ।
ಯದತ್ರ ತಥ್ಯಂತದ್ಬ್ರೂಹಿ ತಾರೇ ಕಸ್ಯ ಸುತಸ್ತ್ವಯಂ ॥ ೪೧ ॥

ಸಾ ಪ್ರಾಂಜಲಿರುವಾಚೇದಂ ಬ್ರಹ್ಮಾಣಂ ವರದಂ ಪ್ರಭುಂ ।
ಸೋಮಸ್ಯೇತಿ ಮಹಾತ್ಮಾನಂ ಕುಮಾರಂ ದಸ್ಯುಹಂತಮಂ ॥ ೪೨ ॥

ತತಃ ಸ ತಮುಪಾಘ್ರಾಯ ಸೋಮೋ ದಾತಾ ಪ್ರಜಾಪತಿಃ ।
ಬುಧ ಇತ್ಯಕರೋನ್ನಾಮ ತಸ್ಯ ಪುತ್ರಸ್ಯ ಧೀಮತಃ ॥ ೪೩ ॥

---

೩೯. ಆಗ ಸಂದೇಹ ಸಂಪನ್ನರಾದ ದೇವತೆಗಳು, ತಾರೆಯನ್ನು ಕುರಿತು ಎಲೈ ತಾರಾದೇವಿಯೇ ಈ ಮಗು ಚಂದ್ರನ ಮಗುವೇ ಅಥವಾ ಬೃಹಸ್ಪತಿಯ ಸುತನೇ ಎಂಬ ವಿಷಯದಲ್ಲಿ ಸತ್ಯವನ್ನು ಹೇಳು, ಅನೃತವನ್ನು ಹೇಳಬೇಡವೆಂದು ಕೇಳಿದರು.

೪೦. ಹೀಗೆ ದೇವತೆಗಳು ಕೇಳಲಾಗಿ, ತಾರೆಯು ನಾಚಿಕೆಗೊಂಡು ದೇವತೆಗಳಿಗೆ ಯುಕ್ತಾಯುಕ್ತವಿಷಯವಾಗಿ ಏನನ್ನೂ ಹೇಳಲಿಲ್ಲ. ಆಗ ದಸ್ಯುಹಂತನಾಮಕನಾದ ಬಾಲಕನು ತಾಯಿಯಾದ ತಾರೆಯನ್ನು ಶಪಿಸಲು ಪ್ರಾರಂಭಿಸಿದನು.

೪೧. ಆ ಬ್ರಹ್ಮದೇವನು, ಅವನನ್ನು ತಡೆದು ಎಲೈ ತಾರೆಯೇ, ಚಂದ್ರನಿಗೆ ಈಗ ಸಂದೇಹವುಂಟಾಗಿದೆ. ಈ ಮಗುವು ಯಾರದು ಎಂದು ಕೇಳಿದನು.

೪೨. ಆಗ ತಾರಾದೇವಿಯು ಅಂಜಲಿಬದ್ಧಳಾಗಿ, ವರಪ್ರದನೂ, ಸ್ವಾಮಿಯೂ ಆದ ಬ್ರಹ್ಮದೇವನನ್ನು ಕುರಿತು— ಎಲೈ ದೇವನೇ, ಈ ದಸ್ಯುಹಂತಮನೆಂಬ ಕುಮಾರನು ಮಹಾತ್ಮನಾದ ಸೋಮದೇವನದು ಎಂದನು.

೪೩. ಅನಂತರ ಬ್ರಹ್ಮದೇವನು ಆ ಮಗುವನ್ನು ಆಘ್ರಾಣಿಸಿದನು. ಸೋಮದೇವನು, ದಾತನೂ, ಪ್ರಜಾಪತಿಯೂ ಆಗಿರುವನು. ಅನಂತರ ಜ್ಞಾನಿಯಾದ ಆ ಮಗುವಿಗೆ ಬುಧನೆಂದು ನಾಮಕರಣವನ್ನು ಮಾಡಿದನು.

ಪ್ರತಿಪೂರ್ವಂ ಚ ಗಮನೇ ಸಮುಭ್ಯುತ್ತಿಷ್ಠತೇ ಬುಧೈಃ ।
ಉತ್ಪಾದಯಾಮಾಸ ತದಾ ಪುತ್ರಂ ವೈ ರಾಜಪುತ್ರಿಕಾ ॥ ೪೪ ॥

ತಸ್ಯ ಪುತ್ರೋ ಮಹಾತೇಜಾ ಬಭೂವೈಲಃ ಪುರೂರವಾಃ ।
ಊರ್ವಶ್ಯಾಂ ಜಜ್ಞಿರೇ ತಸ್ಯ ಪುತ್ರಾಃ ಷಟ್ ಸುಮಹೌಜಸಃ ॥ ೪೫ ॥

ಪ್ರಸಹ್ಯ ಧರ್ಷಿತಸ್ತತ್ರ ವಿವಶೋ ರಾಜಯಕ್ಷ್ಮಣಾ ।
ತತೋ ಯಕ್ಷ್ಮಾಭಿಭೂತಸ್ತು ಸೋಮಃ ಪ್ರಕ್ಷೀಣಮಂಡಲಃ ॥
ಜಗಾಮ ಶರಣಾಯಾಥ ಪಿತರಂ ಸೋಽತ್ರಿಮೇವ ತು ॥ ೪೬ ॥

ತಸ್ಯ ತತ್ಪಾಪಶಮನಂ ಚಕಾರಾತ್ರಿರ್ಮಹಾಯಶಾಃ ।
ಸ ರಾಜಯಕ್ಷ್ಮಣಾ ಮುಕ್ತಃ ಶ್ರಿಯಾಜಜ್ವಾಲ ಸರ್ವಶಃ ॥ ೪೭ ॥

---

೪೪. ಅನಂತರ ಚಂದ್ರನು ತಾನು ಪ್ರತಿದಿವಸವೂ ಉದಯಿಸಿ ಸಂಚರಿಸುವಾಗ ಬುಧನನ್ನು ಮುಂದಿಟ್ಟುಕೊಂಡೇ ಹೊರಡುವನು. ಅನಂತರ ರಾಜಪುತ್ರಿಯು ಹೆತ್ತಳು.

೪೫. ಆ ರಾಜಕುಮಾರನಿಗೆ ಮಹಾತೇಜಸ್ವಿಯೂ, ಏಲಕುಮಾರನೂ ಆದ ಪುರೂರುವಸುಮಹಾರಾಜನು ಜನಿಸಿದನು. ಅವನು ಊರ್ವಶಿಯಲ್ಲಿ ಮಹಾ ತೇಜಸ್ವಿಗಳಾದ ಆರುಜನ ಪುತ್ರರನ್ನು ಪಡೆದನು.

೪೬. ಅನಂತರ ಸೋಮದೇವನು ಮಹರ್ಷಿಗಳನ್ನು ತಿರಸ್ಕರಿಸಿದ್ದರಿಂದ ಕ್ಷಯ ರೋಗದಿಂದ ಪೀಡಿತನಾದನು. ಹೀಗೆ ಕ್ಷಯರೋಗದಿಂದ ತಿರಸ್ಕೃತನಾದ ಚಂದ್ರನು ಕಾಂತಿಹೀನನಾದನು. ಅನಂತರ ಚಂದ್ರನು ತಂದೆಯಾದ ಅತ್ರಿಮಹರ್ಷಿಯನ್ನೇ ರೋಗಪರಿಹಾರಕ್ಕಾಗಿ ಮೊರೆಹೊಕ್ಕನು.

೪೭. ಮಹಾ ಕೀರ್ತಿವಂತನಾದ ಅತ್ರಿಮುನಿಯು, ಅವನ ಆ ಪಾಪವನ್ನು ಶಮನಮಾಡಿದನು. ಹೀಗೆ ರೋಗದಿಂದ ಮುಕ್ತನಾದ ಚಂದ್ರನು, ದಿವ್ಯಕಾಂತಿಯನ್ನು ಪಡೆದು ಬಹಳವಾಗಿ ಪ್ರಜ್ವಲಿಸಿದನು.

**ಏತತ್ಸೋಮಸ್ಯ ವೈ ಜನ್ಮ ಕೀರ್ತಿತಂ ದ್ವಿಜಸತ್ತಮಾಃ।**
**ವಂಶಂ ತಸ್ಯ ದ್ವಿಜಶ್ರೇಷ್ಠಾಃ ಕೀರ್ತ್ಯಮಾನಂ ನಿಬೋಧತ ॥ ೪೮ ॥**

**ಧನ್ಯಮಾರೋಗ್ಯಮಾಯುಷ್ಯಂ ಪುಣ್ಯಂ ಕಲ್ಮಷಶೋಧನಂ।**
**ಸೋಮಸ್ಯ ಜನ್ಮ ಶ್ರುತ್ವೈವ ಸರ್ವಪಾಪೈಃ ಪ್ರಮುಚ್ಯತೇ ॥ ೪೯ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಉಪೋದ್ಘಾತಪಾದೇ ಸೋಮೋತ್ಪತ್ತಿ" ನಾಮಾಷ್ಟವಿಂಶೋಽಧ್ಯಾಯಃ**

---

೪೮. ಎಲೈ ಬ್ರಾಹ್ಮಣೋತ್ತಮರೆ, ಈ ರೀತಿಯಾಗಿ ಚಂದ್ರನ ಜನನ ಮತ್ತು ಮಹಾತ್ಮ್ಯಗಳನ್ನು ವರ್ಣಿಸಿರುವೆನು. ಈಗ ಅವನ ವಂಶವನ್ನು ಸಂಪೂರ್ಣವಾಗಿ ವರ್ಣಿಸುವೆನು ಕೇಳಿರಿ ಎಂದನು.

೪೯. ಈ ರೀತಿಯಾಗಿ, ಚಂದ್ರನ ಜನನಾದಿಗಳನ್ನು ಯಾವನು ಶ್ರದ್ಧೆಯಿಂದ ಕೇಳುವನೋ ಅವನು ಸರ್ವಪಾಪಗಳಿಂದ ಮುಕ್ತನಾಗಿ, ಧನಧಾನ್ಯಗಳು, ಆರೋಗ್ಯ, ಆಯುಷ್ಯ, ಪುಣ್ಯಸಂತಾನ ಇವೇ ಮೊದಲಾದ ಸುಖವನ್ನು ಅನುಭವಿಸಿ, ಪರದಲ್ಲಿಯೂ ದಿವ್ಯಸೌಖ್ಯವನ್ನು ಪಡೆಯುವನು ಎಂದು ಸೂತಮುನಿಯು ಹೇಳಿದನು.

ಇಲ್ಲಿಗೆ ವಾಯುಪ್ರೋಕ್ತವಾದ ಮಹಾಪುರಾಣದ "ಉಪೋದ್ಘಾತಪಾದದಲ್ಲಿ
ಚಂದ್ರೋತ್ಪತ್ತಿಕಥನ "ವೆಂಬ
ಇಪ್ಪತ್ತೆಂಟನೆಯ ಅಧ್ಯಾಯವು ಸಮಾಪ್ತವು.



ಅಧ್ಯಾಯ ೨೮

## ಇಪ್ಪತ್ತೆಂಟನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ಚಂದ್ರನ ಜನನವು ವರ್ಣಿತವಾಗಿದೆ. ಮಹಾಜ್ಞಾನಿಯೂ, ಮಹಾತ್ಮನೂ ಆದ ಅತ್ರಿಮುನಿಯು ಮನೋವಾಕ್ಕಾಯಕರ್ಮಗಳಿಂದ ಶುಭಕರ್ಮಗಳನ್ನೇ ಆಚರಿಸುತ್ತಾ, ಮೂರುಸಾವಿರ ವರ್ಷಗಳು ಘೋರತಪಸ್ಸನ್ನು ಮಾಡಿದನು. ತರುವಾಯ ಸೋಮದೇವನನ್ನು ಮನಸ್ಸಿನಲ್ಲಿ ಧ್ಯಾನಿಸಿದನು. ಆಗ ಚಂದ್ರನು ಉದಯಿಸಿ ಪ್ರಕಾಶಿಸಿದನು. ಅವನು ತನ್ನ ಕಿರಣಗಳಿಂದ ಓಷಧಿಗಳೇ ಮೊದಲಾದುವುಗಳನ್ನು ವೃದ್ಧಿಗೊಳಿಸಿ, ಓಷಧೀಶನೆಂದು ಪ್ರಖ್ಯಾತನಾಗಿ ಇಪ್ಪತ್ತೇಳುಜನ ದಾಕ್ಷಾಯಣೀಯರನ್ನು ಮದುವೆಯಾದನು. ಅವರೇ ನಕ್ಷತ್ರಗಳಾಗಿರುವರು. ಮಹಾಯಾಗವನ್ನು ಮಾಡಿ ಕೀರ್ತಿವಂತನಾದನು. ದುರದೃಷ್ಟವಶದಿಂದ ಬೃಹಸ್ಪತಿಯ ಪತ್ನಿಯಾದ ತಾರೆಯನ್ನು ಅಪಹರಿಸಿದನು. ಕೊನೆಗೆ ಬ್ರಹ್ಮದೇವನು ಆ ವಿವಾದವನ್ನು ಪರಿಹರಿಸಿದನು. ಆಗ ಅವಳು ಗರ್ಭಿಣಿಯಾಗಿ ಬುಧನೆಂಬ ಮಗನನ್ನು ಪಡೆದಳು. ಅವನಿಗೆ ಪುರೂರವಸನೆಂಬ ಕುಮಾರನು ಹುಟ್ಟಿದನು. ಅವನಿಗೆ ಊರ್ವಶಿಯಲ್ಲಿ ಐಲನೇ ಮೊದಲಾದ ಅನೇಕ ಮಕ್ಕಳು ಜನಿಸಿ, ಆ ಚಂದ್ರವಂಶವು ಅಭಿವೃದ್ಧಿಯಾಯಿತು. ಮಹರ್ಷಿಗಳ ಶಾಪದಿಂದ ಪ್ರಾಪ್ತವಾದ ಕ್ಷಯರೋಗವನ್ನು ತಂದೆಯಾದ ಅತ್ರಿ ಮಹರ್ಷಿಯು ಪರಿಹರಿಸಿದನು. ಇವೇ ಮೊದಲಾದ ವಿಷಯಗಳು ಈ ಅಧ್ಯಾಯದಲ್ಲಿ ನಿರೂಪಿತವಾಗಿವೆ.



—|| ಹರಿಃ ಓಂ ||—

—|| ಶ್ರೀ ವೇದವ್ಯಾಸಾಯ ನಮಃ ||—

# ಶ್ರೀಮದ್ವಾಯುಮಹಾಪುರಾಣಂ

## ಏಕೋನತ್ರಿಂಶೋಽಧ್ಯಾಯಃ

**|| ಸೂತ ಉವಾಚ ||**

**ಸೋಮಸ್ಯ ತು ಬುಧಃ ಪುತ್ರೋ ಬುಧಸ್ಯ ತು ಪುರೂರವಾಃ |**
**ತೇಜಸ್ವೀ ದಾನಶೀಲಶ್ಚ ಯಜ್ವಾ ವಿಪುಲದಕ್ಷಿಣಃ || ೧ ||**

**ಬ್ರಹ್ಮವಾದೀ ಪರಾಕ್ರಾಂತಃ ಶತ್ರುಭಿರ್ಯುಧಿ ದುರ್ಜಯಃ |**
**ಆಹರ್ತಾ ಚಾಗ್ನಿಹೋತ್ರಸ್ಯ ಯಜ್ವನಾಂ ಚ ದದೌ ಮಹೀಂ || ೨ ||**

**ಸತ್ಯವಾಕ್ ಕರ್ಮಬುದ್ಧಿಶ್ಚ ಕಾಂತಃ ಸಂವೃತಮೈಥುನಃ |**
**ಅತೀವ ಪುತ್ರೋ ಲೋಕೇಷು ರೂಪೇಣಾಪ್ರತಿಮೋಽಭವತ್ || ೩ ||**

## ಇಪ್ಪತ್ತೊಂಭತ್ತನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :—ಸೋಮನಿಗೆ ಬುಧನೆಂಬ ಕುಮಾರನೂ, ಆ ಬುಧನಿಗೆ ಪುರೂರವಸನೆಂಬ ಅತ್ಯಂತ ತೇಜಸ್ವಿಯೂ, ದಾನಶೂರನೂ, ಕ್ರಮವಾಗಿ ಯಾಗಮಾಡುವವನೂ, ಅತ್ಯಂತ ದ್ರವ್ಯದಾತನೂ ಆದ ಕುಮಾರನು ಉದ್ಭವಿಸಿ ಪ್ರಖ್ಯಾತನಾಗಿದ್ದರು.

೨–೩. ಆ ಪುರೂರವಸಮಹಾರಾಜನು ಬ್ರಹ್ಮಜ್ಞಾನಿಯೂ, ಅತಿಶೂರನೂ, ಶತ್ರುಗಳಿಂದ ಯುದ್ಧದಲ್ಲಿ ಜಯಿಸಲಶಕ್ಯನೂ, ಅಗ್ನಿಹೋತ್ರಪ್ರವರ್ತಕನೂ, ಯಾಗ ಮಾಡುವವರಿಗೆ ಭೂದಾನವನ್ನು ಮಾಡಿದವನೂ, ಸತ್ಯವಾದಿಯೂ, ಕರ್ಮಠನೂ, ಮನೋಹರನೂ, ಜಿತೇಂದ್ರಿಯನೂ, ಲೋಕದಲ್ಲಿರುವ ಪುತ್ರವಂತರಲ್ಲಿ ಶ್ರೇಷ್ಠನೂ, ಸೌಂದರ್ಯದಲ್ಲಿ ಅಸದೃಶನೂ, ಲೋಕವಿಖ್ಯಾತನೂ ಆಗಿದ್ದನು.

ತಂ ಬ್ರಹ್ಮವಾದಿನಂ ದಾಂತಂ ಧರ್ಮಜ್ಞಂ ಸತ್ಯವಾದಿನಂ ।
ಊರ್ವಶೀ ವರಯಾಮಾಸ ಹಿತ್ವಾ ಮಾನಂ ಯಶಸ್ವಿನೀ ॥ ೪ ॥

ತಯಾ ಸಹಾವಸದ್ರಾಜಾ ದಶವರ್ಷಾಣಿ ಚಾಷ್ಟ ಚ ।
ಸಪ್ತ ಷಟ್ ಸಪ್ತಚಾಷ್ಟೌ ಚ ದಶ ಚಾಷ್ಟೌ ಚ ವೀರ್ಯವಾನ್ ॥ ೫ ॥

ವನೇ ಚೈತ್ರರಥೇ ರಮ್ಯೇ ತಥಾ ಮಂದಾಕಿನೀತಟೇ ।
ಅಲಕಾಯಾಂ ವಿಶಾಲಾಯಾಂ ನಂದನೇ ಚ ವನೋತ್ತಮೇ ॥ ೬ ॥

ಗಂಧಮಾಧನಪಾದೇಷು ಮೇರುಶೃಂಗೇ ನಗೋತ್ತಮೇ ।
ಉತ್ತರಾಶ್ಚಂ ಕುರೂನ್ ಪ್ರಾಪ್ಯ ಕಲಾಪಗ್ರಾಮಮೇವ ಚ ॥ ೭ ॥

ಏತೇಷು ವನಮುಖ್ಯೇಷು ಸುರೈರಾಚರಿತೇಷು ಚ ।
ಉರ್ವಶ್ಯಾ ಸಹಿತೋ ರಾಜಾ ರೇಮೇ ಪರಮಯಾಮುದಾ ॥ ೮ ॥

---

೪. ಬ್ರಹ್ಮವಿಚಾರಪರನೂ, ಉದಾರಿಯೂ, ಧರ್ಮಜ್ಞನೂ, ಸತ್ಯವಾದಿಯೂ ಆದ ಆ ಪುರೂರವಸಮಹಾರಾಯನನ್ನು ಅತಿ ಕೀರ್ತಿವತಿಯಾದ ಊರ್ವಶಿಯು ತಾನು ದೇವಲೋಕದವಳೆಂಬ ಗೌರವವನ್ನೂ ಸಹ ತ್ಯಜಿಸಿ ವರಿಸಿದಳು.

೫. ಅತ್ಯಂತ ಶೂರನಾದ ಪುರೂರವಸಮಹಾರಾಜನು ಆ ಊರ್ವಶಿಯೊಡನೆ ಸುಮಾರು ನೂರಇಪ್ಪತ್ತೇಳು ವರ್ಷಗಳು ಸುಖವಾಗಿ ವಾಸಮಾಡಿದನು.

೬–೮. ಪುರೂರವಸಮಹಾರಾಜನು ಆ ಊರ್ವಶಿಯೊಡನೇ ರಮ್ಯವಾದ ಚೈತ್ರರಥವನ ಪ್ರದೇಶದಲ್ಲಿಯೂ, ಗಂಗಾತೀರದಲ್ಲಿಯೂ, ವಿಶಾಲವಾದ ಅಲಕಾ ನಗರಿಯಲ್ಲಿಯೂ, ಅತ್ಯುತ್ತಮವಾದ ನಂದನವನದಲ್ಲಿಯೂ, ಗಂಧಮಾದನ ತಪ್ಪಲು ಗಳಲ್ಲಿಯೂ, ಪರ್ವತೋತ್ತಮವಾದ ಮೇರುಗಿರಿಯ ಶಿಖರಗಳಲ್ಲಿಯೂ, ಉತ್ತರ ಕುರುದೇಶದಲ್ಲಿಯೂ, ಕಲಾಪಗ್ರಾಮದಲ್ಲಿಯೂ, ದೇವತೆಗಳು ವಿಹಾರಮಾಡುವ ಇತರ ರಮ್ಯವನಗಳಲ್ಲಿಯೂ, ಬಹುಕಾಲ ಸುಖವಾಗಿ ವಿಹರಿಸಿದನು.

|| ಋಷಯ ಊಚುಃ ||

**ಗಂಧರ್ವಾ ಚೋರ್ವಶೀ ದೇವೀ ರಾಜಾನಂ ಮಾನುಷಂ ಕಥಂ।**
**ದೇವಾನುತ್ಸೃಜ್ಯ ಸಂಪ್ರಾಪ್ತಾ ತನ್ನೋ ಬ್ರೂಹಿ ಬಹುಶ್ರುತ || ೯ ||**

|| ಸೂತ ಉವಾಚ ||

**ಬ್ರಹ್ಮಶಾಪಾಭಿಭೂತಾ ಸಾ ಮಾನುಷಂ ಸಮುಪಸ್ಥಿತಾ।**
**ಐಲಂ ತು ತಂ ವರಾರೋಹಾ ಸಮಯೇನ ವ್ಯವಸ್ಥಿತಾ || ೧೦ ||**

**ಆತ್ಮನಃ ಶಾಪಮೋಕ್ಷಾರ್ಥಂ ನಿಯಮಂ ಸಾ ಚಕಾರ ತು।**
**ಅನಗ್ನದರ್ಶನಂಚೈವ ಅಕಾಮಾತ್ ಸಹ ಮೈಥುನಂ || ೧೧ ||**

**ದ್ವೌ ಮೇಷೌ ಶಯನಾಭ್ಯಾಶೇ ಸ ತಾವದ್ವ್ಯವತಿಷ್ಠತೇ।**
**ಘೃತಮಾತ್ರಂ ತಥಾಹಾರಃ ಕಾಲಮೇಕಂತು ಪಾರ್ಥಿವ || ೧೨ ||**

---

೯. ಮಹರ್ಷಿಗಳು ಸೂತಮುನಿಯನ್ನು ಕೇಳಿದರು :—ಎಲೈ ಸೂತಮುನಿಯೇ, ಗಂಧರ್ವವಂಶಿಕಳಾದ ಊರ್ವಶೀದೇವಿಯು ದೇವಲೋಕವಾಸಿಗಳಾದ ದೇವತೆಗಳನ್ನು ಬಿಟ್ಟು ಭೂಮಿಯಲ್ಲಿರುವ ಮನುಷ್ಯನಾದ ಪುರೂರವಸುಮಹಾರಾಜನನ್ನು ಏಕೆ ವರಿಸಿದಳು. ಹೀಗೆ ವರಿಸಲು ಕಾರಣವೇನು ? ಈ ವಿಷಯಗಳನ್ನು ಜ್ಞಾನಿಗಳಾದ ತಾವು ತಿಳಿಸಬೇಕೆಂದು ಕೇಳಿದರು.

೧೦. ಸೂತಮುನಿಯು ಹೇಳಿದನು :—ಎಲೈ ವಿಪ್ರವರ್ಯರೇ, ಬ್ರಹ್ಮದೇವನ ಶಾಪಗ್ರಸ್ಥಳಾದ ಊರ್ವಶಿಯು ಮನುಷ್ಯನಾದ ಪುರೂರವಸುಮಹಾರಾಜನನ್ನು ಸಮಯದಿಂದ ವರಿಸಿದಳು ಕೊನೆಗೆ ಐಲರಾಜನನ್ನು ಪಡೆದು, ಪುತ್ರಮುಖದರ್ಶನದ ವರೆಗೂ ರಾಜನ ಸಂಗಡ ಇದ್ದು ತರುವಾಯ ಸ್ವರ್ಗಲೋಕಕ್ಕೆ ಹೋಗುವ ವರವನ್ನು ಊರ್ವಶಿಯು ಪಡೆದಿದ್ದಳು.

೧೧–೧೨. ಊರ್ವಶಿಯು ತನ್ನ ಶಾಪಮೋಕ್ಷಣೆಗಾಗಿ ಒಂದು, ಶಪಥವನ್ನು ಮಾಡಿಕೊಂಡಳು. ಅದೇನೆಂದರೆ ದಿಗಂಬರದರ್ಶನ ಇಚ್ಛೆಯಿಲ್ಲದವರೊಡನೆ ಸಂಭೋಗ, ಶಯನ ಸಮೀಪದಲ್ಲಿ ಎರಡು ಟಗರು ದರ್ಶನ, ಘೃತಪಾತ್ರದಲ್ಲಿ ಆಹಾರ, ಇವುಗಳು ಯಾವಾಗ ಉಂಟಾಗುವುದೋ ಆಗ ಎಲೈ ರಾಜನೇ ನಾನು ಭೂಮಿಯನ್ನು ತ್ಯಜಿಸಿ, ಸ್ವರ್ಗಲೋಕಕ್ಕೆ ಹೋಗುವೆನು. ಅದುವರೆಗೂ ನಿನ್ನ ಸಂಗಡ ವಾಸಿಸುವೆನೆಂದಳು.

ಯಾದ್ಯೇಷ ಸಮಯೋ ರಾಜನ್ ಯಾವತ್ಕಾಲಂ ಚ ತೇಧೃಡಂ ।
ತಾವತ್ಕಾಲಂ ತು ವತ್ಸ್ಯಾಮಿ ಏಷನಃ ಸಮಯಃ ಕೃತಃ ॥ ೧೩ ॥

ತಸ್ಯಾಸ್ತಂ ಸಮಯಂ ಸರ್ವಂ ಸ ರಾಜಾ ಪರ್ಯಪಾಲಯತ್ ।
ಏವಂ ಸಾ ಚಾವಸತ್ ತಸ್ಮಿನ್ ಪುರೂರವಸಿ ಭಾಮಿನೀ ॥ ೧೪ ॥

ವರ್ಷಾಣ್ಯಥ ಚತುಃ ಷಷ್ಟಿಂ ತದ್ಭಕ್ತ್ಯಾ ಶಾಪಮೋಹಿತಾ ।
ಊರ್ವಶೀ ಮಾನುಷಂ ಪ್ರಾಪ್ತ ಗಂಧರ್ವಾಶ್ಚಿಂತಯಾನ್ವಿತಾಃ ॥ ೧೫ ॥

॥ ಗಂಧರ್ವಾ ಊಚುಃ ॥

ಚಿಂತಯಧ್ವಂ ಮಹಾಭಾಗಾ ಯಥಾ ಸಾ ತು ವರಂಗನಾ ।
ಆಗಚ್ಛೇತ್ತು ಪುನರ್ದೇವಾನುರ್ವಶೀ ಸ್ವರ್ಗಭೂಷಣಾ ॥ ೧೬ ॥

---

೧೩. ಎಲೈ ಮಹಾರಾಜನೇ ಎಲ್ಲಿಯವರೆಗೂ ಮೇಲೆ ನಿರೂಪಿಸಿದ ಕಾರ್ಯಗಳು ನಡೆಯುವುದಿಲ್ಲವೋ, ಅಲ್ಲಿಯವರೆಗೂ ನಿನ್ನ ಸಂಗಡ ಸುಖವಾಗಿ ವಾಸಿಸುವೆನೆಂದು ಊರ್ವಶಿಯು (ಸಮಯವನ್ನು) ರಾಜನಿಗೆ ತಿಳಿಸಿದಳು.

೧೪. ಪುರೂರವಸುಮಹಾರಾಜನು ಊರ್ವಶಿಯ ಪ್ರತಿಜ್ಞೆಯನ್ನು ಅಂಗೀಕರಿಸಿ, ಹಾಗೆಯೇ ಆಗಬಹುದೆಂದನು. ನಿಯಮಾನುಸಾರ ಆ ನಾರೀಮಣಿಯು ರಾಜನೊಡನೆ ವಾಸಿಸಿದಳು.

೧೫. ಶಾಪದಿಂದ ಮೋಹಿತಳಾದ ಊರ್ವಶಿಯು, ರಾಜಭಕ್ತಿಪೂರ್ವಕವಾಗಿ ಅರವತ್ತನಾಲ್ಕು ವರ್ಷಗಳು ಮನುಷ್ಯರೂಪವನ್ನು ಪಡೆದು ರಾಜನ ಸಂಗಡ ವಾಸಿಸಿದಳು. ಆಗ ಈ ವಿಷಯವನ್ನರಿತ ಗಂಧರ್ವಾದಿ ದೇವತೆಗಳು ಚಿಂತಾಕ್ರಾಂತರಾದರು.

೧೬. ಗಂಧರ್ವರು ಪರಸ್ಪರ ಭಾಷಣಮಾಡಿದರು :—ಎಲೈ ಮಹಾನುಭಾವರೇ ಸ್ವರ್ಗಕ್ಕೆ ಭೂಷಣ ಪ್ರಾಯಳೂ, ಅತಿ ಸುಂದರಿಯೂ, ಆದ ಊರ್ವಶಿಯು ನಮ್ಮ ಸ್ವರ್ಗಕ್ಕೆ ಪುನಃ ಬರುವ ಆಲೋಚನೆಯನ್ನು ಮಾಡಿರಿ, ಎಂದು ಪರಸ್ಪರ ಸಂಭಾಷಿಸಿದರು.

ತತೋ ವಿಶ್ವಾವಸುರ್ನಾಮ ತತ್ರಾಹ ವದತಾಂ ವರಃ ।
ತಯಾ ತು ಸಮಯಸ್ತತ್ರ ಕ್ರಿಯಮಾಣೋ ಮತೋಽನಘಃ ॥ ೧೭ ॥

ಸಮಯವ್ಯುತ್ಕ್ರಮಾತ್ ಸಾ ವೈ ರಾಜಾನಂತ್ಯಕ್ಷ್ಯತೇ ಯಥಾ ।
ತದಹಂ ವಚ್ಮಿ ವಃ ಸರ್ವಂ ಯಥಾತ್ಯಕ್ಷ್ಯತಿ ಸಾ ನೃಪಂ ॥ ೧೮ ॥

ಸಹಸಾ ಯೋಗಮೇಷ್ಯಾಮಿ ಯುಷ್ಮಾಕಂ ಕಾರ್ಯಸಿದ್ಧಯೇ ।
ಏವಮುಕ್ತ್ವಾಗತಸ್ತತ್ರ ಪ್ರತಿಷ್ಠಾನಂ ಮಹಾಯಶಾಃ ॥ ೧೯ ॥

ಸ ನಿಶಾಯಾಮಥಾಗಮ್ಯ ಮೇಷಮೇಕಂ ಜಹಾರ ವೈ ।
ಮಾತೃವದ್ವರ್ತತೇ ಸಾ ತು ಮೇಷಯೋಶ್ಚಾರು ಹಾಸಿನೀ ॥ ೨೦ ॥

---

೧೭. ಆಗ ವಾಗ್ಮಿಗಳಲ್ಲಿ ಉತ್ತಮನಾದ ವಿಶ್ವಾವಸುವೆಂಬ ಗಂಧರ್ವನು ಹೀಗೆ ಹೇಳಿದನು. ಆ ಊರ್ವಶಿಯು ಭೂಮಿಯಲ್ಲಿ ವಾಸಿಸುವ ವಿಷಯದಲ್ಲಿ ಸರಿಯಾದ ನಿಯಮವನ್ನು ಮಾಡಿರುವಳು.

೧೮. ಆ ಊರ್ವಶಿಯು ತನ್ನ ಪ್ರತಿಜ್ಞೆಯನ್ನು ಪೂರೈಸಿಕೊಂಡು ಹೇಗೆ ರಾಜನನ್ನು ಬಿಟ್ಟು ಬರುವಳೋ, ಅಂತಹ ಉಪಾಯವನ್ನು ನಾನು ನಿಮಗೆ ತಿಳಿಸುವೆನು ಕೇಳಿರಿ. ಅವಳು ರಾಜನನ್ನು ತ್ಯಜಿಸಿ ಬರುವುದಕ್ಕೆ ಒಂದು ಉಪಾಯ ವನ್ನು ತಿಳಿಸಿರುವಳು.

೧೯. ನಾನು ನಿಮ್ಮ ಕಾರ್ಯ ಸಾಧನೆಗೆ ಕೂಡಲೇ ಯೋಗಮಹಿಮೆಯನ್ನು ಪಡೆಯುವೆನೆಂದು ವಿಶ್ವಾವಸುವು ಹೇಳಿ, ಮಹಾಕೀರ್ತಿವಂತನಾದ ಕಾರಣ ಅಲ್ಲಿಗೆ ಹೊರಡಲು ಸಿದ್ಧನಾದನು.

೨೦. ಅನಂತರ ವಿಶ್ವಾವಸುವು ರಾತ್ರಿಯ ಕಾಲದಲ್ಲಿ ಒಂದು ಕುರಿಯನ್ನು ಅಪಹರಿಸಿದನು. ಮಂದಹಾಸಯುಕ್ತಳಾದ ಊರ್ವಶಿಯು ಕುರಿಯ ವಿಷಯದಲ್ಲಿ ಸ್ವಕಾರ್ಯ ಸಾಧನೆಯಲ್ಲಿ ತಾಯಿಯಂತೆ ಭಾವಿಸುವಳು ಎಂದು ಹೇಳಿದನು.

ಗಂಧರ್ವಾಗಮನಂ ಜ್ಞಾತ್ವಾ ಶಯನಸ್ಥಾ ಯಶಸ್ವಿನೀ ।
ರಾಜಾನಮಬ್ರವೀತ್ ಸಾ ತು ಪುತ್ರೋ ಮೇಹ್ರಿಯತೇತಿ ವೈ ॥ ೨೧ ॥

ಏವಮುಕ್ತೋ ವಿನಿಶ್ಚಿತ್ಯ ನಗ್ನಸ್ತಿಷ್ಠತಿ ವೈ ನೃಪಃ ।
ನಗ್ನಂ ದ್ರಕ್ಷ್ಯತಿ ಮಾಂ ದೇವೀ ಸಮಯೋ ವಿತಥೋ ಭವೇತ್ ॥ ೨೨ ॥

ತತೋ ಭೂಯಸ್ತು ಗಂಧರ್ವಾ ದ್ವಿತೀಯಂ ಮೇಷಮಾದದುಃ ।
ದ್ವಿತೀಯೇಽಪಹೃತೇ ಮೇಷೇ ಐಲಂದೇವೀ ತಮಬ್ರವೀತ್ ॥ ೨೩ ॥

ಪುತ್ರೌ ಮಮ ಹೃತೌ ರಾಜಾನ್ನಾಥಾಯ ಇವ ಪ್ರಭೋ ।
ಏವಮುಕ್ತಸ್ತದೋತ್ಥಾಯ ನಗ್ನೋ ರಾಜಾ ಪ್ರಧಾವಿತಃ ॥ ೨೪ ॥

ಮೇಷಾಭ್ಯಾಂ ಪದವೀಂ ರಾಜನ್ ಗಂಧರ್ವೈರ್ಯುಕ್ತಿತಾಮಥಾ ।
ಉತ್ಪಾದಿತಾ ತು ಮಹತೀ ಮಾಯಯಾ ತದ್ಭವನಂ ಮಹತ್ ॥ ೨೫ ॥

---

೨೧. ಹಾಸಿಗೆಯಲ್ಲಿ ಪತಿಯೊಡನೇ ಮಲಗಿರುವ ಊರ್ವಶಿಯು ಗಂಧರ್ವರು ಬಂದಿರುವುದನ್ನು ತಿಳಿದು ಎಲೈ ಪ್ರಾಣಪ್ರಿಯನೇ, ನನ್ನ ಪುತ್ರನನ್ನು ಯಾರೋ ಅಪಹರಿಸಿಕೊಂಡು ಹೋಗುತ್ತಿದ್ದಾರೆ ನೋಡೆಂದು ಹೇಳಿದಳು.

೨೨. ಕೀರ್ತಿಯುತಳಾದ ಪತ್ನಿಯು ಹೇಳಲು, ಆಗ ರಾಜನು ನಗ್ನನಾಗಿದ್ದನು. ನಾನು ದಿಗಂಬರನಾಗಿ ಎದ್ದು ಹೋದರೆ ರಾಣಿಯು ನೋಡುವಳು. ಅವಳು ಮಾಡಿದ ಪ್ರತಿಜ್ಞೆಯು ವ್ಯರ್ಥವಾಗುವುದೆಂದು ಯೋಚಿಸಿದನು.

೨೩. ಅನಂತರ ಗಂಧರ್ವರು ಎರಡನೆಯ ಕುರಿಯನ್ನು ಕೂಡಲೇ ಅಪಹರಿಸಿದರು. ಆಗಲೂ ಕೂಡ ದೇವಿಯು ಐಲರಾಜನಿಗೆ ಇಂತೆಂದಳು.

೨೪. ಎಲೈ ಮಹಾರಾಜನೇ, ಅನಾಥಳಂತೆ ನನ್ನ ಇಬ್ಬರು ಮಕ್ಕಳನ್ನೂ ಯಾರೋ ಚೋರರು, ಅಪಹರಿಸುತ್ತಿರುವರೆಂದು ಪುನಃ ಹೇಳಿದಳು. ಈ ದೇವೀ ಮಾತುಗಳನ್ನು ಕೇಳಿದ ರಾಜನು ತಕ್ಷಣ ಎದ್ದು ನಗ್ನನಾಗಿ ಓಡಿಹೋದನು.

೨೫. ಆಗ ಪುರೂರವಸಮಹಾರಾಜನು ಗಂಧರ್ವರು ಕುರಿಯನ್ನು ಅಪಹರಿಸಿಕೊಂಡು ಹೋದ ಮಾರ್ಗವನ್ನು ಅನುಸರಿಸಿ ಕುರಿಗಳನ್ನು ಹುಡುಕಿಕೊಂಡುಹೋದನು. ರಾಜನ ಅರಮನೆಯಲ್ಲಿ ಇಂತಹ ಅದ್ಭುತಕಾರ್ಯಗಳು ಗಂಧರ್ವರಿಂದ ಉಂಟಾದುವು.

ಪ್ರಕಾಶಿತಂ ತು ಸಹಸಾ ತತೋಽನಗ್ನಮವೇಕ್ಷ್ಯ ಸಾ ।
ನಗ್ನಂ ದೃಷ್ಟ್ವಾ ತಿರೋಭೂತ್ವಾ ಅಪ್ಸರಾ ಕಾಮರೂಪಿಣೀ ॥ ೨೬ ॥

ತಿರೋಭೂತಂ ತು ತಾಂ ಜ್ಞಾತ್ವಾ ಗಂಧರ್ವಾಸ್ತತ್ರ ತಾವುಭೌ ।
ಮೇಷೌ ತ್ಯಕ್ತ್ವಾ ಚ ತೇ ಸರ್ವೇ ತತ್ರೈವಾಂತರ್ಹಿತಾಭವನ್ ॥ ೨೭ ॥

ಉತ್ಸೃಷ್ಟಾವುರಣೌ ದೃಷ್ಟ್ವಾ ರಾಜಾ ಗೃಹ್ಯಾಗತಃ ಪ್ರಭುಃ ।
ಅಪಶ್ಯಂಸ್ತಾಂ ತು ವೈ ರಾಜಾ ವಿಲಲಾಪ ಸುದುಃಖಿತಃ ॥ ೨೮ ॥

ಚಚಾರ ಪೃಥಿವೀಂ ಚೈವ ಮಾರ್ಗಮಾಣಸ್ತತಸ್ತತಃ ।
ಅಥಾಪಶ್ಯಚ್ಚ ತಾಂ ರಾಜಾ ಕುರುಕ್ಷೇತ್ರೇ ಮಹಾಬಲಃ ॥ ೨೯ ॥

ಪ್ಲಕ್ಷತೀರ್ಥೇ ಪುಷ್ಕರಿಣ್ಯಾಂ ವಿಗಾಢೇನಾಂಬುನಾಪ್ಲುತಾಂ ।
ಕ್ರೀಡಂತೀಮಪ್ಸರೋಭಿಶ್ಚ ಪಂಚಭಿಃ ಸಹ ಶೋಭನಾಂ ॥ ೩೦ ॥

---

೨೬. ಹೀಗೆ ಅಪ್ರತ್ಯಕ್ಷಕಾರ್ಯವು ನಡೆಯಲು ಊರ್ವಶಿಯು ನಗ್ನನಾಗಿರುವ ರಾಜನನ್ನು ಕಂಡಳು. ಸ್ವೇಚ್ಛಾರೂಪಿಯೂ, ಅಪ್ಸರಸಿಯೂ ಆದ ಊರ್ವಶಿಯು ದಿಗಂಬರನಾದ ಪುರೂರವಸುಮಹಾರಾಜನನ್ನು ನೋಡಿ ಮಾಯವಾದಳು.

೨೭. ಅನಂತರ ಊರ್ವಶಿಯು ಮಾಯವಾದದ್ದನ್ನು ನೋಡಿ, ಗಂಧರ್ವರೆಲ್ಲರೂ ಆ ಎರಡು ಟಗರುಗಳನ್ನೂ ತ್ಯಜಿಸಿ ಅಲ್ಲಿಯೇ ಮಾಯವಾದರು.

೨೮. ಅನಂತರ ರಾಜನು ಬಿಟ್ಟಿರುವ ಆ ಎರಡು ಕುರಿಗಳನ್ನು ನೋಡಿ ಹಿಡಿದುಕೊಂಡು ಬಂದನು. ಅಲ್ಲಿ ಊರ್ವಶಿಯು ಇಲ್ಲದಿರುವುದನ್ನು ತಿಳಿದು ರಾಜನು ಬಹಳವಾಗಿ ಪ್ರಲಾಪಿಸಿದನು.

೨೯. ಅನಂತರ ರಾಜನು ಊರ್ವಶಿಯನ್ನು ಹುಡುಕುತ್ತಾ, ಭೂಮಿಯಲ್ಲಿ ಸಂಚರಿಸಿದನು. ಆದರೂ ಶೂರನಾದ ರಾಜನು ಕುರುಕ್ಷೇತ್ರದಲ್ಲಿ ಊರ್ವಶಿಯನ್ನು ಕಾಣಲಿಲ್ಲ.

೩೦. ಅನಂತರ ರಾಜನು ಪ್ಲಕ್ಷತೀರ್ಥದ ಪುಷ್ಕರಿಣಿಯಲ್ಲಿ ಐದುಜನ ಸಖಿಯರೊಡನೆ ಜಲಕ್ರೀಡೆಯನ್ನು ಆಡುತ್ತಿರುವ ಶೋಭನಾಂಗಿಯಾದ ಊರ್ವಶಿಯನ್ನು ನೋಡಿದನು.

ಅಪಶ್ಯತ್ಸಾ ತತಃ ಸುಭ್ರೂ ರಾಜಾನಮವಿದೂರತಃ ।
ಊರ್ವಶೀ ತಾಃ ಸಖೀಃ ಪ್ರಾಹ ಅಯಂ ಸ ಪುರುಷೋತ್ತಮಃ ॥ ೩೧ ॥

ಯಸ್ಮಿನ್ನಹಮವಾತ್ಸಂ ಹಿ ದರ್ಶಯಾಮಾಸ ತಂ ನೃಪಂ ।
ತತ ಆವಿರ್ಬಭೂವಸ್ತಾಃ ಪಂಚಚೂಡಾಪ್ಸರಾಸ್ತು ತಾಃ ॥ ೩೨ ॥

ದೃಷ್ಟ್ವಾ ತು ರಾಜಾ ತಾಂ ಪ್ರೀತಃ ಪ್ರಲಾಪಾನ್ ಕುರುತೇ ಬಹೂನ್ ।
ಆಯಾಹಿ ತಿಷ್ಠ ಮನಸಾ ಘೋರೇ ವಚಸಿ ತಿಷ್ಠ ಹೇ ॥ ೩೩ ॥

ಏವಮಾದೀನಿ ಸೂಕ್ತಾಣಿ ಪರಸ್ಪರಮಭಾಷತ ।
ಊರ್ವಶೀತ್ವಬ್ರವೀಚ್ಚೈಲಂ ಸಗರ್ಭಾಹಂ ತ್ವಯಾ ಪ್ರಭೋ ॥ ೩೪ ॥

---

೩೧. ಆ ಸುಂದರಿಯಾದ ಊರ್ವಶಿಯು, ಸಮೀಪದಲ್ಲಿಯೇ ರಾಜನನ್ನು ನೋಡಿ, ತನ್ನ ಸಖಿಯರನ್ನು ಕುರಿತು ಪುರುಷಶ್ರೇಷ್ಠನಾದ ಇವನೇ ಪುರೂರವಸು ಮಹಾರಾಜನಾಗಿರುವನು ಎಂದು ಹೇಳಿದಳು.

೩೨. ಎಲೌ ಸಖಿಯರೇ, ನಾನು ಇದುವರೆಗೂ ಯಾವ ಮಹಾರಾಜನಲ್ಲಿ ವಾಸಮಾಡಿದೆನೋ, ಅವನೇ ಈ ಮಹಾರಾಜನಾಗಿರುವನು. ಅನಂತರ ಪಂಚಚೂಡರೆಂಬ ಅಪ್ಸರಸಿಯರು ರಾಜನ ಎದುರಿಗೆ ಪ್ರತ್ಯಕ್ಷವಾಗಿ ತೋರಿದರು.

೩೩. ಅನಂತರ ಅವಳನ್ನು ನೋಡಿ ಪ್ರೀತನಾದ ಮಹಾರಾಜನು ಅವಳೊಡನೆ ಬಹಳವಾಗಿ ಮಾತನಾಡಿದನು. ಎಲೈ ಪ್ರಿಯಳೇ, ನನ್ನ ಬಳಿಗೆ ಬಾ, ಹೀಗೆ ವಂಚಿಸಬಹುದೇ ? ಇತ್ಯಾದಿ ಕಠಿಣೋಕ್ತಿಗಳನ್ನು ಆಡಿದನು.

೩೪. ಅನಂತರ ಅವರಿಬ್ಬರಿಗೂ ಪರಮ ರಹಸ್ಯವಾದ ಸಂಭಾಷಣೆಗಳಾದುವು. ಆಗ ಊರ್ವಶಿಯು ಎಲೈ ಪ್ರಿಯನೇ, ನಾನು ಈಗ ಗರ್ಭವತಿಯಾಗಿರುವೆನು. ಈ ಗರ್ಭವು ನಿನ್ನದೇ ಆಗಿದೆಯೆಂದಳು.

ಸಂವತ್ಸರಾತ್ ಕುಮಾರಾಸ್ತೇ ಭವಿತಾ ನೈವ ಸಂಶಯಃ ।
ನಿಶಾಮೇಕಾಂ ತು ವೈ ರಾಜಾ ಹ್ಯವಸತ್ತು ತಯಾ ಸಹ ॥ ೩೫ ॥

ಸಂಪ್ರಹೃಷ್ಟೋ ಜಗಾಮಾಥ ಸ್ವಪುರಂ ತು ಮಹಾಯಶಾಃ ।
ಗತೇ ಸಂವತ್ಸರೇ ರಾಜಾ ಊರ್ವಶೀಂ ಪುನರಾಗಮತ್ ॥ ೩೬ ॥

ಉಷಿತ್ವಾ ತು ತಯಾ ಸಾರ್ದ್ಧಮೇಕರಾತ್ರಂ ಮಹಾಮನಾಃ ।
ಕಾಮಾರ್ತಶ್ಚಾಬ್ರವೀದ್ಧೀನೋ ಭವನಿತ್ಯ ಮಮೇತಿ ವೈ ॥ ೩೭ ॥

ಊರ್ವಶ್ಯಥಾಬ್ರವೀಚ್ಛೈಲಂ ಗಂಧರ್ವಾಸ್ತೇ ವರಂದದುಃ ।
ತಂ ವೃಣೀಷ್ವ ಮಹಾರಾಜ ಬ್ರೂಹಿ ಚೈತಾಂಸ್ತ್ವಮೇವ ಹಿ ॥ ೩೮ ॥

---

೩೫. ಎಲೈ ಪ್ರಭುವೇ, ಇನ್ನೊಂದು ವರ್ಷದೊಳಗೆ ನಿನಗೆ ಉತ್ತಮನಾದ ಸುಪುತ್ರನು ಜನಿಸುವನು. ಎಂದು ಹೇಳಿ ರಾಜನೊಡನೆ ಆ ರಾತ್ರಿಯನ್ನು ಸುಖವಾಗಿ ಕಳೆದಳು.

೩೬. ಅನಂತರ ಮಹಾರಾಜನು ಬಹಳವಾಗಿ ಪ್ರೀತನಾಗಿ ತನ್ನ ನಗರಕ್ಕೆ ಹೋದನು. ಹೀಗೆ ಒಂದು ವರ್ಷವು ಕಳೆಯಲು, ಊರ್ವಶಿಯು ಪುನಃ ಆ ರಾಜನ ಬಳಿಗೆ ಬಂದು ವಾಸಿಸಿದಳು.

೩೭. ಮಹಾನುಭಾವನೂ ಕೀರ್ತಿವಂತನೂ ಆದ ಮಹಾರಾಜನು ಒಂದೂವರೆ ದಿವಸ ಅವಳೊಡನೆ ವಾಸಿಸಿ, ಎಲೌ ಸುಂದರಿ, ನೀನು ನಿತ್ಯವೂ ನನ್ನ ಸಂಗಡವೇ ವಾಸಮಾಡೆಂದು ಬೇಡಿದನು.

೩೮. ಎಲೈ ಮಹಾರಾಜನೇ, ಗಂಧರ್ವರು ನಿನ್ನ ವಿಷಯದಲ್ಲಿ ಪ್ರೀತರಾಗಿ ವರವನ್ನು ಕೊಡುವರು. ನೀನು ಅವರಿಂದ ಬೇಕಾಗುವ ವರಗಳನ್ನು ಬೇಡಿಕೋ ಎಂದು ಹೇಳಿದಳು.

ವೃಣೇ ನಿತ್ಯಂ ಹಿ ಸಾಲೋಕ್ಯಂ ಗಂಧರ್ವಾಣಾಂ ಮಹಾತ್ಮನಾಂ ।
ತಥೇತ್ಯುಕ್ತ್ವಾ ವರಂ ವವ್ರೇ ಗಂಧರ್ವಾಶ್ಚ ತಥಾಸ್ತ್ವಿತಿ ॥ ೩೯ ॥

ಸ್ಥಾಲೀಮಗ್ನೇಃ ಪೂರಯಿತ್ವಾ ಗಂಧರ್ವಾಶ್ಚ ತಮಬ್ರುವನ್ ।
ಅನೇನ ಇಷ್ಟ್ವಾ ಲೋಕಾಂತಂ ಪ್ರಾಪ್ಸ್ಯಸಿ ತ್ವಂ ನರಾಧಿಪ ॥ ೪೦ ॥

ತಮಾದಾಯ ಕುಮಾರಂ ತು ನಗರಾಯೋಪಚಕ್ರಮೇ ।
ನಿಕ್ಷಿಪ್ಯ ತಮರಣ್ಯಾಂ ಚ ಸ ಪುತ್ರಂ ತು ಗೃಹಂ ಯಯೌ ॥ ೪೧ ॥

ಪುನರಾದಾಯ ದೃಶ್ಯಾಗ್ನಿಮಶ್ವತ್ಥಂ ತತ್ರ ದೃಷ್ಟವಾನ್ ।
ಸಮೀಪತಸ್ತು ತಂ ದೃಷ್ಟ್ವಾ ಹ್ಯಶ್ವತ್ಥಂ ತತ್ರ ವಿಸ್ಮಿತಃ ॥ ೪೨ ॥

---

೩೯. ತರುವಾಯ ಮಹಾರಾಜನು ಮಹಾತ್ಮರಾದ ಗಂಧರ್ವರ ಸಾಲೋಕ್ಯವು ತನಗೆ ಬೇಕೆಂದು ವರವನ್ನು ಪ್ರಾರ್ಥಿಸಿದನು. ಆಗ ಗಂಧರ್ವರು ಹಾಗೆಯೇ ಆಗ ಬಹುದೆಂದು ವರವನ್ನು ಕೊಟ್ಟರು.

೪೦. ಅನಂತರ ಗಂಧರ್ವರು ಒಂದು ಪಾತ್ರೆಯಲ್ಲಿ ಅಗ್ನಿಯನ್ನು ತುಂಬಿ, ಎಲೈ ರಾಜನೇ, ಈ ಅಗ್ನಿಯಿಂದ ನೀನು ಯಾಗವನ್ನು ಮಾಡು. ನಿನಗೆ ಉತ್ತಮವಾದ ಪರಮಪದವಿಯು ದೊರಕುವುದು ಎಂದು ರಾಜನಿಗೆ ಹೇಳಿ, ಮಗನನ್ನೂ, ಅಗ್ನಿಯನ್ನೂ ಕೊಟ್ಟರು.

೪೧. ಪುರೂರವಸಮಹಾರಾಯನು ಹೀಗೆ ಗಂಧರ್ವರಿಂದ ವರವನ್ನು ಪಡೆದು ಕುಮಾರನೊಡನೆ ಅಗ್ನಿಯನ್ನು ಸ್ವೀಕರಿಸಿ, ಊರಿಗೆ ಹೋಗಿ ಅಗ್ನಿಯನ್ನು ಅರಣಿಯಲ್ಲಿಟ್ಟು ಪುತ್ರನನ್ನು ಅರಮನೆಗೆ ಕರೆದುಕೊಂಡು ಹೋದನು.

೪೨. ತರುವಾಯ ರಾಜನು ದೃಶ್ಯಾಗ್ನಿಯನ್ನು ತೆಗೆದುಕೊಂಡು ಬರುವಲ್ಲಿ ಅಲ್ಲಿದ್ದ ಅಶ್ವತ್ಥವೃಕ್ಷರಾಜನನ್ನು ನೋಡಿದನು. ಸಮೀಪದಲ್ಲಿದ್ದ ಅಶ್ವತ್ಥವನ್ನು ನೋಡಿ ರಾಜನಿಗೆ ಬಹಳಾಶ್ಚರ್ಯವುಂಟಾಯಿತು.

ಗಂಧರ್ವೇಭ್ಯಸ್ತಥಾಖ್ಯಾತುಮಗ್ನಿನಾ ಗಾಂ ಗತಸ್ತು ಸಃ ।
ಶ್ರುತ್ವಾ ತಮರ್ಥಮಖಿಲಮರಣಿಂ ತು ಸಮಾದಿಶತ್ ॥ ೪೩ ॥

ಅಶ್ವತ್ಥಾದರಣಿಂ ಕೃತ್ವಾ ಮಥಿತ್ವಾಗ್ನಿಂ ಯಥಾವಿಧಿ ।
ತೇನೇಷ್ಟ್ವಾ ತು ಸಲೋಕಂ ನಃ ಪ್ರಾಪ್ಸ್ಯಸಿ ತ್ವಂ ನರಾಧಿಪ ॥
ಮಥಿತ್ವಾಗ್ನಿಂ ತ್ರಿಧಾ ಕೃತ್ವಾ ಹ್ಯಯಜತ್ಸ ನರಾಧಿಪ ॥ ೪೪ ॥

ಇಷ್ಟ್ವಾ ಯಜ್ಞೈರ್ಬಹುವಿಧೈರ್ಗತಸ್ತೇಷಾಂ ಸ ಲೋಕತಾಂ ।
ವಾಸಾಯ ಚ ಸ ಗಂಧರ್ವಸ್ತ್ರೇತಾಯಾಂ ಸ ಮಹಾರಥಃ ॥
ಏಕೋಽಗ್ನಿಃ ಪೂರ್ವಮಾಸಿದ್ವೈ ಐಲಸ್ತ್ರೀಂಸ್ತಾನಕಲ್ಪಯತ್ ॥ ೪೫ ॥

ಏವಂ ಪ್ರಭಾವೋ ರಾಜಾಸೀದೈಲಸ್ತು ದ್ವಿಜಸತ್ತಮಾಃ ।
ದೇಶೇ ಪುಣ್ಯತಮೇ ಚೈವ ಮಹರ್ಷಿಭಿರಲಂಕೃತೇ ॥ ೪೬ ॥

೪೩. ಗಂಧರ್ವರ ಅಭಿಪ್ರಾಯವನ್ನು ತಿಳಿಸುವುದಕ್ಕಾಗಿ, ಯಜ್ಞಪುರುಷನೇ ಪ್ರತ್ಯಕ್ಷವಾಗಿ ಬಂದಿರುವನೆಂದು ತಿಳಿದು ವಿಷಯಗಳನ್ನು ಸಮಾಲೋಚಿಸಿ ಋತ್ವಿಕ್ಕುಗಳಿಗೆ (ಪುರೋಹಿತರಿಗೆ) ಆಜ್ಞಾಪಿಸಿದನು.

೪೪. ಎಲೈ ಮಹಾರಾಜನೇ, ಅಶ್ವತ್ಥವೃಕ್ಷದಿಂದ ಅರಣಿಯನ್ನು ಮಾಡಿ ಅದನ್ನು ವಿಧ್ಯುಕ್ತಕ್ರಮವಾಗಿ ಮಥನಮಾಡಿ ಬಂದ ಅಗ್ನಿಯಿಂದ ಸರಿಯಾಗಿ ಯಾಗವನ್ನು ಮಾಡಿದರೆ ನಮ್ಮ ಗಂಧರ್ವಲೋಕವು ಪ್ರಾಪ್ತವಾಗುವುದೆಂದು ಹೇಳಿದರು. ಅದರಂತೆ ರಾಯನು ಅಗ್ನಿಯನ್ನು ಮೂರು ಭಾಗಮಾಡಿ ಯಾಗವನ್ನು ಮಾಡಿದನು.

೪೫. ಮಹಾರಥಿಕನಾದ ಮಹಾರಾಜನು ಅನೇಕ ವಿಧಗಳಾದ ಯಾಗಗಳಿಂದ ದೇವತೆಗಳನ್ನು ಪ್ರೀತಿಸಿ, ವಾಸಕ್ಕಾಗಿ ಗಂಧರ್ವಲೋಕಕ್ಕೆ ತ್ರೇತಾಯುಗದಲ್ಲಿ ಹೋದನು. ಮೊದಲು ಒಂದೇ ಅಗ್ನಿಯು ಇತ್ತು. ತ್ರೇತಾಯುಗದಲ್ಲಿ ಐಲಮಹಾರಾಜನು ಆ ಅಗ್ನಿಯನ್ನು ಮೂರು ಭಾಗಮಾಡಿದನು. ಅಂದಿನಿಂದ ಅಗ್ನಿತ್ರಯಗಳಾಗಿವೆ.

೪೬–೪೭. ಎಲೈ ದ್ವಿಜವರ್ಯರೇ, ಈ ರೀತಿಯಾಗಿ ಮಹಾಕೀರ್ತಿವಂತನೂ, ಮಹಿಮೆಯುಳ್ಳವನೂ ಆದ ಪುರೂರುವಸಮಹಾರಾಜನು ಹೀಗೆ ಪ್ರಭಾವಶಾಲಿಯಾಗಿ

ರಾಜ್ಯಂ ಸ ಕಾರಯಾಮಾಸ ಪ್ರಯಾಗೇ ಪೃಥಿವೀಪತಿಃ ।
ಉತ್ತರೇ ಯಾಮುನೇ ತೀರೇ ಪ್ರತಿಷ್ಠಾನೇ ಮಹಾಯಶಾಃ ॥ ೪೭ ॥

ತಸ್ಯ ಪುತ್ರಾ ಬಭೂವುರ್ಹಿ ಷಡಿಂದ್ರೋಪಮತೇಜಸಃ ।
ಗಂಧರ್ವಲೋಕೇ ವಿದಿತಾ ಆಯುರ್ಧೀಮಾನಮಾವಸುಃ ॥ ೪೮ ॥

ವಿಶ್ವಾಯುಶ್ಚ ಶತಾಯುಶ್ಚ ಗತಾಯುಶ್ಚೋರ್ವಶೀಸುತಾಃ ।
ಅಮಾವಸೋಸ್ತು ವೈ ಜಾತೋ ಭೀಮೋ ರಾಜಾಥ ವಿಶ್ವಜಿತ್ ॥ ೪೯ ॥

ಶ್ರೀಮಾನ್ ಭೀಮಸ್ಯ ದಾಯಾದೋ ರಾಜಾಸೀತ್ಕಾಂಚನಪ್ರಭಃ ।
ವಿದ್ವಾಂಸ್ತು ಕಾಂಚನಸ್ಯಾಪಿ ಸುಹೋತ್ರೋಭೂನ್ಮಹಾಬಲಃ ॥ ೫೦ ॥

ಸುಹೋತ್ರಸ್ಯಾಭವಜ್ಜಹ್ನುಃ ಕೇಶಿಕಾಗರ್ಭಸಂಭವಃ ।
ಪ್ರತಿಗತ್ಯ ತತೋ ಗಂಗಾ ವಿತತೇ ಯಜ್ಞಕರ್ಮಣಿ ॥ ೫೧ ॥

---

ಅತ್ಯಂತ ಪುಣ್ಯಕರವೂ, ಮಹರ್ಷಿಗಳಿಂದ ಅಲಂಕೃತವೂ, ಉತ್ತರ ಯಮುನಾ ನದಿಯ ತೀರಗತವೂ, ಪ್ರಯಾಗಕ್ಷೇತ್ರಗತವೂ ಆದ ದೇಶದಲ್ಲಿ ರಾಜ್ಯವನ್ನು ಆಳಿದನು.

೪೮–೪೯. ಆ ಐಲಮಹಾರಾಯನಿಗೆ ಇಂದ್ರನಿಗೆ ಸಮಾನ ತೇಜಸ್ವಿಗಳೂ, ಗಂಧರ್ವಲೋಕದಲ್ಲಿ ವಿಖ್ಯಾತರೂ ಆದ ಆರು ಜನ ಮಕ್ಕಳು ಇದ್ದರು. ಅವರು ಧೀಮಂತ, ಅಮಾವಸು, ವಿಶ್ವಾಯುಸ್ಸು, ಶತಾಯುಷ, ಗತಾಯುಷರೆಂಬ ನಾಮದಿಂದ ಸುಪ್ರಸಿದ್ಧರಾಗಿದ್ದರು. ಅವರು ಊರ್ವಶಿಯ ಪುತ್ರರಾಗಿದ್ದರು. ಅವರಲ್ಲಿ ಅಮಾವಸುವಿಗೆ ಜಗತ್ತನ್ನೇ ಜಯಿಸಿರುವ ಭೀಮನೆಂಬ ರಾಜನು ಹುಟ್ಟಿದನು.

೫೦. ಶ್ರೀಮಂತನಾದ ಭೀಮರಾಜನಿಗೆ ಕಾಂಚನಪ್ರಭನೆಂಬ ಕುಮಾರನು ಜನಿಸಿದನು. ಆ ಕಾಂಚನಪ್ರಭರಾಜನಿಗೆ ವಿದ್ವಾಂಸನೂ, ಮಹಾಬಲಶಾಲಿಯೂ ಆದ ಸುಹೋತ್ರನೆಂಬ ಪುತ್ರನು ಉದ್ಭವಿಸಿದನು.

೫೧. ಆ ಸುಹೋತ್ರನಿಗೆ ಕೇಶಿಕೆಯೆಂಬ ಪತ್ನಿಯಲ್ಲಿ ಜಹ್ನುನಾಮಕ ರಾಜರ್ಷಿಯು ಉತ್ಪನ್ನನಾದನು. ಅವನು ಮಹಾಯಾಗವನ್ನು ಮಾಡಿದನು. ಆಗ ಗಂಗಾದೇವಿಯು ಆ ಯಜ್ಞವಾಟವನ್ನು ಜಲಮಯವನ್ನಾಗಿ ಮಾಡಿದಳು.

ಪ್ಲಾವಯಾಮಾಸ ತಂ ದೇಶಂ ಭಾವಿನೋರ್ಥಸ್ಯ ದರ್ಶನಾತ್ ।
ಗಂಗಯಾ ಪ್ಲಾವಿತಂ ದೃಷ್ಟ್ವಾ ಯಜ್ಞವಾಟಂ ಸಮಂತತಃ ॥ ೫೨ ॥

ಸೌಹೋತ್ರಿರ್ವರದಃ ಕ್ರುದ್ಧೋ ಗಂಗಾಂ ಸಂರಕ್ತಲೋಚನಃ ।
ಅಸ್ಯ ಗಂಗೇವಲೇಪಸ್ಯ ಸದ್ಯಃ ಫಲಮವಾಪ್ನು ಹಿ ॥ ೫೩ ॥

ಏತತ್ತೇ ವಿಫುಲಂ ಸರ್ವಂ ಪೀತಮಂಭಃ ಕರೋಮ್ಯಹಂ ।
ರಾಜರ್ಷಿಣಾ ತತಃ ಪೀತಾಂ ಗಂಗಾಂ ದೃಷ್ಟ್ವಾ ಸುರರ್ಷಯಃ ॥ ೫೪ ॥

ಉಪನಿನ್ಯುರ್ಮಹಾಭಾಗಾ ದುಹಿತೃತ್ವೇನ ಜಾಹ್ನವೀಂ ।
ಯೌವನಾಶ್ವಸ್ಯ ಪೌತ್ರೀಂ ತು ಕಾವೇರೀಂಜಹ್ನುರಾವಹತ್ ॥ ೫೫ ॥

೫೨. ಹೀಗೆ ಗಂಗಾದೇವಿಯು ಮುಂದೆ ನಡೆಯಬೇಕಾದ ಮಹತ್ಕಾರ್ಯಕ್ಕಾಗಿ ಜಹ್ನುವಿನ ಯಜ್ಞವಾಟವನ್ನು ಜಲದಿಂದ ಪೂರ್ಣಮಾಡಿದಳು. ಆಗ ಯಜ್ಞವಾಟವು ಜಲಮಯವಾಗಲು ರಾಜನು ಬಹಳವಾಗಿ ಕುಪಿತನಾಗಿ ಗಂಗೆಗೆ ಇಂತೆಂದನು.

೫೩. ತರುವಾಯ ವರಪ್ರದನೂ, ಕ್ರೋಧದಿಂದ ರಕ್ತಲೋಚನನೂ, ಸುಹೋತ್ರನ ಕುಮಾರನೂ ಆದ ಜಹ್ನುಮುನಿಯು ಎಲೌ ಗಂಗೆಯೇ, ಈ ಗರ್ವದ ಫಲವನ್ನು ಸಧ್ಯದಲ್ಲಿಯೇ ಹೊಂದುತ್ತೀಯೆ, ಎಂದು ಹೇಳಿದನು.

೫೪. ಎಲೌ ಗಂಗಾದೇವಿಯೇ, ಈ ನಿನ್ನ ಪ್ರಯತ್ನವೆಲ್ಲವನ್ನೂ ವ್ಯರ್ಥವನ್ನಾಗಿಮಾಡುವೆನೆಂದು ಹೇಳಿ, ಗಂಗಾಜಲವನ್ನು ತನ್ನ ಶಕ್ತಿಯಿಂದ ಪಾನಮಾಡಿದನು. ಹೀಗೆ ಜಲಪಾನದಿಂದ ಗಂಗೆಯು ಅದೃಶ್ಯಳಾಗಲು, ದೇವತೆಗಳು, ಮಹರ್ಷಿಗಳು, ರಾಜರ್ಷಿಯನ್ನು ಬಹಳವಾಗಿ ಪ್ರಾರ್ಥಿಸಿಕೊಂಡರು.

೫೫. ತರುವಾಯ ದೇವಾದಿಗಳು, ಎಲೈ ರಾಜರ್ಷಿಯೇ, ನೀನು ಈ ಗಂಗಾದೇವಿಯನ್ನು ಪುತ್ರಿಯೆಂದು ಭಾವಿಸಿ ರಕ್ಷಿಸಬೇಕೆಂದು ಬೇಡಿದರು. ಆಗ ರಾಜರ್ಷಿಯು ಗಂಗೆಯನ್ನು ಕಿವಿಯಿಂದ ಹೊರಗೆ ಬಿಟ್ಟನು. ಅದರಿಂದ ಗಂಗೆಗೆ ಜಾಹ್ನವಿಯೆಂಬ ನಾಮವು ಪ್ರಖ್ಯಾತವಾಗಿದೆ. ತರುವಾಯ ಮಹರ್ಷಿಯು ಯೌವನಾಶ್ವನ ಪುತ್ರಿಯಾದ ಕಾವೇರಿಯನ್ನು ಮದುವೆಯಾದನು.

ಯುವನಾಶ್ವಸ್ಯ ಶಾಪೇನ ಗಂಗಾ ಯೇನ ವಿನಿರ್ಮಗಮೇ ।
ಕಾವೇರೀಂ ಸರಿತಾಂ ಶ್ರೇಷ್ಠಾ ಜಹ್ನುಭಾರ್ಯಾಮನುನಿಂದಿತಾಂ ॥ ೫೬ ॥

ಜಹ್ನುಶ್ಚ ದಯಿತಂ ಪುತ್ರಂ ಸುಹೋತ್ರಂ ನಾಮ ಧಾರ್ಮಿಕಂ ।
ಕಾವೇರ್ಯಾಂ ಜನಯಾಮಾಸ ಅಜಕಸ್ತಸ್ಯ ಚಾತ್ಮಜಃ ॥ ೫೭ ॥

ಅಜಕಸ್ಯ ತು ದಾಯಾದೋ ಬಲಾಕಾಶ್ವೋ ಮಹಾಯಶಾಃ ।
ಬಭೂವಶ್ಚ ಗಯಃ ಶೀಲಃ ಕುಶಸ್ತಸ್ಯಾತ್ಮಜಃ ಸ್ಮೃತಃ ॥ ೫೮ ॥

ಕುಶಪುತ್ರಾ ಬಭೂವ್ರುಶ್ಚ ಚತ್ವಾರೋ ವೇದವರ್ಚಸಃ ।
ಕುಶಾಶ್ವಃ ಕುಶನಾಭಶ್ಚ ಅಮೂರ್ತಾರಯಶೋವಸುಃ ॥ ೫೯ ॥

ಕುಶಸ್ತಂಬಸ್ತಪಸ್ತೇಪೇ ಪುತ್ರಾರ್ಥೀ ರಾಜಸತ್ತಮಃ ।
ಪೂರ್ಣೇ ವರ್ಷಸಹಸ್ರೇ ವೈ ಶತಕ್ರತುಮಪಶ್ಯತ ॥ ೬೦ ॥

---

೫೬. ಯುವನಾಶ್ವನ ಶಾಪದಿಂದ ಗಂಗಾದೇವಿಗೆ ಈ ಅವಸ್ಥೆಯು ಪ್ರಾಪ್ತವಾಗಿರುತ್ತದೆ. ಜಹ್ನುಮುನಿಯ ಭಾರ್ಯೆಯಾದ ಕಾವೇರಿಯು ಸರಿತ್ತುಗಳಲ್ಲಿ ಉತ್ತಮಳೆಂದೂ, ನಿರ್ದೋಷಿಯೆಂದೂ ಲೋಕವಿಖ್ಯಾತಳಾದಳು.

೫೭. ಆ ಜಹ್ನುರಾಜನಿಗೆ ಕಾವೇರಿಯಲ್ಲಿ ಸುಹೋತ್ರನೆಂಬ ಕುಮಾರನು ಜನಿಸಿದನು. ಅವನು ಬಹಳ ಧಾರ್ಮಿಕನೂ ಸುಪ್ರಸಿದ್ಧನೂ ಆಗಿದ್ದನು. ಅವನಿಗೆ ಅಜಕನೆಂಬ ಕುಮಾರನು ಹುಟ್ಟಿದನು.

೫೮. ಆ ಅಜಕಮಹಾರಾಜನಿಗೆ ಅತಿಕೀರ್ತಿವಂತನಾದ ಬಲಾಕಾಶ್ವನೆಂಬ ಪುತ್ರನೂ, ಅವನಿಗೆ ಗಯನೆಂಬ ಸುತನೂ, ಆ ಗಯಮಹಾರಾಜನಿಗೆ ಕುಶನೆಂಬ ರಾಜಕುಮಾರನೂ ಜನಿಸಿದರು.

೫೯. ಆ ಕುಶನಿಗೆ ಮಹಾತೇಜಸ್ವಿಗಳಾದ ಕುಶಾಶ್ವ, ಕುಶನಾಭ, ಅಮೂರ್ತಾರ, ಯಶೋವಸು ಎಂದು ನಾಲ್ವರು ಸುಪ್ರಸಿದ್ಧರಾದ ಕುಮಾರರು ಹುಟ್ಟಿದರು.

೬೦. ಅವರಲ್ಲಿ ನೃಪೋತ್ತಮನಾದ ಕುಶಸ್ತಂಭನಿಗೆ ಸಂತಾನವಿಲ್ಲದಿರುವುದರಿಂದ ವಂಶೋತ್ಪತ್ತಿಗಾಗಿ ಒಂದು ಸಹಸ್ರ ವರ್ಷಗಳು ಘೋರವಾದ ತಪಸ್ಸನ್ನು ಮಾಡಿದನು. ಕೊನೆಯಲ್ಲಿ ದೇವೇಂದ್ರನು ಬಂದು ಅವನನ್ನು ನೋಡಿದನು.

ತಮುಗ್ರತಪಸಂ ದೃಷ್ಟ್ವಾ ಸಹಸ್ರಾಕ್ಷಃ ಪುರಂದರಃ ।
ಸಮರ್ಥಃ ಪುತ್ರಜನನೇ ಸ್ವಯಮೇವಾಸ್ಯ ಶಾಶ್ವತಃ ॥ ೬೧ ॥

ಪುತ್ರತ್ವಂ ಕಲ್ಪಯಾಮಾಸ ಸ್ವಯಮೇವ ಪುರಂದರಃ ।
ಗಾಧಿರ್ನಾಮಾಭವತ್ಪುತ್ರಃ ಕೌಶಿಕಃ ಪಾಕಶಾಸನಃ ॥ ೬೨ ॥

ಪೌರುಕುತ್ಸಾಭವದ್ಭಾರ್ಯಾ ಗಾಧಿಸ್ತಸ್ಯಾಮಜಾಯತ ।
ಪೂರ್ವಂ ಕನ್ಯಾಂ ಮಹಾಭಾಗಾಂ ನಾಮ್ನಾ ಸತ್ಯವತೀಂ ಶುಭಾಂ ।
ತಾಂ ಗಾಧಿಃ ಪುತ್ರಃ ಕಾವ್ಯಾಯ ಋಚೀಕಾಯ ದದೌ ಪ್ರಭುಃ ॥ ೬೩ ॥

ತಸ್ಯಾಂ ಪುತ್ರಸ್ತು ವೈ ಭರ್ತಾ ಭಾರ್ಗವೋ ಭೃಗುನಂದನಃ ।
ಪುತ್ರಾರ್ಥೇ ಸಾಧಯಾಮಾಸ ಚರುಂಗಾಧೇಸ್ತಥೈವ ಚ ॥ ೬೪ ॥

---

೬೧. ಅನಂತರ ಸಹಸ್ರಾಕ್ಷನಾದ ಪುರಂದರನು ಉಗ್ರತಪಸ್ವಿಯಾದ ಅವನನ್ನು ನೋಡಿ ತಾನೇ ಸಂತಾನ ವರವನ್ನು ಕೊಡಲು ಸಮರ್ಥನಾದುದರಿಂದ ವರವನ್ನು ಕೊಟ್ಟನು.

೬೨. ಅನಂತರ ದೇವೇಂದ್ರನು ತನ್ನ ಒಂದು ಅಂಶದಿಂದಲೇ ಅವನಿಗೆ ಪುತ್ರನಾಗಿ ಜನಿಸಲು ಸಿದ್ಧನಾದನು. ಅನಂತರ ಪಾಕಶಾಸನನಾದ ದೇವೇಂದ್ರನು ಕುಶಿಕನಿಗೆ ಪುತ್ರನಾಗಿ ಗಾಧಿ ಎಂಬ ನಾಮದಿಂದ ಅವತರಿಸಿದನು.

೬೩. ಕುಶಕನಿಗೆ ಪೌರುಕುತ್ಸಾ ಎಂಬ ಪತ್ನಿಯು ಇದ್ದಳು. ಅವಳಲ್ಲಿ ಗಾಧಿಯೆಂಬ ಪುತ್ರನು ಜನಿಸಿದನು. ಆ ಗಾಧಿಮಹಾರಾಜನು ಪೂರ್ವದಲ್ಲಿಯೇ ಮಹಾಭಾಗ್ಯಶಾಲಿಯೂ, ಮಂಗಳಾಂಗಿಯೂ ಆದ ಸತ್ಯವತೀ, ಎಂಬ ಕನ್ನಿಕೆಯನ್ನು ಕವಿಯಾದ ಋಚೀಕನಿಗೆ ಕನ್ಯಾದಾನವನ್ನು ಮಾಡಿದನು.

೬೪. ಆ ಸತ್ಯವತಿಯಲ್ಲಿ ಪ್ರಭುವೂ, ಭೃಗುವಂಶಸಂಭೂತನೂ, ಭಾರ್ಗವ ನಾಮಕನೂ ಆದ ಪುತ್ರನು ಉತ್ಪನ್ನನಾದನು. ಅವನು ಸಂತಾನಕ್ಕಾಗಿ ಗಾಧಿಯಿಂದ ಚರುವನ್ನು ಸಂಪಾದಿಸಿದನು.

**ತಥಾ ಚಾಹೂಯ ಸುಧೃತಿರ್ಋಚೀಕೋ ಭಾರ್ಗವಸ್ತದಾ ।**
**ಉಪಯೋಜ್ಯಶ್ಚರುರಯಂ ತ್ವಯಾ ಮಾತ್ರಾ ಚ ತೇ ಶುಭೇಃ ॥ ೬೫ ॥**

**ತಸ್ಯಾಂ ಜನಿಷ್ಯತೇ ಪುತ್ರೋ ದೀಪ್ತಿಮಾನ್ ಕ್ಷತ್ರಿಯರ್ಷಭಃ ।**
**ಅಜೇಯಃ ಕ್ಷತ್ರಿಯೈರ್ಯುದ್ಧೇ ಕ್ಷತ್ರಿಯರ್ಷಭಸೂದನಃ ॥ ೬೬ ॥**

**ತವಾಪಿ ಪುತ್ರಂ ಕಲ್ಯಾಣಿ ಧೃತಿಮಂತಂ ತಪೋಧನಂ ।**
**ಶಮಾತ್ಮಕಂ ದ್ವಿಜಶ್ರೇಷ್ಠಂ ಚರುರೇಷ ವಿಧಾಸ್ಯತಿ ॥ ೬೭ ॥**

**ಏವಮುಕ್ತ್ವಾ ತು ತಾಂ ಭಾರ್ಯಾಮೃಚೀಕೋ ಭೃಗುನಂದನಃ ।**
**ತಪಸ್ಯಭಿರತೋ ನಿತ್ಯಮರಣ್ಯಂ ಪ್ರವಿವೇಶಹ ॥ ೬೮ ॥**

**ಗಾಧಿಃ ಸದಾರಸ್ತು ತದಾ ಋಚೀಕಾಶ್ರಮಮಭ್ಯಗಾತ್ ।**
**ತೀರ್ಥಯಾತ್ರಾಪ್ರಸಂಗೇನ ಸುತಾಂ ದ್ರಷ್ಟುಂ ನರೇಶ್ವರಃ ॥ ೬೯ ॥**

---

೬೫. ಅನಂತರ ಅತ್ಯಂತ ಧೈರ್ಯಶಾಲಿಯೂ, ಭೃಗುಕುಮಾರನೂ ಆದ ಋಚೀಕನು ಪತ್ನಿಯನ್ನು ಕರೆದು ಓ ಮಂಗಳಾಂಗಿ, ಪುತ್ರಾಕಾಂಕ್ಷೆಯುಳ್ಳ ನಿನ್ನ ತಾಯಿಯೂ, ನೀನೂ ಈ ಚರುವನ್ನು ಭಕ್ಷಿಸಿರೆಂದನು.

೬೬. ನಿನ್ನ ತಾಯಿಗೆ ಅತಿಕಾಂತಿವಂತನೂ, ಕ್ಷತ್ರಿಯೋತ್ತಮನೂ, ಯುದ್ಧದಲ್ಲಿ ಕ್ಷತ್ರಿಯರಿಂದ ಜಯಿಸಲಸಾಧ್ಯನೂ, ಶೂರಕ್ಷತ್ರಿಯನಾಶಕನೂ ಆದ ಕುಮಾರನು ಸಂಭವಿಸುವನೆಂದನು.

೬೭. ಓ ಮಂಗಳಾಂಗಿ, ನಿನಗೂ ಕೂಡ ಧೈರ್ಯವಂತನೂ, ತಪೋಧನನೂ, ಬಹುಶಾಂತನೂ, ಬ್ರಾಹ್ಮಣೋತ್ತಮನೂ ಆದ ಕುಮಾರನು ಸಂಭವಿಸುವನು. ಇಂತಹ ಶಕ್ತಿಯು ಈ ಚರುವಿನಲ್ಲಿದೆ ಎಂದು ಹೇಳಿದನು.

೬೮. ಭೃಗುಕುಮಾರನಾದ ಋಚೀಕನು ಹೀಗೆ ತನ್ನ ಪತ್ನಿಯಾದ ಸತ್ಯವತಿಗೆ ಹೇಳಿ, ತಪಸ್ಸಿನಲ್ಲಿ ಆಸಕ್ತನಾಗಿ ಕಾಡಿಗೆ ಹೋಗಿ, ನಿತ್ಯವೂ ತಪೋನಿಷ್ಠನಾದನು.

೬೯. ಆ ಗಾಧಿರಾಯನು ಭಾರ್ಯಾಸಮೇತನಾಗಿ ಋಚೀಕಮುನಿಯ ಆಶ್ರಮಕ್ಕೆ ಹೋದನು. ತೀರ್ಥಯಾತ್ರೆಯ ಪ್ರಸಂಗವಶದಿಂದ ತಂದೆಯು ಮಗಳನ್ನು ನೋಡಲು ಬಂದನು.

ಚರುದ್ವಯಂ ಗೃಹೀತ್ವಾ ತು ಋಷೇಃ ಸತ್ಯವತೀ ಸದಾ |
ಭರ್ತುರ್ವಚನಮವ್ಯಗ್ರಾ ಹೃಷ್ಟಾ ಮಾತ್ರೇ ನ್ಯವೇದಯತ್ || ೭೦ ||

ಮಾತಾ ತು ತಸ್ಯೈ ದೇವೇನ ದುಹಿತ್ರೇ ಸ್ವಂ ಚರುಂ ದದೌ |
ತಸ್ಯಾಶ್ಚರುಮಥಾಜ್ಞಾನಾದಾತ್ಮನಃ ಸಾ ಚಕಾರ ಹ || ೭೧ ||

ಅಥ ಸತ್ಯವತೀ ಗರ್ಭಂ ಕ್ಷತ್ರಿಯಾಂತಕರಂ ಶುಭಂ |
ಧಾರಯಾಮಾಸ ದೀಪ್ತೇನ ವಪುಷಾ ಘೋರದರ್ಶನಾ || ೭೨ ||

ತಮೃಚೀಕಸ್ತತೋ ದೃಷ್ಟ್ವಾ ಯೋಗೇನಾಪ್ಯನುಮೃಶ್ಯ ಚ |
ತದಾಬ್ರವೀದ್ದ್ವಿಜಶ್ರೇಷ್ಠಃ ಸ್ವಾಂ ಭಾರ್ಯಾಂ ವರವರ್ಣಿನೀಂ || ೭೩ ||

---

೭೦. ಆಗ ಋಷಿಪತ್ನಿಯಾದ ಸತ್ಯವತೀದೇವಿಯು ಆ ಚರುವನ್ನು ತೆಗೆದುಕೊಂಡು, ಪತಿಯ ಮಾತಿನ ಗೌರವದಿಂದ ಸಂತುಷ್ಟಳಾಗಿ ತನ್ನ ತಾಯಿಗೆ ಹೀಗೆ ಹೇಳಿದಳು.

೭೧. ತಾಯಿಯಾದರೋ ದೈವವಶದಿಂದ ಆ ಎರಡು ಚರುವನ್ನು ತೆಗೆದುಕೊಂಡು, ತನಗೆ ಕೊಟ್ಟಿರುವ ಚರುವನ್ನು ಕುಮಾರಿಗೆ ಕೊಟ್ಟು ಅವಳದನ್ನು ತಾನು ಸ್ವೀಕರಿಸಿದಳು. ಪುತ್ರಿಯೂ ಕೂಡ ಅಜ್ಞಾನದಿಂದ ತಾಯಿಯ ಚರುವನ್ನು ತಾನು ತೆಗೆದುಕೊಂಡಳು.

೭೨. ತರುವಾಯ ಸತ್ಯವತೀದೇವಿಯು ಕ್ಷತ್ರಿಯನಾಶಕರೂ, ಮಂಗಳಕರೂ ಆದ ಗರ್ಭವನ್ನು ಧರಿಸಿದಳು. ಆಗ ಸತ್ಯವತೀದೇಹವು ಅತಿಪ್ರಕಾಶಕವೂ ಘೋರ ದರ್ಶನವುಳ್ಳದ್ದೂ ಆಗಿತ್ತು.

೭೩. ಅನಂತರ ಋಚೀಕಮುನಿಯು ಯೋಗಶಕ್ತಿಯಿಂದ ಆಲೋಚಿಸಿ, ಗರ್ಭವು ಬದಲಾಯಿಸಿರುವುದನ್ನು ತಿಳಿದು, ಸುಂದರಿಯೂ, ಗರ್ಭವತಿಯೂ ಆದ ಭಾರ್ಯೆಯನ್ನು ಕುರಿತು ಇಂತೆಂದನು.

ಮಾತುಃ ಸಿದ್ಧ್ಯತಿ ತೇ ಭದ್ರೇ ಚರುವ್ಯತ್ಯಾಸಹೇತುನಾ ।
ಜನಿಷ್ಯತಿ ಹಿ ಪುತ್ರಸ್ತೇ ಕ್ರೂರಕರ್ಮಾತಿದಾರುಣಃ ॥ ೭೪ ॥

ಮಾತಾ ಜನಿಷ್ಯತೇ ವಾಪಿ ತಥಾಭೂತಂ ತಪೋಧನಂ ।
ವಿಶ್ವಂ ಹಿ ಬ್ರಹ್ಮ ತಪಸಾ ಮಯಾ ತತ್ರ ಸಮರ್ಪಿತಂ ॥ ೭೫ ॥

ಏವಮುಕ್ತಾ ಮಹಾಭಾಗಾ ಭರ್ತ್ರಾ ಸತ್ಯವತೀ ತದಾ ।
ಪ್ರಸಾದಯಾಮಾಸ ಪತಿಂ ಸುತೋ ಮೇ ನೇದೃಶೋ ಭವೇತ್ ।
ಬ್ರಾಹ್ಮಣಾಪಸದಸ್ತ್ವನ್ಯ ಇತ್ಯುಕ್ತೋ ಮುನಿರಬ್ರವೀತ್ ॥ ೭೬ ॥

ನೈಷ ಸಂಕಲ್ಪಿತಃ ಕಾಮೋ ಮಯಾ ಭದ್ರೇ ತಥಾ ತ್ವಯಾ ।
ಉಗ್ರಕರ್ಮಾ ಭವೇತ್ ಪುತ್ರಃ ಪಿತುರ್ಮಾತುಶ್ಚ ಕಾರಣಾತ್ ॥ ೭೭ ॥

---

೭೪. ಎಲೌ ಮಂಗಳಾಂಗಿಯಾದ ಪ್ರಿಯಳೇ, ನಿನ್ನ ತಾಯಿಗೋಸ್ಕರ ಕೊಟ್ಟಿರುವ ಚರುವನ್ನು ನೀನು ಭಕ್ಷಿಸಿರುವುದರಿಂದ ನಿನಗೆ ಅತಿ ಕ್ರೂರಕರ್ಮಿಯೂ, ಅತ್ಯಂತ ಲೋಕಕಂಟಕನೂ ಆದ ಪುತ್ರನು ಜನಿಸುವನು ಎಂದು ಹೇಳಿದನು.

೭೫. ನಿಮ್ಮ ತಾಯಿಗೆ ಮಹಾಜ್ಞಾನಿಯೂ, ತಪೋಧನನೂ, ಲೋಕೋಪಕಾರಿಯೂ ಆದ ಕುಮಾರನು ಜನಿಸುವನು. ಆ ಚರುವಿನಲ್ಲಿ ಲೋಕೋತ್ತರವಾದ ಬ್ರಹ್ಮತೇಜಸ್ಸನ್ನು ಇಟ್ಟಿರುವುದರಿಂದ ನಿನ್ನ ಮಾತೆಯು ಸತ್ಪುತ್ರನನ್ನು ಪಡೆಯುವಳು.

೭೬. ಹೀಗೆ ಪತಿಯಾದ ಋಚೀಕನು ಹೇಳಲಾಗಿ, ಆ ಮಾತನ್ನು ಕೇಳಿದ ಸತ್ಯವತಿಯು ಎಲೈ ಮಹಾನುಭಾವನಾದ ಪ್ರಿಯನೇ, ಅಂತಹ ದುಷ್ಟನೂ, ಬ್ರಾಹ್ಮಣಾಧಮನೂ ಆದ ಕುಮಾರನು ನನಗೆ ಜನಿಸದಿರಲಿ, ಎಂದು ಪತಿಯನ್ನು ಪ್ರಾರ್ಥಿಸಿದಳು. ಆಗ ಪತಿಯು ಸತ್ಯವತಿಗೆ ಇಂತೆಂದನು.

೭೭. ಓ ಮಂಗಳಾಂಗಿಯಾದ ಪ್ರಿಯಳೇ, ನಿನಗೆ ದುಷ್ಟನಾದ ಪುತ್ರನು ಹುಟ್ಟಬೇಕೆಂದು ನಾನು ಎಂದಿಗೂ ಭಾವಿಸಿರಲಿಲ್ಲ. ಮಾತಾಪಿತೃಗಳ ದೋಷಗಳಿಂದ ದುಷ್ಟನೂ, ಕ್ರೂರಕರ್ಮಿಯೂ ಆದ ಸುತನು ಜನಿಸುವನೆಂದು ಹೇಳಿದನು.

ಪುನಃ ಸತ್ಯವತೀ ವಾಕ್ಯಮೇವಮುಕ್ತ್ವಾಬ್ರವೀದಿದಂ ।
ಇಚ್ಛಂಲ್ಲೋಕಾನಪಿ ಮುನೇ ಸೃಜೇಥಾಃ ಕಿಂ ಪುನಃ ಸುತಂ ॥ ೭೮ ॥

ಶಮಾತ್ಮಕಮೃಜುಂ ಭರ್ತಃ ಪುತ್ರಂ ಮೇ ದಾತುಮರ್ಹಸಿ ।
ಕಾಮಮೇವಂವಿಧಃ ಪೌತ್ರೋ ಮಮಸ್ಯಾತ್ತ್ವ ವದ ಪ್ರಭೋ ॥ ೭೯ ॥

ಮಯ್ಯನ್ಯಥಾ ನ ಶಕ್ಯಂ ವೈ ಕರ್ತುಮೇವ ದ್ವಿಜೋತ್ತಮ ।
ತತಃ ಪ್ರಸಾದಮಕರೋತ್ ಸ ತಸ್ಯಾಸ್ತಪಸೋ ಬಲಾತ್ ॥ ೮೦ ॥

ಪುತ್ರೇ ನಾಸ್ತಿ ವಿಶೇಷೋ ಮೇ ಪೌತ್ರೇ ವಾ ವರವರ್ಣಿನಿ ।
ತ್ವಯಾ ಯಥೋಕ್ತಂ ವಚನಂ ತಥಾ ಭದ್ರೇ ಭವಿಷ್ಯತಿ ॥ ೮೧ ॥

ತಸ್ಮಾತ್ ಸತ್ಯವತೀ ಪುತ್ರಂ ಜನಯಾಮಾಸ ಭಾರ್ಗವಂ ।
ತಪಸ್ಯಭಿರತಂದಾಂತಂ ಜಮದಗ್ನಿಂ ಶಮಾತ್ಮಕಂ ॥ ೮೨ ॥

---

೭೮. ಹೀಗೆ ಪತಿಯು ಹೇಳಲು, ಸತ್ಯವತಿಯು ಎಲೈ ಸ್ವಾಮಿಯಾದ ಮುನಿವರ್ಯರೇ, ತಾವು ಇಚ್ಛಿಸಿದರೆ ಬೇರೆ ಲೋಕವನ್ನೇ ಸೃಷ್ಟಿಮಾಡಬಹುದು. ಅಂತಹ ಮಹಾ ಯೋಗಶಕ್ತಿಯು ತಮ್ಮಲ್ಲಿರುತ್ತದೆ. ಹೀಗಿರುವಲ್ಲಿ ಪುತ್ರರನ್ನು ಬದಲಾಯಿಸುವ ಶಕ್ತಿಯಿರುವುದಿಲ್ಲವೇ ? ಎಂದು ಹೇಳಿದಳು.

೭೯. ಎಲೈ ಪ್ರಿಯವರ್ಯನೇ, ಶಾಂತರೂಪನೂ, ಸಜ್ಜನನೂ ಆದ ಕುಮಾರನು ಜನಿಸುವಂತೆ ಅನುಗ್ರಹಿಸಬೇಕು. ದುಷ್ಟನಾದ ಪುತ್ರನು ಉದ್ಭವಿಸದಿರಲಿ. ಈ ರೀತಿಯಾಗಿ ಪರಮಾನುಗ್ರಹವನ್ನು ಮಾಡಬೇಕೆಂದು ಪತಿಯನ್ನು ಬೇಡಿದಳು.

೮೦-೮೧. ಎಲೌ ಸುಂದರಿ, ಮಗನ ವಿಚಾರವಲ್ಲಿ ವ್ಯತ್ಯಾಸಮಾಡಲು ಸುತರಾಂ ಸಾಧ್ಯವೇ ಇಲ್ಲವೆಂದನು. ಆಗ ಸತ್ಯವತಿಯು ಪತಿಯನ್ನು ಪುನಃಪುನಃ ಪ್ರಾರ್ಥಿಸಿದಳು. ಪ್ರಿಯಳೇ, ಪುತ್ರನ ವಿಷಯದಲ್ಲಿಯೂ, ಪೌತ್ರನ ವಿಷಯದಲ್ಲಿಯೂ, ವಿಶೇಷವೇನೂ ಇಲ್ಲ. ಆದರೆ ಪ್ರಿಯಳೇ, ನೀನು ಯಾವ ರೀತಿಯಲ್ಲಿ ಪ್ರಾರ್ಥನೆಮಾಡಿರುವಿಯೋ ಅಂತಹ ಪುತ್ರನು ಉದ್ಭವಿಸುವನೆಂದು ವರವನ್ನು ಕೊಟ್ಟನು.

೮೨. ಆದುದರಿಂದ ಸತ್ಯವತೀದೇವಿಯು ತಪೋನಿರತನೂ, ದಾಂತನೂ, ಶಾಂತನೂ, ಕ್ಷಮಾಗುಣವಂತನೂ, ಭೃಗುವಂಶಭೂಷಣನೂ ಆದ ಜಮದಗ್ನಿಯೆಂಬ ಕುಮಾರನನ್ನು ಪಡೆದಳು.

**ಭೃಗೋಶ್ಚರುವಿಪರ್ಯಾಸೇ ರೌದ್ರವೈಷ್ಣವಯೋಃ ಪುರಾ |**
**ಯವನಾದ್ವೈಷ್ಣವಸ್ಯಾಗ್ನೇರ್ಜಮದಗ್ನಿರಜಾಯತ || ೮೩ ||**

**ವಿಶ್ವಾಮಿತ್ರಂ ತು ದಾಯಾದಂಗಾಧಿಃ ಕುಶಿಕನಂದನಃ |**
**ಪ್ರಾಪ್ಯ ಬ್ರಹ್ಮರ್ಷಿಸವಿತಾ ಜಗಾಮ ಬ್ರಹ್ಮಣಾವೃತಃ || ೮೪ ||**

**ಸಾ ಹಿ ಸತ್ಯವತೀ ಪುಣ್ಯಾ ಸತ್ಯವ್ರತಪರಾಯಣಾ |**
**ಕೌಶಿಕೀತಿ ಸಮಾಖ್ಯಾತಾ ಪ್ರವೃತ್ತೇಯಂ ಮಹಾನದೀ || ೮೫ ||**

**ಪರಿಶ್ರುತಾ ಮಹಾಭಾಗಾ ಕೌಶಿಕೀ ಸರಿತಾಂ ವರ |**
**ಇಕ್ಷ್ವಾಕುವಂಶೇ ತ್ವಭವತ್ಸುವೇಣುರ್ನಾಮ ಪಾರ್ಥಿವಃ || ೮೬ ||**

---

೮೩. ಹೀಗೆ ಪೂರ್ವದಲ್ಲಿ ಭೃಗುಮುನಿಯು ಕೊಟ್ಟಿದ್ದ ರುದ್ರವಿಷ್ಣುವಿಷಯಕವಾದ ಚರುವಿನ ವ್ಯತ್ಯಾಸದಿಂದ ವೈಷ್ಣವಚರುವಿನಿಂದ ಜಮದಗ್ನಿಮುನಿಯು ಉದ್ಭವಿಸಿದನು.

೮೪. ಕುಶಿಕನಂದನನಾದ ಗಾಧಿರಾಜನಿಗೆ ವಿಶ್ವಾಮಿತ್ರನೆಂಬ ಪುತ್ರನು ಉದ್ಭವಿಸಿದನು. ಆ ವಿಶ್ವಾಮಿತ್ರಮುನಿಯು ಘೋರವಾದ ತಪಸ್ಸನ್ನು ಮಾಡಿ ಬ್ರಹ್ಮರ್ಷಿತ್ವವನ್ನು ಹೊಂದಿದನು.

೮೫. ಆ ಸತ್ಯವತೀದೇವಿಯೇ ಪವಿತ್ರಳೂ, ಸತ್ಯವ್ರತಪರಾಯಣಳೂ ಆಗಿ, ಕೌಶಿಕೀ ಎಂಬ ನಾಮದಿಂದ ಪ್ರಖ್ಯಾತವಾದ ಮಹಾನದಿಯಾಗಿ ಲೋಕದಲ್ಲಿ ಹರಿಯುತ್ತಿದ್ದಳು.

೮೬. ಹೀಗೆ ಆ ಕೌಶಿಕೀನದಿಯು ಲೋಕವಿಖ್ಯಾತವಾಗಿಯೂ, ಮಹಾಭಾಗ್ಯಶಾಲಿಯಾಗಿಯೂ, ನದಿಗಳಲ್ಲಿ ಉತ್ತಮವಾಗಿಯೂ ಇರುತ್ತದೆ. ಇಕ್ಷ್ವಾಕು ಮಹಾರಾಯನ ವಂಶದಲ್ಲಿ ಸುವೇಣುವೆಂಬ ಮಹಾರಾಯನು ಪ್ರಖ್ಯಾತನಾಗಿದ್ದನು.

ತಸ್ಯ ಕನ್ಯಾ ಮಹಾಭಾಗಾ ಕಾಮಲೀ ನಾಮ ರೇಣುಕಾ ।
ರೇಣುಕಾಯಾಂ ತು ಕಾಮಲ್ಯಾಂ ತಪೋಧೃತಿಸಮನ್ವಿತಃ ॥
ಆರ್ಚಿಕೋ ಜನಯಾಮಾಸ ಜಮದಗ್ನಿಃ ಸುದಾರುಣಂ ॥ ೮೭ ॥

ಸರ್ವವಿದ್ಯಾಂತಗಂ ಶ್ರೇಷ್ಠಂ ಧನುರ್ವೇದಸ್ಯ ಪಾರಗಂ ।
ರಾಮಂ ಕ್ಷತ್ರಿಯಹಂತಾರಂ ಪ್ರದೀಪ್ತಮಿವ ಪಾವಕಂ ॥ ೮೮ ॥

ಔರ್ವಸ್ಯೈವಮೃಚೀಕಸ್ಯ ಸತ್ಯವತ್ಯಾಂ ಮಹಾಮನಾಃ ।
ಜಮದಗ್ನಿಸ್ತತೋ ವೀರ್ಯಾಜ್ಜಜ್ಞೇ ಬ್ರಹ್ಮವಿದಾಂ ವರಃ ॥
ಮಧ್ಯಮಶ್ಚ ಶುನಃಶೇಫಃ ಶುನಃ ಪೃಚ್ಛಃ ಕನಿಷ್ಠಕಃ ॥ ೮೯ ॥

ವಿಶ್ವಾಮಿತ್ರಸ್ತು ಧರ್ಮಾತ್ಮಾ ನಾಮ್ನಾ ವಿಶ್ವರಥಃ ಸ್ಮೃತಃ ।
ಜಜ್ಞೇ ಭೃಗುಪ್ರಸಾದೇನ ಕೌಶಿಕಾದ್ವಂಶವರ್ಧನಃ ॥ ೯೦ ॥

---

೮೭–೮೮. ಅವನಿಗೆ ಮಹಾನುಭಾವಳಾದ ಕಮಲೀ ಮತ್ತು ರೇಣುಕೆಯೆಂದು ಪ್ರಸಿದ್ಧಳಾದ ಕುಮಾರಿಯು ಜನಿಸಿದಳು. ತಪಸ್ಸು ಧೈರ್ಯ ಇವುಗಳಿಂದ ಯುಕ್ತನೂ, ಋಚೀಕಕುಮಾರನೂ ಆದ ಜಮದಗ್ನಿಮುನಿಯು ರೇಣುಕೆಯನ್ನು ಮದುವೆಯಾಗಿ ಅವಳಲ್ಲಿ ಅತ್ಯಂತ ಭಯಂಕರನೂ, ಸರ್ವವಿದ್ಯಾಪಾರಂಗತನೂ, ಉತ್ತಮನೂ, ಧನುರ್ವೇದಪಾರಂಗತನೂ, ಕ್ಷತ್ರಿಯಸಂಹಾರಕನೂ, ಅಗ್ನಿಯಂತೆ ಪ್ರಕಾಶಕನೂ ಆದ ರಾಮನೆಂಬ ಕುಮಾರನನ್ನು ಪಡೆದಳು.

೮೯. ಔರ್ವವಂಶೀಕನೂ, ಮಹಾಮನಸ್ಕನೂ, ವಿಶಾಲಹೃದಯನೂ ಆದ ಋಚೀಕಮಹರ್ಷಿಗಳಿಗೆ ಸತ್ಯವತೀದೇವಿಯಲ್ಲಿ ಜಮದಗ್ನಿಯೆಂಬ ಪುತ್ರನೂ, ಅವನಿಗೆ ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಪರಶುರಾಮನೂ ಉತ್ಪನ್ನರಾದರು. ಋಚೀಕನಿಗೆ ಹಿರಿಯ ಮಗನು ಜಮದಗ್ನಿಯು. ಮಧ್ಯಮನು ಶುನಃಶೇಫನು. ಕೊನೆಯವನು ಶುನಃಪುಚ್ಛನು. ಹೀಗೆ ಮೂವರು ಪುತ್ರರಿದ್ದರು.

೯೦. ಧರ್ಮಾತ್ಮನಾದ ವಿಶ್ವಾಮಿತ್ರನು ವಿಶ್ವರಥನೆಂದು ಲೋಕದಲ್ಲಿ ಪ್ರಖ್ಯಾತನಾದನು. ಅವನು ಭೃಗುಗಳ ಅನುಗ್ರಹದಿಂದ ಕೌಶಿಕಮುನಿಯಿಂದ ವಂಶವರ್ಧಕನಾಗಿ ಜನಿಸಿದನು.

ವಿಶ್ವಾಮಿತ್ರಸ್ಯ ಪುತ್ರಸ್ತು ಶುನಃಶೇಫೋಽಭವನ್ಮುನಿಃ ।
ಹರಿಶ್ಚಂದ್ರಸ್ಯ ಯಜ್ಞೇ ತುಃ ಪಶುತ್ವೇ ನಿಯುತಃ ಸ ವೈ ॥
ದೇವೈರ್ದತ್ತಃ ಸ ವೈ ಯಸ್ಮಾದ್ದೇವರಾತಸ್ತತೋಽಭವತ್ ॥ ೯೧ ॥

ವಿಶ್ವಾಮಿತ್ರಸ್ಯ ಪುತ್ರಾಣಾಂ ಶುನಃಶೇಫೋಗ್ರಜಃ ಸ್ಮೃತಃ ।
ಮಧುಚ್ಛಂದೋ ನಯಶ್ಚೈವ ಕೃತದೇವೌ ಧ್ರುವಾಷ್ಟಕೌ ॥ ೯೨ ॥

ಕಚ್ಛಪಃ ಪೂರಣಶ್ಚೈವ ವಿಶ್ವಾಮಿತ್ರಸುತಾಸ್ತು ವೈ ।
ತೇಷಾಂ ಗೋತ್ರಾಣಿ ಬಹುಧಾ ಕೌಶಿಕಾನಾಂ ಮಹಾತ್ಮನಾ ॥ ೯೩ ॥

ಪಾರ್ಥಿವಾ ದೇವರಾತಾಶ್ಚ ಯಾಜ್ಞವಲ್ಕ್ಯ ಸಮರ್ಷಣಾಃ ।
ಉದುಂಬರಾ ಉದುಮ್ಲಾನಾಸ್ತಾರಕಾ ಯಮಮುಂಚತಾಃ ॥ ೯೪ ॥

ಲೋಹಿಣ್ಯೋ ರೇಣವಶ್ಚೈವ ತಥಾ ಕಾರೀಷವಃ ಸ್ಮೃತಾಃ ।
ಬಭ್ರವಃ ಪಾಣಿನಶ್ಚೈವ ಧ್ಯಾನಜಪ್ಯಾಸ್ತಥೈವ ಚ ॥ ೯೫ ॥

ಶಾಲಾವತ್ಯಾ ಹಿರಣ್ಯಾಕ್ಷಾಃ ಸ್ಯಂಕೃತಾ ಗಾಲವಾಃ ಸ್ಮೃತಾಃ ।
ದೇವಲಾ ಯಾವದೂತಾಶ್ಚ ಶಾಲಂಕಾಯನವಾಸ್ಕಲಾಃ ॥ ೯೬ ॥

---

೯೧. ವಿಶ್ವಾಮಿತ್ರನಿಗೆ ಶುನಃಶೇಫನೆಂಬ ಮುನಿಯು ಹುಟ್ಟಿದನು. ಅವನು ಹರಿಶ್ಚಂದ್ರನ ಯಾಗಕ್ಕೆ ಪಶುವಾದನು. ಅವನನ್ನು ದೇವತೆಗಳು ಯಜ್ಞಕ್ಕೆ ಪಶುವನ್ನಾಗಿ ಕೊಟ್ಟುದುದರಿಂದ ದೇವರಾತನೆಂದು ಹಿರಿಯರು ಹೇಳುವರು.

೯೨-೯೩. ವಿಶ್ವಾಮಿತ್ರನ ಪುತ್ರರಲ್ಲಿ ಶುನಃಶೇಫನು ಹಿರಿಯ ಮಗನಾಗಿದ್ದನು. ಮತ್ತು ಅವನಿಗೆ ಮಧುಚ್ಛಂದ, ನಯ, ಕೃತ ದೇವ, ಧ್ರುವ, ಅಷ್ಟಕ, ಕಚ್ಛಪ, ಪೂರಣ ಇವರೇ ಮೊದಲಾದ ಅನೇಕ ಪುತ್ರರು ಪ್ರಖ್ಯಾತರಾಗಿದ್ದರು. ಮಹಾತ್ಮರಾದ ಆ ಕೌಶಿಕರ ವಂಶವು ಹೀಗೆ ಬಹಳವಾಗಿ ವಿಸ್ತೃತವಾಗಿತ್ತು.

೯೪-೯೭. ವಿಶ್ವಾಮಿತ್ರನ ವಂಶದವರು ಯಾರೆಂದರೆ—ಪಾರ್ಥಿವರೂ, ದೇವ ರಾತರೂ, ಯಾಜ್ಞವಲ್ಕ್ಯರೂ, ಮಹರ್ಷಿಗಳೂ, ಉದುಂಬರರೂ, ಉದುಮ್ಲಾನರೂ, ತಾರಕರೂ, ಯಮಮುಂಚತರೂ, ಲೋಹಿಣ್ಯರೂ, ರೇಣವರೂ, ಕಾರೀಷವರೂ, ಬಭ್ರುಗಳೂ, ಪಾಣಿನಿಗಳೂ, ಧ್ಯಾನಜಪ್ಯರೂ, ಶಾಲಾವತ್ಯರೂ, ಹಿರಣ್ಯಾಕ್ಷರೂ, ಸ್ಯಂಕೃತರೂ, ಗಾಲವರೂ, ದೇವಲರೂ, ಯಾಮದೂತರೂ, ಶಾಲಂಕಾಯನರೂ,

**ದದಾತಿಬಾದರಾಶ್ಚಾನ್ಯೇ ವಿಶ್ವಾಮಿತ್ರಸ್ಯ ಧೀಮತಃ ।**
**ಋಷ್ಯಂತರವಿವಾಹ್ಯಾಸ್ತೇ ಬಹವಃ ಕೌಶಿಕಾ ಸ್ಮೃತಾಃ ॥ ೯೭ ॥**

**ಕೌಶಿಕಾಸೋಶ್ರುಮಾಶ್ಚೈವ ತಥಾನ್ಯೇ ಸೈಧವಾಯನಾಃ ।**
**ಪೌರೋರವಸ್ಯ ಪುಣ್ಯಸ್ಯ ಬ್ರಹ್ಮರ್ಷೇಃ ಕೌಶಿಕಸ್ಯ ತು ॥ ೯೮ ॥**

**ದೃಷದ್ವತೀಸುತಶ್ಚಾಪಿ ವಿಶ್ವಾಮಿತ್ರಾತ್ತಥಾಷ್ಟಕಃ ।**
**ಅಷ್ಟಕಸ್ಯ ಸುತೋ ಯೋ ಹಿ ಪ್ರೋಕ್ತಾ ಜಹ್ನುಗಣೋ ಮಯಾ ॥ ೯೯ ॥**

**॥ ಋಷಯ ಊಚುಃ ॥**

**ಕಿಂ ಲಕ್ಷಣೇನ ಧರ್ಮೇಣ ತಪಸೇಹ ಶ್ರುತೇನ ವಾ ।**
**ಬ್ರಾಹ್ಮಣ್ಯಂ ಸಮನುಪ್ರಾಪ್ತಂ ವಿಶ್ವಾಮಿತ್ರಾದಿಭಿರ್ನೃಪೈಃ ॥ ೧೦೦ ॥**

---

ವಾಸ್ಕಲರೂ, ದದಾತಿಗಳೂ, ಬಾದರಿಗಳೂ ಇವರು ಜ್ಞಾನಿಯಾದ ವಿಶ್ವಾಮಿತ್ರ ಮುನಿಯ ವಂಶೀಕರಾಗಿರುವರು. ಇವರಲ್ಲಿ ಅನೇಕರು ಋಷಿಕನ್ನಿಕೆಯರನ್ನು ಮದುವೆಯಾಗಿ ಕೌಶಿಕರೆಂದು ಪ್ರಸಿದ್ಧರಾಗಿರುವರು.

೯೮. ಕೌಶಿಕರೂ, ಸೋಶ್ರುಮರೂ, ಸೈಧವಾಯನರೂ ಇವರು ಪೌರೋರವನೂ, ಪವಿತ್ರನೂ, ಬ್ರಹ್ಮರ್ಷಿಯೂ ಆದ ಕೌಶಿಕ ಗೋತ್ರೋತ್ಪನ್ನರಾಗಿರುವರು.

೯೯. ದೃಷದ್ವತೀಸುತನಾದ ಅಷ್ಟಕನೂ ಕೂಡ ವಿಶ್ವಾಮಿತ್ರನ ವಂಶೀಕನಾಗಿರುವನು. ಆ ಅಷ್ಟಕನಿಗೆ ಜಹ್ನುಗಣನೆಂಬ ಕುಮಾರನು ಜನಿಸಿದನು. ಈ ವಿಷಯಗಳನ್ನು ಮೊದಲೇ ತಿಳಿಸಿರುವೆನು.

೧೦೦. ಮುನಿಗಳು ಕೇಳಿದರು :—ವಿಶ್ವಾಮಿತ್ರನೇ ಮೊದಲಾದ ರಾಜರು ಎಂತಹ ತಪಸ್ಸು, ಯಾವ ವಿಧವಾದ ಧರ್ಮ, ಯಾವ ತರವಾದ ಜ್ಞಾನ ಇವುಗಳಿಂದ ಬ್ರಾಹ್ಮಣ್ಯವನ್ನು ಪಡೆದರು ? ರಾಜರು ಹೇಗೆ ಬ್ರಾಹ್ಮಣರಾದರು ಎಂದು ಕೇಳಿದರು.

ಯೇನ ಯೇನಾಭಿಧಾನೇನ ಬ್ರಾಹ್ಮಣ್ಯಂ ಕ್ಷತ್ರಿಯಾ ಗತಾಃ ।
ವಿಶೇಷಂ ಜ್ಞಾತುಮಿಚ್ಛಾಮಿ ತಪಸಾ ದಾನತಸ್ತಥಾ ॥ ೧೦೧ ॥

ಏವಮುಕ್ತಸ್ತತೋ ವಾಕ್ಯಮಬ್ರವೀದಿದಮರ್ಥವತ್ ।
ಅನ್ಯಾಯೋಪಗತೈರ್ದ್ರವ್ಯೈರಾಹೃತ್ಯ ಯಜನೇ ಧಿಯಾ ।
ಧರ್ಮಾಭಿಕಾಂಕ್ಷೀ ಯಜತೇ ನ ಧರ್ಮ ಫಲಮಶ್ನುತೇ ॥ ೧೦೨ ॥

ಧರ್ಮಂ ಚೈತಂ ಸಮಾಖ್ಯಾಯ ಪಾಪಾತ್ಮಾ ಪುರುಷಾಧಮಃ ।
ದದಾತಿ ದಾನಂ ವಿಪ್ರೇಭ್ಯೋ ಲೋಕಾನಾಂ ದಂಭಕಾರಣಾತ್ ॥ ೧೦೩ ॥

ಜಪಂಕೃತ್ವಾ ತಥಾ ತೀವ್ರಂ ಧನಲೋಭಾನ್ನಿರಂಕುಶಃ ।
ರಾಗಮೋಹಾನ್ವಿತೋ ಹ್ಯಂತೇ ಪಾವನಾರ್ಥಂ ದದಾತಿ ಯಃ ॥ ೧೦೪ ॥

೧೦೧. ಯಾವ ಯಾವ ನಾಮವಿರುವ ತಪಸ್ಸು ಮತ್ತು ದಾನ ಇವೇ ಮೊದಲಾದವುಗಳಿಂದ ಕ್ಷತ್ರಿಯರು ಬ್ರಾಹ್ಮಣ್ಯವನ್ನು ಹೊಂದಿದರು. ಅವರ ವಿಷಯದಲ್ಲಿ ವಿಶೇಷ ಸಂಗತಿಗಳನ್ನು ತಿಳಿಯಲು ಬಯಸುತ್ತೇವೆ ಎಂದರು.

೧೦೨. ಹೀಗೆ ವಿಪ್ರರು ಕೇಳಲು, ತರುವಾಯ ಸೂತಮುನಿಯು ಅಭಿಪ್ರಾಯ ಪೂರ್ಣವಾದ ಮಾತನ್ನಾಡಿದನು ಯಾವನು ಅನ್ಯಾಯಾರ್ಜಿತವಾದ ದ್ರವ್ಯದಿಂದ ಯಾಗಾದಿ ಧರ್ಮಕಾರ್ಯವನ್ನು ಮಾಡುವನೋ, ಅವನು ನ್ಯಾಯವಾಗಿಯೂ, ಧರ್ಮಾಕಾಂಕ್ಷಿಯಾದರೂ ಧರ್ಮಫಲವನ್ನು ಮಾತ್ರ ಹೊಂದುವುದಿಲ್ಲ.

೧೦೩. ಪಾಪಾತ್ಮರೂ, ಪುರುಷಾಧಮರೂ ಆದ ನೀಚರು ಇದೇ ಧರ್ಮವೆಂದು ಹೇಳಿ ಲೋಕದಲ್ಲಿ ಖ್ಯಾತಿಯನ್ನು ಪಡೆಯುವ ಉದ್ದೇಶ್ಯದಿಂದ ಬ್ರಾಹ್ಮಣರಿಗೆ ದಾನಮಾಡುವರು. ಅದು ನಿಷ್ಫಲವಾಗುವುದು.

೧೦೪. ಯಾವನು ಧನಲೋಭದಿಂದ ನಿರಂಕುಶನಾಗಿಯೂ, ರಾಗಮೋಹಾನ್ವಿತನಾಗಿಯೂ ಆಗಿ ತೀವ್ರವಾದ ಜಪತಪಾದಿಗಳನ್ನು ಮಾಡಿ ದಾನಧರ್ಮಾದಿಗಳನ್ನಾಚರಿಸುವನೋ ಅವೆಲ್ಲವೂ ವ್ಯರ್ಥವಾಗುವುದು.

ತೇನ ದತ್ತಾನಿ ದಾನಾನಿ ಅಫಲಾನಿ ಭವಂತ್ಯುತ ।
ತಸ್ಯ ಧರ್ಮಪ್ರವೃತ್ತಸ್ಯ ಹಿಂಸಕಸ್ಯ ದುರಾತ್ಮನಃ ॥ ೧೦೫ ॥

ಏವಂ ಲಬ್ಧ್ವಾ ಧನಂ ಮೋಹಾದ್ಧ್ಯದತೋ ಯಜತಶ್ಚ ಹ ।
ಸಕ್ಲಿಷ್ಟಕರ್ಮಣೋ ದಾನಂ ನ ತಿಷ್ಠತಿ ದುರಾತ್ಮನಃ ॥ ೧೦೬ ॥

ನ್ಯಾಯಾಗತಾನಾಂ ದ್ರವ್ಯಾಣಾಂ ತೀರ್ಥೇ ಸಂಪ್ರತಿಪಾದನಂ ।
ಕಾಮಾನನಭಿಸಂಧಾಯ ಯಜತೇ ಚ ದದಾತಿ ಚ ॥ ೧೦೭ ॥

ಸ ದಾನಫಲಮಾಪ್ನೋತಿ ತಚ್ಚ ದಾನಂ ಸುಖೋದಯಂ ।
ದಾನೇನ ಭೋಗಾನಾಪ್ನೋತಿ ಸ್ವರ್ಗಂ ಸತ್ಯೇನ ಗಚ್ಛತಿ ॥ ೧೦೮ ॥

ತಪಸಾ ತು ಸುಸುಪ್ತೇನ ಲೋಕಾನ್ ವಿಷ್ಟಭ್ಯ ತಿಷ್ಠತಿ ।
ವಿಷ್ಠಭ್ಯ ಸ ತು ತೇಜಸ್ವೀ ಲೋಕೇಷ್ವಾನಂತ್ಯಮಶ್ನುತೇ ॥ ೧೦೯ ॥

---

೧೦೫. ಹಿಂಸಕನೂ, ದುರಾತ್ಮನೂ ಆದ ಅವನು ಧರ್ಮಕಾರ್ಯದಲ್ಲಿ ಪ್ರವೃತ್ತನಾದರೂ ಕೂಡ ಅವನು ಮಾಡಿದ ದಾನಧರ್ಮಾದಿಗಳು ನಿಷ್ಫಲವಾಗುವುವು.

೧೦೬. ಯಾವನು ಹೀಗೆ ಅಜ್ಞಾನದಿಂದ ಧನವನ್ನು ಪಡೆದು, ದಾನ ಧರ್ಮಾದಿಗಳನ್ನೂ, ಯಜನಾದಿಗಳನ್ನೂ, ಮಾಡುವನೋ, ಅಂತಹ ದುಷ್ಟನೂ, ಕ್ಲೇಶಕರ್ಮಿಯೂ ಆದ ಪುರುಷನ ದಾನಧರ್ಮಾದಿಗಳು ಪುಣ್ಯಕಾರಿಯಾಗುವುದಿಲ್ಲ.

೧೦೭-೧೦೮. ಯಾವ ಮನುಜನು, ನ್ಯಾಯಾರ್ಜಿತವಾದ ದ್ರವ್ಯಗಳನ್ನು ಸದುದ್ದೇಶದಿಂದ ಸತ್ಪಾತ್ರದಲ್ಲಿ ದಾನವನ್ನೂ ಅಥವಾ ಜ್ಯೋತಿಷ್ಟೋಮಾದಿ ಯಾಗವನ್ನೂ, ಸತ್ಕರ್ಮಾದಿಗಳನ್ನೂ, ಮಾಡುವನೋ ಅಂತಹ ದಾನವು ಉತ್ತಮಫಲ ಪ್ರದವಾಗುವುದು, ಸುಖದಾಯಕವಾಗುವುದು. ದಾನದಿಂದ ಭೋಗವೂ, ಸತ್ಯದಿಂದ ಸ್ವರ್ಗವೂ ಲಭಿಸುವುವು.

೧೦೯. ಯೋಗಿಯು ಒಳ್ಳೆಯ ತಪಸ್ಸಿನಿಂದ ಸ್ವರ್ಗಾದಿ ಲೋಕಗಳನ್ನು ಆಕ್ರಮಿಸಿರುವನು. ಅನಂತರ ಆ ತೇಜಸ್ವಿಯು ಆ ಸ್ವರ್ಗಾದಿ ಲೋಕಗಳಲ್ಲಿ ನಿತ್ಯಸುಖವನ್ನು ಪಡೆಯುವನು.

ದಾನಾಚ್ಛ್ರೇಯಾಂಸ್ತಥಾ ಯಜ್ಞೋ ಯಜ್ಞಾಚ್ಛ್ರೇಯಸ್ತಥಾ ತಪಃ ।
ಸಂನ್ಯಾಸಸ್ತಪಸಃ ಶ್ರೇಯಾಂಸ್ತಸ್ಮಾಜ್ಞಾನಂ ಗುರುಃ ಸ್ಮೃತಂ ॥ ೧೧೦ ॥

ಶ್ರೂಯಂತೇ ಹಿ ತಪಃಸಿದ್ಧಾಃ ಕ್ಷಾತ್ರೋಪೇತಾ ದ್ವಿಜಾತಯಃ ।
ವಿಶ್ವಾಮಿತ್ರೋ ನರಪತಿರ್ಮಾಂಧಾತಾ ಸಂಕೃತಿಃ ಕಪಿಃ ॥ ೧೧೧ ॥

ಕಪೇಶ್ಚ ಪುರುಕುತ್ಸಶ್ಚ ಸತ್ಯಶ್ಚಾನೃಹವಾನೃಥುಃ ।
ಆರ್ಷ್ಟಿಷೇಣೋಜಮೀಢಶ್ಚ ಭಾಗಾನ್ಯೋನ್ಯಸ್ತಥೈವ ಚ ॥ ೧೧೨ ॥

ಕಕ್ಷೀವಶ್ಚೈವ ಶಿಜಯಸ್ತಥಾನ್ಯೇ ಚ ಮಹಾರಥಾಃ ।
ರಥೀತರಶ್ಚ ರುಂದಶ್ಚ ವಿಷ್ಣುವೃದ್ಧಾದಯೋ ನೃಪಾಃ ॥ ೧೧೩ ॥

---

೧೧೦. ಇಂತಹ ದಾನಕ್ಕಿಂತಲೂ ಯಜ್ಞವು ಶ್ರೇಷ್ಠವೆಂದೂ, ಅಂತಹ ಯಜ್ಞಕ್ಕಿಂತಲೂ ತಪಸ್ಸೇ ಉತ್ತಮವೆಂದೂ, ಆ ತಪಸ್ಸಿಗಿಂತಲೂ ಆಶಾಪರಿತ್ಯಾಗ ರೂಪವಾದ ಸನ್ಯಾಸವೇ ಮಾನ್ಯವೆಂದೂ, ಅದಕ್ಕಿಂತ ಜ್ಞಾನವು ಉತ್ತಮವಾದ ಗುರುವೆಂದೂ ಜ್ಞಾನಿಗಳು ಹೇಳುವರು.

೧೧೧. ಬ್ರಾಹ್ಮಣಾದಿಗಳು ತಪಸ್ಸಿದ್ಧಿಯುಳ್ಳವರಾಗಿ ಕ್ಷಾತ್ರಸಿದ್ಧಿಯನ್ನು ಹೊಂದಿದರು. ವಿಶ್ವಾಮಿತ್ರ, ಮಾಂಧಾತ, ಸಂಕೃತಿ, ಕಪಿ ಮೊದಲಾದ ರಾಜರು ತಪಸ್ಸಿನಿಂದ ಬ್ರಾಹ್ಮಣ್ಯವನ್ನು ಹೊಂದಿದರು.

೧೧೨-೧೧೪. ಕಪಿ, ಪುರುಕುತ್ಸ, ಸತ್ಯ ಅನೃಹವಂತ, ಋಭು, ಆರ್ಷ್ಟಿಷೇಣ, ಅಜಮೀಢ, ಭಾಗಾನ್ಯ, ಕಕ್ಷೀವ, ಶಿಜಯ ಇವರೇ ಮೊದಲಾದ ಮಹಾರಥರೂ ಮತ್ತು ರಥೀತರ, ರುಂದ, ವಿಷ್ಣುವೃದ್ಧ ಇವರೇ ಮೊದಲಾದ ರಾಜರೂ, ಕ್ಷಾತ್ರ

**ಕ್ಷಾತ್ರೋಪೇತಾಃ ಸ್ಮೃತಾ ಹ್ಯೇತೇ ತಪಸಾ ಋಷಿತಾಂ ಗತಾಃ ।**
**ಏತೇ ರಾಜರ್ಷಯಃ ಸರ್ವೇ ಸಿದ್ಧಿಂ ಸುಮಹತೀ ಗತಾಃ ॥**
**ಅತ ಊರ್ದ್ಧ್ವಂ ಪ್ರವಕ್ಷ್ಯಾಮಿ ಆಯೋರ್ವಂಶಂ ಮಹಾತ್ಮನಃ ॥ ೧೧೪ ॥**

**ಇತಿ ಶ್ರೀಮಹಾಪುರಾಣೇ ವಾಯುಪ್ರೋಕ್ತೇ ಚಂದ್ರವಂಶಕೀರ್ತನಂ ನಾಮೋನತ್ರಿಂಶೋಽಧ್ಯಾಯಃ**

ಧರ್ಮವನ್ನಾಶ್ರಯಿಸಿದ್ದರೂ ತಪಸ್ಸಕ್ತಿಯಿಂದ ಋಷಿತ್ವವನ್ನು ಹೊಂದಿದರು. ಮೇಲೆ ನಿರೂಪಿಸಿರುವ ರಾಜರೇ ಮೊದಲಾದವರು ತಪಸ್ಸಿನಿಂದ ಮಹಾಸಿದ್ಧಿಯನ್ನು ಹೊಂದಿದರು. ಮತ್ತು ಲೋಕವಿಖ್ಯಾತರಾಗಿಯೂ ಇರುವರು. ಇನ್ನು ಮೇಲೆ ಮಹಾತ್ಮನಾದ ಆಯುಮಹಾರಾಜನ ವಂಶವನ್ನು ವಿಸ್ತಾರವಾಗಿ ವರ್ಣಿಸುವೆನು ಕೇಳಿರೆಂದು ಸೂತಮುನಿಯು ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಚಂದ್ರವಂಶವರ್ಣನೆ " ಎಂಬ ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



# ಇಪ್ಪತ್ತೊಂಭತ್ತನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಚಂದ್ರವಂಶವು ವರ್ಣಿತವಾಗಿದೆ. ಸೋಮದೇವನಿಗೆ ಬುಧನೂ, ಅವನಿಗೆ ಪುರೂರವಸನು ಜನಿಸಿದರು. ಆ ಪುರೂರವಸನು ಬ್ರಹ್ಮದೇವನ ಶಾಪಗ್ರಸ್ಥಳಾದ ಊರ್ವಶಿಯನ್ನು ಮದುವೆಯಾಗಿ ಕೆಲವುಕಾಲ ಸುಖವಾಗಿದ್ದು ಪುತ್ರದರ್ಶನಾನಂತರ ಪತ್ನೀವಿಯೋಗದಿಂದ ಪೀಡಿತನಾಗಿ ಕೊನೆಗೆ ಸ್ವರ್ಗಾದಿಸುಖವನ್ನು ಪಡೆದನು. ಅವನಿಗೆ ಆಯುಸ್ಸು, ಅಮಾವಸುವೇ ಮೊದಲಾದ ಆರುಜನ ಮಕ್ಕಳು ಹುಟ್ಟಿದರು. ಆ ವಂಶದಲ್ಲಿಯೇ ಕುಶನೂ, ಅವನಿಗೆ ಗಾಧಿಯೆಂಬ ಕುಮಾರನೂ ಜನಿಸಿದರು. ಸತ್ಯವತಿಯು ಋಚೀಕನನ್ನು ಮದುವೆಯಾಗಿ ಚರು ವ್ಯತ್ಯಾಸದಿಂದ ಜಮದಗ್ನಿಯನ್ನು ಪಡೆದಳು. ಗಾಧಿಮುನಿಗೆ ವಿಶ್ವಾಮಿತ್ರನೆಂಬ ಸುತನು ಜನಿಸಿದನು. ಹಾಗೆಯೇ ಜಮದಗ್ನಿ, ರೇಣುಕೆಯರಿಗೆ ಪರಶುರಾಮನೆಂಬ ಪುತ್ರನು ಹುಟ್ಟಿದನು. ವಿಶ್ವಾಮಿತ್ರನಿಗೆ ಶುನಃಶೇಫನೇ ಮೊದಲಾದ ಕುಮಾರರು ಜನಿಸಿದರು. ವಿಶ್ವಾಮಿತ್ರ, ಮಾಂಧಾತ ಇವರೇ ಮೊದಲಾದ ರಾಜರ್ಷಿಗಳು ತಪಸ್ಸಿದ್ಧಿಯಿಂದ ಬ್ರಹ್ಮರ್ಷಿತನವನ್ನೂ, ನಿತ್ಯಸುಖವನ್ನೂ ಪಡೆದರು. ಎಂಬ ವಿಷಯವು ಈ ಅಧ್ಯಾಯದಲ್ಲಿ ವರ್ಣಿತವಾಗಿದೆ.

—|| ಹರಿಃ ಓಂ ||—

—|| ಶ್ರೀ ವೇದವ್ಯಾಸಾಯ ನಮಃ ||—

# ಶ್ರೀ ಮ ದ್ವಾ ಯು ಮ ಹಾ ಪು ರಾ ಣ ಂ

## ತ್ರಿಂಶೋಽಧ್ಯಾಯಃ

**|| ಸೂತ ಉವಾಚ ||**

**ಏತೇ ಪುತ್ರಾ ಮಹಾತ್ಮಾನಃ ಪಂಚೈವಾರ್ಸ ಮಹಾಬಲಾಃ ।**
**ಸ್ವರ್ಭಾನು ತನಯಾ ವಿಪ್ರಾಃ ಪ್ರಭಾಯಾಂ ಜಜ್ಞಿರೇ ನೃಪಾಃ || ೧ ||**

**ನಹುಷಃ ಪ್ರಥಮಸ್ತೇಷಾಂ ಪುತ್ರಧರ್ಮಾ ತತಃ ಸ್ಮೃತಃ ।**
**ಧರ್ಮವೃದ್ಧಾತ್ಮಜಶ್ಚೈವ ಸುತಹೋತ್ರೋ ಮಹಾಯಶಾಃ || ೨ ||**

**ಸುತಹೋತ್ರಸ್ಯ ದಾಯಾದಾಸ್ತ್ರಯಃ ಪರಮಧಾರ್ಮಿಕಾಃ ।**
**ಕಾಶಃ ಶಲಶ್ಚ ದ್ವಾವೇತೌ ತಥಾ ಗೃತ್ಸಮದಃ ಪ್ರಭುಃ || ೩ ||**

## ಮೂವತ್ತನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :—ಎಲೈ ಮುನಿವರ್ಯರೇ, ಈಗ ಆಯು ರಾಜನ ವಂಶವನ್ನು ಹೇಳುವೆನು ಕೇಳಿರಿ. ಈ ವಂಶದಲ್ಲಿ ಸ್ವರ್ಭಾನು ಪ್ರಭಾ ಎಂಬ ದಂಪತಿಗಳಿಗೆ ಮಹಾತ್ಮರೂ ಮಹಾ ಬಲಿಷ್ಠರೂ ಆದ ಐದು ಜನ ಮಕ್ಕಳು ಜನಿಸಿ ಸುಪ್ರಸಿದ್ಧರಾಗಿದ್ದರು.

೨. ಅವರಲ್ಲಿ ನಹುಷನು ಜ್ಯೇಷ್ಠಕುಮಾರನಾಗಿರುವನು. ಅನಂತರ ಪುತ್ರ ಧರ್ಮನು ಜನಿಸಿದನು. ತರುವಾಯ ಧರ್ಮವೃದ್ಧನ ಕುಮಾರನೂ ಮಹಾಕೀರ್ತಿ ವಂತನೂ ಆದ ಸುತಹೋತ್ರನೆಂಬ ಪುತ್ರನು ಉದ್ಭವಿಸಿದನು.

೩. ಅವರಲ್ಲಿ ಸುತಹೋತ್ರನಿಗೆ ಪರಮಧಾರ್ಮಿಕರಾದ ಕಾಶ, ಶಲ, ಗೃತ್ಸ ಮದರೆಂಬ ಮೂವರು ರಾಜಕುಮಾರರು ಜನಿಸಿ ಪ್ರಸಿದ್ಧರಾಗಿದ್ದರು.

ಪುತ್ರೋ ಗೃತ್ಸಮದಸ್ಯಾಪಿ ಸುನಕೋ ಯಸ್ಯ ಶೌನಕಃ ।
ಬ್ರಾಹ್ಮಣಾಃ ಕ್ಷತ್ರಿಯಾಶ್ಚೈವ ವೈಶ್ಯಾಃ ಶೂದ್ರಾಸ್ತಥೈವ ಚ ॥ ೪ ॥

ಏತಸ್ಯ ವಂಶೇ ಸಂಭೂತಾ ವಿಚಿತ್ರೈಃ ಕರ್ಮಭಿರ್ದ್ವಿಜಾಃ ।
ಶಲಾತ್ಮಜೋ ಹ್ಯಾರ್ಷ್ಟಿಷೇಣಶ್ಚರಂ ತಸ್ತಸ್ಯ ಚಾತ್ಮಜಃ ॥ ೫ ॥

ಶೌನಕಾಶ್ಚಾರ್ಷ್ಟಿಷೇಣಾಶ್ಚ ಕ್ಷಾತ್ರೋಪೇತಾ ದ್ವಿಜಾತಯಃ ।
ಕಾಶಸ್ಯ ಕಾಶಯೋ ರಾಷ್ಟ್ರಃಪುತ್ರೋ ದೀರ್ಘತಪಾಸ್ತಥಾ ॥ ೬ ॥

ಧರ್ಮಶ್ಚ ದೀರ್ಘತಪಸೋ ವಿದ್ವಾನ್ ಧನ್ವಂತರಿಸ್ತತಃ ।
ತಪಸಾ ಸುಮಹಾತೇಜಾ ಜಾತೋ ವೃದ್ಧಸ್ಯ ಧೀಮತಃ
ಅಥೈನಮೃಷಯಃ ಪ್ರೋಚುಃ ಸೂತಂ ವಾಕ್ಯಮಿಮಂ ಪುನಃ ॥ ೭ ॥

೪. ಗೃತ್ಸಮದನಿಗೆ ಶುನಕನೆಂಬ ಕುಮಾರನೂ ಅವನಿಗೆ ಶೌನಕನೆಂಬ ಪುತ್ರನೂ ಜನಿಸಿದರು. ಇವರ ವಂಶದಲ್ಲಿ ವಿಚಿತ್ರಕರ್ಮಗಳಿಂದ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಇವರೇ ಮೊದಲಾದವರು ಜನಿಸಿದರು.

೫. ಶಲನೆಂಬುವನಿಗೆ ಆರ್ಷ್ಟಿಷೇಣನೆಂಬ ಸುತನೂ ಅವನಿಗೆ ಚಿರಂತನೆಂಬ ಪುತ್ರನೂ ಉದ್ಭವಿಸಿದರು. ಹೀಗೆ ಆ ವಂಶವು ನಾನಾರೀತಿಯಾಗಿ ವೃದ್ಧಿಯಾಯಿತು.

೬. ಶೌನಕರೂ ಆರ್ಷ್ಟಿಷೇಣರೂ ಕೂಡ ಕ್ಷತ್ರಿಯಧರ್ಮೋಪೇತರಾದ ಬ್ರಾಹ್ಮಣಾದಿಗಳಾಗಿರುವರು. ಕಾಶನಿಗೆ ಕಾಶಯವೆಂಬ ದೇಶವೂ ದೀರ್ಘತಪಸ್ಸೆಂಬ ಕುಮಾರನೂ ಇದ್ದರು.

೭. ವೃದ್ಧನೂ ಜ್ಞಾನಿಯೂ ಆದ ದೀರ್ಘತಪಸನಿಗೆ ಮಹಾತಪಸ್ಸಿನಿಂದ ಪ್ರಖ್ಯಾತರೂ ಜ್ಞಾನಿಯೂ ಆದ ಧರ್ಮ ಮತ್ತು ಧನ್ವಂತರಿಯೆಂಬ ಇಬ್ಬರು ಕುಮಾರರು ಜನಿಸಿದರು. ತರುವಾಯ ಮುನಿಗಳು ಆ ಧನ್ವಂತರಿಯನ್ನು ನೋಡಿ ವಕ್ಷ್ಯಮಾಣ ರೀತಿಯಾಗಿ ಹೇಳಿದರು.

|| ಋಷಯ ಊಚುಃ ||

ಕಥಂ ಧನ್ವಂತರಿರ್ದೇವೋ ಮಾನುಷೇಷ್ವಿಹ ಜಜ್ಞಿವಾ್ |
ಏತದ್ವೇದಿತುಮಿಚ್ಛಾಮಸ್ತತೋ ಬ್ರೂಹಿ ಪ್ರಿಯಂ ತಥಾ || ೮ ||

|| ಸೂತ ಉವಾಚ ||

ಧನ್ವಂತರೇ ಸಂಭವೋಽಯಂ ಶ್ರೂಯತಾಮಿಹ ವೈ ದ್ವಿಜಾಃ |
ಸ ಸಂಭೂತಃ ಸಮುದ್ರಾಂತೇ ಮಥ್ಯಮಾನೇಽಮೃತೇ ಪುರಾ || ೯ ||

ಉತ್ಪನ್ನಃ ಸಕಲಾತ್ ಪೂರ್ವಂ ಸರ್ವತಶ್ಚ ಶ್ರಿಯಾವೃತಃ |
ಸರ್ವಸಂಸಿದ್ಧಕಾಯಂ ತಂ ದೃಷ್ಟ್ವಾ ವಿಷ್ಟಂಭಿತಃ ಸ್ಥಿತಃ ||
ಅಜಸ್ತ್ವಮಿತಿ ಹೋವಾಚ ತಸ್ಮಾದಜಸ್ತು ಸ ಸ್ಮೃತಃ || ೧೦ ||

---

೮. ಮುನಿಗಳು ಹೇಳಿದರು :—ಎಲೈ ಸೂತಮುನಿಯೇ, ಸ್ವಾಮಿಯಾದ ಈ ಭಗವಂತನು ಮನುಷ್ಯರಲ್ಲಿ ಧನ್ವಂತರಿಯಾಗಿ ಅವತಾರ ಮಾಡಲು ಕಾರಣವೇನು. ಕೇಳಬೇಕೆಂಬ ಕುತೂಹಲವು ವಿಶೇಷವಾಗಿ ಉಂಟಾಗಿದೆ. ಆದುದರಿಂದ ಪ್ರಿಯವಾದ ವಿಷಯವನ್ನು ಹೇಳುವಂತೆ ಪ್ರಾರ್ಥಿಸಿಕೊಂಡರು.

೯. ಸೂತಮುನಿಯು ಹೇಳಿದನು :—ಎಲೈ ವಿಪ್ರವರ್ಯರೇ, ಸ್ವಾಮಿಯಾದ ಧನ್ವಂತರಿಯ ಅವತಾರವನ್ನು ಕೇಳಿರಿ ತಿಳಿಸುವೆನು. ಪೂರ್ವದಲ್ಲಿ ದೇವಾಸುರರು ಅಮೃತಕ್ಕಾಗಿ ಸಮುದ್ರವನ್ನು ಮಥಿಸಲಾಗಿ ಸಮುದ್ರಮಧ್ಯದಲ್ಲಿ ಧನ್ವಂತರಿಯು ಅವತರಿಸಿದನು.

೧೦. ದೇವಾಸುರರು ಸಮುದ್ರವನ್ನು ಮಥಿಸಲಾಗಿ ಎಲ್ಲಾ ವಸ್ತುಗಳಿಗಿಂತಲೂ ಮೊದಲು ಸಕಲ ಸಂಪತ್ತುಗಳಿಂದ ಸಂಪನ್ನನಾದ ಧನ್ವಂತರಿಯು ಜನಿಸಿದನು. ಸರ್ವಾಂಗಗಳಿಂದ ಪೂರ್ಣವಾದ ಶರೀರವುಳ್ಳ ಅವನನ್ನು ನೋಡಿ ದೇವಾದಿಗಳು ನೀನು ಅಜನಾಗಿರುತ್ತೀ (ಉತ್ಪತ್ತಿಶೂನ್ಯನು) ಎಂದು ಹೇಳಲು, ಅಂದಿನಿಂದಲೂ ಅಜನೆಂದು ಪ್ರಖ್ಯಾತನಾದನು.

**ಅಜಃ ಪ್ರೋವಾಚ ವಿಷ್ಣುಂ ತಂ ತನಯೋಽಸ್ಮಿ ತವ ಪ್ರಭೋ ।**
**ವಿಧಸ್ತ್ವ ಭಾಗಂ ಸ್ಥಾನಂ ಚ ಮಮ ಲೋಕೇ ಸುರೋತ್ತಮ ॥ ೧೧ ॥**

**ಏವಮುಕ್ತಃ ಸ ದೃಷ್ಟ್ವಾ ತು ತಥಾಃ ಪ್ರೋವಾಚ ಸ ಪ್ರಭುಃ ।**
**ಕೃತೋ ಯಜ್ಞವಿಭಾಗಸ್ತು ಯಜ್ಞಯ್ಯೈರ್ಹಿ ಸುರೈಸ್ತಥಾ ॥ ೧೨ ॥**

**ವೇದೇಷು ವಿಧಿಯುಕ್ತಂ ಚ ವಿಧಿಹೋತ್ರಂ ಮಹರ್ಷಿಭಿಃ ।**
**ನ ಶಕ್ಯಮಿಹ ಹೋಮೋ ವೈ ತುಲ್ಯಂ ಕರ್ತುಂ ಕದಾಚನ ॥ ೧೩ ॥**

**ಅರ್ವಾಕ್ಸುತೋಽಸಿ ಹೇ ದೇವ ನಾಮಮಂತ್ರೋಽಸಿ ವೈ ಪ್ರಭೋ ।**
**ದ್ವಿತೀಯಾಯಾಂ ತು ಸಂಭೂತ್ಯಾಂ ಲೋಕೇ ಖ್ಯಾತಿಂ ಗಮಿಷ್ಯಸಿ ॥ ೧೪ ॥**

೧೧. ಆಗ ಬ್ರಹ್ಮದೇವನು ಸುರೋತ್ತಮನೂ ಸ್ವಾಮಿಯೂ ಆದ ಶ್ರೀಹರಿಯನ್ನು ಕುರಿತು ಎಲೈ ಪ್ರಭುವೇ, ನಾನು ನಿನ್ನ ತನಯನಾಗಿರುವೆನು. ನನಗೆ ಈ ಲೋಕದಲ್ಲಿ ಸ್ಥಾನವನ್ನು ವಿಧಾನಮಾಡು? ನಾನು ಎಲ್ಲಿ ವಾಸಮಾಡಲೆಂದು ಪ್ರಾರ್ಥಿಸಿದನು.

೧೨. ಹೀಗೆ ಬ್ರಹ್ಮದೇವನು ಹೇಳಲಾಗಿ ಸ್ವಾಮಿಯಾದ ಶ್ರೀಹರಿಯು ಹೇಳಿದ್ದೇನೆಂದರೆ:—ಎಲೈ ಅಜನೇ, ಯಾವ ಯಾಗದಿಂದ ದೇವತೆಗಳು ತೃಪ್ತರಾಗುವರೋ ಅಂತಹ ಯಾಗದಲ್ಲಿ ನಿನಗೆ ವಿಭಾಗವು ಕ್ಲಿಪ್ತವಾಗಿಯೂ ಸಿದ್ಧವಾಗಿಯೂ ಇರುವುದು ಎಂದನು.

೧೩. ಮಹರ್ಷಿಗಳು ಶಾಸ್ತ್ರೋಕ್ತರೀತಿಯಾಗಿ ವೇದೋಕ್ತಕ್ರಮದಿಂದ ಯಜ್ಞ ಮಾಡುವಾಗ ಸಮಸ್ತರಾದ ದೇವತೆಗಳಿಗೂ ನಿನಗೂ ಸಮವಾಗಿ ಹವಿರ್ದಾನವನ್ನು ಮಾಡಲು ಸಾಧ್ಯವಿಲ್ಲ.

೧೪. ಎಲೈ ಪ್ರಭುವಾದ ಬ್ರಹ್ಮದೇವನೇ, ನೀನು ನನಗೆ ಹಿರಿಯ ಕುಮಾರನೂ, ನಾಮಮಂತ್ರರೂಪನೂ ಆಗಿರುತ್ತಿ; ಆದುದರಿಂದ ನೀನು ಎರಡನೆಯ ಸೃಷ್ಟಿಯಲ್ಲಿ ಲೋಕವಿಖ್ಯಾತನಾದ ಪುರುಷನಾಗು ಎಂದು ಹರಿಯು ವರವನ್ನು ಕೊಟ್ಟನು.

**ಅಣಿಮಾದಿಯುತಾ ಸಿದ್ಧಿರ್ಗರ್ಭಸ್ಥಸ್ಯ ಭವಿಷ್ಯತಿ ।**
**ತೇನೈವ ಚ ಶರೀರೇಣ ದೇವತ್ವಂ ಪ್ರಾಪ್ಸ್ಯಸಿ ಪ್ರಭೋ ॥**
**ಚಾರುಮಂತ್ರೈರ್ಘೃತೈರ್ಗಂಧೈರ್ಯಕ್ಷ್ಯಂತಿ ತ್ವಾಂ ದ್ವಿಜಾತಯಃ ॥ ೧೫ ॥**

**ಅಥ ಚ ತ್ವಂ ಪುನಶ್ಚೈವ ಆಯುರ್ವೇದಂ ವಿಧಾಸ್ಯಸಿ ।**
**ಅವಶ್ಯಂಭಾವೀ ಹ್ಯರ್ಥೋಽಯಂ ಪ್ರಾಗ್ದಿಷ್ಟಸ್ತ್ವಬ್ಜಯೋನಿನಾ ॥ ೧೬ ॥**

**ದ್ವಿತೀಯಂ ದ್ವಾಪರಂ ಪ್ರಾಪ್ಯ ಭವಿತಾ ತ್ವಂ ನ ಸಂಶಯಃ ।**
**ತಸ್ಮಾತ್ ತಸ್ಮೈ ವರಂ ದತ್ವಾ ವಿಷ್ಣುರಂತರ್ದಧೇ ತತಃ ॥ ೧೭ ॥**

**ದ್ವಿತೀಯೇ ದ್ವಾಪರೇ ಪ್ರಾಪ್ತೇ ಸೌನಹೋತ್ರಃ ಸ ಕಾಶಿರಾಟ್ ।**
**ಪುತ್ರಕಾಮಸ್ತಪಸ್ತೇಪೇ ನೃಪೋ ದೀರ್ಘತಪಾಸ್ತಥಾ ॥ ೧೮ ॥**

---

೧೫. ಎಲೈ ಬ್ರಹ್ಮದೇವನೆ, ನೀನು ಗರ್ಭದಲ್ಲಿರುವಾಗಲೇ ಅಣಿಮಾದ್ಯಷ್ಟ ಸಿದ್ಧಿಗಳು ನಿನಗೆ ಸಿದ್ಧವಾಗುವುವು. ನೀನು ಆ ದಿವ್ಯಶರೀರದಿಂದಲೇ ದೇವತೆಯಾಗು. ತರುವಾಯ ಬ್ರಾಹ್ಮಣರು ವೇದೋಕ್ತಮಂತ್ರಗಳಿಂದ ಪೂತವಾದ ಚರು, ಘೃತ, ಗಂಧಪುಷ್ಪಾದಿಗಳಿಂದ ಪೂಜಿಸುವರು ಎಂದನು.

೧೬. ಅನಂತರ ನೀನು ಆಯುರ್ವೇದ ಶಾಸ್ತ್ರವನ್ನು ಮಾಡಿ ಪ್ರಖ್ಯಾತಿಯನ್ನು ಪಡೆ. ಈ ಆಯುರ್ವೇದವು ಲೋಕೋಪಕಾರಕ್ಕಾಗಿ ಅವಶ್ಯವಾಗಿದೆ. ಎಂದು ಹರಿಯು ಹೇಳಲು, ಅದರಂತೆ ಬ್ರಹ್ಮನು ಆಯುರ್ವೇದವನ್ನು ರಚಿಸಿದನು.

೧೭. ಎಲೈ ಬ್ರಹ್ಮನೇ, ಎರಡನೆಯ ದ್ವಾಪರಯುಗದಲ್ಲಿ ನೀನು ಅವತರಿಸಿ ಈ ಕಾರ್ಯವನ್ನು ಮಾಡು ಎಂದು ಹರಿಯು ಬ್ರಹ್ಮದೇವನಿಗೆ ವರವನ್ನು ಕೊಟ್ಟು ಅಲ್ಲಿಯೇ ಮಾಯವಾದನು.

೧೮. ತರುವಾಯ ಎರಡನೆಯ ದ್ವಾಪರಯುಗವು ಪ್ರಾಪ್ತವಾಗಲು, ಸೌನಹೋತ್ರನೆಂಬ ಕಾಶೀರಾಜನು ಪುತ್ರಾಪೇಕ್ಷೆಯಿಂದ ಬ್ರಹ್ಮನನ್ನು ಕುರಿತು ದೀರ್ಘವಾದ ತಪಸ್ಸನ್ನು ಮಾಡಿದನು. ಹೀಗೆ ಅವನು ಬಹುಕಾಲ ತಪಸ್ಸು ಮಾಡಿದ್ದರಿಂದ ದೀರ್ಘತಪೋನಾಮಕನಾದನು.

**ಅಜಂ ದೇವಂ ತು ಪುತ್ರಾರ್ಥೇ ಹ್ಯಾರಿರಾಧಯಿಷುರ್ನೃಪಃ ।**
**ವರೇಣ ಚ್ಛಂದಯಾಮಾಸ ಪ್ರೀತೋ ಧನ್ವಂತರಿರ್ನೃಪಂ ॥ ೧೯ ॥**

**॥ ನೃಪ ಉವಾಚ ॥**

**ಭಗವನ್ ಯದಿ ತುಷ್ಟಸ್ತ್ವಂ ಪುತ್ರೋ ಮೇ ಧೃತಿಮಾನ್ ಭವ ।**
**ತಥೇತಿ ಸಮನುಜ್ಞಾಯ ತತ್ರೈವಾಂತರಧೀಯತ ॥ ೨೦ ॥**

**ತಸ್ಯ ಗೇಹೇ ಸಮುತ್ಪನ್ನೋ ದೇವೋ ಧನ್ವಂತರಿಸ್ತದಾ ।**
**ಕಾಶಿರಾಜೋ ಮಹಾರಾಜಃ ಸರ್ವರೋಗಪ್ರಣಾಶನಃ ॥ ೨೧ ॥**

**ಆಯುರ್ವೇದಂ ಭರದ್ವಾಜಶ್ಚಕಾರ ಸಭಿಷಕ್ರಿಯಂ ।**
**ತಮಷ್ಟಧಾ ಪುನರ್ಯಸ್ಯ ಶಿಷ್ಯೇಭ್ಯಃ ಪ್ರತ್ಯುಪಾದಯತ್ ॥ ೨೨ ॥**

---

೧೯. ಅನಂತರ ಆ ಕಾಶೀರಾಜನು ಬ್ರಹ್ಮದೇವನೇ ಪುತ್ರನಾಗಿ ಜನಿಸ ಬೇಕೆಂದು ಬ್ರಹ್ಮನನ್ನು ಆರಾಧಿಸಿದನು. ಆಗ ಬ್ರಹ್ಮನು ಪ್ರೀತನಾಗಿ ಧನ್ವಂತರಿಯಾಗಿ ಅವತರಿಸಲು ಸಿದ್ಧನಾಗಿ ರಾಜನಿಷ್ಟದಂತೇ ವರವನ್ನು ಕೊಟ್ಟನು.

೨೦. ಆಗ ಕಾಶೀರಾಜನು ಹೇಳಿದನು: ಆಗ ರಾಜನು ಸಂತೋಷದಿಂದ ಎಲೈ ಸ್ವಾಮಿಯೇ, ನೀನು ನನಗೆ ನಿಜವಾಗಿಯೂ ಪ್ರೀತನಾಗಿದ್ದರೆ ನೀನೇ ನನಗೆ ಪುತ್ರನಾಗಿ ಅವತರಿಸಬೇಕೆಂದು ಧೈರ್ಯದಿಂದ ಪ್ರಾರ್ಥಿಸಿದನು. ಎಲೈ ನೃಪನೇ, ಹಾಗೆಯೇ ಆಗಬಹುದೆಂದು ಹೇಳಿ ಮಾಯವಾದನು.

೨೧. ಅನಂತರ ಬ್ರಹ್ಮದೇವನು ಧನ್ವಂತರೀನಾಮದಿಂದ ಕಾಶೀರಾಜನ ಮನೆಯಲ್ಲಿ ಅವತರಿಸಿದನು. ತರುವಾಯ ಕಾಶೀದೇಶಕ್ಕೆ ಪ್ರಭುವಾದ ಆ ರಾಯನು ಸರ್ವರೋಗಗಳಿಂದ ಪರಿಹೃತನಾಗಿ ಸುಖವಾಗಿದ್ದನು.

೨೨. ಭರದ್ವಾಜನು ವೈದ್ಯಕ್ರಿಯೆಗಳಿಂದ ಕೂಡಿದ ಆಯುರ್ವೇದವನ್ನು ನಿರ್ಮಿಸಿದನು. ಅನಂತರ ಧನ್ವಂತರಿಯು ಅದನ್ನು ಎಂಟು ಭಾಗಮಾಡಿ ಶಿಷ್ಯರಿಗೆ ಉಪದೇಶಮಾಡಿದನು.

ಧನ್ವಂತರಿಸುತಶ್ಚಾಪಿ ಕೇತುಮಾನಿತಿ ವಿಶ್ರುತಃ ।
ಅಥ ಕೇತುಮತಃ ಪುತ್ರೋ ವೀರೋ ಭೀಮರಥೋ ನೃಪಃ ॥
ದಿವೋದಾಸ ಇತಿ ಖ್ಯಾತೋ ವಾರಾಣಸ್ಯಾಧಿಪೋಽಭವತ್ ॥ ೨೩ ॥

ಏತಸ್ಮಿನ್ನೇವ ಕಾಲೇ ತು ಪುರೀಂ ವಾರಾಣಸೀಂ ಪುರಾ ।
ಶೂನ್ಯಾಂ ನಿವೇಶಯಾಮಾಸ ಕ್ಷೇಮಕೋ ನಾಮ ರಾಕ್ಷಸಃ ॥ ೨೪ ॥

ಶಪ್ತಾ ಹಿ ಸಾ ಪುರೀ ಪೂರ್ವಂ ನಿಕುಂಭೇನ ಮಹಾತ್ಮನಾ ।
ಶೂನ್ಯಾ ವರ್ಷಸಹಸ್ರಂ ವೈ ಭವಿತ್ರೀತಿ ಪುನಃ ಪುನಃ ॥ ೨೫ ॥

ತಸ್ಯಾಂ ತು ಶಪ್ತಮಾತ್ರಾಯಾಂ ದಿವೋದಾಸಃ ಪ್ರಜೇಶ್ವರಃ ।
ವಿಷಯಾಂತೇ ಪುರೀಂ ರಮ್ಯಾಂ ಗೋಮತ್ಯಾಂ ಸನ್ನ್ಯವೇಶಯತ್ ॥ ೨೬ ॥

೨೩. ಆ ಧನ್ವಂತರಿಗೆ ಕೇತುಮಂತನೆಂಬ ಪುತ್ರನೂ ಅವನಿಗೆ ಭೀಮರಥನೆಂಬ ಕುಮಾರನೂ ಜನಿಸಿದರು. ಆ ಭೀಮನೃಪನೆಂಬ ನೃಪನು ದಿವೋದಾಸನೆಂದು ಪ್ರಖ್ಯಾತನಾಗಿ ಕಾಶೀನಗರಕ್ಕೆ ಪ್ರಭುವಾಗಿದ್ದನು.

೨೪. ಹೀಗೆ ಆ ರಾಜನು ರಾಜ್ಯವಾಳುತ್ತಿರುವಲ್ಲಿ ಪೂರ್ವಕಾಲದಲ್ಲಿ ಕ್ಷೇಮಕನೆಂಬ ರಾಕ್ಷಸನು ಕಾಶೀನಗರದ ಪ್ರಜೆಗಳನ್ನಟ್ಟಿ, ಶೂನ್ಯವಾದ ನಗರವನ್ನು ಪ್ರವೇಶಿಸಿದನು.

೨೫. ಆ ಕಾಶೀನಗರಿಯು ಪೂರ್ವದಲ್ಲಿ ಮಹಾತ್ಮನಾದ ನಿಕುಂಭನು ಒಂದು ಸಾವಿರ ವರ್ಷಾನಂತರ ಶೂನ್ಯವಾಗುವುದೆಂದು ಪುನಃ ಪುನಃ ಶಾಪವನ್ನು ಕೊಟ್ಟಿದ್ದನು.

೨೬. ಹೀಗೆ ನಿಕುಂಭನು ಶಪಿಸಲಾಗಿ ದಿವೋದಾಸನೆಂಬ ಮಹಾರಾಜನು ಗೋಮತೀತೀರದಲ್ಲಿರುವ ದೇಶಾಂತರದಲ್ಲಿ ರಮ್ಯವಾದ ನಗರಿಯನ್ನು ನಿರ್ಮಿಸಿ ಪ್ರಜೆಗಳನ್ನು ಸ್ಥಾಪಿಸಿದನು.

|| ಋಷಯ ಊಚುಃ ||

ವಾರಾಣಸೀಂ ಕಿಮರ್ಥಂ ತಾಂ ನಿಕುಂಭಃ ಶಪ್ತವಾನ್ ಪುರಾ |
ನಿಕುಂಭಶ್ಚಾಪಿ ಧರ್ಮಾತ್ಮಾ ಸಿದ್ಧಕ್ಷೇತ್ರಂ ಶಶಾಪ ಯಃ || ೨೭ ||

|| ಸೂತ ಉವಾಚ ||

ದಿವೋದಾಸಸ್ತು ರಾಜರ್ಷಿರ್ನಗರೀಂ ಪ್ರಾಪ್ಯ ಪಾರ್ಥಿವಃ |
ವಸತೇ ಸ ಮಹಾತೇಜಾಃ ಸ್ಫೀತಾಯಾಂ ವೈ ನರಾಧಿಪಃ || ೨೮ ||

ಏತಸ್ಮಿನ್ನೇವ ಕಾಲೇ ತು ಕೃತದಾರೋ ಮಹೇಶ್ವರಃ |
ದೇವ್ಯಾಃ ಸ ಪ್ರಿಯಕಾಮಸ್ತು ವಸಾನಶ್ಚ ಸುರಾಂತಿಕೇ || ೨೯ ||

ದೇವಾಜ್ಞಯಾ ಪಾರಿಷದಾ ವಿಶ್ವರೂಪಾಸ್ತಪೋಧನಾಃ |
ಪೂರ್ವೋಕ್ತೈ ರೂಪವಿಶೇಷೈಸ್ತೋಷಯಂತಿ ಮಹೇಶ್ವರೀಂ || ೩೦ ||

೨೭. ತರುವಾಯ ಮುನಿಗಳು ಕೇಳಿದರು:— ಎಲೈ ಸೂತಮುನಿಯೇ, ಪೂರ್ವದಲ್ಲಿ ನಿಕುಂಭನು ಕಾಶೀನಗರಿಗೆ ಏತಕ್ಕಾಗಿ ಶಾಪವನ್ನು ಕೊಟ್ಟನು ? ಅವನು ಧರ್ಮದಲ್ಲಿ ನಿರತನಲ್ಲವೇ ? ಅವನು ಸಿದ್ಧಕ್ಷೇತ್ರಕ್ಕೆ ಇದರಂತೆ ಶಾಪವನ್ನು ಕೊಟ್ಟಿದ್ದನು.

೨೮. ಸೂತಮುನಿಯು ಹೇಳಿದನು:—ದಿವೋದಾಸನೆಂಬ ರಾಜರ್ಷಿಯು ಆ ಸಮೃದ್ಧರಾದ ಪ್ರಜೆಗಳಿಂದಲೂ, ಸರ್ವಸಂಪತ್ತುಗಳಿಂದಲೂ ಪೂರ್ಣವೂ ಆದ ಆ ನಗರಿಯನ್ನು ಹೊಂದಿ ಮಹಾತೇಜಸ್ವಿಯಾಗಿ ಪಾಲಿಸಿದನು.

೨೯. ಹೀಗಿರುವಲ್ಲಿ ಮಹೇಶ್ವರನು ಉಮಾದೇವಿಯನ್ನು ಮದುವೆಯಾಗಿ, ದೇವಿಗೆ ಪ್ರಿಯವನ್ನು ಮಾಡಬೇಕೆಂದು ದೇವಸಭೆಯಲ್ಲಿ ಪ್ರಕಾಶಿಸುತ್ತಿದ್ದನು.

೩೦. ಪರಮೇಶ್ವರನ ಆಜ್ಞಾನುಸಾರವಾಗಿ ಸಭಿಕರೂ ಅನೇಕರೂಪಿಗಳಾದ ತಪೋಧನರೂ ಸಹ ಪೂರ್ವೋಕ್ತವಾದ ರೂಪವಿಶೇಷಗಳಿಂದ ಪಾರ್ವತೀದೇವಿಯನ್ನು ನಾನಾವಿಧಗಳಿಂದ ಸ್ತೋತ್ರಗಳನ್ನು ಮಾಡಿದರು.

ಹೃಷ್ಯತಿ ತೈರ್ಮಹಾದೇವೋ ಮೇನಾ ನೈವತು ಹೃಷ್ಯತಿ ।
ಜುಗುಪ್ಸತೇ ಸಾ ನಿತ್ಯಂಚ ದೇವಂ ದೇವೀಂ ತಥೈವ ಚ ॥ ೩೧ ॥

ಮಮ ಪಾರ್ಶ್ವೇ ತ್ವನಾಚಾರಸ್ತವ ಭರ್ತಾ ಮಹೇಶ್ವರಃ ।
ದರಿದ್ರಃ ಸರ್ವ ಏವೇಹ ಅಕ್ಲಿಷ್ಟಂ ಲಡತೇನಘೇ ॥ ೩೨ ॥

ಮಾತ್ರಾ ತಥೋಕ್ತಾ ವಚಸಾ ಸ್ತ್ರೀಸ್ವಭಾವಾನ್ನ ಚಾಕ್ಷಮತ್ ।
ಸ್ಮಿತಂ ಕೃತ್ವಾ ತು ವರದಾ ಹರಪಾರ್ಶ್ವಮಥಾಗಮತ್ ॥ ೩೩ ॥

ವಿಷಣ್ಣವದನಾ ದೇವೀ ಮಹಾದೇವಮಭಾಷತ ।
ನೇಹ ವತ್ಸ್ಯಾಮ್ಯಹಂ ದೇವ ನಯ ಮಾಂ ಸ್ವಂ ನಿವೇಶನಂ ॥ ೩೪ ॥

---

೩೧. ಆ ದೇವತೆಗಳ ಪೂಜೆಯಿಂದ ಮಹಾದೇವನು ಬಹಳವಾಗಿ ಸಂತುಷ್ಟನಾದನು. ಮೇನಕೆಯಾದರೋ ಅಂತಹ ಅಳಿಯನನ್ನು ಮಗಳನ್ನು ನೋಡಿ ಸಂತೋಷಪಡಲಿಲ್ಲ. ಅದಕ್ಕೆ ಪ್ರತಿಯಾಗಿ ಉಮಾಮಹೇಶ್ವರರನ್ನು ನೋಡಿ ಜುಗುಪ್ಸಿತಳಾದಳು.

೩೨. ನನ್ನ ಪಕ್ಕದಲ್ಲಿ ಅನಾಚಾರಿಯಾದ ನಿನ್ನ ಪತಿಯಾದ ಮಹೇಶ್ವರನು ಇರುವನು. ಅವನು ಕೇವಲ ದರಿದ್ರನು. ವ್ಯರ್ಥವಾಗಿ ಹರಟುತ್ತಾನೆ ಎಂದಳು.

೩೩. ತಾಯಿಯಾದ ಮೇನಕೆಯು ಮಾಡಿದ ಅಪಮಾನಕ್ಕೆ ಪಾರ್ವತಿಯು ಸ್ತ್ರೀಸ್ವಭಾವದಿಂದ ಸಹನೆಯಿಲ್ಲದೇ ನಕ್ಕು, ಈಶ್ವರನ ಬಳಿಗೆ ಬಂದು, ಖಿನ್ನಳಾಗಿ ನಿಂತಳು.

೩೪. ಖಿನ್ನಹೃದಯಳಾದ ಮಹಾದೇವಿಯು ಈಶ್ವರನಿಗೆ ಇಂತೆಂದಳು :— ಎಲೈ ಸ್ವಾಮಿಯಾದ ಪ್ರಿಯನೇ, ಇಲ್ಲಿ ನಾನು ವಾಸಮಾಡುವುದಿಲ್ಲ. ನಿನ್ನ ಸ್ವಂತ ಮನೆಗೆ ನನ್ನನ್ನು ಕರೆದುಕೊಂಡು ಹೋಗಬೇಕೆಂದು ಬೇಡಿದಳು.

ತಥೋಕ್ತಸ್ತು ಮಹಾದೇವಃ ಸರ್ವಾಂಲ್ಲೋಕಾನವೇಕ್ಷ್ಯಹ ।
ವಾಸಾರ್ಥಂ ರೋಚಯಾಮಾಸ ಪೃಥಿವ್ಯಾಂ ತು ದ್ವಿಜೋತ್ತಮಾಃ ।

ವಾರಾಣಸೀಂ ಮಹಾತೇಜಾಃ ಸಿದ್ಧಕ್ಷೇತ್ರಂ ಮಹೇಶ್ವರಃ ॥ ೩೫ ॥
ದಿವೋದಾಸೇನ ತಾಂ ಜ್ಞಾತ್ವಾ ನಿವಿಷ್ಟಾನ್ನಗರೀಂ ಭವಃ ।
ಪಾರ್ಶ್ವಸ್ಥಂ ಸ ಸಮಾಹೂಯ ಗಣೇಶಂ ಕ್ಷೇಮಕಂಬ್ರವೀತ್ ॥ ೩೬ ॥

ಗಣೇಶ್ವರ ಪುರೀಂಗತ್ವಾ ಶೂನ್ಯಾಂ ವಾರಾಣಸೀಂ ಕುರು ।
ಮೃದುನಾಚಾಭ್ಯುಪಾಯೇನ ಅತಿವೀರ್ಯಃ ಸ ಪಾರ್ಥಿವಃ ॥ ೩೭ ॥

ತತೋ ಗತ್ವಾ ನಿಕುಂಭಸ್ತು ಪುರೀಂ ವಾರಾಣಸೀಂ ಪುರಾ ।
ಸ್ವಪ್ನೇ ಸಂದರ್ಶಯಾಮಾಸ ಮಂಕನಂ ನಾಮ ನಾಪಿತಂ ॥ ೩೮ ॥

೩೫. ಓ ವಿಪ್ರರೇ, ಪಾರ್ವತಿಯು ಹೀಗೆ ಹೇಳಲಾಗಿ, ಪರಮೇಶ್ವರನು ಸರ್ವ ಲೋಕಗಳಲ್ಲಿಯೂ ವಾಸಕ್ಕೆ ಯೋಗ್ಯವಾದ ಸ್ಥಾನಗಳನ್ನು ಕಾಣದೆ ಭೂಲೋಕವೇ ವಾಸಕ್ಕೆ ಅರ್ಹವೆಂದು ಭಾವಿಸಿದನು. ಅದರಲ್ಲಿಯೂ ಸಿದ್ಧಕ್ಷೇತ್ರವಾದ ಕಾಶೀ ನಗರಿಯೇ ವಾಸಕ್ಕೆ ಯೋಗ್ಯವೆಂದು ತಿಳಿದನು.

೩೬–೩೭. ತರುವಾಯ ಪರಮೇಶ್ವರನು ತನ್ನ ಸಮೀಪದಲ್ಲಿದ್ದ ಪ್ರಮಥ ಗಣಕ್ಕೆ ಒಡೆಯನಾದ ಕ್ಷೇಮಕನನ್ನು ಕುರಿತು—ಎಲೈ ಗಣಪತಿಯೇ, ಈಗ ಕಾಶೀ ನಗರದಲ್ಲಿ ದಿವೋದಾಸನು ಆಳುತ್ತಿರುವನು. ನೀನು ಅಲ್ಲಿಗೆ ಹೋಗಿ ಯುಕ್ತಿಯಿಂದ ಆ ನಗರಿಯನ್ನು ಕಾಲಿಮಾಡಿಸು. ಈ ಕಾರ್ಯವು ಮೃದೂಪಾಯದಿಂದಲೇ ಆಗ ಬೇಕು. ಏಕೆಂದರೆ ಆ ರಾಯನು ಅತಿಶೂರನಾಗಿರುವನು ಎಂದು ಹೇಳಿ ಕಳುಹಿಸಿದನು.

೩೮. ಪೂರ್ವದಲ್ಲಿ ಪರಮೇಶ್ವರನ ಅಪ್ಪಣೆಯಂತೆ ನಿಕುಂಭನೆಂಬ ಗಣಪತಿಯು ವಾರಾಣಸೀನಗರಿಗೆ ಹೋಗಿ ಆ ರಾಯನಿಗೆ ಕನಸಿನಲ್ಲಿ ಮಂಕನೆಂಬ ಕ್ಷೌರಕನಾಗಿ ಕಾಣಿಸಿಕೊಂಡನು.

ಶ್ರೇಯಸ್ತೇಹಂ ಕರಿಷ್ಯಾಮಿ ಸ್ಥಾನಂ ಮೇ ರೋಚಯಾನಘ ।
ಮದ್ರೂಪಾಂ ಪ್ರತಿಮಾಂ ಕೃತ್ವಾ ನಗರ್ಯಂತೇ ನಿವೇಶಯ ॥ ೩೯ ॥

ತಥಾ ಸ್ವಪ್ನೇ ಯಥಾ ದೃಷ್ಟಂ ಸರ್ವಂ ಕಾರಿತವಾನ್ ದ್ವಿಜಾಃ ।
ನಗರೀದ್ವಾರ್ಯನುಜ್ಞಾಪ್ಯ ರಾಜಾನಂತು ಯಥಾವಿಧಿ ॥ ೪೦ ॥

ಪೂಜಾ ತು ಮಹತೀ ಚೈವ ನಿತ್ಯಮೇವ ಪ್ರಯುಜ್ಯತೇ ।
ಗಂಧೈರ್ಧೂಪೈಶ್ಚ ಮಾಲ್ಯೈಶ್ಚ ಪ್ರೇಕ್ಷಣೀಯೈ ಸ್ತಥೈವ ಚ ॥ ೪೧ ॥

ಅನ್ನಪ್ರದಾನ ಯುಕ್ತೈಶ್ಚ ಅತ್ಯದ್ಭುತಮಿವಾಭವತ್ ।
ಏವಂ ಸಂಪೂಜ್ಯತೇ ತತ್ರ ನಿತ್ಯಮೇವ ಗಣೇಶ್ವರಃ ॥ ೪೨ ॥

೩೯. ಎಲೈ ರಾಜನೇ, ನಾನು ನಿನಗೆ ಶ್ರೇಯಸ್ಸನ್ನುಂಟುಮಾಡುವೆನು. ನನಗೆ ಸರಿಯಾದ ಸ್ಥಾನವನ್ನು ಏರ್ಪಡಿಸು. ನನ್ನಂತಹ ಪ್ರತಿಮೆಯನ್ನು ಮಾಡಿಸಿ, ಊರಿನ ಕೊನೆಯಲ್ಲಿ ದೇವಾಲಯವನ್ನು ಕಟ್ಟಿಸಿ ಅಲ್ಲಿ ಆ ಪ್ರತಿಮೆಯನ್ನು ಸ್ಥಾಪಿಸು ಎಂದು ಹೇಳಿ ಮರೆಯಾದನು.

೪೦. ಎಲೈ ವಿಪ್ರವರ್ಯರೇ, ಆ ರಾಯನು ಸ್ವಪ್ನದಲ್ಲಿ ಕಂಡ ರೀತಿಯಲ್ಲಿಯೇ ಪ್ರತಿಮೆಯನ್ನು ಮಾಡಿಸಿ, ಆ ನಗರಾಂತ್ಯದಲ್ಲಿ ದೇವಾಲಯವನ್ನು ಕಟ್ಟಿಸಿ, ಶಾಸ್ತ್ರೋಕ್ತಕ್ರಮವಾಗಿ ಅದರಲ್ಲಿ ಪ್ರತಿಷ್ಠೆಯನ್ನು ಮಾಡಿಸಿದನು.

೪೧–೪೨. ಹೀಗೆ ಗಣೇಶ್ವರನನ್ನು ಆ ದೇವಾಲಯದಲ್ಲಿ ಸ್ಥಾಪಿಸಿ, ನಿರಂತರ ಪೂಜೆಗೆ ಏರ್ಪಾಡುಮಾಡಿದನು. ಅಲ್ಲಿ ಗಂಧ ಪುಷ್ಪ ಧೂಪ ದೀಪ ಅಭಿಷೇಕಾದಿಗಳಿಂದಲೂ, ಅನ್ನದಾನ ನೈವೇದ್ಯಾದಿಗಳಿಂದಲೂ, ಮಹಾದ್ಭುತಕಾರ್ಯವು ಪ್ರಾರಂಭವಾಯಿತು. ಈ ರೀತಿಯಾಗಿಯೇ ಮಹಾವೈಭವದಿಂದ ನಿತ್ಯವೂ ಗಣಪತಿಯ ಆರಾಧನೆಯು ನಡೆಯುತ್ತಿತ್ತು.

ತತೋ ವರಸಹಸ್ರಾಣಿ ನಗರಾಣಾಂ ಪ್ರಯಚ್ಛತಿ ।
ಪುತ್ರಾನ್ ಹಿರಣ್ಯ ಮಾಯೂಂಷಿ ಸರ್ವಕಾಮಾಂ ಸ್ತಥೈವ ಚ ॥ ೪೩ ॥

ರಾಜ್ಞಸ್ತು ಮಹಿಷೀ ಶ್ರೇಷ್ಠಾ ಸುಯಶಾ ನಾಮ ವಿಶ್ರುತಾ ।
ಪುತ್ರಾರ್ಥಮಾಗತಾ ಸಾಧ್ವೀ ರಾಜ್ಞಾ ದೇವೀ ಪ್ರಚೋದಿತಾ ॥ ೪೪ ॥

ಪೂಜಾಂತು ವಿಪುಲಾಂ ಕೃತ್ವಾ ದೇವೀ ಪುತ್ರಾನಯಾಚತ ।
ಪುನಃ ಪುನರಥಾಗಮ್ಯ ಬಹುಶಃ ಪುತ್ರಕಾರಣಾತ್ ॥ ೪೫ ॥

ನ ಪ್ರಯಚ್ಛತಿ ಪುತ್ರಾಂಸ್ತು ನಿಕುಂಭಃ ಕಾರಣೇನ ತು ।
ರಾಜಾ ಯದಿ ತತ್ ಕ್ರುಧ್ಯೇತ ತತಃ ಕಿಂಚಿತ್ ಪ್ರವರ್ತತೇ ॥ ೪೬ ॥

---

೪೩. ಅನಂತರ ಗಣೇಶ್ವರನು ನಗರದ ಜನರಿಗೆ ಬೇಕಾದ ವರಗಳನ್ನು ಕೊಡುತ್ತಿದ್ದನು. ಕೆಲವರಿಗೆ ಸಂತಾನವನ್ನೂ, ಕೆಲವರಿಗೆ ಐಶ್ವರ್ಯವನ್ನೂ, ಮತ್ತೆ ಕೆಲವರಿಗೆ ಆಯುರಾರೋಗ್ಯಗಳನ್ನೂ, ಹೀಗೆ ಪೌರರಿಗೆ ಸಕಲೇಷ್ಟಾರ್ಥಗಳನ್ನೂ ಕೊಡುತ್ತಿದ್ದನು.

೪೪. ಆ ಕಾಶೀರಾಜನಿಗೆ ಸುಯಶೆಯೆಂದು ಪ್ರಖ್ಯಾತಳಾದ ಸಾಧ್ವೀ ಮಣಿಯು ಪತ್ನಿಯಾಗಿದ್ದಳು. ಅವಳಿಗೆ ಸಂತಾನವಿರಲಿಲ್ಲ. ಎಲೈ ಪ್ರಿಯಳೇ, ನೀನೂ ನಮ್ಮ ಗ್ರಾಮದೇವತೆಯನ್ನು ಪ್ರಾರ್ಥಿಸು. ನಿನ್ನ ಇಷ್ಟಾರ್ಥಗಳು ಕೈಗೂಡುವುದು ಎಂದು ರಾಜನು ಹೇಳಿದನು. ಅದರಂತೆ ಆ ರಾಣಿಯೂ ಕೂಡ ಗಣೇಶ್ವರನನ್ನು ಪ್ರಾರ್ಥಿಸಿದಳು.

೪೫. ಆ ರಾಣಿಯು ಎಲ್ಲರಿಗೆಂತಲೂ ಬಹಳ ವೈಭವದಿಂದಲೂ ಭಕ್ತಿಯಿಂದಲೂ ಪೂಜೆಮಾಡಿದಳು. ಹೀಗೆ ಅನೇಕ ದಿವಸಗಳು ಪೂಜೆಯನ್ನು ಮಾಡಿ ಸಂತಾನವನ್ನು ಬೈಸಿದಳು.

೪೬. ಹೀಗೆ ಮಹಾರಾಣಿಯು ಎಷ್ಟುದಿವಸ ಪೂಜಿಸಿದರೂ ನಿಕುಂಭನು ಕಾರಣಾಂತರದಿಂದ ಪುತ್ರವರವನ್ನು ಕೊಡಲಿಲ್ಲ. ಈ ವಿಷಯದಲ್ಲಿ ಮಹಾರಾಜನು ಕುಪಿತನಾದರೆ ಒಂದು ಮಹತ್ಕಾರ್ಯವು ನಡೆಯಬೇಕಾಗಿರುವುದೆಂದು ಯೋಚಿಸಿದನು.

ಅಥ ದೀರ್ಘೇಣ ಕಾಲೇನ ಕ್ರೋಧೋ ರಾಜಾನಮಾವಿಶತ್ ।
ಭೂತಂ ತ್ವಿದಂ ಮಹಾದ್ವಾರಿ ನಗರಾಣಾಂ ಪ್ರಯಚ್ಛತಿ ॥ ೪೭ ॥

ಪ್ರೀತ್ಯಾ ವರಾಂಶ್ಚ ಶತಶೋ ನ ಕಿಂಚಿತ್ತು ಪ್ರವರ್ತತೇ ।
ಮಾವಕೈಃ ಪೂಜ್ಯತೇ ನಿತ್ಯಂ ನಗರ್ಯಾಂ ಮನು ಚೈವ ತು ॥ ೪೮ ॥

ತತ್ರಾರ್ಚಿತಶ್ಚ ಬಹುಶೋ ದೇವ್ಯಾ ಮೇ ತತ್ರ ಕಾರಣಾತ್ ।
ನ ದದಾತಿ ಚ ಪುತ್ರಂ ಮೇ ಕೃತಘ್ನೋ ಬಹುಭೋಜನಃ ॥ ೪೯ ॥

ಅತೋ ನಾರ್ಹತಿ ಪೂಜಾಂತು ಮತ್ಸಕಾಶಾತ್ ಕಥಂಚನ ।
ತಸ್ಮಾತ್ತು ನಾಶಯಿಷ್ಯಾಮಿ ತಸ್ಯಸ್ಥಾನಂ ದುರಾತ್ಮನಃ ॥ ೫೦ ॥

ಏವಂ ತು ಸ ವಿನಿಶ್ಚಿತ್ಯ ದುರಾತ್ಮಾ ರಾಜಕಿಲ್ಬಿಷೀ ।
ಸ್ಥಾನಂ ಗಣಪತೇಸ್ತಸ್ಯ ನಾಶಯಾಮಾಸ ದುರ್ಮತಿಃ ॥ ೫೧ ॥

---

೪೭. ಹೀಗೆ ಅನೇಕ ಕಾಲ ಕಳೆಯಲಾಗಿ ಒಂದುದಿವಸ ರಾಜನಿಗೆ ಬಹಳವಾದ ಕೋಪವು ಪ್ರಾಪ್ತವಾಯಿತು. ನಮ್ಮ ನಗರದ್ವಾರದಲ್ಲಿರುವ ಈ ಭೂತವು ಊರಿನವರಿಗೆಲ್ಲಾ ಬೇಕಾದ ವರಗಳನ್ನು ಕೊಡುತ್ತದೆ.

೪೮–೪೯. ನನಗಾದರೋ ಯಾವ ವರಗಳನ್ನೂ ಕೊಡುವುದಿಲ್ಲ. ನಮ್ಮ ಊರಲ್ಲಿದ್ದು ನನ್ನಿಂದ ವಿಶೇಷ ಪೂಜೆಯನ್ನು ಹೊಂದುತ್ತಿದ್ದರೂ, ನನ್ನ ರಾಣಿಯು ವಿಶೇಷ ಮರ್ಯಾದೆಯಿಂದಲೂ ಭಕ್ತಿಯಿಂದಲೂ ಪೂಜಿಸಿದರೂ ಸಹ ಪುತ್ರಸಂತಾನವಾಗುವ ವರವನ್ನು ಕೊಡಲಿಲ್ಲ. ಹೀಗೆ ಎಷ್ಟು ಉಪಕಾರ ಮಾಡಿದರೂ ಆ ಭೂತವು ಉಪಕಾರಸ್ಮರಣೆಯಿಲ್ಲದೆ ಕೃತಘ್ನನಾಗಿರುವನು. ಎಷ್ಟು ಬಲಿಯನ್ನು ಕೊಟ್ಟರೂ ಅವುಗಳನ್ನು ಭಕ್ಷಿಸಿ ಉದರಂಭರಿಯಾಗಿರುವನು.

೫೦. ಆದುದರಿಂದ ನಾವು ಇನ್ನುಮೇಲೆ ಇದಕ್ಕೆ ಪೂಜೆಯನ್ನು ಮಾಡಬಾರದು. ಆ ದುಷ್ಟನಾದ ನಿಕುಂಭನ ದೇವಾಲಯವನ್ನು ನಾಶಮಾಡುವೆನು. ಇಂದಿನಿಂದ ಅವನಿಗೆ ಪೂಜಾದಿಗಳು ಇಲ್ಲದೆಯೇ ಹೋಗಲೆಂದನು.

೫೧. ಹೀಗೆ ಆ ಮಹಾರಾಜನು ದುರಾಲೋಚನೆಯನ್ನು ಮಾಡಿ ದುರ್ಬುದ್ಧಿಯಿಂದ ಊರ ಹೊರಗೆ ಇರುವ ಗಣಪತಿಯ ದೇವಾಲಯವನ್ನು ನಾಶಮಾಡಿದನು.

ಭಗ್ನಮಾಯತನಂ ದೃಷ್ಟ್ವಾ ರಾಜಾನಮುಗಮತ್ ಪ್ರಭುಃ ।
ಯಸ್ಮಾದ್ದೃತೇಽಪರಾಧಂ ಮೇ ತ್ವಯಾ ಸ್ಥಾನಂ ವಿನಾಶಿತಂ ॥ ೫೨ ॥

ಅಕಸ್ಮಾತ್ ತು ಪುರೀ ಶೂನ್ಯಾ ಭವಿತ್ರೀ ತೇ ನರಾಧಿಪ ।
ತತಸ್ತೇನ ತು ಶಾಪೇನ ಶೂನ್ಯಾ ವಾರಾಣಸೀ ತಥಾ ॥ ೫೩ ॥

ಶಪ್ತಾಂ ಪುರೀಂ ನಿಕುಂಭಸ್ತು ಮಹಾದೇವ ಮಥಾನಯತ್ ।
ಶೂನ್ಯಾಂ ಪುರೀಂ ಮಹಾದೇವೋ ನಿರ್ಮಮೇ ಪರಮಾತ್ಮನಾ ॥ ೫೪ ॥

ತುಲ್ಯಾಂ ದೇವವಿಭೂತ್ಯಾಸ್ತು ದೇವ್ಯಾಶ್ಚೈವ ಮಹಾತ್ಮನಃ ।
ರಮತೇ ತತ್ರ ವೈ ದೇವೀ ರಮಮಾಣೇ ಮಹೇಶ್ವರಃ ॥ ೫೫ ॥

---

೫೨. ಹೀಗೆ ಆ ದೇವಾಲಯವು ನಾಶವಾಗಲು, ಗಣೇಶ್ವರನಾದ ನಿಕುಂಭನು ರಾಜನ ಬಳಿಗೆ ಬಂದು ಎಲೈ ರಾಜನೇ. ನಿಷ್ಕಾರಣವಾಗಿ ನಿರಪರಾಧಿಯಾದ ನನ್ನ ಸ್ಥಾನವನ್ನು ನಾಶಮಾಡಿರುತ್ತೀಯೆ.

೫೩. ಇದರಿಂದ ನಿನ್ನ ನಗರಿಯೂ ಕೂಡ ಶೂನ್ಯವಾಗಲೆಂದು ಶಾಪವನ್ನು ಕೊಟ್ಟನು. ಗಣಪತಿಯಾದ ನಿಕುಂಭನ ಶಾಪದಿಂದ ಕಾಶೀಪಟ್ಟಣವು ಪೂರ್ವದಲ್ಲಿ ಶೂನ್ಯವಾಯಿತು.

೫೪. ಹೀಗೆ ನಿಕುಂಭನು ವಾರಣಶೀ ನಗರಕ್ಕೆ ಶಾಪವನ್ನು ಕೊಟ್ಟು, ಮಹೇಶ್ವರನ ಬಳಿಗೆ ಬಂದು ಸಂಗತಿಯನ್ನು ತಿಳಿಸಿದನು. ಅನಂತರ ಶೂನ್ಯವಾದ ಕಾಶೀ ನಗರಿಗೆ ಮಹಾದೇವನು ಬಂದು ದೇವಭೋಗ್ಯವಾದ ಸ್ಥಾನವನ್ನು ಏರ್ಪಡಿಸಿದನು.

೫೫. ದೇವ ವಿಭೂತಿಯಿಂದ ಸಹಿತವಾದ ಆ ನಗರಿಯಲ್ಲಿ ಮಹಾದೇವನು ಪಾರ್ವತಿಯೊಡನೆ ವಾಸಿಸಿದನು. ಹೀಗೆ ಪರಮೇಶ್ವರನು ಸಂತೋಷವಾಗಿರುವಲ್ಲಿ ಪಾರ್ವತಿದೇವಿಯೂ ಕೂಡ ಸುಖವಾಗಿ ರಮಿಸುತ್ತಿದ್ದಳು.

ನ ರತಿಂ ತತ್ರ ವೈ ದೇವೀ ಲಭತೇ ಗೃಹವಿಸ್ಮಯಾತ್ ।
ದೇವ್ಯಾಃ ಕ್ರೀಡಾರ್ಥ ಮೀಶಾನೋ ದೇವೋ ವಾಕ್ಯಮಥಾಬ್ರವೀತ್ ॥ ೫೬ ॥

ನಾಹಂ ವೇಶ್ಮ ವಿಮೋಕ್ಷ್ಯಾಮಿ ಅವಿಮುಕ್ತಂ ಹಿ ಮೇ ಗೃಹಂ ।
ಪ್ರಹಸ್ಯೈನಾಮಥೋವಾಚ ಅವಿಮುಕ್ತಂ ಹಿ ಮೇ ಗೃಹಂ ॥ ೫೭ ॥

ನಾಹಂ ದೇವಿ ಗಮಿಷ್ಯಾಮಿ ಗಚ್ಛಸ್ವೇಹ ರಮಾಮ್ಯಹಂ ।
ತಸ್ಮಾತ್ತದವಿಮುಕ್ತಂ ಹಿ ಪ್ರೋಕ್ತಂ ದೇವೇನ ವೈ ಸ್ವಯಂ ॥ ೫೮ ॥

ಏವಂ ವಾರಾಣಸೀ ಶಪ್ತಾ ಅವಿಮುಕ್ತಂ ಚ ಕೀರ್ತಿತಂ ।
ಯಸ್ಮಿ ವಸತಿ ವೈ ದೇವಃ ಸರ್ವದೇವನಮಸ್ಕೃತಃ ॥
ಯುಗೇಷು ತ್ರಿಷು ಧರ್ಮಾತ್ಮಾ ಸಹ ದೇವ್ಯಾ ಮಹೇಶ್ವರಃ ॥ ೫೯ ॥

---

೫೬. ಅಲ್ಲಿ ಸುಂದರವಾದ ಗೃಹವಿಲ್ಲದ ಕಾರಣ ಪಾರ್ವತಿಯು ವಾಸಿಸಲು ಇಷ್ಟಪಡಲಿಲ್ಲ. ತರುವಾಯ ಮಹಾದೇವನು ದೇವೀ ಸಂತೋಷಕ್ಕಾಗಿ ಇಂತೆಂದನು.

೫೭. ಎಲೌ ದೇವಿಯೇ, ನಾನು ಈ ಮನೆಯನ್ನು ಬಿಡುವುದಿಲ್ಲ. ಈ ನನ್ನ ಗೃಹವು ಸದಾ ಪೂರ್ಣವಾಗಿರುವುದು. ಆದುದರಿಂದ ಈ ಆಲಯಕ್ಕೆ ಅವಿಮುಕ್ತ ನಾಮವು ಪ್ರಖ್ಯಾತವಾಗಲಿ ಎಂದು ರಾಣಿಯಾದ ಗಿರಿಜೆಗೆ ಹೇಳಿದನು.

೫೮. ಓ ದೇವಿಯೇ, ನಾನು ಈ ಮನೆಯನ್ನು ಬಿಟ್ಟುಹೋಗುವುದಿಲ್ಲ. ನೀನೂ ಕೂಡ ಇಲ್ಲಿಗೆ ಬಾ, ನಾವಿಬ್ಬರೂ ಸುಖವಾಗಿರೋಣ. ಇದರಿಂದ ಈ ಗೃಹಕ್ಕೆ ಅವಿಮುಕ್ತನೆಂಬ ನಾಮವು ಅನ್ವರ್ಥವಾಗಿ ಪ್ರಖ್ಯಾತವಾಗಿದೆ.

೫೯. ಹೀಗೆ ವಾರಾಣಶೀ ನಗರಿಗೆ ನಿಕುಂಭನಿಂದ ಶಾಪವು ಸಂಭವಿಸಿ, ಈಶ್ವರನಿಂದ ಅವಿಮುಕ್ತವೆಂಬ ನಾಮವು ಸಂಭವಿಸಿರುತ್ತದೆ. ಸರ್ವದೇವತೆಗಳಿಂದ ನಮಸ್ಕೃತನಾದ ಪರಮೇಶ್ವರನು ಪಾರ್ವತಿಯ ಸಂಗಡ ಮೂರು ಯುಗಗಳವರೆಗೂ ಆ ನಗರಿಯಲ್ಲಿ ವಾಸಿಸಿದನು.

ಅಂತರ್ಧ್ಯಾನಂ ಕಲೌ ಯಾತಿ ತತ್ಪುರಂ ತು ಮಹಾತ್ಮನಃ ।
ಅಂತರ್ಹಿತೇ ಪುರೇ ತಸ್ಮಿನ್ ಪುರೀ ಸಾ ವಸತೇ ಪುನಃ ॥ ೬೦ ॥

ಏವಂ ವಾರಾಣಸೀ ಶಪ್ತಾ ನಿವೇಶಂ ಪುನರಾಗತಾ ।
ಭದ್ರಶ್ರೇಣ್ಯಸ್ಯ ಪುತ್ರಾಣಾಂ ಶತಮುತ್ತಮಧನ್ವಿನಾಂ ॥ ೬೧ ॥

ಹತ್ವಾ ನಿವೇಶಯಾಮಾಸ ದಿವೋದಾಸೋ ನರಾಧಿಪಃ ।
ಭದ್ರಶ್ರೇಣ್ಯಸ್ಯ ರಾಜ್ಯಂ ತು ಹೃತಂತೇನ ಬಲೀಯಸಾ ॥ ೬೨ ॥

ಭದ್ರಶ್ರೇಣ್ಯಸ್ಯ ಪುತ್ರಸ್ತು ದುರ್ದಮೋನಾಮ ನಾಮತಃ ।
ದಿವೋದಾಸೇನ ಬಾಲೇತಿ ಘೃಣಯಾ ಸ ವಿವರ್ಜಿತಃ ॥ ೬೩ ॥

ದಿವೋದಾಸಾದ್ದೃಷದ್ವತ್ಯಾಂ ವೀರೋ ಜಜ್ಞೇ ಪ್ರತರ್ದನಃ ।
ತೇನ ಪುತ್ರೇಣ ಬಾಲೇನ ಪ್ರಹೃತಂ ತಸ್ಯ ವೈ ಪುನಃ ॥ ೬೪ ॥

---

೬೦. ಪರಮೇಶ್ವರನು ಸಾಕ್ಷಾತ್ತಾಗಿ ವಾಸವಾಗಿದ್ದ ಆ ಕಾಶೀಪಟ್ಟಣವು ಈ ಕಲಿಯುಗದಲ್ಲಿ ಮಾಯವಾಗುವುದು. ಹೀಗೆ ಅದು ಮಾಯವಾದ ಕೆಲವು ಕಾಲದ ಮೇಲೆಪುನಃ ಪ್ರಸಿದ್ಧವಾಗಿ, ಜನವಸತಿಗೆ ಅನುಕೂಲವಾಗುವುದು ಎಂದು ಹೇಳಿದನು.

೬೧. ಹೀಗೆ ನಿಕುಂಭನಿಂದ ಶಪ್ತವಾದ ಕಾಶೀನಗರಿಯು ಪುನಃ ಪ್ರತಿಷ್ಠಿತವಾಗಲು, ಭದ್ರಶ್ರೇಣರಾಜನ ನೂರಾರುಜನ ಮಕ್ಕಳು ಶೂರರಾದ ಆ ನಗರಿಯಲ್ಲಿ ವಾಸಿಸುತ್ತಿದ್ದರು.

೬೨. ಆಗ ಬಲಿಷ್ಠನಾದ ದಿವೋದಾಸನೆಂಬ ರಾಜನು ಮಹಾಶೂರನಾದ ಕಾರಣ, ಭದ್ರಶ್ರೇಣನ ಕುಮಾರರನ್ನು ಜಯಿಸಿ ಆ ನಗರಿಯನ್ನು ಆಕ್ರಮಿಸಿದನು.

೬೩. ಆಗ ದಿವೋದಾಸನು ಭದ್ರಶ್ರೇಣನ ಕುಮಾರರಲ್ಲಿ ದುರ್ದಮನು ಬಾಲಕನಾದುದರಿಂದ ಅವನನ್ನು ದಯೆಯಿಂದ ತ್ಯಜಿಸಿ, ಇತರರಾದ ಶತ್ರುಗಳನ್ನು ಸಂಹರಿಸಿದನು.

೬೪. ದಿವೋದಾಸನಿಗೆ ದೃಷದ್ವತೀದೇವಿಯಲ್ಲಿ ಶೂರನಾದ ಪ್ರತರ್ದನನೆಂಬ ಕುಮಾರನು ಜನಿಸಿದನು. ಪ್ರತಾಪಶಾಲಿಯಾದ ಆ ರಾಜಕುಮಾರನು ದುರ್ದಮನ ರಾಜ್ಯವನ್ನು ಅಪಹರಿಸಿದನು.

ವೈರಸ್ಯಾಂ ತಂ ಮಹಾರಾಜ್ಞಾ ತದಾ ತೇನ ವಿಧತ್ಸತಾ ।
ಪ್ರತರ್ದನಸ್ಯ ಪುತ್ರೌ ದ್ವಾ ವತ್ಸೋ ಗರ್ಗಶ್ಚ ವಿಶ್ರುತಃ ॥ ೬೫ ॥

ವತ್ಸಪುತ್ರೋ ಹ್ಯಲರ್ಕಸ್ತು ಸನ್ನತಿಸ್ತಸ್ಯ ಚಾತ್ಮಜಃ ।
ಅಲರ್ಕಂ ಪ್ರತಿ ರಾಜರ್ಷಿಂ ಗೀತಶ್ಲೋಕೌ ಪುರಾತನೌ ॥ ೬೬ ॥

ಷಷ್ಟಿವರ್ಷಸಹಸ್ರಾಣಿ ಷಷ್ಟಿವರ್ಷಶತಾನಿ ಚ ।
ಯುವಾ ರೂಪೇಣ ಸಂಪನ್ನೋ ಹ್ಯಲರ್ಕಃ ಕಾಶಿಸತ್ತಮಃ ॥ ೬೭ ॥

ಲೋಪಾಮುದ್ರಾಪ್ರಸಾದೇನ ಪರಮಾಯುರವಾಪ್ತವಾನ್ ॥ ೬೮ ॥

ಶಾಪಸ್ಯಾಂತೇ ಮಹಾಬಾಹುರ್ಹತ್ವಾ ಕ್ಷೇಮಕರಾಕ್ಷಸಂ ।
ರಮ್ಯಾಮಾವಾಸಯಾಮಾಸ ಪುರೀಂ ವಾರಾಣಸೀಂ ನೃಪಃ ॥ ೬೯ ॥

---

೬೫. ಆ ಮಹಾರಾಜನೇ ವೈರದ ತುದಿಯನ್ನು ಮುಟ್ಟಿದವನು. ತರುವಾಯ ಅವನಿಗೆ ಶತ್ರುಗಳೇ ಇರಲಿಲ್ಲ. ಅಂತಹ ಪ್ರತರ್ದನ ಮಹಾರಾಜನಿಗೆ ವತ್ಸ, ಗರ್ಗನೆಂಬ ಪ್ರಖ್ಯಾತರಾದ ಇಬ್ಬರು ಕುಮಾರರು ಜನಿಸಿದರು.

೬೬. ಆವರಲ್ಲಿ ವತ್ಸನಿಗೆ ಅಲರ್ಕನೆಂಬ ಕುಮಾರನೂ, ಅವನಿಗೆ ಸನ್ನತಿಯೆಂಬ ಪುತ್ರನೂ ಉದ್ಭವಿಸಿದರು. ರಾಜರ್ಷಿಯಾದ ಅಲರ್ಕನ ವಿಚಾರದಲ್ಲಿ ಮಹಾತ್ಮರು ಎರಡು ಶ್ಲೋಕಗಳನ್ನು ಹೇಳುವರು.

೬೭. ರೂಪದಲ್ಲಿ ಅತ್ಯಂತ ಸುಂದರನಾದ ಅಲರ್ಕಮಹಾರಾಜನು ಅರವತ್ತು ಸಾವಿರದ ಆರನೂರು ವರ್ಷಗಳು ಸುಖವಾಗಿಯೂ ನಿಷ್ಕಂಟಕವಾಗಿಯೂ ರಾಜ್ಯವಾಳಿದನು.

೬೮. ಆ ಅಲರ್ಕಮಹಾರಾಯನು ಮಹಾತಪಸ್ಸನ್ನು ಮಾಡಿ, ಲೋಪಾಮುದ್ರೆಯ ಅನುಗ್ರಹದಿಂದ ಬಹುಕಾಲದವರೆಗೂ ಜೀವಿಸುವ ಪರಮಾಯುಷ್ಯವನ್ನು ಪಡೆದಿದ್ದನು.

೬೯. ಆ ಮಹಾರಾಯನು ಆ ನಗರಕ್ಕೆ ಶಾಪವಿಮೋಚನೆಯಾದ ಬಳಿಕ ಮಹಾಶೂರನಾದ ಕಾರಣ, ಕ್ಷೇಮಕರಾಕ್ಷಸನನ್ನು ಸಂಹಾರಮಾಡಿ, ಸುಂದರವಾದ ಕಾಶೀನಗರಿಯಲ್ಲಿ ವಾಸಿಸಿದನು.

ಸನ್ನತೇರಪಿ ದಾಯಾದಃ ಸುನೀಥೋ ನಾಮ ಧಾರ್ಮಿಕಃ ।
ಸುನೀಥಸ್ಯ ತು ದಾಯಾದಃ ಸುಕೇತುರ್ನಾಮ ಧಾರ್ಮಿಕಃ ॥ ೭೦ ॥

ಸುಕೇತುತನಯಶ್ಚಾಪಿ ಧರ್ಮಕೇತುರಿತಿ ಶ್ರುತಿಃ ।
ಧರ್ಮಕೇತೋಸ್ತು ದಾಯಾದಃ ಸತ್ಯಕೇತುರ್ಮಹಾರಥಃ ॥ ೭೧ ॥

ಸತ್ಯಕೇತುಸುತಶ್ಚಾಪಿ ವಿಭುರ್ನಾಮ ಪ್ರಜೇಶ್ವರಃ ।
ಸುವಿಭುಸ್ತು ವಿಭೋಃ ಪುತ್ರಃ ಸುಕುಮಾರಸ್ತತಃ ಸ್ಮೃತಃ ॥ ೭೨ ॥

ಸುಕುಮಾರಸ್ಯ ಪುತ್ರಸ್ತು ಧೃಷ್ಟಕೇತುಃ ಸ ಧಾರ್ಮಿಕಃ ।
ಧೃಷ್ಟಕೇತೋಸ್ತು ದಾಯಾದೋ ವೇಣುಹೋತ್ರಃ ಪ್ರಜೇಶ್ವರಃ ॥ ೭೩ ॥

ವೇಣುಹೋತ್ರಸುತಶ್ಚಾಪಿ ಗಾರ್ಗ್ಯೋ ವೈ ನಾಮ ವಿಶ್ರುತಃ ।
ಗಾರ್ಗ್ಯಸ್ಯ ಗರ್ಗಭೂಮಿಸ್ತು ವಾತ್ಸ್ಯೋ ವತ್ಸಸ್ಯ ಧೀಮತಃ ॥ ೭೪ ॥

---

೭೦. ಆ ಸನ್ನತಿಗೆ ಧಾರ್ಮಿಕನೂ ಸುನೀಥನಾಮಕನೂ ಆದ ರಾಜಕುಮಾರನು ಜನಿಸಿದನು. ಆ ಸುನೀಥನಿಗೆ ಅತ್ಯಂತ ಧಾರ್ಮಿಕನಾದ ಸುಕೇತುವೆಂಬ ಪುತ್ರನು ಉದ್ಭವಿಸಿದನು.

೭೧. ಸುಕೇತು ಮಹಾರಾಜನಿಗೆ ಧರ್ಮಕೇತುವೆಂಬ ಸುಪ್ರಸಿದ್ಧನಾದ ಕುಮಾರನೂ, ಅವನಿಗೆ ಮಹಾರಥಿಕನಾದ ಸತ್ಯಕೇತುವೆಂಬ ಸುಪ್ರಸಿದ್ಧ ಪುತ್ರನೂ ಜನಿಸಿದರು.

೭೨. ಆ ಸತ್ಯಕೇತುರಾಜನಿಗೆ ವಿಭುವೆಂಬ ಪ್ರಜಾಪತಿಯೂ, ಅವನಿಗೆ ಸುವಿಭುವೆಂಬ ಕುಮಾರನೂ, ಅವನಿಗೆ ಸುಕುಮಾರನೆಂಬ ತನಯನೂ ಉದ್ಭವಿಸಿದರು.

೭೩. ಆ ಸುಕುಮಾರನಿಗೆ ಧರ್ಮಾತ್ಮನಾದ ಧೃಷ್ಟಕೇತುವೆಂಬ ಸುತನೂ, ಅವನಿಗೆ ವೇಣುಹೋತ್ರನೆಂಬ ಪ್ರಜೇಶ್ವರನೂ ಹುಟ್ಟಿದರು.

೭೪. ಆ ವೇಣುಹೋತ್ರನಿಗೆ ಗಾರ್ಗ್ಯನೆಂಬ ಸುಪ್ರಸಿದ್ಧನಾದ ಕುಮಾರನೂ, ಆ ಗಾರ್ಗ್ಯನಿಗೆ ಗರ್ಗಭೂಮಿಯೆಂಬ ಪುತ್ರನೂ, ಅವನಿಗೆ ವತ್ಸನೆಂಬ ಸುತನೂ, ಅವನಿಗೆ ವಾತ್ಸ್ಯನೆಂಬ ತನೂಜನೂ ಉದ್ಭವಿಸಿದರು.

**ಬ್ರಾಹ್ಮಣಾಃ ಕ್ಷತ್ರಿಯಾಶ್ಚೈವ ತಯೋಃ ಪುತ್ರಾಃ ಸುಧಾರ್ಮಿಕಾಃ ।**
**ವಿಕ್ರಾಂತಾ ಬಲವಂತಶ್ಚ ಸಿಂಹತುಲ್ಯಪರಾಕ್ರಮಾಃ ॥ ೭೫ ॥**

**ಇತ್ಯೇತೇ ಕಾಶ್ಯಪಾಃ ಪ್ರೋಕ್ತಾ ರಜೇರಪಿ ನಿಬೋಧತ ।**
**ರಜೇಃ ಪುತ್ರಶತಾನ್ಯಾಸನ್ ಪಂಚ ವೀರ್ಯವತೋ ಭುವಿ ।**
**ರಾಜೇಯಮಿತಿ ವಿಖ್ಯಾತಂ ಕ್ಷತ್ರಮಿಂದ್ರಭಯಾವಹಂ ॥ ೭೬ ॥**

**ತದಾ ದೈವಾ ಸುರೇ ಯುದ್ಧೇ ಸಮುತ್ಪನ್ನೇ ಸುದಾರುಣೇ ।**
**ದೇವಾಶ್ಚೈವಾಸುರಾಶ್ಚೈವ ಪಿತಾಮಹಮಥಾಬ್ರುವನ್ ॥ ೭೭ ॥**

**ಆವಯೋರ್ಭಗವನ್ ಯುದ್ಧೇ ವಿಜೇತಾ ಕೋ ಭವಿಷ್ಯತಿ ।**
**ಬ್ರೂಹಿ ನಃ ಸರ್ವಲೋಕೇಶ ಶ್ರೋತುಮಿಚ್ಛಾಮಹೇ ವಯಂ ॥ ೭೮ ॥**

---

೭೫. ಅವರಿಗೆ ಬ್ರಾಹ್ಮಣರೂ, ಕ್ಷತ್ರಿಯರೂ ಆದ ಅನೇಕ ಪುತ್ರರು ಜನಿಸಿದರು. ಆ ಪುತ್ರರು ಅತ್ಯಂತ ಧಾರ್ಮಿಕರಾಗಿಯೂ, ಶೂರರಾಗಿಯೂ, ಬಲಿಷ್ಠರಾಗಿಯೂ, ಸಿಂಹ ಸಮಾನವಾದ ಪರಾಕ್ರಮಿಗಳಾಗಿಯೂ ಇದ್ದರು.

೭೬. ಇವರೆಲ್ಲರೂ ಕಶ್ಯಪರ ಪುತ್ರರಾಗಿರುವರು, ಕಶ್ಯಪರ ವಂಶವು ಹೀಗೆ ವೃದ್ಧಿಯಾಗಿರುವುದು. ಈಗ ರಜಿಯ ವಂಶವನ್ನು ವರ್ಣಿಸುವೆನು ಕೇಳಿರಿ. ಆ ರಜಿ ಮಹಾರಾಜನಿಗೆ ನೂರಾರು ಕುಮಾರರಿದ್ದರು. ಅವರಲ್ಲಿ ಐದು ಜನರು ಅತಿವೀರ್ಯವಂತರಾಗಿದ್ದರು. ಅವರು ರಾಜೇಯರೆಂದು ಪ್ರಖ್ಯಾತರಾಗಿ ಇಂದ್ರನಿಗೂ ಭಯಜನಕರಾಗಿದ್ದರು.

೭೭. ಆ ಕಾಲದಲ್ಲಿ ದೇವದಾನವರಿಗೆ ಅತಿಭಯಂಕರವಾದ ಸಂಗ್ರಾಮವು ಸಂಭವಿಸಿತು. ಆಗ ದೇವದಾನವರಿಬ್ಬರೂ ಬ್ರಹ್ಮದೇವನ ಬಳಿಗೆ ಬಂದು ಇಂತೆಂದು ಹೇಳಿದರು.

೭೮. ಎಲೈ ಪೂಜ್ಯನಾದ ಬ್ರಹ್ಮದೇವನೇ ಈ ನಮ್ಮ ದೇವಾಸುರ ಯುದ್ಧದಲ್ಲಿ ಯಾರಿಗೆ ಜಯವುಂಟಾಗುವುದು. ನೀನು ಸಮಸ್ತ ಲೋಕಗಳಿಗೆ ಸ್ವಾಮಿಯಾಗಿರುತ್ತೀಯೆ. ಸರ್ವಜ್ಞನೂ ಆಗಿರುವಿ. ಆದುದರಿಂದ ಅದನ್ನು ಹೇಳು ಕೇಳಬೇಕೆಂಬ ಕುತೂಹಲವು ನಮಗೆ ಇರುತ್ತದೆಯೆಂದು ಕೇಳಿದರು.

॥ ಬ್ರಹ್ಮೋವಾಚ ॥

ಯೋಷಾಮರ್ಥಾಯ ಸಂಗ್ರಾಮೇ ರಜಿರಾತ್ತಾಯುಧಃ ಪ್ರಭುಃ ।
ಯೋತ್ಸ್ಯತೇ ತೇ ವಿಜೇಷ್ಯಂತಿ ತ್ರೀಽಲ್ಲೋಕಾನ್ನಾತ್ರಸಂಶಯಃ ॥ ೭೯ ॥

ರಜಿರ್ಯತಸ್ತತೋ ಲಕ್ಷ್ಮೀರ್ಯತೋ ಲಕ್ಷ್ಮೀಸ್ತತೋ ಧೃತಿಃ ।
ಯತೋ ಧೃತಿಸ್ತತೋ ಧರ್ಮೋ ಯತೋ ಧರ್ಮಸ್ತತೋ ಜಯಃ॥ ೮೦ ॥

ತದ್ದೇವಾ ದಾನವಾಃ ಸರ್ವೇ ತತಃ ಶ್ರುತ್ವಾ ರಜೇರ್ಜಯಂ ।
ಅಭ್ಯಯುರ್ಜಯಮಿಚ್ಛಂತಃ ಸ್ತುವಂತೋ ರಾಜಸತ್ತಮಂ ॥ ೮೧ ॥

ತೇ ಹೃಷ್ಟಮನಸಃ ಸರ್ವೇ ರಾಜಾನಂ ದೇವದಾನವಾಃ ।
ಊಚುರಸ್ಮಜ್ಜಯಾಯ ತ್ವಂ ಗೃಹಾಣ ವರಕಾರ್ಮುಕಂ ॥ ೮೨ ॥

---

೭೯. ಆಗ ಬ್ರಹ್ಮದೇವನು ಹೇಳಿದನು:—ಎಲೈ ದೇವಾಸುರರೇ, ರಜಿಮಹಾರಾಜನು ಧನುರ್ಧಾರಿಯಾಗಿ ಜಯಪಡೆಯಬೇಕೆಂದು ಯಾರ ಸಂಗಡ ಸೇರಿಕೊಂಡು ಯುದ್ಧವನ್ನು ಮಾಡುವನೋ ಅವರಿಗೆ ನಿಜವಾಗಿಯೂ ಜಯವಾಗುವುದು. ಅವನು ಮೂರು ಲೋಕವನ್ನೂ ಜಯಿಸಬಲ್ಲನು ಇದರಲ್ಲಿ ಸಂದೇಹವಿಲ್ಲವೆಂದನು.

೮೦. ರಜಿರಾಯನು ಯಾರ ಪಕ್ಷದಲ್ಲಿರುವನೋ ಅವರಿಗೆ ಜಯಲಕ್ಷ್ಮಿಯು ಉಂಟಾಗುವುದು. ಎಲ್ಲಿ ಜಯವೂ ಅಲ್ಲಿ ಧೈರ್ಯವು ಬರುವುದು. ಧೈರ್ಯವಿರುವಲ್ಲಿ ಧರ್ಮವಿರುವುದು. ಧರ್ಮವಿರುವಲ್ಲಿ ಜಯವು ಸಿದ್ಧವೆಂದು ಬ್ರಹ್ಮನು ಹೇಳಿದನು.

೮೧. ದೇವದಾನವರು ಬ್ರಹ್ಮನ ಮಾತುಗಳನ್ನು ಕೇಳಿ ಜಯಾಕಾಂಕ್ಷಿಗಳಾಗಿ ರಜಿರಾಜನ ಬಳಿಗೆ ಹೋಗಿ ಆ ರಾಜನನ್ನು ಬಹಳವಾಗಿ ಹೊಗಳಿದರು.

೮೨. ಅನಂತರ ದೇವದಾನವರು ಸಂತುಷ್ಟವಾದ ಮನಸ್ಕರಾಗಿ ರಾಜನ ಬಳಿಗೆ ಬಂದು ಅವನನ್ನು ಕುರಿತು ಎಲೈ ಮಹಾರಾಜನೇ, ನೀನು ನಮ್ಮ ಪಕ್ಷದಲ್ಲಿ ಸೇರಿಕೊಂಡು ನಮಗೆ ಜಯವಾಗುವಂತೆ ನಿನ್ನ ಶ್ರೇಷ್ಠವಾದ ಧನಸ್ಸನ್ನು ಸ್ವೀಕರಿಸು ಎಂದು ಬೇಡಿಕೊಂಡರು.

॥ ರಜಿರುವಾಚ ॥

**ಅಹಂಜೇಷ್ಯಾಮಿ ನೋ ಯುದ್ಧೇ ದೇವಾನ್ ಶಕ್ರಪುರೋಗಮಾನ್ ।**
**ಇಂದ್ರೋ ಭವಾಮಿ ಧರ್ಮಾತ್ಮಾ ತತೋ ಯೋತ್ಸ್ಯಾಮಿ ಸಂಯುಗೇ ॥೮೩॥**

॥ ದಾನವಾ ಊಚುಃ ॥

**ಅಸ್ಮಾಕಮಿಂದ್ರಃ ಪ್ರಹ್ಲಾದಸ್ತಸ್ಯಾರ್ಥೇ ವಿಜಯಾಮಹೇ ।**
**ಅಸ್ಮಿಂಸ್ತು ಸಮಯೇ ರಾಜಂಸ್ತಿಷ್ಠೇಥಾ ದೇವನೋದಿತೇಃ ॥ ೮೪ ॥**

**ಸ ತಥೇತಿ ಬ್ರುವನ್ನೇವ ದೇವೈರಪ್ಯಭಿಚೋದಿತಃ ।**
**ಭವಿಷ್ಯಸೀಂದ್ರೋ ಜಿತ್ವೇತಿ ದೇವೈರಪಿ ನಿಮಂತ್ರಿತಃ ॥ ೮೫ ॥**

**ಜಘಾನ ದಾನವಾನ್ ಸರ್ವಾನ್ ಸಮಕ್ಷಂ ವಜ್ರಪಾಣಿನಃ ।**
**ಸ ವಿಪ್ರನಷ್ಟಾಂ ದೇವಾನಾಂ ಪರಮಶ್ರೀಃ ಶ್ರಿಯಃ ವಶೀ ॥ ೮೬ ॥**

---

೮೩. ರಜಿರಾಯನು ಹೇಳಿದನು :—ಎಲೈ ದಾನವರೇ, ನಾನು ಈ ಯುದ್ಧದಲ್ಲಿ ನಿಮ್ಮ ಸಂಗಡ ಸೇರಿಕೊಂಡು ದೇವೇಂದ್ರಾದಿಗಳನ್ನು ಜಯಿಸಲು ಸಾಧ್ಯವಿಲ್ಲ. ನಾನು ಈ ಯುದ್ಧದಲ್ಲಿ ಯಜಮಾನನಾಗಿ ಧರ್ಮವನ್ನು ಪರೀಕ್ಷಿಸುವೆನು. ಎಲ್ಲಿ ಧರ್ಮವಿರುವುದೋ ಅವರ ಸಂಗಡ ಸೇರಿ ಯುದ್ಧ ಮಾಡುವೆನೆಂದನು.

೮೪. ಆಗ ದಾನವರು ಹೇಳಿದರು :—ಎಲೈ ರಾಜನೇ, ನಮ್ಮಲ್ಲಿ ಪ್ರಹ್ಲಾದನು ಯಜಮಾನನಾಗಿರುವನು. ಅವನಿಗೋಸ್ಕರ ಜಯವನ್ನು ನಾವು ಇಚ್ಛಿಸುತ್ತೇವೆ, ಎಂದರು. ಈ ವೇಳೆಗೆ ದೇವತೆಗಳು ಬಂದು ಅದಿತಿಯ ಕುಮಾರರಾದ ನಮ್ಮ ಸಂಗಡ ಸೇರಿಕೊಂಡು ನಮ್ಮ ವಿಜಯಕ್ಕಾಗಿ ಪ್ರಯತ್ನಿಸಬೇಕೆಂದು ಬೇಡಿಕೊಂಡರು.

೮೫. ಆಗ ದೇವತೆಗಳು ಬಂದು ಎಲೈ ರಾಜನೇ, ನೀನು ನಮಗೆ ಜಯವಾಗುವಂತೆ ಯತ್ನಿಸಬೇಕು. ನಮಗೆ ಜಯವಾದರೆ ನಿನಗೆ ಇಂದ್ರಪದವಿಯನ್ನು ಕೊಡುವೆವು ಎಂದು ಹೇಳಿ ಅವನನ್ನು ಆಹ್ವಾನಿಸಿದರು.

೮೬. ಅನಂತರ ದೇವದಾನವರಿಗೆ ಯುದ್ಧವು ಪ್ರಾರಂಭವಾಗಲು ಇಂದ್ರನ ಸಮಕ್ಷಮದಲ್ಲಿಯೇ ರಾಜನು ಸಮಸ್ತರಾದ ದಾನವರನ್ನು ಸಂಹರಿಸಿ ನಷ್ಟವಾದ ಅವರ ಸಂಪತ್ತುಗಳನ್ನು ಪಡೆದು ಜಯಶೀಲನಾದನು.

ನಿಹತ್ಯ ದಾನವಾನ್ ಸರ್ವಾನ್ ವ್ಯಾಜಹಾರ ರಜಿಃ ಪ್ರಭುಃ ।
ತಂ ತಥಾ ತು ರಜಿಂ ತತ್ರ ದೇವೈಸ್ಸಹ ಶತಕ್ರತುಃ ॥ ೮೭ ॥

ರಜಿಪುತ್ರೋಽಹಮಿತ್ಯುಕ್ತ್ವಾ ಪುನರೇವಾಬ್ರವೀದ್ವಚಃ ।
ಇಂದ್ರೋಽಸಿ ರಾಜನ್ ದೇವಾನಾಂ ಸರ್ವೇಷಾನ್ನಾತ್ರ ಸಂಶಯಃ ॥
ಯಸ್ಯಾಹಮಿಂದ್ರಪುತ್ರಸ್ತೇ ಖ್ಯಾತಿಂ ಯಾಸ್ಯಾಮಿ ಶತ್ರುಹನ್ ॥ ೮೮ ॥

ಸ ತು ಶಕ್ರವಚಃ ಶ್ರುತ್ವಾ ವಂಚಿತಸ್ತೇನ ಮಾಯಯಾ ।
ತಥೇತ್ಯೇವಾಬ್ರವೀದ್ರಾಜಾ ಪ್ರೀಯಮಾಣಃ ಶತಕ್ರತುಂ ॥ ೮೯ ॥

ತಸ್ಮಿಂಸ್ತು ದೇವಸದೃಶೇ ದಿವಂ ಪ್ರಾಪ್ತೇ ಮಹೀಪತೌ ।
ದಾಯಾದ್ಯಮಿಂದ್ರಾದಾಜಹ್ರುರಾಚಾರಂ ತನಯಾ ರಜೇಃ ॥ ೯೦ ॥

---

೮೭. ಆ ಯುದ್ಧದಲ್ಲಿ ಹೀಗೆ ರಜಿರಾಜನು ಸಮಸ್ತರಾದ ದಾನವರನ್ನು ಗೆದ್ದು ಪ್ರಕಾಶಿಸುತ್ತಿದ್ದನು. ಅನಂತರ ದೇವೇಂದ್ರನು ದೇವತೆಗಳಿಂದ ಕೂಡಿ ರಜಿರಾಜನನ್ನು ಬಹಳವಾಗಿ ಹೊಗಳಿದನು.

೮೮. ಆಗ ಇಂದ್ರನು ನಾನು ರಜಿಪುತ್ರನಾಗಿರುವೆನು ಎಲೈ ರಾಜನೇ, ನೀನು ಸಮಸ್ತರಾದ ದೇವತೆಗಳಿಗೂ ಇಂದ್ರನಾಗಿರುತ್ತೀ, ನಾನು ಇಂದ್ರಕುಮಾರನಾಗಿರುವೆನು. ನೀನು ತಂದೆಯಾಗಿರುತ್ತೀಯೆ, ಎಲೈ ಶತ್ರುನಾಶಕನಾದ ರಾಜನೇ, ಹೀಗೆಯೇ ಲೋಕದಲ್ಲಿ ಖ್ಯಾತಿಯುಂಟಾಗಲೆಂದನು.

೮೯. ಅವನು ಆ ಮಾತುಗಳನ್ನು ಕೇಳಿ ಇಂದ್ರನ ಕಪಟವನ್ನರಿಯದೇ ವಂಚಿತನಾದನು. ತರುವಾಯ ರಾಜನು ಪ್ರೀತನಾಗಿ ಹಾಗೇ ಆಗಲೆಂದು ಇಂದ್ರನಿಗೆ ಹೇಳಿದನು.

೯೦. ಅನಂತರ ದೇವತೆಗಳಿಗೆ ಸಮಾನವಾದ ಕಾಂತಿಯುಳ್ಳ ಆ ಮಹಾರಾಜನು ಸ್ವರ್ಗಲೋಕಕ್ಕೆ ಹೋದನು ತರುವಾಯ ಆ ರಜಿಯ ಪುತ್ರರೆಲ್ಲರೂ ಸ್ವರ್ಗಲೋಕಕ್ಕೆ ಹೋಗಿ ಇಂದ್ರನ ರಾಜ್ಯವನ್ನು ಅಪಹರಿಸಿದರು.

**ತಾನಿ ಪುತ್ರಶತಾನ್ಯಾಸ್ಯ ತಚ್ಚ ಸ್ಥಾನಂ ಶಚೀಪತೇಃ ।**
**ಸಮುಕ್ರಾಮಂತ ಬಹುಧಾ ಸ್ವರ್ಗಲೋಕಂ ತ್ರಿವಿಷ್ಟಪಂ ॥ ೯೧ ॥**

**ತತಃ ಕಾಲೇ ಬಹುತಿಥೇ ಸಮತೀತೇ ಮಹಾಬಲಃ ।**
**ಹೃತರಾಜ್ಯೋಽಬ್ರವೀಚ್ಛಕ್ರೋ ಹೃತಭಾಗೋ ಬೃಹಸ್ಪತಿಂ ॥ ೯೨ ॥**

**ಬದರೀಫಲಮಾತ್ರಂ ವೈ ಪುರೋಢಾಶಂ ವಿಧತ್ಸ್ವಮೇ ।**
**ಬ್ರಹ್ಮರ್ಷೇ ಯೇನ ತಿಷ್ಠೇಯಂ ತೇಜಸಾಪ್ಯಾಯಿತಸ್ತತಃ ॥ ೯೩ ॥**

**ಬ್ರಹ್ಮರ್ಷೇ ಕೃಶೋಽಯಂ ವಿಮನಾ ಹೃತರಾಜ್ಯೋ ಹೃತಾಶನಃ ।**
**ಹತೌಜಾ ದುರ್ಬಲೋ ಮೂಢೋ ರಜಿಪುತ್ರೈಃ ಪ್ರಸೀದ ಮೇ ॥ ೯೪ ॥**

---

೯೧. ಆ ರಾಜನ ನೂರು ಜನ ಮಕ್ಕಳೂ ದೇವೇಂದ್ರನ ಸ್ವರ್ಗಲೋಕಸ್ಥಾನವನ್ನು ಆಕ್ರಮಿಸಿದರು. ತ್ರಿವಿಷ್ಟಪನಾಮಕವಾದ ದೇವಲೋಕವನ್ನು ಆ ರಾಯನೂ ಅವನ ಪುತ್ರರೂ ಅನೇಕ ವಿಧದಿಂದ ಆಕ್ರಮಿಸಿದರು.

೯೨. ತರುವಾಯ ಬಹುಕಾಲ ಹೀಗೆ ಕಳೆದುಹೋಗಲು ಮಹಾಬಲಿಷ್ಠನೂ, ನಷ್ಟವಾದ ರಾಜ್ಯಕೋಶವುಳ್ಳವನೂ, ಅಪಹೃತ ರಾಜ್ಯವುಳ್ಳವನೂ ಆದ ಇಂದ್ರನು ಬೃಹಸ್ಪತಿಯನ್ನು ಕುರಿತು ಇಂತೆಂದನು.

೯೩. ಬ್ರಹ್ಮರ್ಷಿಗಳಾದ ಗುರುಗಳೇ, ನನಗೆ ಎಳಚೇ ಹಣ್ಣಿನಷ್ಟು ಹವಿಸ್ಸು ಸಿಕ್ಕುವಂತೆ ಅನುಗ್ರಹಮಾಡಬೇಕು. ಓ ಗುರುಗಳೇ, ಆ ಚರುವಿನಿಂದಲೇ ತೃಪ್ತನಾಗಿ ತಮ್ಮ ತೇಜಸ್ಸಿನಿಂದ ಸಂತುಷ್ಟನಾಗುವೆನೆಂದನು.

೯೪. ಎಲೈ ಗುರುಗಳೇ, ನಾನು ರಜಿ ಪುತ್ರರಿಂದ ಆಕ್ರಮಿಸಲ್ಪಟ್ಟವನಾಗಿ ಕೃಶನೂ, ಮೂಢನೂ, ಆಹಾರರಹಿತನೂ, ಕಾಂತಿಹೀನನೂ, ದುರ್ಬಲನೂ, ಮಂದಬುದ್ಧಿಯೂ ಆಗಿರುತ್ತೇನೆ. ಆದುದರಿಂದ ಅನುಗ್ರಹಿಸಬೇಕೆಂದು ಬೇಡಿದನು.

|| ಬೃಹಸ್ಪತಿರುವಾಚ ||

ಯದ್ಯೇವಂ ಚೋದಿತಃ ಶಕ್ರ ತ್ವಯಾ ಸ್ಯಾಂ ಪೂರ್ವಮೇವ ಹಿ |
ನಾಭವಿಷ್ಯತ್ ತ್ವತ್ಪ್ರಿಯಾರ್ಥಂ ನಾಕರ್ತವ್ಯಂ ಮಮಾನಘ || ೯೫ ||

ಪ್ರಯತಿಷ್ಯಾಮಿ ದೇವೇಂದ್ರ ತದ್ಧಿತಾರ್ಥಂ ಮಹಾದ್ಯುತೇ |
ಯಥಾ ಭಾಗಂ ಚ ರಾಜ್ಯಂ ಚ ಅಚಿರಾತ್ ಪ್ರತಿಪತ್ಸ್ಯಸೇ || ೯೬ ||

ತಥಾ ಸಕ್ರ ಗಮಿಷ್ಯಾಮಿ ಮಾಭೂತ್ತೇ ವಿಕ್ಲವಂ ಮನಃ |
ತತಃ ಕರ್ಮ ಚಕಾರಾಸ್ಯ ತೇಜಃ ಸಂವರ್ದ್ಧನಂ ಮಹತ್ || ೯೭ ||

ತೇಷಾಂ ಚ ಬುದ್ಧಿ ಸಂಮೋಹಮಕರೋದ್ಬುದ್ಧಿ ಸತ್ತಮಃ |
ತೇ ಯದಾ ಸಸುತಾ ಮೂಢಾ ರಾಗೋತ್ಪನ್ನಾ ವಿಧರ್ಮಿಣಃ || ೯೮ ||

---

೯೫. ಬೃಹಸ್ಪತಿಯು ಹೇಳಿದನು :—ಎಲೈ ದೇವೇಂದ್ರನೇ, ನೀನು ನನ್ನನ್ನು ಮೊದಲೇ ಕೇಳಿದ್ದರೆ ನಿನಗೆ ಇಂತಹ ಕಷ್ಟಗಳೇ ಆಗುತ್ತಿರಲಿಲ್ಲ. ನನಗೂ ಕೂಡ ಇಷ್ಟು ಪ್ರಯಾಸವಾಗುತ್ತಿರಲಿಲ್ಲ. ಈಗ ಬಹಳ ಪ್ರಯಾಸವಾಗಿದೆಯೆಂದು ಬೃಹಸ್ಪತಿಯು ಹೇಳಿದನು.

೯೬. ಎಲೈ ಮಹಾಮತಿಯಾದ ದೇವೇಂದ್ರನೇ, ನಿನ್ನ ಹಿತಕ್ಕಾಗಿ ನಾನು ಪ್ರಯತ್ನಿಸುವೆನು. ಆದರಿಂದ ಕೃತವಾದ ನಿನ್ನ ರಾಜ್ಯಕೋಶಗಳೂ, ಯಜ್ಞದಲ್ಲಿ ನಿನಗೆ ಬರಬೇಕಾದ ಭಾಗಗಳೂ ಬೇಗನೇ ದೊರೆಯುವುವೆಂದು ಹೇಳಿದನು.

೯೭. ಎಲೈ ದೇವತೆಗಳಿಗೆ ಪತಿಯಾದ ಇಂದ್ರನೇ, ನಾನು ನಿನ್ನ ಸಾಧನೆಗಾಗಿ ಹೊರಡುವೆನು. ನೀನು ಇನ್ನು ಮೇಲೆ ವ್ಯಸನಪಡಬೇಕಾಗಿಲ್ಲ. ನಿನ್ನ ತೇಜಸ್ಸು ವೃದ್ಧಿಯಾಗತಕ್ಕ ಕಾರ್ಯವನ್ನು ಮಾಡುವೆನು. ಅದರಿಂದ ನಿನಗೆ ಶಕ್ತಿಯು ವೃದ್ಧಿಯಾಗುವುದೆಂದನು.

೯೮. ಅನಂತರ ಬೃಹಸ್ಪತಿಯು ಅವರಿಗೆ ಬುದ್ಧಿಭ್ರಮಣೆಯಾಗುವಂತೆ ಮಾಡಿದನು. ಬೃಹಸ್ಪತಿಯ ಶಕ್ತಿಯಿಂದ ಅವರು ಬುದ್ಧಿಹೀನರಾದರು. ಆಗ ರಾಜನೂ ಮತ್ತು ಕುಮಾರರೆಲ್ಲರೂ ಮೂರ್ಖರೂ, ಕಾಮಕ್ರೋಧಯುಕ್ತರೂ, ಧರ್ಮಶೂನ್ಯರೂ ಆದರು.

**ಬ್ರಹ್ಮದ್ವಿಷಶ್ಚ ಸಂವೃತ್ತಾ ಹತವೀರ್ಯಪರಾಕ್ರಮಾಃ ।**
**ತತೋ ಲೇಭೇ ಸುರೈಶ್ವರ್ಯಮೈಂದ್ರಸ್ಥಾನಂ ತಥೋತ್ತಮಂ ॥ ೯೯ ॥**

**ಹತ್ವಾ ರಜಿಸುತಾನ್ ಸರ್ವಾನ್ ಕಾಮಕ್ರೋಧಪರಾಯಣಾನ್ ।**
**ಯ ಇದಂ ಪಾವನಂ ಸ್ಥಾನಂ ಪ್ರತಿಷ್ಠಾನಂ ಶತಕ್ರತೋಃ ॥**
**ಶೃಣುಯಾದ್ವಾರಜೇರ್ವಾಪಿ ನ ಸ ದೌರಾತ್ಮ್ಯ ಮಾಪ್ನುಯಾತ್ ॥ ೧೦೦ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ “ ರಜಿಯುದ್ಧಂ ”**
**ನಾಮ ತ್ರಿಂಶೋಽಧ್ಯಾಯಃ**

---

೯೯. ತರುವಾಯ ಅವರು ಬ್ರಹ್ಮದ್ವೇಷಿಗಳೂ, ನಷ್ಟವಾದ ಧೈರ್ಯಶೌರ್ಯವುಳ್ಳವರೂ, ಮಂದಶಕ್ತರೂ ಆದರು. ಆಗ ದೇವೇಂದ್ರನು ಅವರ ಸಂಗಡ ಯುದ್ಧಮಾಡಿ, ಕಂಟಕರಾದ ರಾಜಪುತ್ರರನ್ನು ರಾಜನನ್ನು ಸಂಹರಿಸಿ, ನಷ್ಟವಾದ ರಾಜ್ಯ, ಕೋಶ, ಮಹದೈಶ್ವರ್ಯವೇ ಮೊದಲಾದವನ್ನು ಪಡೆದು ದೇವತೆಗಳೊಡನೇ ಸುಖವಾಗಿದ್ದನು. ಹೀಗೆ ಕಾಮಕ್ರೋಧಿಗಳಿಗೆ ವರರಾದ ರಜಿಕುಮಾರರು ನಷ್ಟವಾದರು.

೧೦೦. ಯಾವ ಪುರುಷನು ಪವಿತ್ರವಾದ ದೇವೇಂದ್ರನು ಪುನಃ ತನ್ನ ರಾಜ್ಯವನ್ನು ಪಡೆದನೆಂಬ ಚರಿತ್ರೆಯನ್ನು ರಜಿರಾಯನ ಕಥೆಯನ್ನು ಕೇಳುವನೋ ಅವನಿಗೆ ದುರ್ಗುಣಗಳು ಉಂಟಾಗದೇ ಸುಗುಣಗಳೇ ಉಂಟಾಗಿ ಇಹಪರಸುಖಗಳನ್ನು ಹೊಂದುವನು. ಎಂದು ಸೂತಮುನಿಯು ಹೇಳಿದನು.

ಇಲ್ಲಿಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ರಜಿರಾಜನ “ ಯುದ್ಧನಿರೂಪಣೆ
ಯೆಂಬ ಮೂವತ್ತನೆಯ ಅಧ್ಯಾಯವು ಮುಗಿದುದು.



## ಮೂವತ್ತನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ರಜಿರಾಜನ ಜಯಪರಾಜಯಗಳು ವರ್ಣಿತವಾಗಿವೆ. ಸೋಮವಂಶದಲ್ಲಿ ಆಯುಸುಹಾರಾಜನೂ, ಅವನಿಗೆ ಕಾಶಿರಾಜನೂ ಜನಿಸಿದರು. ಆ ರಾಯನು ತಪಸ್ಸನ್ನು ಮಾಡಿ ಬ್ರಹ್ಮನೇ ಪುತ್ರನಾಗಬೇಕೆಂಬ ವರವನ್ನು ಪಡೆದಿದ್ದನು. ಅದರಂತೆ ಬ್ರಹ್ಮನು ವಿಷ್ಣ್ವಂಶದಿಂದ ಧನ್ವಂತರಿಯಾಗಿ ಅವತರಿಸಿ, ಆಯುರ್ವೇದವನ್ನು ಮಾಡಿ ವಿಭಾಗಿಸಿ ಭರದ್ವಾಜನೆಂಬ ಶಿಷ್ಯರಿಗೆ ಉಪದೇಶಿಸಿದನು. ಅವನಿಗೆ ಕೇತುಮಾಲಿಯೂ, ಅವನಿಗೆ ಭೀಮರಥನೂ, ಅವನಿಗೆ ದಿವೋದಾಸನೂ ಜನಿಸಿದರು. ಅವನಿಗೆ ಸಂತಾನವಿಲ್ಲದೇ ಗ್ರಾಮದೇವತೆಯಾದ ನಿಕುಂಭನನ್ನು ಆರಾಧಿಸಿ ವರವನ್ನು ಕೊಡದೆ ಇದ್ದುದರಿಂದ ಆ ದೇವಾಲಯವನ್ನೇ ನಾಶಮಾಡಿದನು. ಆಗ ನಿಕುಂಭನು ಆ ಕಾಶೀನಗರಕ್ಕೆ ನಿರ್ಜನವಾಗಲೆಂದು ಶಾಪವನ್ನು ಕೊಟ್ಟನು. ಆಗ ಮಹಾದೇವನು ದಿವ್ಯಭವನವನ್ನು ನಿರ್ಮಿಸಿ, ದೇವೀಸಮೇತ ಯುಗತ್ರಯಗಳವರೆಗೂ ಅದರಲ್ಲಿ ವಾಸಿಸಿ, ಕಲಿಯುಗವು ಬಂದಕೂಡಲೇ ಸ್ವಸ್ಥಾನಕ್ಕೆ ಹೋದನು. ಪುನಃ ಕಲಿಯುಗವು ಬರಲು, ಆ ರಾಯನಿಗೆ ಪ್ರತರ್ದನನೂ, ಅವನಿಗೆ ಅಲರ್ಕನೂ ಜನಿಸಿದರು.

ಆ ವಂಶದಲ್ಲಿ ರಜಿರಾಜನು ಜನಿಸಿ ದೇವಾಸುರ ಯುದ್ಧದಲ್ಲಿ ದೇವತೆಗಳಿಗೆ ಸಹಾಯಮಾಡಿದ್ದರಿಂದ ದೇವೇಂದ್ರನ ಮಾತಿನಂತೆ ಇಂದ್ರಪದವಿಯನ್ನು ಹೊಂದಿದನು. ಆಗ ದೇವೇಂದ್ರನು ಗುರ್ವನುಗ್ರಹದಿಂದ ಭ್ರಾಂತರೂ, ಧರ್ಮಭ್ರಷ್ಟರೂ ಆದ ರಜಿಕುಮಾರರನ್ನು ಜಯಿಸಿ ಪುನಃ ತನ್ನ ಪದವಿಯನ್ನು ಹೊಂದಿದನೆಂಬ ವಿಷಯಗಳು ವರ್ಣಿತವಾಗಿವೆ.



—॥ ಹರಿಃ ಓಂ ॥—

—॥ ಶ್ರೀ ವೇದವ್ಯಾಸಾಯ ನಮಃ ॥—

# ಶ್ರೀಮದ್ವಾಯುಮಹಾಪುರಾಣಂ

## ಏಕತ್ರಿಂಶೋಽಧ್ಯಾಯಃ

**॥ ಋಷಯ ಊಚುಃ ॥**

**ಮರುತೇನ ಕಥಂ ಕನ್ಯಾ ರಾಜ್ಞೇ ದತ್ತಾ ಮಹಾತ್ಮನಾ ।**
**ಕಿಂ ವೀರ್ಯಾಶ್ಚ ಮಹಾತ್ಮಾನೋ ಜಾತಾ ಮರುತಕನ್ಯಕಾಃ ॥ ೧ ॥**

**॥ ಸೂತ ಉವಾಚ ॥**

**ಆಹವನ್ ತಂ ಮರುತ್ಸೋಮ ಮನ್ನಕಾಮಃ ಪ್ರಜೇಶ್ವರಂ ।**
**ಮಾಸಿ ಮಾಸಿ ಮಹಾತೇಜಾಃ ಷಷ್ಟಿಸಂವತ್ಸರಾನ್ನೃಪಃ ॥ ೨ ॥**

## ಮೂವತ್ತೊಂದನೆಯ ಅಧ್ಯಾಯವು

೧. ಋಷಿಗಳು ಹೇಳಿದರು :—ಮರುತನು ತನ್ನ ಪುತ್ರಿಯನ್ನು ಮಹಾತ್ಮನಾದ ಮಹಾರಾಜನಿಗೆ ಏತಕ್ಕಾಗಿ ಕೊಟ್ಟನು. ಆ ಮರುತನ ಪುತ್ರಿಯರು ಎಂತಹ ವೀರ್ಯವಂತರು. ಮಹಾತ್ಮರಾದ ಅವರು ಜನಿಸಿದ ಕ್ರಮವು ಹೇಗೆ ಇದನ್ನು ತಿಳಿಸಬೇಕೆಂದು ಕೇಳಿದರು.

೨. ಸೂತಮುನಿಯು ಹೇಳಿದನು :—ಅನ್ನಾಕಾಂಕ್ಷಿಯಾದ ಮರುತನು ಪ್ರಜೇಶ್ವರನಾದ ಸೋಮದೇವನನ್ನು ಕುರಿತು ಯಾಗವನ್ನು ಮಾಡಿದನು. ಹೀಗೆ ಮಹಾತೇಜಸ್ವಿಯಾದ ಮಹಾರಾಜನು ಪ್ರತಿಮಾಸದಲ್ಲಿ ಸೋಮನನ್ನು ಪೂಜಿಸುತ್ತಾ ಆರು ವರ್ಷಗಳಕಾಲ ಅವನನ್ನು ತೃಪ್ತಿಪಡಿಸಿದನು.

ತೇನ ತೇ ಮರುತಸ್ತಸ್ಯ ಮರುತ್ಸೋಮೇನ ತೋಷಿತಾಃ ।
ಅಕ್ಷಯ್ಯಾನ್ನಂಡದುಃ ಪ್ರೀತಾಃ ಸರ್ವಕಾಮಪರಿಚ್ಛದಂ ॥ ೩ ॥

ಅನ್ನಂತಸ್ಯ ಸಕೃತ್ಪಕ್ವಮಹೋರಾತ್ರೇ ನ ಕ್ಷೀಯತೇ ।
ಕೋಟಿಶೋ ದೀಯಮಾನಂಚ ಸೂರ್ಯಸ್ಯೋದಯನಾದಪಿ ॥ ೪ ॥

ಮಿತ್ರಜ್ಯೋತಿಸ್ತು ಕನ್ಯಾಯಾಂ ಮರುತಸ್ಯ ಚ ಧೀಮತಃ ।
ತಸ್ಮಾಜ್ಜಾತಾ ಮಹಾಸತ್ವಾ ಧರ್ಮಜ್ಞಾ ಮೋಕ್ಷದರ್ಶಿನಃ ॥ ೫ ॥

ಸಂನ್ಯಸ್ಯ ಗೃಹಧರ್ಮಾಣಿ ವೈರಾಗ್ಯಂ ಸಮುಪಸ್ಥಿತಾಃ ।
ಯತಿಧರ್ಮಮವಾಪ್ಯೇಹ ಬ್ರಹ್ಮಭೂಯಾಯ ತೇ ಗತಾಃ ॥ ೬ ॥

---

೩. ಮರುತ್ಸೋಮರಾಜನಿಂದ ಹೀಗೆ ಪೂಜಿಸಲ್ಪಟ್ಟ ಮರುತ್ತುಗಳು ಅವನ ಭಕ್ತಿಗೆ ಮೆಚ್ಚಿ ಪ್ರೀತರಾಗಿ ಸಕಲೇಷ್ಟಾರ್ಥಗಳಿಂದ ಸಹಿತವೂ ನಾಶರಹಿತವೂ ಆದ ಅಮೃತರೂಪವಾದ ಅನ್ನವನ್ನು ಕೊಟ್ಟರು.

೪. ದೇವತೆಗಳಿಂದ ದತ್ತವಾದ ಆ ಅನ್ನವು ಒಂದು ಸಲ ಪಕ್ವವಾದರೂ ಅಹೋರಾತ್ರಿಗಳಿಗೆ ಪೂರ್ಣವಾಗಿ ಕ್ಷೀಣವಾಗದೇ ಸಮೃದ್ಧಿಯಾಗಿದ್ದಿತು. ಮತ್ತು ಸೂರ್ಯೋದಯ ಮೊದಲುಕೊಂಡು ಸಾಯಂಕಾಲದವರೆಗೂ ನಾನಾ ರೀತಿಯಾಗಿ ಕೋಟ್ಯಂತರ ಪ್ರಜೆಗಳಿಗೆ ದಾನಮಾಡಿದರೂ ಕ್ಷಯಿಸದೇ ಪಾತ್ರೆಯಲ್ಲಿ ಪೂರ್ಣವಾಗಿಯೇ ಇತ್ತು.

೫–೬. ಮಿತ್ರ ಜ್ಯೋತಿಯೆಂಬವನು ಜ್ಞಾನಿಯಾದ ಮರುತ್ಸೋಮನ ಪುತ್ರಿಯಲ್ಲಿ ಉದ್ಭವಿಸಿದನು. ಆ ಮಿತ್ರಜ್ಯೋತಿಗೆ ಮಹಾಬಲಿಷ್ಠರೂ, ಧರ್ಮಜ್ಞರೂ, ಮೋಕ್ಷಾಪೇಕ್ಷಿಗಳೂ ಆದ ಕುಮಾರರು ಉದ್ಭವಿಸಿ ಸಂಸಾರವನ್ನು ತ್ಯಜಿಸಿ, ವೈರಾಗ್ಯವನ್ನೂ, ಯತಿಧರ್ಮವನ್ನೂ, ಬ್ರಹ್ಮಜ್ಞಾನವನ್ನೂ ಹೊಂದಿ ಮೋಕ್ಷವನ್ನು ಪಡೆದರು.

**ಅನಪಾಯಸ್ತತೋ ಜಾತಸ್ತದಾ ಧರ್ಮಪ್ರದತ್ತವಾನ್ ।**
**ಕ್ಷತ್ರಧರ್ಮಸ್ತತೋ ಜಾತಃ ಪ್ರತಿಪಕ್ಷೋ ಮಹಾತಪಾಃ ॥ ೭ ॥**

**ಪ್ರತಿಪಕ್ಷಸುತಶ್ಚಾಪಿ ಸಂಜಯೋ ನಾಮ ವಿಶ್ರುತಃ ।**
**ಸಂಜಯಸ್ಯ ಜಯಃ ಪುತ್ರೋ ವಿಜಯಸ್ತಸ್ಯ ಜಜ್ಞಿವಾನ್ ॥ ೮ ॥**

**ವಿಜಯಸ್ಯ ಜಯಃ ಪುತ್ರಸ್ತಸ್ಯ ಹರ್ಯಂದ್ವತಃ ಸ್ಮೃತಃ ।**
**ಹರ್ಯಂದುತಸ್ತತೋ ರಾಜಾ ಸಹದೇವಃ ಪ್ರತಾಪವಾನ್ ॥ ೯ ॥**

**ಸಹದೇವಸ್ಯ ಧರ್ಮಾತ್ಮಾ ಅದೀನ ಇತಿ ವಿಶ್ರುತಃ ।**
**ಅದೀನಸ್ಯ ಜಯತ್ಸೇನಸ್ತಸ್ಯ ಪುತ್ರೋಽಥ ಸಂಕೃತಿಃ ॥ ೧೦ ॥**

**ಸಂಕೃತೇರಪಿ ಧರ್ಮಾತ್ಮಾ ಕೃತಧರ್ಮಾ ಮಹಾಯಶಾಃ ।**
**ಇತ್ಯೇತೇ ಕ್ಷತ್ರಧರ್ಮಾಣೋ ನಹುಷಸ್ಯ ನಿಬೋಧತ ॥ ೧೧ ॥**

೭. ಆ ವಂಶದಲ್ಲಿ ಅನಪಾಯನೂ, ಅನಂತರ ಧರ್ಮಪ್ರದತ್ತನೂ, ತರುವಾಯ ಕ್ಷತ್ರಧರ್ಮನೂ, ತದನಂತರ ಮಹಾತಪಸ್ವಿಯಾದ ಪ್ರತಿಪಕ್ಷ ಮಹಾರಾಜನೂ ಜನಿಸಿದರು.

೮. ಆ ಪ್ರತಿಪಕ್ಷರಾಜನಿಗೆ ಲೋಕವಿಖ್ಯಾತನಾದ ಸಂಜಯನೆಂಬ ಕುಮಾರನೂ, ಆ ಸಂಜಯನಿಗೆ ಜಯನೆಂಬ ಸುತನೂ, ಅವನಿಗೆ ವಿಜಯನೆಂಬ ಪುತ್ರನೂ ಸಂಭವಿಸಿದರು.

೯. ವಿಜಯನಿಗೆ ಜಯನೆಂಬ ತನಯನೂ, ಅವನಿಗೆ ಹರ್ಯಂದ್ವತನೆಂಬ ಮಗನೂ, ಅವನಿಗೆ ಪ್ರತಾಪಶಾಲಿಯಾದ ಸಹದೇವ ಮಹಾರಾಜನು ಉದ್ಭವಿಸಿದರು.

೧೦. ಆ ಸಹದೇವ ಮಹಾರಾಜನಿಗೆ ಲೋಕವಿಶ್ರುತನೂ ಧರ್ಮಾತ್ಮನೂ ಆದ ಅದೀನನೆಂಬ ಕುಮಾರನೂ, ಅದೀನನಿಗೆ ಜಯತ್ಸೇನನೆಂಬ ಕುವರನೂ, ಅವನಿಗೆ ಸಂಕೃತಿಯೆಂಬ ತನೂಜನೂ ಜನಿಸಿ ವಿಖ್ಯಾತರಾದರು.

೧೧. ಆ ಸಂಕೃತಿಗೆ ಧರ್ಮಾತ್ಮನೂ ಮಹಾಕೀರ್ತಿವಂತನೂ ಆದ ಕೃತಧರ್ಮನೆಂಬ ಕುಮಾರನೂ ಜನಿಸಿದರು. ಇವರೆಲ್ಲರೂ ಕ್ಷತ್ರಧರ್ಮೋಪೇತರಾಗಿಯೂ ಪ್ರಖ್ಯಾತರಾಗಿಯೂ ಇದ್ದರು. ಈಗ ನಹುಷನ ವೃತ್ತಾಂತವನ್ನು ತಿಳಿಸುವೆನು ಕೇಳಿರೆಂದು ಹೇಳಿದನು.

ನಹುಷಸ್ಯ ತು ದಾಯಾದಾಃ ಷಡಿಂದ್ರೋಪಮತೇಜಸಃ ।
ಉತ್ಪನ್ನಾಃ ಪಿತೃಕನ್ಯಾಯಾಂ ವಿರಜಾಯಾಂ ಮಹೌಜಸಃ ॥ ೧೨ ॥

ಯತಿರ್ಯಯಾತಿಃ ಸಂಯಾತಿರಾಯಾತಿಃ ಪಂಚ ತುದ್ವಯಃ ।
ಯತಿರ್ಜ್ಯೇಷ್ಠಸ್ತು ತೇಷಾಂ ವೈ ಯಯಾತಿಸ್ತು ತತೋಽವರಃ ॥ ೧೩ ॥

ಕಾಕುತ್ಸ್ಥಕನ್ಯಾಂ ಗಾಂ ನಾಮ ಲೇಭೇ ಪತ್ನೀಂ ಯತಿಸ್ತದಾ ।
ಸಂಯಾತಿರ್ಮೋಕ್ಷಮಾಸ್ಥಾಯ ಬ್ರಹ್ಮಭೂತೋಽಭವನ್ಮುನಿಃ ॥ ೧೪ ॥

ತೇಷಾಂ ಮಧ್ಯೇ ತು ಪಂಚಾನಾಂ ಯಯಾತಿಃ ಪೃಥಿವೀಪತಿಃ ।
ದೇವಯಾನಿಮುಶನಸಃ ಸುತಾಂ ಭಾರ್ಯಾಮವಾಪ ಹ ॥ ೧೫ ॥

---

೧೨. ನಹುಷರಾಜನಿಗೆ ಪಿತೃದೇವತೆಗಳ ಪುತ್ರಿಯಾದ ವಿರಜಾದೇವಿಯಲ್ಲಿ ಇಂದ್ರನಿಗೆ ಸಮಾನವಾದ ತೇಜಸ್ವಿಗಳೂ ಮಹಾಶೂರರೂ ಆದ ಆರುಜನ ಮಕ್ಕಳು ಉತ್ಪನ್ನರಾದರು.

೧೩. ಅವರು ಯಾರೆಂದರೆ—ಯತಿ, ಯಯಾತಿ, ಸಂಯಾತಿ, ಆಯತಿ, ಪಂಚ, ತುದ್ವಯರೆಂಬುವರು. ಇವರಲ್ಲಿ ಯತಿಯೆಂಬುವನು ಹಿರಿಯವನಾಗಿಯೂ, ಯಯಾತಿಯು ಕಿರಿಯವನಾಗಿಯೂ ಇದ್ದರು.

೧೪. ಆಗ ಜ್ಯೇಷ್ಠಕುಮಾರನಾದ ಯತಿಯು ಕಾಕುತ್ಸ್ಥರಾಜಕುಮಾರಿಯಾದ ಗಾ ಎಂಬುವಳನ್ನು ಪತ್ನಿಯನ್ನಾಗಿ ಮಾಡಿಕೊಂಡನು. ಸಂಯಾತಿಯೆಂಬುವನು ಮೋಕ್ಷವನ್ನು ಹೊಂದಿ ಬ್ರಹ್ಮರೂಪದಿಂದ ನಿತ್ಯಸುಖಿಯಾದನು.

೧೫. ಉಳಿದ ಐದು ಜನರಲ್ಲಿ ಯಯಾತಿರಾಜನು ಪೃಥಿವೀಪತಿಯಾದನು. ಆ ಯಯಾತಿಮಹಾರಾಜನು ಶುಕ್ರಾಚಾರ್ಯನ ಕುಮಾರಿಯಾದ ದೇವಯಾನಿಯನ್ನು ಮದುವೆಯಾದನು.

ಶರ್ಮಿಷ್ಠಾಮಾಸುರೀಂಚೈವ ತನಯಾಂ ವೃಷಪರ್ವಣಃ ।
ಯದುಂ ಚ ತುರ್ವಸಂಚೈವ ದೇವಯಾನಿರ್ವ್ಯಜಾಯತ ॥ ೧೬ ॥

ದ್ರುಹ್ಯುಂಚಾನುಂ ಚ ಪೂರುಂ ಚ ಶರ್ಮಿಷ್ಠಾ ವಾರ್ಷಪರ್ವಣೀ ।
ಅಜೀಜನನ್ಮಹಾವೀರ್ಯಾನ್ ಸುತಾನ್ ದೇವಸುತೋಪಮಾನ್ ॥ ೧೭ ॥

ರಥಂತಸ್ಮೈ ದದೌ ರುದ್ರಃ ಪ್ರೀತಃ ಪರಮಭಾಸ್ವರಂ ।
ಅಸಂಗಂ ಕಾಂಚನಂ ದಿವ್ಯಮಕ್ಷಯೌ ಚ ಮಹೇಷುಧೀ ॥ ೧೮ ॥

ಯುಕ್ತಂ ಮನೋಜವೈರಶ್ವೈರ್ಯೇನ ಕನ್ಯಾಂ ಸಮುದ್ವಹತ್ ।
ಸ ತೇನ ರಥಮುಖ್ಯೇನ ಜಿಗಾಯ ಚ ತತೋ ಮಹೀಂ ॥ ೧೯ ॥

---

೧೬. ಮತ್ತು ಯಯಾತಿಯು ವೃಷಪರ್ವರಾಜಕುಮಾರಿಯೂ, ಅಸುರ ಸಂಬಂಧಿಯೂ ಆದ ಶರ್ಮಿಷ್ಠಾದೇವಿಯನ್ನೂ ಮದುವೆಯಾದನು. ಅವರಿಬ್ಬರಲ್ಲಿ ದೇವಯಾನಿಗೆ ಯದು, ಚತುರ್ವಸುವೆಂಬ ಇಬ್ಬರು ಪುತ್ರರು ಜನಿಸಿದರು.

೧೭. ವೃಷಪರ್ವರಾಜಕುವರಿಯಾದ ಶರ್ಮಿಷ್ಠೆಯು ದ್ರುಹ್ಯ, ಅನು ಮತ್ತು ಪುರುವೆಂಬ ಮೂವರು ಕುಮಾರರನ್ನು ಪಡೆದಳು. ಈ ಐವರು ಕುಮಾರರೂ ಮಹಾ ಶೂರರೂ ದೇವೇಂದ್ರನ ಕುಮಾರನಾದ ಜಯಂತನಿಗೆ ಸಮಾನತೇಜಸ್ವಿಗಳೂ ಆಗಿ ಹೊಳೆಯುತ್ತಿದ್ದರು.

೧೮–೧೯. ರುದ್ರದೇವನು ಪ್ರೀತನಾಗಿ ಬಹಳವಾಗಿ ಹೊಳೆಯುವುದೂ, ಸುವರ್ಣಮಯವೂ, ಭೂಸಂಬಂಧಶೂನ್ಯವೂ, ಮನೋವೇಗವುಳ್ಳ ಅಶ್ವಗಳಿಂದ ಯುಕ್ತವೂ, ಕನ್ಯಾವಿವಾಹಸಾಧಕವೂ ಆದ ರಥವನ್ನೂ ಅಕ್ಷಯಸಾಯಕವುಳ್ಳ ಎರಡು ಬತ್ತಳಿಕೆಗಳನ್ನೂ ಆ ರಾಜನಿಗೆ ಕೊಟ್ಟನು. ಅವನು ಅವುಗಳಿಂದ ಭೂಮಂಡಲವನ್ನೇ ಜಯಿಸಿದನು.

ಯಯಾತಿರ್ಯುಧಿ ದುರ್ಧರ್ಷೋ ದೇವದಾನವಮಾನವೈಃ ।
ಪೌರವಾಣಾಂ ನೃಪಾಣಾಂ ಚ ಸರ್ವೇಷಾಂ ಸೋಽಭವದ್ರಥಃ ॥ ೨೦ ॥

ಯೋಽವತ್ಸದೇಶಪ್ರಭವಃ ಕೌರವೋ ಜನಮೇಜಯಃ ।
ಕುರೋಃ ಪುತ್ರಸ್ಯ ರಾಜ್ಞಸ್ತು ರಾಜ್ಞಃ ಪಾರಿಕ್ಷಿತಸ್ಯ ಹ ॥
ಜಗಾಮ ಸ ರಥೋ ನಾಶಂ ಶಾಪಾದ್ಗಾರ್ಗ್ಯಸ್ಯ ಧೀಮತಃ ॥ ೨೧ ॥

ಗಾರ್ಗ್ಯಸ್ಯ ಹಿ ಸುತಂ ಬಾಲಃ ಸ ರಾಜಾ ಜನಮೇಜಯಃ ।
ದುರ್ಬುದ್ಧಿರ್ಹಿಂಸಯಾಮಾಸ ಲೋಹಗಂಧಂ ನರಾಧಿಪಂ ॥ ೨೨ ॥

ಸ ಲೋಹಗಂಧೋ ರಾಜರ್ಷಿಃ ಪರಿಧಾವನ್ನಿತಸ್ತತಃ ।
ಪೌರಜಾನಪದೈಸ್ತ್ಯಕ್ತೋ ನ ಲೇಭೇ ಶರ್ಮ ಕರ್ಹಿಚಿತ್ ॥ ೨೩ ॥

---

೨೦. ಯಯಾತಿ ಮಹಾರಾಜನು ಯುದ್ಧದಲ್ಲಿ ದೇವದಾನವ ಮನುಷ್ಯರಿಂದಲೂ ಜಯಿಸಲಶಕ್ಯನಾಗಿರುವನು. ಮಹಾರಥಿಕನಾದ ರಾಜನು, ಪಟ್ಟಣಿಗರು, ರಾಜರು ಇವರೇ ಮೊದಲಾದ ಸರ್ವಜನರಿಂದಲೂ ಮಾನ್ಯನಾಗಿ ಪ್ರಕಾಶಿಸುತ್ತಿದ್ದನು.

೨೧. ಯಾವ ಜನಮೇಜಯಮಹಾರಾಜನು ವತ್ಸದೇಶದಲ್ಲಿ ಜನಿಸಿದವನೂ, ಕುರುವಂಶೋತ್ಪನ್ನನೂ, ಕುರುಪುತ್ರನಾದ ಪಾರಿಕ್ಷಿತರಾಜಕುಮಾರನೂ ಆಗಿದ್ದನೋ ಅವನು ಜ್ಞಾನಿಯಾದ ಗಾರ್ಗ್ಯಮುನಿಯ ಶಾಪದಿಂದ ನಾಶವನ್ನು ಹೊಂದಿದನು.

೨೨. ಆ ಜನಮೇಜಯ ಮಹಾರಾಜನು ಬಾಲ್ಯದಲ್ಲಿ ದುರ್ಬುದ್ಧಿಯಿಂದ ಗಾರ್ಗ್ಯಮುನಿಯ ಕುಮಾರನಾದ ಲೋಹಗಂಧನೆಂಬ ರಾಜನನ್ನು ಹಿಂಸಿಸಿದನು.

೨೩. ಹೀಗೆ ಹಿಂಸಿತನಾದ ಲೋಹಗಂಧನೆಂಬ ರಾಜರ್ಷಿಯು ಇಲ್ಲಿಂದಲ್ಲಿಗೆ ಓಡಿಹೋಗುತ್ತಾ, ಪಟ್ಟಣಿಗರಿಂದಲೂ, ದೇಶದವರಿಂದಲೂ, ತ್ಯಕ್ತನಾಗಿ ಎಲ್ಲಿಯೂ ಆಶ್ರಯವನ್ನು ಹೊಂದಲಿಲ್ಲ.

ತತಃ ಸ ದುಃಖಸಂತಪ್ತೋ ನಾಲಭತ್ಸಂವಿದಂ ಕ್ವಚಿತ್ ।
ಶಶಾಪ ಹೇತುಕಮೃಷಿಂ ಶರಣ್ಯಂ ವ್ಯಥಿತಸ್ತದಾ ॥ ೨೪ ॥

ಇಂದ್ರೋತೋ ನಾಮ ವಿಖ್ಯಾತೋ ಯೋಽಸೌ ಮುನಿರುದಾರಧೀಃ ।
ಯೋಜಯಾಮಾಸ ಚೇಂದ್ರೋತಃ ಶೌನಕೋ ಜನಮೇಜಯಂ ॥
ಅಶ್ವಮೇಧೇನ ರಾಜಾನಂ ಪಾವನಾರ್ಥಂ ದ್ವಿಜೋತ್ತಮಃ ॥ ೨೫ ॥

ಸ ಲೋಹಗಂಧೋ ವ್ಯನಶತ್ತಸ್ಯಾವಸಥಮೇತ್ಯ ಹ ।
ಸ ಚ ದಿವ್ಯೋ ರಥಸ್ತಸ್ಮಾದ್ವಸೋಶ್ಚೇದಿಪತೇಸ್ತಥಾ ॥ ೨೬ ॥

ತತಃ ಶಕ್ರೇಣ ತುಷ್ಟೇನ ಲೇಭೇ ತಸ್ಮಾದ್ಬೃಹದ್ರಥಃ ।
ತತೋ ಹತ್ವಾ ಜರಾಸಂಧಂ ಭೀಮಸ್ತಂ ರಥಮುತ್ತಮಂ ॥
ಪ್ರದದೌ ವಾಸುದೇವಾಯ ಪ್ರೀತ್ಯಾ ಕೌರವನಂದನಃ ॥ ೨೭ ॥

---

೨೪. ಅನಂತರ ಲೋಹಗಂಧನೆಂಬ ಮುನಿಯು ಎಲ್ಲಿಯೂ ಆಶ್ರಯವನ್ನು ಹೊಂದಲಿಲ್ಲ. ಆಗ ಬಹಳ ಖಿನ್ನನಾಗಿ, ಋಷಿಯನ್ನು ಶರಣುಹೊಂದಿ ಶಾಪವನ್ನು ಕೊಡಿಸಿದನು.

೨೫. ಇಂದ್ರೋತನೆಂದು ಪ್ರಖ್ಯಾತನೂ ಉದಾರಮನಸ್ಕನೂ ಆದ ಯಾವ ಮುನಿಯು ಪ್ರಸಿದ್ಧನಾಗಿರುವನೋ, ಅಂತಹ ಶೌನಿಕನಾಮಕ ಮುನಿಯು ಎಲೈ ಜನಮೇಜಯರಾಜನೇ, ನಿನ್ನ ಪರಿಶುದ್ಧತೆಗಾಗಿ ಅಶ್ವಮೇಧಯಾಗವನ್ನು ಮಾಡು ಎಂದು ಜನಮೇಜಯರಾಯನಿಗೆ ಹೇಳಿದನು.

೨೬. ಅನಂತರ ಲೋಹಮಯವೂ, ಸುಗಂಧಯುಕ್ತವೂ ಆದ ವಸುವಿನ ದಿವ್ಯರಥವು ಚೇದಿದೇಶಾಧಿಪತಿಯಾದ ಜರಾಸಂಧನಿಗೆ ಸಿಕ್ಕಿತು.

೨೭. ಅನಂತರ ಇಂದ್ರನ ವಶವಾಗಲು, ಸಂತುಷ್ಟನಾದ ದೇವೇಂದ್ರನು ಆ ಲೋಹಮಯರಥವನ್ನು ಬೃಹದ್ರಥನೆಂದು ಪ್ರಸಿದ್ಧನಾದ ಜರಾಸಂಧನಿಗೆ ಕೊಟ್ಟನು. ಅನಂತರ ಕುರುವಂಶೋತ್ಪನ್ನನಾದ ಭೀಮಸೇನನು ಆ ಜರಾಸಂಧನನ್ನು ಸಂಹರಿಸಿ, ಆ ಶ್ರೇಷ್ಠವಾದ ದಿವ್ಯರಥವನ್ನು ಪ್ರೀತಿಯಿಂದ ಶ್ರೀಕೃಷ್ಣನಿಗೋಸ್ಕರ ಕೊಟ್ಟನು.

ಸ ಜರಾಂ ಪ್ರಾಪ್ಯ ರಾಜರ್ಷಿರ್ಯಯಾತಿರ್ನಹುಷಾತ್ಮಜಃ ।
ಪುತ್ರಂ ಜ್ಯೇಷ್ಠಂ ವರಿಷ್ಠಂ ಚ ಯದುಮಿತ್ಯಬ್ರವೀದ್ವಚಃ ॥ ೨೮ ॥

ಜರಾವಲೀ ಚ ಮಾಂ ತಾತ ಪಲಿತಾನಿ ಚ ಪರ್ಯಗುಃ ।
ಕಾವ್ಯಸ್ಯೋಶನಸಃ ಶಾಪಾನ್ನ ಚ ತೃಪ್ತೋಽಸ್ಮಿ ಯೌವನೇ ॥ ೨೯ ॥

ತ್ವಂ ಯದೋ ಪ್ರತಿಪದ್ಯಸ್ವ ಪಾಪ್ಮಾನಂ ಜರಯಾ ಸಹ ।
ಜರಾಂ ಮೇ ಪ್ರತಿಗೃಹ್ಣೀಷ್ವ ತಂ ಯದುಃ ಪ್ರತ್ಯುವಾಚ ಹ ॥ ೩೦ ॥

ಅನಿರ್ದಿಷ್ಟಾ ಮಯಾ ಭಿಕ್ಷಾ ಬ್ರಾಹ್ಮಣಸ್ಯ ಪ್ರತಿಶ್ರುತಾ ।
ಸಾ ಚ ವ್ಯಾಯಾಮಸಾಧ್ಯಾ ವೈ ನ ಗ್ರಹೀಷ್ಯಾಮಿ ತೇ ಜರಾಂ ॥ ೩೧ ॥

---

೨೮. ನಹುಷನ ಕುಮಾರನಾದ ಯಯಾತಿ ಮಹಾರಾಜನು ಮುಪ್ಪನ್ನು ಹೊಂದಿ ಪೀಡಿತನಾಗಿ, ಜ್ಯೇಷ್ಠಕುಮಾರನಾದ ಯದುರಾಯನನ್ನು ಕುರಿತು ಈ ರೀತಿಯಾಗಿ ಹೇಳಿದನು.

೨೯. ಎಲೈ ಪ್ರಿಯಕುಮಾರನೇ, ಕವಿಯಾದ ಶುಕ್ರಾಚಾರ್ಯನ ಶಾಪದಿಂದ ನನಗೆ ಮುದಿತನವು ಪ್ರಾಪ್ತವಾಗಿರುತ್ತದೆ. ರೋಮಗಳು ನೆರತಿರುತ್ತವೆ. ನಾನು ಯೌವನದಲ್ಲಿ ತೃಪ್ತಿಪಡಲಿಲ್ಲ. ಯೌವನ ಸುಖವನ್ನು ಅನುಭವಿಸಬೇಕೆಂಬ ಆಶೆಯು ಬಹಳವಾಗಿದೆಯೆಂದು ಹೇಳಿದನು.

೩೦. ಎಲೈ ಯದುರಾಯನೇ ಈ ಪಾಪಕರವಾದ ಮುಪ್ಪನ್ನು ನೀನು ಸ್ವೀಕರಿಸು. ನಿನ್ನ ಯೌವನವನ್ನು ನನಗೆ ಕೊಡು, ಎಂದು ಹೇಳಿದನು. ಆ ಮಾತುಗಳನ್ನು ಕೇಳಿದ ಯದುರಾಯನು ತಂದೆಗೆ ಇಂತೆಂದನು.

೩೧. ಎಲೈ ತಂದೆಯೇ, ಕ್ಷತ್ರಿಯರು ಭಿಕ್ಷವನ್ನು ಬೇಡಲೂ ಬಾರದು: ಸ್ವೀಕರಿಸಲೂ ಕೂಡದು. ಭಿಕ್ಷಾಸ್ವೀಕಾರವು ಬ್ರಾಹ್ಮಣ ಧರ್ಮವಾಗಿದೆ. ಭಿಕ್ಷಾಸ್ವೀಕಾರ ಮಾಡಿದರೆ ಅದರ ಪಾಪಪರಿಹಾರಕ್ಕಾಗಿ ಜಪತಪಾದಿಗಳಿನ್ನು ಮಾಡಲು ಬಹುಕಾಲ ಬೇಕಾಗುವದು. ಆದುದರಿಂದ ತಮ್ಮ ಮುಪ್ಪನ್ನು ನಾನು ಸ್ವಿ.ಕರಿಸಲಾರೆನೆಂದನು.

ಜರಾಯಾ ಬಹವೋ ದೋಷಾ ಯಾನಭೋಜನಕಾರಿಣಃ ।
ತಸ್ಮಾಜ್ಜರಾನ್ನ ತೇ ರಾಜನ್ ಗ್ರಹೀತುಮಹಮುತ್ಸಹೇ ॥ ೩೨ ॥

ಸಿತಶ್ಮಶ್ರುಧರೋ ದೀನೋ ಜರಯಾ ಶಿಥಿಲೀಕೃತಃ ।
ಬಲೀ ಸನ್ನತಗಾತ್ರಶ್ಚ ದುರ್ದಶೋ ದುರ್ಬಲಾಕೃತಿಃ ॥ ೩೩ ॥

ಅಶಕ್ತಃ ಕಾರ್ಯಕರಣೇ ಪರಿಭೂತಸ್ತು ಯೌವನೇ ।
ಮಹೋಪಭೀತಿಭಿಶ್ಚೈವ ತಾಂ ಜರಾನ್ನಾಭಿಕಾಮಯೇ ॥ ೩೪ ॥

ಸಂತಿ ತೇ ಬಹವಃ ಪುತ್ರಾ ಮತ್ತಃ ಪ್ರಿಯತರಾನ್ನೃಪ ।
ಪ್ರತಿಗೃಹ್ಣಂ ತು ಧರ್ಮಜ್ಞ ಪುತ್ರ ಮನ್ಯಂ ವೃಣೀಷ್ವ ವೈ ॥ ೩೫ ॥

---

೩೨. ಎಲೈ ಮಹಾರಾಜನೇ, ಮುಪ್ಪಿನಲ್ಲಿ ಗಮನಭೋಜನಾದಿಗಳಿಗೆ ಪ್ರತಿಕೂಲವಾದ ಅನೇಕ ಮಹಾದೋಷಗಳಿರುವವು. ಮತ್ತು ಸ್ವಾತಂತ್ರ್ಯವಿಲ್ಲದೆ ಪರಾಧೀನತೆಯುಂಟಾಗುವದು. ಆದುದರಿಂದ ನಾನು ಅದನ್ನು ಸ್ವೀಕರಿಸುವದಿಲ್ಲ ವೆಂದನು.

೩೩–೩೪. ಮುಪ್ಪಿನಲ್ಲಿ ದಾಡೀ ಮೀಸೆಗಳು ನೆರತು ಬೆಳ್ಳಗಾಗುತ್ತವೆ. ಶರೀರವು ಕೃಶವಾಗಿ ಸುಕ್ಕುಗಳಿಂದ ವಿಲಕ್ಷಣವಾಗಿ ಕಾಣುತ್ತದೆ. ಶಕ್ತಿಯು ಕುಂದಿ ದುರ್ಬಲತೆಯುಂಟಾಗುವುದು. ಸೊಂಟವು ಬಗ್ಗಿಹೋಗುತ್ತದೆ, ದುರವಸ್ಥೆಯುಂಟಾಗುವುದು. ಸರ್ವಕಾರ್ಯಗಳಲ್ಲಿಯೂ ಪರಾಧೀನತೆಯುಂಟಾಗುವುದು. ಮತ್ತು ಅತಿ ಭೀತಿಯು ಸಂಭವಿಸುವುದು. ಆದುದರಿಂದ ನಾನು ಮುಪ್ಪನ್ನು ಸ್ವೀಕರಿಸುವುದಿಲ್ಲವೆಂದನು.

೩೫. ಎಲೈ ತಂದೆಯೇ, ನಿನಗೆ ನನಗಿಂತಲೂ ಪ್ರೀತಿಗೆ ಪಾತ್ರರಾದ ಅನೇಕ ಪುತ್ರರಿರುವರು. ಎಲೈ ಧರ್ಮಾತ್ಮನಾದ ಪಿತನೇ, ಅವರಲ್ಲಿ ಯಾರಾದರೂ ನಿನ್ನ ಮುಪ್ಪನ್ನು ತೆಗೆದುಕೊಳ್ಳಲಿ; ಅವರನ್ನು ಕೇಳು ಎಂದು ಯದುವು ಹೇಳಿದನು.

ಸ ಏವಮುಕ್ತೋ ಯದುನಾ ತೀವ್ರಕೋಪಸಮನ್ವಿತಃ ।
ಉವಾಚ ವದತಾಂ ಶ್ರೇಷ್ಠೋ ಜ್ಯೇಷ್ಠಂ ತಂ ಗರ್ಹಯನ್ ಸುತಂ ॥ ೩೬ ॥

ಆಶ್ರಮಃ ಕಶ್ಚ ವಾನ್ಯೋಽಸ್ತಿ ಕೋ ವಾ ಧರ್ಮವಿಧಿಸ್ತವ ।
ಮಾಮನಾದೃತ್ಯ ದುರ್ಬುದ್ಧೇ ಯದಾತ್ಥ ನವದೇಶಿಕ ॥ ೩೭ ॥

ಏವಮುಕ್ತ್ವಾ ಯದುಂ ರಾಜಾ ಶಶಾಪೈನಂ ಸ ಮನ್ಯುಮಾನ್ ।
ಯಸ್ತ್ವಂ ಮೇ ಹೃದಯಾಜ್ಜಾತೋ ವಯಃ ಸ್ವಂ ನ ಪ್ರಯಚ್ಛಸಿ ॥ ೩೮ ॥

ತಸ್ಮಾನ್ನ ರಾಜ್ಯಭಾಗ್ ಮೂಢ ಪ್ರಜಾ ತೇ ವೈ ಭವಿಷ್ಯತಿ ।
ತುರ್ವಸೋ ಪ್ರತಿಪದ್ಯಸ್ವ ಪಾಪ್ಮಾನಂ ಜರಯಾ ಸಹ ॥ ೩೯ ॥

೩೬—೩೭. ಹೀಗೆ ಯದುರಾಯನು ಹೇಳಲಾಗಿ ಅತ್ಯಂತ ಕೋಪಯುಕ್ತನೂ, ಜ್ಞಾನಿಗಳಲ್ಲಿ ಅಗ್ರಗಣ್ಯನೂ ಆದ ಯಯಾತಿ ಮಹಾರಾಯನು ತನ್ನ ಹಿರಿಯ ಕುಮಾರನನ್ನು ದೂಷಿಸುತ್ತಾ ಎಲೈ ದುಷ್ಟನೇ, ನಿನಗೆ ಆಶ್ರಮವು ಯಾವುದಿದೆ? ಧರ್ಮವಾಗಲೀ, ವಿಧಿಯಾಗಲೀ ಯಾವುದು ಇವೆ? ನನ್ನನ್ನು ಅನಾದರಣೆಮಾಡಿ ದುರ್ಬುದ್ಧಿಯಿಂದ ಹೊಸಬನಾದ ಗುರುವಿನಂತೆ ನನಗೆ ಉಪದೇಶವನ್ನು ಮಾಡುತ್ತೀಯೆ, ಎಂದು ದೂಷಿಸಿದನು.

೩೮. ತರುವಾಯ ರಾಯನು ಕೋಪಯುಕ್ತನಾಗಿ ಯದುವನ್ನು ಕುರಿತು— ಎಲೈ ನೀಚನೆ, ನೀನು ನನಗೆ ಪುತ್ರನಾಗಿ ಜನಿಸಿದ್ದರೂ ಕೂಡ ನನಗೆ ನಿನ್ನ ಯೌವನವನ್ನು ಕೊಡಲು ಒಪ್ಪದೇ ನಿರಾಕರಿಸಿದ್ದೀಯೆ.

೩೯. ಆದುದರಿಂದ ಎಲೈ ಮೂಢನೇ, ನಿನಗೂ ನಿನ್ನ ಮಕ್ಕಳಿಗೂ ರಾಜ್ಯವಿಲ್ಲದೇ ಹೋಗಲಿ ಎಂದು ಶಾಪವನ್ನು ಕೊಟ್ಟನು. ಅನಂತರ ತುರ್ವಸುವನ್ನು ಕರೆದು—ಓ ತುರ್ವಸುವೇ ಈ ಪಾಪಿಷ್ಟವಾದ ಮುಪ್ಪನ್ನು ನೀನಾದರೂ ಸ್ವೀಕರಿಸು ಎಂದು ಬೇಡಿದನು.

|| ತುರ್ವಸುರುವಾಚ ||

ನ ಕಾಮಯೇ ಜರಾಂ ತಾತ ಕಾಮಭೋಗಪ್ರಣಾಶಿನೀಂ ।
ಜರಾಯಾ ಬಹವೋ ದೋಷಾಃ ಪಾನಭೋಜನಕಾರಿಣಃ ||
ತಸ್ಮಾಜ್ಜರಾಂ ನ ತೇ ರಾಜನ್ ಗ್ರಹೀತುಮಹಮುತ್ಸಹೇ || ೪೦ ||

|| ಯಯಾತಿ ರುವಾಚ ||

ಯಸ್ತ್ವಂ ಮೇ ಹೃದಯಾಜ್ಜಾತೋ ವಯಃ ಸ್ವನ್ನ ಪ್ರಯಚ್ಛಸಿ ।
ತಸ್ಮಾತ್ ಪ್ರಜಾ ಸಮುಚ್ಛೇದಂ ತುರ್ವಸೋ ತವ ಯಾಸ್ಯತಿ || ೪೧ ||

ಅಸಂಕೀರ್ಣಾಚಂ ಧರ್ಮೇಣ ಪ್ರತಿಲೋಮವರೇಷು ಚ ।
ಪಿಶಿತಾಶಿಷು ಚಾನ್ಯೇಷು ಮೂಢ ರಾಜಾ ಭವಿಷ್ಯಸಿ || ೪೨ ||

---

೪೦. ಆ ತುರ್ವಸುವು ಹೇಳಿದನು—ಓ ತಂದೆಯೇ, ಕಾಮಭೋಗನಾಶಕವಾದ ಮುದಿತನವನ್ನು ನಾನು ಸ್ವೀಕರಿಸಲು ಇಷ್ಟಪಡುವುದಿಲ್ಲ. ಮುಪ್ಪಿನಲ್ಲಿ ಪಾನಭೋಜನಗಮನಾದಿಗಳಿಗೆ ಪ್ರತಿಬಂಧಕಗಳಾದ ಅನೇಕ ದೋಷಗಳಿರುತ್ತವೆ. ಆದುದರಿಂದ ಇಂತಹ ದೋಷಯುಕ್ತವಾದ ಜರೆಯನ್ನು ನಾನು ಇಚ್ಛಿಸುವುದಿಲ್ಲ : ನನಗೆ ಬೇಡ ಎಂದನು.

೪೧. ತರುವಾಯ ಯಯಾತಿಯು ಇಂತೆಂದನು :—ಎಲೈ ತುರ್ವಸು ಮಹಾರಾಯನೇ, ನೀನು ನನಗೆ ಪುತ್ರನಾಗಿ ಜನಿಸಿ, ನನಗೆ ಯೌವನವನ್ನು ಕೊಡುವುದಿಲ್ಲವೆಂದು ಹೇಳುತ್ತೀಯೆ. ಆದುದರಿಂದ ನಿನಗೆ ಸಂತಾನ ವಿಚ್ಛೇದವು ಉಂಟಾಗಲೆಂದನು.

೪೨. ಮತ್ತು ನಿನ್ನ ಸಂತಾನವು ಮಿಶ್ರಜಾತಿಯಾಗಲೆಂದೂ, ಮೂರ್ಖನಾದ ನೀನು ಪಿಶಾಚಜಾತೀಯರಿಗೂ, ಮ್ಲೇಂಛಾದಿಗಳಿಗೂ, ರಾಜನಾಗುವೆಯೆಂದು ಶಾಪವನ್ನು ಕೊಟ್ಟನು.

ಗುರುದಾರಪ್ರಸಕ್ತೇಷು ತಿರ್ಯಗ್ಯೋನಿಗತೇಷು ವಾ ।
ಪಶುಧರ್ಮೇಷು ಮ್ಲೇಚ್ಛೇಷು ಭವಿಷ್ಯತಿ ನ ಸಂಶಯಃ ॥ ೪೩ ॥

॥ ಸೂತ ಉವಾಚ ॥

ಏವಂ ತು ತುರ್ವಸುಂ ಶಪ್ತ್ವಾ ಯಯಾತಿಃ ಸುತಮಾತ್ಮನಃ ।
ಶರ್ಮಿಷ್ಠಾಯಾಃ ಸುತಂ ದ್ರುಹ್ಯುಮಿದಂ ವಚನಮಬ್ರವೀತ್ ॥ ೪೪ ॥

ದ್ರುಹ್ಯೋ ತ್ವಂ ಪ್ರತಿಪದ್ಯಸ್ವ ವರ್ಣರೂಪವಿನಾಶನೀಂ ।
ಜರಾಂ ವರ್ಷಸಹಸ್ರಂ ಮೈ ಯೌವನಂ ಸ್ವಂದದಸ್ವ ಮೇ ॥ ೪೫ ॥

ಪೂರ್ಣೇ ವರ್ಷಸಹಸ್ರೇ ತೇ ಪ್ರತಿದಾಸ್ಯಾಮಿ ಯೌವನಂ ।
ಸ್ವಂಚಾದಾಸ್ಯಾಮಿ ಭೂಯೋಽಹಂ ಪ್ರಾಪ್ಮಾನಂ ಜರಯಾ ಸಹ ॥ ೪೬ ॥

---

೪೩. ಎಲೈ ಮೂಢನೇ, ನನ್ನ ವಾಕ್ಯನಿರಾಕರಣೆಯಿಂದ ನೀನು ಗುರುಪತ್ನೀ ಸಂಬಂಧದಿಂದ ತಿರ್ಯಗ್ಯೋನಿಗಳಲ್ಲಿಯೂ ಪಶುಧರ್ಮವುಳ್ಳ ಮ್ಲೇಂಚ್ಛಜಾತಿಯಲ್ಲಿ ಜನಿಸುವಿಯೆಂದು ಹೇಳಿದನು. ಈ ವಿಷಯದಲ್ಲಿ ಸಂಶಯವಿಲ್ಲವೆಂದನು.

೪೪. ಸೂತಮುನಿಯು ಹೇಳಿದನು :—ಯಯಾತಿರಾಯನು ಹೀಗೆ ತುರ್ವಸುವಿಗೆ ಶಾಪವನ್ನು ಕೊಟ್ಟು, ತನ್ನ ದ್ವಿತೀಯ ಹೆಂಡತಿಯ ಕುಮಾರನಾದ ದ್ರುಹ್ಯನೆಂಬ ಪುತ್ರನನ್ನು ಕುರಿತು ಮುಂದೆ ಹೇಳುವಂತೆ ತಿಳಿಸಿದನು.

೪೫. ಎಲೈ ದ್ರುಹ್ಯಕುಮಾರನೇ, ರೂಪ ಸೌಂದರ್ಯನಾಶಕವಾದ ಜರೆಯನ್ನು ತೆಗೆದುಕೊಂಡು ನಿನ್ನ ಯೌವನವನ್ನು ನನಗೆ ಕೊಡು. ಒಂದುಸಾವಿರ ವರ್ಷಗಳು ಯೌವನವನ್ನು ಅನುಭವಿಸಿ ತರುವಾಯ ಹಿಂದಕ್ಕೆ ವಾಪಸು ಕೊಡುತ್ತೇನೆಂದನು.

೪೬. ಒಂದುಸಾವಿರ ವರ್ಷಗಳು ಪೂರ್ಣವಾದ ತರುವಾಯ ನಿನ್ನ ಯೌವನವನ್ನು ಹಿಂದಕ್ಕೆ ಕೊಡುವೆನು. ನನ್ನ ದುಷ್ಟವಾದ ಮುದಿತನವನ್ನು ಪುನಃ ಸ್ವೀಕರಿಸುವೆನು ಎಂದು ಹೇಳಿದನು.

|| ದ್ರುಹ್ಯುರುವಾಚ ||

ನ ಗಜಂ ನ ರಥಂ ನಾಶ್ವಂ ಜೀರ್ಣೋ ಭುಂಕ್ತೇ ನ ಚ ಸ್ತ್ರಿಯಂ |
ನ ಸಂಗಶ್ಚಾಸ್ಯ ಭವತಿ ನ ಜರಾಂತೇನ ಕಾಮಯೇ || ೪೭ ||

|| ಯಯಾತಿರುವಾಚ ||

ಯಸ್ತ್ವಂ ಮೇ ಹೃದಯಾಜ್ಜಾತೋ ವಯಃ ಸ್ವನ್ನ ಪ್ರಯಚ್ಛಸಿ |
ತಸ್ಮಾದುಂಹ್ಯೋ ಪ್ರಿಯಃ ಕಾಮೋ ನ ತೇ ಸಂಪತ್ಸ್ಯತೇ ಕ್ವಚಿತ್ || ೪೮ ||

ನೌಪ್ಲವೋತ್ತರ ಸಂಚಾರಸ್ತತ್ರ ನಿಂತ್ಯಂ ಭವಿಷ್ಯತಿ |
ಅರಾಜಭ್ರಾಜವಂಶಸ್ತ್ವಂ ತತ್ರ ನಿತ್ಯಂ ಭವಿಷ್ಯಸಿ || ೪೯ ||

ಅನೋತ್ವಂ ಪ್ರತಿಪದ್ಯಸ್ವ ಪಾಪ್ಮಾನಂ ಜರಯಾ ಸಹ |
ಏವಂ ವರ್ಷಸಹಸ್ರಂ ತು ಚರೇಯಂ ಯೌವನೇನ ತೇ || ೫೦ ||

---

೪೭. ದ್ರುಹ್ಯುರಾಯನಿಂತೆಂದನು :—ಎಲೈ ತಂದೆಯೇ, ಮುದಿತನವು ಸಂಭವಿಸಿದರೆ ಅಶ್ವಗಳು, ಗಜಗಳು, ರಥಗಳು, ಸ್ತ್ರೀಯರು ಇವರೇ ಮೊದಲಾದವರು ಭೋಗೋಪಯುಕ್ತವಾಗದೇ ನಿಷ್ಪ್ರಯೋಜಗಳಾಗುವುವು. ಶಾಸ್ತ್ರಾದಿಗಳ ಸಂಬಂಧವೇ ಇಲ್ಲದಂತೆ ಆಗುವುದು. ಆದುದರಿಂದ ನನಗೆ ಬೇಡವೆಂದು ಹೇಳಿದನು.

೪೮. ಯಯಾತಿಯು ಹೇಳಿದನು :— ಎಲೈ ಕುಮಾರನೇ, ನೀನು ನನಗೆ ಪುತ್ರನಾಗಿ ಜನಿಸಿ, ನನ್ನ ಮುಪ್ಪನ್ನು ಸ್ವೀಕರಿಸುವುದಿಲ್ಲವೆಂದು ಹೇಳುತ್ತೀಯೆ. ಆದುದರಿಂದ ನಿನಗೆ ಯಾವ ವಿಧವಾದ ಇಷ್ಟಾರ್ಥಗಳೂ ಕೈಗೂಡದಿರಲಿ.

೪೯. ಮತ್ತು ನಿನಗೂ ನಿನ್ನ ಕುಮಾರರಿಗೂ ಕೂಡ ಸರ್ವದಾ ಹಡಗುಗಳು ಸಂಚಾರ ಮಾಡತಕ್ಕ ಅರಾಜಕವಾದ ದೇಶಗಳಲ್ಲಿ ವಾಸವು ಉಂಟಾಗಲೆಂದು ಶಾಪವನ್ನು ಕೊಟ್ಟನು.

೫೦. ತರುವಾಯ ಯಯಾತಿಯು ಅನುರಾಜನನ್ನು ಕರೆದು ಎಲೈ ಅನುಕುಮಾರನೇ, ನೀನು ನನ್ನ ನೀಚವಾದ ಮುಪ್ಪನ್ನು ತೆಗೆದುಕೋ. ನಾನು ನಿನ್ನ ಯೌವನವನ್ನು ಸ್ವೀಕರಿಸಿ ಒಂದುಸಾವಿರ ವರ್ಷಗಳು ಸುಖವಾಗಿರುವೆನೆಂದು ಹೇಳಿದನು.

|| ಅನುರುವಾಚ ||

ಜೀರ್ಣಃ ಶಿಶುವರಂ ಪತ್ಯೋ ಜರಯಾ ಹ್ಯಶುಚಿಃ ಸದಾ |
ನ ಜುಹೋತಿ ಸ ಕಾಲೋಽಗ್ನಿಂ ತಾಂ ಜರಾನ್ನಾಭಿಕಾಮಯೇ || ೫೧ ||

|| ಯಯಾತಿರುವಾಚ ||

ಯಸ್ತ್ವಂ ಮೇ ಹೃದಯಾಜ್ಜಾತೋ ವಯಃ ಸ್ವನ್ನ ಪ್ರಯಚ್ಛಸಿ |
ಜರಾದೋಷಸ್ತ್ವಯೋಕ್ತೋಽಯಂ ತಸ್ಮಾತ್ತ್ವೇ ಪ್ರತಿಪತ್ಸ್ಯತೇ || ೫೨ ||

ಪ್ರಜಾ ಚ ಯೌವನಂ ಪ್ರಾಪ್ತಾ ವಿನಶಿಷ್ಯತ್ಯತಸ್ತವ |
ಅಗ್ನಿಪ್ರಸ್ಕಂದನಪರಸ್ತ್ವಂ ಚಾಪ್ಯೇವ ಭವಿಷ್ಯಸಿ || ೫೩ ||

---

೫೧. ಅನುರಾಜನು ಹೇಳಿದನು :—ಎಲೈ ತಾತನೇ, ವೃದ್ಧರೂ, ಬಾಲಕರೂ ಸರ್ವವಿಷಯಗಳಲ್ಲಿ ಸಮರು. ಸರ್ವದಾ ಅರುಚಿಯಾಗಿರುವರು. ವೃದ್ಧನು ಸಕಾಲದಲ್ಲಿ ಜಪತಪಹೋಮಾದಿಗಳನ್ನು ಮಾಡಲಾರನು. ಹೀಗೆ ಸುತರಾಂ ಪರಾಧೀನವಾದ ಮುದಿತನವನ್ನು ನಾನು ಒಪ್ಪುವುದಿಲ್ಲವೆಂದು ಹೇಳಿದನು.

೫೨. ಯಯಾತಿರಾಯನು ಹೇಳಿದನು: ಎಲೈ ಕುಮಾರನೇ, ನೀನು ನನಗೆ ಮಗನಾಗಿ ಜನಿಸಿ ನನ್ನ ಮಾತನ್ನು ಕೇಳದೆ, ನಿನ್ನ ಯೌವನವನ್ನು ನನಗೆ ನೀನು ಕೊಡುವುದಿಲ್ಲ. ನೀನು ಮುಪ್ಪಿನಲ್ಲಿ ಯಾವ ದೋಷಗಳನ್ನು ತಿಳಿಸಿರುವಿಯೋ ಆ ದೋಷಗಳೆಲ್ಲವನ್ನೂ ನೀನೇ ಹೊಂದು ಎಂದು ಹೇಳಿದನು.

೫೩. ಎಲೈ ಪುತ್ರನೇ, ನಿನ್ನ ದೋಷದಿಂದ ನಿನ್ನ ಸಂತಾನವೂ ಸಹ ಯೌವನವನ್ನು ಹೊಂದಿ ಮೃತರಾಗುವರು. ನೀನೂ ಕೂಡ ನನಗೆ ವೈರಿಯಾಗಿರುವುದರಿಂದ ಅಗ್ನಿಹೋತ್ರಾದಿಸತ್ಕರ್ಮಗಳಿಗೆ ಭಾಗಿಯಾಗದೇ ಅಕಾಲಮೃತ್ಯುವಿಗೆ ವಶನಾಗು ಎಂದು ಶಾಪವನ್ನು ಕೊಟ್ಟನು.

**ಪುರೋ ತ್ವಂ ಪ್ರತಿಪದ್ಯಸ್ವ ಪಾಪ್ಮಾನಂ ಜರಯಾ ಸಹ ।**
**ಜರಾವಲೀ ಚ ಮಾಂ ತಾತ ಪಲಿತಾನಿ ಚ ಪರ್ಯಗುಃ ॥ ೫೪ ॥**

**ಕಾವ್ಯಸ್ಯೋಶನಸಃ ಶಾಪಾನ್ನ ಚ ತೃಪ್ತೋಽಸ್ಮಿ ಯೌವನೇ ।**
**ಕಂಚಿತ್ಕಾಲಂಜರೇಯಂ ವೈ ವಿಷಯಾನ್ ವಯಸಾ ತವ ॥ ೫೫ ॥**

**ಪೂರ್ಣೇ ವರ್ಷಸಹಸ್ರೇ ತೇ ಪ್ರತಿದಾಸ್ಯಾಮಿ ಯೌವನಂ ।**
**ಸ್ವಂ ಚೈವ ಪ್ರತಿಪತ್ಸ್ಯಾಮಿ ಪಾಪ್ಮಾನಂ ಜರಯಾ ಸಹ ॥ ೫೬ ॥**

**॥ ಸೂತ ಉವಾಚ ॥**

**ಏವಮುಕ್ತಃ ಪ್ರತ್ಯುವಾಚ ಪುತ್ರಃ ಪಿತರಮಂಜಸಾ ।**
**ಯಥಾನುಮನ್ಯಸೇ ತಾತ ಕರಿಷ್ಯಾಮಿ ತಥೈವ ಚ ॥ ೫೭ ॥**

---

೫೪–೫೫. ಎಲೈ ಕುಮಾರನಾದ **ಪೂ**ರುವೇ, ನೀನಾದರೂ ಈ ಪಾಪಿಷ್ಟವಾದ ಮುಪ್ಪನ್ನು ಸ್ವೀಕರಿಸು. ಓ ಪುತ್ರನೇ, ಮುದಿತನ ಸುಕ್ಕುಗಳೂ ನೆರೆಗಳೂ ಸಹ ಬಂದು ನನ್ನನ್ನು ಪೀಡಿಸುತ್ತವೆ. ಶುಕ್ರಾಚಾರ್ಯನ ಶಾಪದಿಂದ ಈ ಮುಪ್ಪು ಸಂಭವಿಸಿದೆ. ಯೌವನದಲ್ಲಿ ನನಗೆ ತೃಪ್ತಿಯಾಗಲಿಲ್ಲ. ಆದುದರಿಂದ ನಿನ್ನ ಯೌವನವನ್ನು ಪಡೆದು ಕೆಲವುಕಾಲ ಸುಖವನ್ನು ಹೊಂದುವೆನು.

೫೬. ಹೀಗೆ ಒಂದುಸಾವಿರ ವರ್ಷಗಳು ಪೂರ್ಣವಾದ ಕೂಡಲೇ ನಿನ್ನ ಯೌವನವನ್ನು ವಾಪಸ್ಸು ಕೊಡುವೆನು. ನನ್ನ ಮುಪ್ಪನ್ನು ನಾನೇ ಸ್ವೀಕರಿಸುವೆನು ಎಂದು ಯಯಾತಿಯು ಹೇಳಿದನು.

೫೭. ಸೂತಮುನಿಯು ಹೇಳಿದನು :— ಹೀಗೆ ತಂದೆಯು ಹೇಳಲಾಗಿ ಪುತ್ರನಾದ ಪೂರುವು ಓ ತಾತನೇ, ನೀನು ಹೇಳಿದ ಹಾಗೆಯೇ ಆಗಲಿ, ನಿನ್ನ ಇಷ್ಟದಂತೆ ನಡೆದುಕೊಳ್ಳಲು ಸಿದ್ಧನಾಗಿರುತ್ತೇನೆ ಎಂದು ಹೇಳಿದನು.

ಪ್ರತಿಪತ್ಸ್ಯಾಮಿ ತೇ ರಾಜನ್ ಪಾಪ್ಮಾನಂ ಜರಯಾ ಸಹ ।
ಗೃಹಾಣ ಯೌವನಂ ಮತ್ತಶ್ಚರ ಕಾಮಾನ್ ಯಥೇಪ್ಸಿತಾನ್ ॥ ೫೮ ॥

ಜರಯಾಹಂ ಪ್ರತಿಚ್ಛನ್ನೋ ವಯೋರೂಪಧರಸ್ತವ ।
ಯೌವನಂ ಭವತೇ ದತ್ವಾ ಚರಿಷ್ಯಾಮಿ ಯಥಾರ್ಥವತ್ ॥ ೫೯ ॥

॥ ಯಯಾತಿ ರುವಾಚ ॥

ಪೂರೋ ಪ್ರೀತೋಽಸ್ಮಿ ಭದ್ರಂತೇ ಪ್ರೀತಶ್ಚೇದಂ ದದಾಮಿ ತೇ ।
ಸರ್ವಕಾಮಸಮೃದ್ಧಾ ತೇ ಪ್ರಜಾ ರಾಜ್ಯೇ ಭವಿಷ್ಯತಿ ॥ ೬೦ ॥

॥ ಸೂತ ಉವಾಚ ॥

ಪುರೋರನುಮತೋ ರಾಜಾ ಯಯಾತಿಃ ಸ್ವಾಂ ಜರಾಂತತಃ ।
ಸಂಕ್ರಾಮಯಾಮಾಸ ತದಾ ಪ್ರಸಾದಾದ್ಭಾರ್ಗವಸ್ಯ ತು ॥ ೬೧ ॥

---

೫೮. ಎಲೈ ರಾಜನೇ, ಮುಪ್ಪಿನೊಡನೆ ನಿನ್ನ ಪಾಪವನ್ನು ನಾನು ಪಡೆಯುವೆನು. ನನ್ನಿಂದ ಯೌವನವನ್ನು ಪಡೆದು ಯಥೇಷ್ಟವಾದ ವಿಷಯಸುಖಗಳನ್ನು ಅನುಭವಿಸು ಎಂದನು.

೫೯. ನಾನು ನಿನ್ನ ಇಷ್ಟದಂತೆ ನನ್ನ ತಾರುಣ್ಯವನ್ನು ನಿನಗೆ ಕೊಟ್ಟು ನಿನ್ನ ವಾರ್ಧಕ್ಯವನ್ನು ಹೊಂದಿ ರೂಪಸೌಂದರ್ಯಾದಿಗಳಿಂದ ಆಚ್ಛಾದಿತನಾಗಿರುವೆನು. ನೀನು ಯುವಕನಾಗಿ ಸುಖವನ್ನು ಪಡೆಯೆಂದನು.

೬೦. ಆಗ ಯಯಾತಿರಾಯನು ಹೇಳಿದನು :— ಓ ಪೂರುವೇ, ನಿನ್ನ ವಿಷಯದಲ್ಲಿ ನಾನು ಬಹಳ ಪ್ರೀತನಾಗಿರುವೆನು. ನಿನಗೆ ಮಂಗಳವಾಗಲಿ. ನಿನಗೆ ಈ ವರವನ್ನು ಕೊಡುವೆನು. ನಿನ್ನ ರಾಜ್ಯದಲ್ಲಿ ಪ್ರಜೆಗಳೆಲ್ಲರೂ ಸರ್ವಕಾಮಗಳಿಂದ ಪೂರ್ಣರಾಗಿಯೂ, ನಿತ್ಯಸುಖಿಯಾಗಿಯೂ ಆಗಲಿ ಎಂದನು.

೬೧. ಸೂತಮುನಿಯು ಹೇಳಿದನು :—ನಹುಷನ ಕುಮಾರನಾದ ಯಯಾತಿ ಮಹಾರಾಯನು ಪೂರುವಿನ ಸಮ್ಮತಿಯಂತೆ ತನ್ನ ವಾರ್ಧಕ್ಯವನ್ನು ಪುತ್ರನಿಗೆ ಕೊಟ್ಟು ಅವನ ತಾರುಣ್ಯವನ್ನು ಶುಕ್ರಾಚಾರ್ಯನ ಅನುಗ್ರಹದಿಂದ ಪಡೆದನು.

**ಯೌವನೇನಾಥ ವಯಸಾ ಯಯಾತಿರ್ನಹುಷಾತ್ಮಜಃ ।**
**ಪ್ರೀತಿಯುಕ್ತೋ ನರಶ್ರೇಷ್ಠಶ್ಚಚಾರ ವಿಷಯಾನ್ ಸ್ವಕಾನ್ ॥ ೬೨ ॥**

**ಯಥಾಕಾಮಂ ಯಥೋತ್ಸಾಹಂ ಯಥಾಕಾಲಂ ಯಥಾಸುಖಂ ।**
**ಧರ್ಮಾವಿರೋಧಾದ್ರಾಜೇಂದ್ರೋ ಯಥಾರ್ಹತಿ ಸ ಏವ ಹಿ ॥ ೬೩ ॥**

**ದೇವಾನತರ್ಪಯದ್ಯಜ್ಞೈಃ ಪಿತೄಂಶ್ಚಾಪಿ ಶ್ರಾದ್ಧೈಸ್ತಥೈವ ಚ ।**
**ದೀನಾಂಶ್ಚಾನುಗ್ರಹೈರಿಷ್ಟೈಃ ಕಾಮೈಶ್ಚ ದ್ವಿಜಸತ್ತಮಾನ್ ॥ ೬೪ ॥**

**ಅತಿಥೀನನ್ನಪಾನೈಶ್ಚ ವೈಶ್ಯಾಂಶ್ಚ ಪರಿಪಾಲನೈಃ ।**
**ಆನೃಶಂಸ್ಯೇನ ಶೂದ್ರಾಂಶ್ಚ ದಸ್ಯೂನ್ ಸಂನಿಗ್ರಹೇಣ ಚ ॥ ೬೫ ॥**

**ಧರ್ಮೇಣ ಚ ಪ್ರಜಾಃ ಸರ್ವಾ ಯಥಾವದನುರಂಜಯನ್ ।**
**ಯಯಾತಿಃ ಪಾಲಯಾಮಾಸ ಸಾಕ್ಷಾದಿಂದ್ರ ಇವಾಪರಃ ॥ ೬೬ ॥**

೬೨. ನಹುಷಕುಮಾರನೂ, ನರೋತ್ತಮನೂ ಆದ ಯಯಾತಿರಾಯನು ಆ ತಾರುಣ್ಯದ ವಯಸ್ಸಿನಿಂದ ಬಹಳ ಪ್ರೀತನಾಗಿ ವಿವಿಧ ಸುಖಗಳನ್ನು ಅನುಭವಿಸಿದನು.

೬೩. ರಾಜಶ್ರೇಷ್ಠನಾದ ಯಯಾತಿಯು ತನ್ನಿಷ್ಟದಂತೆ ಉತ್ಸಹಾನುಗುಣವಾಗಿಯೂ, ಕಾಲಾನುಸಾರವಾಗಿಯೂ, ಇರುವ ತನಗೆ ಅನುಗುಣವೂ, ಧರ್ಮಗಳಿಗೆ ಅವಿರುದ್ಧವೂ, ರಾಜಭೋಗ್ಯವೂ ಆದ ವಿಷಯಸುಖಗಳನ್ನು ಅನುಭವಿಸಿದನು.

೬೪. ತರುವಾಯ ಯಯಾತಿಯು ಯಜ್ಞಯಾಗಾದಿಗಳಿಂದ ದೇವತೆಗಳಿಗೂ, ಶ್ರಾದ್ಧಗಳಿಂದ ಪಿತೃಗಳಿಗೂ, ಇಷ್ಟದಾನಗಳಿಂದ ದೀನರಿಗೂ, ಸಕಲೇಷ್ಟಾರ್ಥವ ದಾನದಿಂದ ಬ್ರಾಹ್ಮಣೋತ್ತಮರಿಗೂ ತೃಪ್ತಿಯನ್ನುಂಟುಮಾಡಿದನು.

೬೫–೬೬. ಆ ಯಯಾತಿಯು ಅನ್ನಪಾನಗಳಿಂದ ಅತಿಥಿಗಳನ್ನೂ, ಪರಿಪಾಲನೆಯಿಂದ ವೈಶ್ಯರನ್ನೂ, ಅಕ್ರೂರತನದಿಂದ ಶೂದ್ರರನ್ನೂ, ಚೋರರನ್ನು ನಿಗ್ರಹದಿಂದಲೂ, ಧರ್ಮದಿಂದ ಪ್ರಜೆಗಳನ್ನೂ ಪಾಲಿಸುತ್ತಾ ಪ್ರತ್ಯಕ್ಷನಾದ ಭೂದೇವೇಂದ್ರನಂತೆ ರಾಜ್ಯವಾಳಿದನು.

ಸ ರಾಜಾ ಸಿಂಹವಿಕ್ರಾಂತೋ ಯುವಾವಿಷಯಗೋಚರಃ ।
ಅವಿರೋಧೇನ ಧರ್ಮಸ್ಯ ಚಚಾರ ಸುಖಮುತ್ತಮಂ || ೬೭ ||

ಸ ಮಾರ್ಗಮಾಣಃ ಕಾಮಾನಾಮಂತದೋಷನಿದರ್ಶನಾತ್ ।
ವಿಶ್ವಾಸಹೇತೋ ರೇಮೇ ವೈ ವೈಭ್ರಾಜೇ ನಂದನೇವನೇ || ೬೮ ||

ಅಪಶ್ಯತ್ಸ ಯದಾ ತಾಂ ವೈ ವರ್ದ್ಧಮಾನಾಂ ನೃಪಸ್ತದಾ ।
ಗತ್ವಾ ಪುರೋಃ ಸಕಾಶಂ ವೈ ಸ್ವಾಂ ಜರಾಂ ಪ್ರತ್ಯಪದ್ಯತ || ೬೯ ||

ಸ ಸಂಪ್ರಾಪ್ಯ ತು ತಾನ್ ಕಾಮಾಂಸ್ತೃಪ್ತಃ ಖಿನ್ನಶ್ಚ ಪಾರ್ಥಿವಃ ।
ಕಾಲಂ ವರ್ಷಸಹಸ್ರಂ ವೈ ಸಸಾ ರ ಮನುಜಾಧಿಪಃ || ೭೦ ||

---

೬೭. ಸಿಂಹದಂತೆ ಅತ್ಯಂತ ಶೂರನೂ, ತರುಣನೂ ಆದ ಆ ರಾಜನು ಧರ್ಮಗಳಿಗೆ ವಿರೋಧವಿಲ್ಲದಂತೆ ವಿವಿಧವಿಷಯಸುಖಗಳನ್ನು ಯಥೇಷ್ಟವಾಗಿ ಅನುಭವಿಸಿದನು.

೬೮. ಮಹಾರಾಜನು ಹೀಗೆ ವೈಭ್ರಾಜನಾಮಕವಾದ ನಂದನವನದಲ್ಲಿಯೂ ತನ್ನಿಷ್ಟಾನುಸಾರವಾಗಿ ನಾನಾವಿಧ ವಿಷಯಸುಖಗಳನ್ನು ಅನುಭವಿಸಿದರೂ ತೃಪ್ತಿಯಾಗದೇ ಇರುವುದರಿಂದ ಇದಕ್ಕೆ ಕೊನೆಯಿಲ್ಲವೆಂದು ತಿಳಿದನು.

೬೯. ಹೀಗೆ ಯಯಾತಿಯು ಸಹಸ್ರ ವರ್ಷಗಳು ಸುಖವನ್ನು ಅನುಭವಿಸಿದರೂ ಕೂಡ ಆಶೆಯು ಶಾಂತವಾಗದೇ ವೃದ್ಧಿಯಾಗುತ್ತಿರುವುದನ್ನು ತಿಳಿದು ಬೇಸತ್ತು ಪೂರುವಿನ ಬಳಿಗೆ ಬಂದು ಯೌವನವನ್ನು ಅವನಿಗೆ ಕೊಟ್ಟು ತನ್ನ ಮುಪ್ಪನ್ನು ಪುನಃ ಪಡೆದನು.

೭೦. ಆ ಯಯಾತಿಯು ಸಹಸ್ರ ವರ್ಷಗಳು ವಿಷಯಸುಖವನ್ನು ಅನುಭವಿಸಿ ತೃಪ್ತನೂ, ತರುವಾಯ ಪಶ್ಚಾತ್ತಾಪಯುಕ್ತನೂ ಆದನು. ಮತ್ತು ಒಂದು ಸಹಸ್ರ ವರ್ಷಕಾಲ ಸುಖಾನುಭವಮಾಡಿದರೂ ತೃಪ್ತಿಯಾಗಲಿಲ್ಲವೆಂದು ಕಳೆದುಹೋದ ಕಾಲವನ್ನು ಸ್ಮರಿಸಿ ಖಿನ್ನಮನಸ್ಕನಾದನು.

**ಪರಿಸಂಖ್ಯಾಯ ಕಾಲಂಚ ಕಲಾಕಷ್ಠಾಸ್ತಥೈವ ಚ |**
**ಪೂರ್ಣಂ ಮತ್ವಾ ತತಃ ಕಾಲಂ ಪೂರುಂ ಪುತ್ರಮುವಾಚ ಹ || ೭೧ ||**

**ಯಥಾ ಸುಖಂ ಯಥೋತ್ಸಾಹಂ ಯಥಾ ಕಾಲಮರಿಂದಮ |**
**ಸೇವಿತಾ ವಿಷಯಾಃ ಪುತ್ರ ಯೌವನೇನ ಮಯಾ ತವ || ೭೨ ||**

**ಪುರೋ ಪ್ರೀತೋಽಸ್ಮಿ ಭದ್ರಂ ತೇ ಗೃಹಾಣ ತ್ವಂ ಸ್ವಯೌವನಂ |**
**ರಾಷ್ಟ್ರಂಚ ತ್ವಂ ಗೃಹಾಣೇದಂ ತ್ವಂ ಹಿ ಮೇ ಪ್ರಿಯಕೃತ್ಸುತಃ || ೭೩ ||**

**ಪ್ರತಿಪೇದೇ ಜರಾಂ ರಾಜಾ ಯಯಾತಿರ್ನಹುಷಾತ್ಮಜಃ |**
**ಯೌವನಂ ಪ್ರತಿಪೇದೇ ಚ ಪೂರುಃ ಸ್ವಂ ಪುನರಾತ್ಮನಃ || ೭೪ ||**

---

೭೧. ತರುವಾಯ ರಾಜನು ವರ್ಷ, ತಿಂಗಳು, ವಾರ, ದಿನ, ಮುಹೂರ್ತ ಇವುಗಳಿಂದ ಪೂರ್ಣವಾದ ವರ್ಷಸಹಸ್ರವನ್ನು ಪರಿಶೀಲಿಸಿ, ಅವಧಿಯ ಕಾಲವು ಮುಗಿಯಿತೆಂದು ತಿಳಿದು ಪೂರುವಿಗೆ ಇಂತೆಂದನು.

೭೨. ಶತ್ರುಸಂಹಾರಕನಾದ ಎಲೈ ಕುಮಾರನೇ, ನಿನ್ನ ಯೌವನದಿಂದ ಇಷ್ಟು ದಿವಸಗಳವರೆಗೂ ಯಥೇಚ್ಛೆಯಾಗಿ ಉತ್ಸಾಹದೊಡನೇ ಕಾಲಾನುಗುಣವಾಗಿ ಮನಸ್ಸುಬಂದಂತೆ ಬೇಕಾದ ವಿಷಯಗಳನ್ನು ಅನುಭವಿಸಿದರೂ ತೃಪ್ತಿಯಾಗಲಿಲ್ಲ. ಇದರಿಂದ ನಿನ್ನ ವಿಷಯದಲ್ಲಿ ನನಗೆ ಬಹಳ ಪ್ರೀತಿಯುಂಟಾಗಿದೆ. ಎಲೈ ಪುತ್ರನೇ, ನಿನ್ನ ಯೌವನದಿಂದ ನನಗೆ ಬಹಳ ಪ್ರೀತಿಯಾಗಿದೆ ಎಂದನು.

೭೩. ಎಲೈ ಪೂರುವೇ, ನಿನ್ನ ವಿಷಯದಲ್ಲಿ ನನಗೆ ಬಹಳ ಪ್ರೀತಿಯುಂಟಾಗಿದೆ, ನಿನಗೆ ಮಂಗಳವಾಗಲಿ. ನಿನ್ನ ತಾರುಣ್ಯವನ್ನು ನೀನು ಸ್ವೀಕರಿಸು ನಿನ್ನ ದೇಶ ರಾಜ್ಯ ಕೋಶಗಳನ್ನು ಸ್ವೀಕಾರಮಾಡು. ನೀನೊಬ್ಬನೇ ನನಗೆ ಪ್ರಿಯಪುತ್ರನಾಗಿರುವಿ ಎಂದು ಹೇಳಿದನು.

೭೪. ಹೀಗೆ ಯಯಾತಿ ಮಹಾರಾಜನು ಹೇಳಿ ಯೌವನವನ್ನು ಪೂರುವಿಗೆ ಕೊಟ್ಟು ತನ್ನ ಮುಪ್ಪನ್ನು ಹೊಂದಿದನು. ಪೂರುರಾಯನು ಪುನಃ ತನ್ನ ತಾರುಣ್ಯವನ್ನು ಹೊಂದಿ ಸುಖಿಯಾದನು.

ಅಭಿಷೇಕ್ತುಕಾಮಂ ಚ ನೃಪಂ ಪುರುಂ ಪುತ್ರಂ ಕನೀಯಸಂ ।
ಬ್ರಾಹ್ಮಣಪ್ರಮುಖಾ ವರ್ಣಾ ಇದಂ ವಚನಮಬ್ರುವನ್ ॥ ೭೫ ॥

ಕಥಂ ಶುಕ್ರಸ್ಯ ನಪ್ತಾರಂ ದೇವಯಾನ್ಯಾಃ ಸುತಂ ಪ್ರಭೋ ।
ಶ್ರೇಷ್ಠಂ ಯದುಮತಿಕ್ರಮ್ಯ ಪೂರೋಃ ರಾಜ್ಯಂ ಪ್ರದಾಸ್ಯಸಿ ॥ ೭೬ ॥

ಯದುರ್ಜ್ಯೇಷ್ಠಸ್ತವ ಸುತೋ ಜಾತಸ್ತಮನು ತುರ್ವಸುಃ ।
ಶರ್ಮಿಷ್ಠಾಯಾಃ ಸುತೋ ದ್ರುಹ್ಯುಸ್ತತೋಽನುಃ ಪೂರುರೇವ ಚ ॥ ೭೭ ॥

ಕಥಂ ಜ್ಯೇಷ್ಠಾನತಿಕ್ರಮ್ಯ ಕನೀಯಾನ್ ರಾಜ್ಯಮರ್ಹತಿ ।
ಅತಃ ಸಂಬೋಧಯಾಮಿ ತ್ವಾಂ ಧರ್ಮಂ ಸಮನುಪಾಲಯ ॥ ೭೮ ॥

೭೫. ಅನಂತರ ಯಯಾತಿ ಮಹಾರಾಯನು ತನ್ನ ಕಿರಿಯ ಕುಮಾರನಾದ ಪೂರುರಾಯನಿಗೆ ರಾಜ್ಯಾಭಿಷೇಕವನ್ನು ಮಾಡಲಿಚ್ಛಿಸಿದನು. ಆಗ ಬ್ರಾಹ್ಮಣಾದಿ ಸಕಲ ವರ್ಣದವರೂ ಕೂಡ ರಾಯನಿಗೆ ಇಂತೆಂದರು.

೭೬. ಓ ರಾಯನೇ, ಶುಕ್ರಾಚಾರ್ಯನ ಮೊಮ್ಮಗನೂ, ದೇವಯಾನೀ ದೇವಿಯ ಕುಮಾರನೂ, ಜ್ಯೇಷ್ಠನೂ ಆದ ಯದುಮಹಾರಾಜನನ್ನು ಬಿಟ್ಟು ಕಿರಿಯವನಾದ ಪೂರುವಿಗೆ ರಾಜ್ಯವನ್ನು ಕೊಡಲು ಕಾರಣವೇನೆಂದು ಕೇಳಿದರು.

೭೭. ಓ ನೃಪನೇ, ನಿನಗೆ ಯದುರಾಯನು ಹಿರಿಯ ಕುಮಾರನಾಗಿರುವನು. ತುರ್ವಸುವು ಜನಿಸಿದನು. ಅನಂತರ ಶರ್ಮಿಷ್ಠಾದೇವಿಯ ಮಕ್ಕಳಾದ ದ್ರುಹ್ಯು, ಅನು, ಪೂರು ಎಂಬ ತನಯರು ಉತ್ಪನ್ನರಾದರು.

೭೮. ಹಿರಿಯ ಮಗನನ್ನು ಬಿಟ್ಟು ಕಿರಿಯ ಮಗನಿಗೆ ರಾಜ್ಯವನ್ನು ಹೇಗೆ ಕೊಡುತ್ತೀಯೆ ? ಇದು ಸರಿಯಲ್ಲ ; ರಾಜನು ಧರ್ಮಪಾಲಕನಾಗಿರಬೇಕು. ನೀನು ಧರ್ಮವನ್ನು ಅತಿಕ್ರಮಿಸಬಾರದೆಂದು ಹೇಳಿದರು.

|| ಯಯಾತಿರುವಾಚ ||

ಬ್ರಾಹ್ಮಣಪ್ರಮುಖಾ ವರ್ಣಾಃ ಸರ್ವೇ ಶೃಣ್ವಂತು ಮೇ ವಚಃ
ಜ್ಯೇಷ್ಠಂ ಪ್ರತಿ ಯಥಾ ರಾಷ್ಟ್ರಂ ನ ದೇಯಂ ಮೇ ಕಥಂಚನ || ೭೯ ||

ಮಾತಾಪಿತ್ರೋರ್ವಚನಕೃತ್ಸಹಿ ಪುತ್ರಃ ಪ್ರಶಸ್ಯತೇ ।
ಮಮ ಜ್ಯೇಷ್ಠೇನ ಯದುನಾ ನಿಯೋಗೋ ನಾನುಪಾಲಿತಃ || ೮೦ ||

ಪ್ರತಿಕೂಲಂ ಪಿತುರ್ಯಶ್ಚ ನ ಸ ಪುತ್ರಃ ಸತಾಂ ಮತಃ ।
ಸ ಪುತ್ರಃ ಪುತ್ರವಧ್ಯಶ್ಚ ವರ್ತತೇ ಪಿತೃಮಾತೃಷು || ೮೧ ||

ಯದುನಾಹಮವಜ್ಞಾತಸ್ತಥಾ ತುರ್ವಸುನಾಪಿ ಚ ।
ದ್ರುಹ್ಯುಣಾ ಚಾನುನಾ ಚೈವಮಪ್ಯವಜ್ಞಾ ಕೃತಾ ಭೃಶಂ || ೮೨ ||

೭೯. ಅದಕ್ಕೆ ಯಯಾತಿಯು ಹೀಗೆ ಹೇಳಿದನು :— ಓ ಬ್ರಾಹ್ಮಣಾದಿ ಪ್ರಜೆಗಳೇ, ನೀವೆಲ್ಲ ನನ್ನ ಭಾಷಣಗಳನ್ನು ಆಲೋಚಿಸಿರಿ. ನನಗೆ ಹಿರಿಯಮಗನಾದ ಯದುರಾಯನಿಗೆ ರಾಜ್ಯವನ್ನು ಕೊಡಲು ಇಷ್ಟವೇ ಇಲ್ಲವೆಂದನು.

೮೦. ಯಾವ ಕುಮಾರನು ತಾಯಿ ತಂದೆಗಳ ಮಾತುಗಳನ್ನು ಅತಿಕ್ರಮಿಸುವನೋ ಅವನು ಪ್ರಿಯಕುಮಾರನಲ್ಲ. ನನ್ನ ಹಿರಿಯ ಕುಮಾರನಾದ ಯದುರಾಯನು ನನಗೆ ವಿರೋಧಿಯಾಗಿರುವನು. ಆದುದರಿಂದ ಅವನಿಗೆ ರಾಜ್ಯವನ್ನು ಕೊಡಲು ಸಾಧ್ಯವಿಲ್ಲ.

೮೧—೮೨. ಯಾವ ಕುಮಾರನು ಮಾತಾಪಿತೃಗಳಿಗೆ ವಿರೋಧಿಯಾಗಿ ಕಾರ್ಯವನ್ನು ಆಚರಿಸುವನೋ ಅವನು ಪುತ್ರನಲ್ಲವೆಂಬ ವಿಷಯವು ಮಹಾತ್ಮರಾದ ತಮಗೆ ತಿಳಿದ ವಿಷಯವೇ ಆಗಿದೆ. ಪ್ರತ್ಯುತ ಅವನು ವಧಾರ್ಹನಾದ ಪುತ್ರನಾಗಿರುವನು. ಪ್ರಕೃತ, ಯದು, ತುರ್ವಸು, ದ್ರುಹ್ಯು ಮತ್ತು ಅನು ಇವರಿಂದ ನಾನು ಬಹಳವಾಗಿ ತಿರಸ್ಕೃತನಾಗಿರುವೆನು ಎಂದು ರಾಜನು ಪ್ರಜೆಗಳಿಗೆ ಹೇಳಿದನು.

**ಪೂರುಣಾ ತು ಕೃತಂ ವಾಕ್ಯಂ ಮಾನಿತಶ್ಚ ವಿಶೇಷತಃ ।**
**ಕನೀಯಾನ್ ಮಮ ದಾಯಾದೋ ಜರಾ ಯೇನ ಧೃತಾ ಮಮ ॥**
**ಸರ್ವಕಾಮಃ ಸರ್ವಕೃತಃ ಪೂರುಣಾ ಪುತ್ರಕಾರಿಣಾ ॥ ೨೩ ॥**

**ಶುಕ್ರೇಣ ಚ ವರೋ ದತ್ತಃ ಕಾವ್ಯೇನೋಶನಸಾ ಸ್ವಯಂ ।**
**ಪುತ್ರೋ ಯಸ್ತ್ವಾನುವರ್ತೇತ ಸ ರಾಜಾ ತೇ ಮಹಾಮತೇ ॥ ೨೪ ॥**

**ಭವತೋಽನುಮತೋಽಪ್ಯೇವಂ ಪೂರೂ ರಾಷ್ಟ್ರೇಽಭಿಷಿಚ್ಯತಾಂ ।**
**ಯಃ ಪುತ್ರೋ ಗುಣಸಂಪನ್ನೋ ಮಾತಾಪಿತ್ರೋರ್ಹಿತಃ ಸದಾ ॥**
**ಸರ್ವಮರ್ಹತಿ ಕಲ್ಯಾಣಂ ಕನೀಯಾನಪಿ ಸ ಪ್ರಭುಃ ॥ ೨೫ ॥**

**ಅರ್ಹಃ ಪೂರುರಿದಂ ರಾಷ್ಟ್ರಂ ಯಃ ಪ್ರಿಯಃ ಪ್ರಿಯಕೃತ್ತವ ।**
**ವರದಾನೇನ ಶುಕ್ರಸ್ಯ ನ ಶಕ್ಯಂ ವಕ್ತುಮುತ್ತರಂ ॥ ೨೬ ॥**

೨೩. ಓ ಪ್ರಜೆಗಳಿರಾ, ಪೂರುವಾದರೋ ನನ್ನ ವಾಕ್ಯವನ್ನು ನೆರವೇರಿಸಿದನು. ವಿಶೇಷವಾಗಿ ನನಗೆ ಮರ್ಯಾದೆಯನ್ನು ಕೊಟ್ಟಿರುವನು. ಕಿರಿಯವನಾದ ಈ ನನ್ನ ಕುವರನು ನನ್ನ ವಾರ್ಧಕ್ಯವನ್ನು ಹೊಂದಿ ನನ್ನ ದುಃಖವನ್ನು ಅನುಭವಿಸಿದನು. ನಾನು ಅವನ ತಾರುಣ್ಯದಿಂದ ಸರ್ವತ್ರವೂ ಸರ್ವಭೋಗಗಳನ್ನು ಹೊಂದಿರುವೆನು.

೨೪. ಶುಕ್ರಾಚಾರ್ಯನೂ ಕೂಡ ಓ ರಾಯನೇ, ಯಾವ ಪುತ್ರನು ನಿನಗೆ ಅನುಕೂಲನಾಗಿರುವನೋ ಅವನೇ ರಾಜ್ಯಪದವಿಯನ್ನು ಪಡೆಯಲರ್ಹನಾಗುವ ನೆಂದು ವರವನ್ನು ಕೊಟ್ಟಿರುವನು ಎಂದನು.

೨೫. ಓ ಪ್ರಜೆಗಳೇ, ನಿಮ್ಮ ಅನುಮತಿಯಿಂದ ಪೂರುವಿಗೆ ರಾಜ್ಯದಲ್ಲಿ ಅಭಿಷೇಕ ಮಾಡಲು ಇಚ್ಛಿಸುತ್ತೇನೆ. ಯಾವ ಪುತ್ರನು ಗುಣಸಂಪನ್ನನಾಗಿ ಮಾತಾಪಿತೃಗಳ ಹಿತದಲ್ಲಿ ಆಸಕ್ತನಾಗಿರುವನೋ, ಅವನು ಕನಿಷ್ಠನಾಗಿದ್ದರೂ ಕೂಡ ಸಮಸ್ತ ಕಲ್ಯಾಣವನ್ನೂ, ರಾಜ್ಯವನ್ನೂ ಹೊಂದಲರ್ಹನಾಗುವನು ಎಂದನು.

೨೬. ಅನಂತರ ಈ ಮಾತುಗಳನ್ನು ಕೇಳಿದ ಪ್ರಕೃತಿಗಳು ಎಲೈ ರಾಜನೇ, ನಿನಗೆ ಪ್ರಿಯಕರನಾದ ಪೂರುವೇ ರಾಜ್ಯಕ್ಕೆ ಯೋಗ್ಯನು. ಶುಕ್ರಾಚಾರ್ಯನೂ ಹಾಗೆ ವರವನ್ನು ಕೊಟ್ಟಿರುವನು. ಅದನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲವೆಂದರು.

ಪೌರಜಾನಪದೈಸ್ತುಷ್ಟೈರಿತ್ಯುಕ್ತೋ ನಾಹುಷಸ್ತದಾ ।
ಅಭಿಷಿಚ್ಯ ತತಃ ಪೂರುಂ ಸ್ವರಾಷ್ಟ್ರೇ ಸುತಮಾತ್ಮನಃ ॥ ೮೭ ॥

ದಿಶಿ ದಕ್ಷಿಣಪೂರ್ವಸ್ಯಾಂ ತುರ್ವಸುಂ ತು ನ್ಯವೇಶಯತ್ ।
ದಕ್ಷಿಣಾಪರತೋ ರಾಜಾ ಯದುಂ ಶ್ರೇಷ್ಠಂ ನ್ಯವೇಶಯತ್ ॥ ೮೮ ॥

ಪ್ರತೀಚ್ಯಾಮುತ್ತರಸ್ಯಾಂ ಚ ದ್ರುಹ್ಯಂ ಚಾನುಂ ಚ ತಾವುಭೌ ।
ಸಪ್ತದ್ವೀಪಾಂ ಯಯಾತಿಸ್ತು ಜಿತ್ವಾ ಪೃಥ್ವೀಂ ಸಸಾಗರಾಂ ॥
ವ್ಯಭಜತ್ಪಂಚಧಾ ರಾಜಾ ಪುತ್ರೇಭ್ಯೋ ನಾಹುಷಸ್ತದಾ ॥ ೮೯ ॥

ತೈರಿಯಂ ಪೃಥಿವೀ ಸರ್ವಾ ಸಪ್ತದ್ವೀಪಾ ಸಪತ್ತನಾ ।
ಯಥಾ ಪ್ರದೇಶಂ ಧರ್ಮಜ್ಞೈರ್ಧರ್ಮೇಣ ಪ್ರತಿಪಾಲ್ಯತೇ ॥ ೯೦ ॥

೮೭. ಹೀಗೆ ಪೌರರೂ, ದೇಶದವರೂ ಮಿಳಿತರಾಗಿ ಸಂತೋಷದಿಂದ ಅನುಮೋದಿಸಲು, ನಹುಷನ ಪುತ್ರನಾದ ಯಯಾತಿ ಮಹಾರಾಯನು ತನ್ನ ಕಿರಿಯ ಕುಮಾರನಾದ ಪೂರುವಿಗೆ ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದನು.

೮೮–೮೯. ಯಯಾತಿರಾಯನು ಸರ್ವಪ್ರಜೆಗಳ ಅನುಮತಿಯಿಂದ ಪೂರುವಿಗೆ ರಾಜ್ಯದಲ್ಲಿ ಅಭಿಷೇಕಮಾಡಿ, ಆಗ್ನೇಯದಿಗ್ಭಾಗದಲ್ಲಿ ತುರ್ವಸುವನ್ನೂ, ನೈರುತ್ಯದಲ್ಲಿ ಹಿರಿಯವನಾದ ಯದುರಾಯನನ್ನೂ, ಪಶ್ಚಿಮದಿಗ್ಭಾಗದಲ್ಲಿ ದ್ರುಹ್ಯುರಾಜನನ್ನೂ, ಉತ್ತರದಿಕ್ಕಿನಲ್ಲಿ ಅನುರಾಯನನ್ನೂ ಸ್ಥಾಪಿಸಿದನು. ಹೀಗೆ ಯಯಾತಿಯು ಸಪ್ತದ್ವೀಪಗಳಿಂದಲೂ, ಸಪ್ತಸಮುದ್ರಗಳಿಂದಲೂ ಕೂಡಿದ ಅಖಂಡಭೂಮಂಡಲವನ್ನು ತನ್ನ ಐದುಜನ ಮಕ್ಕಳಿಗೋಸ್ಕರ ಐದುಭಾಗಮಾಡಿ, ಅವುಗಳಲ್ಲಿ ಅವರನ್ನು ಸ್ಥಾಪಿಸಿ ನಿಶ್ಚಿಂತನಾದನು.

೯೦. ಹೀಗೆ ಸಪ್ತದ್ವೀಪ, ಸಪ್ತಸಮುದ್ರಗಳಿಂದ ಕೂಡಿದ ಸಮಸ್ತ ಭೂಮಂಡಲವು ಧರ್ಮಾತ್ಮರಾದ ಆ ಯಯಾತಿರಾಯನ ಕುಮಾರರಿಂದ ಧರ್ಮದಿಂದ ಪಾಲಿಸಲ್ಪಟ್ಟಿತು. ಅವರಿಂದ ರಕ್ಷಿತವಾದ ಪ್ರಜೆಗಳು ದೇಶಗಳಲ್ಲಿ ಸುಖವಾಗಿ ವಾಸಿಸುತ್ತಿದ್ದರು

ಏವಂ ವಿಸೃಜ್ಯ ಪೃಥಿವೀಂ ಪುತ್ರೇಭ್ಯೋ ನಾಹುಷಸ್ತದಾ ।
ಪುತ್ರಸಂಕ್ರಾಮಿತಶ್ರೀಸ್ತು ಪ್ರೀತಿಮಾನಭವನ್ನೃಪಃ ॥ ೯೧ ॥

ಧನುರ್ನ್ಯಸ್ಯ ಪೃಷತ್ಕಾಂಶ್ಚ ರಾಜ್ಯಂ ಚೈವ ಸುತೇಷು ತು ।
ಪ್ರೀತಿಮಾನಭವದ್ರಾಜಾ ಭಾರಮಾವೇಶ್ಯ ಬಂಧುಷು ॥ ೯೨ ॥

ಅತ್ರ ಗಾಥಾ ಮಹಾರಾಜ್ಞಾ ಪುರಾ ಗೀತಾ ಯಯಾತಿನಾ ।
ಯೋಽಭಿಪ್ರೇತ್ಯಾಹರನ್ ಕಾಮಾನ್ ಕೂರ್ಮೋಽಂಗಾನೀವ ಸರ್ವಶಃ ॥ ೯೩ ॥

ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ।
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥ ೯೪ ॥

---

೯೧. ನಹುಷನ ಪುತ್ರನಾದ ಯಯಾತಿಯು ಪೂರ್ವೋಕ್ತಕ್ರಮದಲ್ಲಿ ಸಮಸ್ತ ಭೂಮಿಯನ್ನೂ ಮಕ್ಕಳಿಗೆ ಒಪ್ಪಿಸಿ, ಆ ಕುಮಾರರ ಅಭಿವೃದ್ಧಿಯನ್ನು ನೋಡಿ ಬಹಳವಾಗಿ ಪ್ರೀತನಾದನು.

೯೨. ಯಯಾತಿರಾಜನು ಪ್ರೀತಿಯಿಂದ ತನ್ನ ಕುಮಾರರಿಗೆ ಧನಸ್ಸು, ಬಾಣ, ಬತ್ತಳಿಕೆ, ರಾಜ್ಯ ಮತ್ತು ಕೋಶ ಇವುಗಳನ್ನು ಕೊಟ್ಟು, ತಾನು ಇದುವರೆಗೂ ಹೊತ್ತಿದ್ದ ಭೂಭಾರವನ್ನು ಮಕ್ಕಳಿಗೆ ಒಪ್ಪಿಸಿ ಸುಖಿಯಾಗಿದ್ದನು.

೯೩. ಈ ವಿಷಯದಲ್ಲಿ ಯಯಾತಿರಾಜನು ಹೇಳಿದ ಗಾಥೆಯೊಂದು ಇರುವುದು. ಅದೇನೆಂದರೆ—ಆಮೆಯು ವಿಸ್ತೃತವಾದ ತನ್ನ ಅಂಗಗಳನ್ನು ಸಂಕೋಚಮಾಡಿಕೊಳ್ಳುವಂತೆ, ಪುರುಷನು ವಿಸ್ತಾರವಾದ ಅನೇಕ ಆಶೆಗಳನ್ನು ಬಿಟ್ಟು ವಿರಕ್ತನಾಗಬೇಕು.

೯೪. ವಿಷಯಸುಖಗಳು ಅನುಭವಗಳಿಂದ ಎಂದಿಗೂ ಶಾಂತವಾಗುವುದಿಲ್ಲ. ಆಹುತಿಯಿಂದ ಅಗ್ನಿಯು ಅಭಿವೃದ್ಧಿಯಾಗುವಂತೆ, ಅನುಭವದಿಂದ ಆಶೆಯು ಅಭಿವೃದ್ಧಿಯಾಗುವುದು ; ಎಂದಿಗೂ ಶಾಂತಿಯಾಗುವುದಿಲ್ಲ.

**ಯತ್ ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ ।**
**ನಾಲಮೇಕಸ್ಯ ತತ್ಸರ್ವಮಿತಿ ಪಶ್ಯನ್ನ ಮುಹ್ಯತಿ ॥ ೯೫ ॥**

**ಯದಾ ತು ಕುರುತೇ ಭಾವಂ ಸರ್ವಭೂತೇಷು ಪಾವಕಂ ।**
**ಕರ್ಮಣಾ ಮನಸಾ ವಾಚಾ ಬ್ರಹ್ಮ ಸಂಪದ್ಯತೇ ತದಾ ॥ ೯೬ ॥**

**ಯದಾ ಪರಾನ್ನ ಬಿಭೇತಿ ಯದಾ ತ್ಮಸ್ಮಾನ್ನ ಬಿಭ್ಯತಿ ।**
**ಯದಾ ನೇಚ್ಛತಿ ನ ದ್ವೇಷ್ಟಿ ಬ್ರಹ್ಮ ಸಂಪದ್ಯತೇ ತದಾ ॥ ೯೭ ॥**

**ಯಾ ದುಸ್ತ್ಯಜಾ ದುರ್ಮತಿಭಿರ್ಯಾ ನ ಜೀರ್ಯತಿ ಜೀರ್ಯತಃ ।**
**ದೋಷಾಪ್ರಾಣಾಂತಿಕೋರಾಗಸ್ತಾಂ ತೃಷ್ಣಾಂ ತ್ಯಜತಃ ಸುಖಂ ॥ ೯೮ ॥**

೯೫. ಈ ಭೂಮಂಡಲದಲ್ಲಿ ಬತ್ತ, ಗೋಧಿ, ಧನ ಧಾನ್ಯ, ಪಶು, ಸ್ತ್ರೀ ಇವರು ಎಷ್ಟು ಇರುವರೋ ಅವರೆಲ್ಲರೂ ಒಬ್ಬನ ಭೋಗಕ್ಕೆ ಸಾಲವೆಂದು ಮನುಷ್ಯನಿಗೆ ಆಶೆಯಿರುತ್ತದೆ. ಎಷ್ಟು ಬಂದರೂ ತೃಪ್ತಿಮಾತ್ರ ಆಗುವುದಿಲ್ಲವೆಂದು ಯಾವನು ತಿಳಿಯುವನೋ ಅವನು ಜ್ಞಾನಿಯಾಗುವನು.

೯೬. ಯಾವ ಪುರುಷನು ಲೋಕದಲ್ಲಿರುವ ಸರ್ವ ವಸ್ತುಗಳೂ ಅಗ್ನಿಗೆ ಸಮಾನಗಳು. ಅಗ್ನಿಯಂತೆ ಅವು ದಹಿಸಿಬಿಡುತ್ತವೆ ಎಂದು ಮನೋವಾಕ್ಕಾಯ ಕರ್ಮಗಳಿಂದ ಭಾವಿಸುವನೋ ಅವನು ಬ್ರಹ್ಮಜ್ಞಾನಿಯಾಗುವನು.

೯೭. ಯಾವಾಗ ಪುರುಷನು ಪರರಿಗೆ ಹೆದರುವುದಿಲ್ಲವೋ, ತಾನೂ ಪರರನ್ನು ಹೆದರಿಸುವುದಿಲ್ಲವೋ, ಇಚ್ಛಾದ್ವೇಷಗಳನ್ನು ತ್ಯಜಿಸುವನೋ ಆಗ ಬ್ರಹ್ಮಜ್ಞಾನಿಯಾಗುವನು.

೯೮. ಯಾವ ಆಶೆಯನ್ನು ಬಿಡಲು ದುಷ್ಟರಿಗೆ ಸಾಧ್ಯವಿಲ್ಲವೋ, ಯಾವ ಆಶೆಯು ಪುರುಷನು ವೃದ್ಧನಾದರೂ ತರುಣಾವಸ್ಥೆಯಲ್ಲಿಯೇ ಇರುತ್ತದೋ, ಯಾವುದು ದೋಷಾಕರವೂ, ಪ್ರಾಣಾಂತಕವೂ ಆಗಿದೆಯೋ ಅಂತಹ ಆಶೆಯನ್ನು ಬಿಟ್ಟವನಿಗೆ ಸುಖವಾಗುವುದು.

**ಜೀರ್ಯಂತಿ ಜೀರ್ಯತಃ ಕೇಶಾ ದಂತಾ ಜೀರ್ಯಂತಿ ಜೀರ್ಯತಃ |**
**ಜೀವಿತಾಶಾ ಧನಾಶಾ ಚ ಜೀರ್ಯತೋಽಪಿ ನ ಜೀರ್ಯತಿ || ೯೯ ||**

**ಯಚ್ಚ ಕಾಮಸುಖಂ ಲೋಕೇ ಯಚ್ಚ ದಿವ್ಯಂ ಮಹತ್ ಸುಖಂ |**
**ತೃಷ್ಣಾಸ್ಯ ಚ ಸುಖಸ್ಯೈವ ಕಲಾಂ ನಾರ್ಹತಿ ಷೋಡಶೀಂ || ೧೦೦ ||**

**ಏವಮುಕ್ತ್ವಾ ತು ರಾಜರ್ಷಿಃ ಸದಾರಃ ಪ್ರಸ್ಥಿತೋ ವನಂ |**
**ಭೃಗುತುಂಗೇ ತಪಸ್ತಪ್ತ್ವಾ ತತ್ರೈವ ಚ ಮಹಾಯಶಾಃ ||**
**ಪಾಲಯಿತ್ವಾ ವ್ರತಶತಂ ತತ್ರೈವ ಸ್ವರ್ಗಮಾಪ್ನುಯಾತ್ || ೧೦೧ ||**

**ತಸ್ಯ ವಂಶಾತ್ತು ಪಂಚೈತೇ ಪುಣ್ಯಾ ದೇವರ್ಷಿಸತ್ಕೃತಾಃ |**
**ಯೈರ್ವ್ಯಾಪ್ತಾ ಪೃಥಿವೀ ಕೃತ್ಸ್ನಾ ಸೂರ್ಯಸ್ಯೇವ ಗಭಸ್ತಿಭಿಃ || ೧೦೨ ||**

---

೯೯. ಪುರುಷನು ವೃದ್ಧನಾದರೆ, ಕೇಶಗಳು ನೆರೆಯುತ್ತವೆ. ಮನುಷ್ಯನಿಗೆ ಹಲ್ಲುಗಳು ಉದುರಿಹೋಗುತ್ತವೆ. ಆದರೆ ಮನುಷ್ಯನು ವೃದ್ಧನಾದರೂ ಆಶಾಮಾತ್ರ ಜೀರ್ಣವಾಗುವುದಿಲ್ಲ. ಅಂದರೆ ಶಾಂತವಾಗುವುದಿಲ್ಲ, ವೃದ್ಧಿಯಾಗುತ್ತದೆ.

೧೦೦. ಲೋಕದಲ್ಲಿ ಯದೃಚ್ಛೆಯಾಗಿ ಯಾವ ಸುಖವು ಸಂಭವಿಸುವುದೋ, ಯಾವ ದಿವ್ಯವಾದ ಮಹಾಸುಖವಿರುವುದೋ, ಅಂತಹ ಸುಖಗಳು ಆಶಾರಾಹಿತ್ಯದಿಂದುಂಟಾದ ಸುಖದ ಹದಿನಾರನೆಯ ಒಂದು ಭಾಗಕ್ಕೆ ಸಮತೂಕವೂ ಬರುವುದಿಲ್ಲ. ಆಶಾತ್ಯಾಗ ಸುಖವೇ ಎಲ್ಲಕ್ಕಿಂತಲೂ ಉತ್ತಮವಾಗಿರುವುದು.

೧೦೧. ರಾಜರ್ಷಿಯಾದ ಮಹಾರಾಜನು ಹೀಗೆ ಪತ್ನೀಸಮೇತನಾಗಿ ವನಕ್ಕೆ ಹೋಗಿ ಭೃಗುತುಂಗದಲ್ಲಿ ತಪಸ್ಸನ್ನು ಮಾಡುತ್ತಲೂ, ನೂರಾರು ವ್ರತಗಳನ್ನು ಆಚರಿಸುತ್ತಲೂ, ಮಹಾಕೀರ್ತಿವಂತನಾಗಿ ಕೊನೆಗೆ ಸ್ವರ್ಗಸುಖವನ್ನು ಹೊಂದಿದನು.

೧೦೨. ಆ ಯಯಾತಿರಾಯನ ಐದುಜನ ಮಕ್ಕಳೂ ಪವಿತ್ರರೂ, ದೇವರ್ಷಿಗಳಿಂದ ಸತ್ಕೃತರೂ ಆಗಿ, ಸೂರ್ಯನು ಕಿರಣಗಳಿಂದ ವ್ಯಾಪಿಸುವಂತೆ ಭೂಮಂಡಲವನ್ನು ಕೀರ್ತಿಯಿಂದ ವ್ಯಾಪಿಸಿದರು.

**ಧನ್ಯಃ ಪ್ರಜಾವಾನಾಯುಷ್ಮಾನ್ ಕೀರ್ತಿಮಾಂಶ್ಚ ಭವೇನ್ನರಃ ।**
**ಯಯಾತೇಶ್ಚರಿತಂ ಸರ್ವಂ ಪಠಂಚ್ಛೃಣ್ವನ್ ದ್ವಿಜೋತ್ತಮಃ ॥ ೧೦೩ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಚಂದ್ರವಂಶಕೀರ್ತನಂ" ನಾಮ್ಯೈಕತ್ರಿಂಶೋಽಧ್ಯಾಯಃ**

---

೧೦೩. ಹೀಗೆ ಯಯಾತಿರಾಯನ ಚರಿತ್ರೆಯನ್ನು ಯಾವನು ಪಠಿಸುವನೋ ಅಥವಾ ಕೇಳುವನೋ ಅಂತಹ ಪುರುಷನು ಧನ್ಯನೂ, ಪ್ರಜಾವಂತನೂ, ಆಯುಷ್ಮಂತನೂ ಕೀರ್ತಿವಂತನೂ ಆಗಿ ಸಕಲವಿಧ ಸುಖವನ್ನೂ ಹೊಂದುವನು.

ಇಲ್ಲಿಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಚಂದ್ರವಂಶಕೀರ್ತನವೆಂಬ" ಮೂವತ್ತೊಂದನೆಯ ಅಧ್ಯಾಯವು ಮುಗಿದುದು.



## ಮೂವತ್ತೊಂದನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಚಂದ್ರವಂಶವು ವರ್ಣಿತವಾಗಿದೆ. ಈ ವಂಶದಲ್ಲಿ ಪುರುತನು ಜನಿಸಿದನು. ಆತನು ತನ್ನ ಕುಮಾರಿಯನ್ನು ಮಿತ್ರಜ್ಯೋತಿಗೆ ಕೊಟ್ಟು ವಿವಾಹವನ್ನು ಮಾಡಿದನು. ಅವನಿಗೆ ಪ್ರಖ್ಯಾತರೂ, ಮಹಾಬಲಶಾಲಿಗಳೂ ಆದ ಸಂಜಯ, ವಿಜಯ, ಜಯನೇ ಮೊದಲಾದ ಪುತ್ರರು ಉದ್ಭವಿಸಿದರು. ಆ ವಂಶದ ನಹುಷನಿಗೆ ಯಯಾತಿರಾಯನು ಹುಟ್ಟಿ, ದೇವಯಾನೀ ಶರ್ಮಿಷ್ಠೆಯೆಂಬ ಪತ್ನಿಯರನ್ನು ಮದುವೆಯಾಗಿ ಯದು. ತುರ್ವಸು, ದ್ರುಹ್ಯು, ಅನು, ಪೂರು ಎಂಬ ತನಯರನ್ನು ಪಡೆದನು. ಯಯಾತಿಗೆ ಶುಕ್ರಾಚಾರ್ಯನ ಶಾಪದಿಂದ ಶೀಘ್ರವಾಗಿ ಮುಪ್ಪು ಒದಗಿತು. ಆದರೆ ಆ ಮುದಿತನವನ್ನು ಬದಲಾಯಿಸಲು ವರವನ್ನು ಪಡದಿದ್ದನು. ಅದರಿಂದ ತನ್ನ ಮುಪ್ಪನ್ನು ಸ್ವೀಕರಿಸುವಂತೆ ಯದುರಾಯನೇ ಮೊದಲಾದವರನ್ನು ಕೇಳಿದನು. ಅದಕ್ಕೆ ಯಾರೂ ಒಪ್ಪಲಿಲ್ಲ. ಕೊನೆಗೆ ಪೂರುರಾಯನು ಅಂಗೀಕರಿಸಿದನು.

ತರುವಾಯ ರಾಯನು ಹತ್ತು ಸಾವಿರ ವರ್ಷಗಳು ದಿವ್ಯಭೋಗವನ್ನು ಪಡೆದರೂ ತೃಪ್ತನಾಗದೆ, ವಿವೇಕದಿಂದ ವಿರಕ್ತನಾಗಿ, ಕುಮಾರನಿಂದ ಮುಪ್ಪನ್ನು ಹೊಂದಿ, ತಾರುಣ್ಯವನ್ನೂ, ರಾಜ್ಯವನ್ನೂ ಅವನಿಗೆ ಕೊಟ್ಟನು. ಕೊನೆಗೆ ತನ್ನ ಐವರು ಮಕ್ಕಳನ್ನು ಭೂಮಂಡಲದಲ್ಲಿ ಸ್ಥಾಪಿಸಿ, ಪತ್ನಿಯೊಡನೆ ವಾನಪ್ರಸ್ಥಾಶ್ರಮವನ್ನು ಹೊಂದಿ, ದಿವ್ಯತಪಸ್ಸನ್ನು ಮಾಡಿ, ಶಾಶ್ವತವಾದ ಪರಮಪದವಿಯನ್ನು ಹೊಂದಿದನು ಎಂಬ ವಿಷಯಗಳು ವರ್ಣಿಸಲ್ಪಟ್ಟಿವೆ.

—॥ ಹರಿಃ ಓಂ ॥—

—॥ ಶ್ರೀ ವೇದವ್ಯಾಸಾಯ ನಮಃ ॥—

# ಶ್ರೀ ಮ ದ್ವಾ ಯು ಮ ಹಾ ಪು ರಾ ಣ ಂ

## ದ್ವಾತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

**ಯದೋರ್ವಂಶಂ ಪ್ರವಕ್ಷ್ಯಾಮಿ ಶ್ರೇಷ್ಠಸ್ಯೋತ್ತಮತೇಜಸಃ ।**
**ವಿಸ್ತರೇಣಾನುಪೂರ್ವೇಣ ಗದತೋ ಮೇ ನಿಬೋಧತ ॥ ೧ ॥**

**ಯದೋಃ ಪುತ್ರಾ ಬಭೂವುರ್ಹಿ ಪಂಚ ದೇವಸುತೋಪಮಾಃ ।**
**ಸಹಸ್ರಜಿದಥ ಶ್ರೇಷ್ಠಃ ಕ್ರೋಷ್ಟುರ್ನೀಲೋ ಜಿತೋ ಲಘುಃ ॥ ೨ ॥**

**ಸಹಸ್ರಜಿತ್ಸುತಃ ಶ್ರೀಮಾನ್ ಶತಜಿನ್ನಾಮ ಪಾರ್ಥಿವಃ ।**
**ಶತಜಿತ್ಸುತಾ ವಿಖ್ಯಾತಾಸ್ತ್ರಯಃ ಪರಮಧಾರ್ಮಿಕಾಃ ॥ ೩ ॥**

## ಮೂವತ್ತೆರಡನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :—ಉತ್ತಮವಾದ ತೇಜಸ್ಸನ್ನೂ, ಶ್ರೇಷ್ಠನೂ ಆದ ಯದುರಾಯನ ವಂಶವನ್ನು ವಿಸ್ತಾರವಾಗಿಯೂ. ಕ್ರಮವಾಗಿಯೂ, ವರ್ಣಿಸುವೆನು ಸಾವಧಾನವಾಗಿ ಕೇಳಿರೆಂದು ಸೂತಮುನಿಯು ಹೇಳಿದನು.

೨. ಯದುಮಹಾರಾಯನಿಗೆ ಇಂದ್ರಕುಮಾರನಾದ ಜಯಂತನಿಗೆ ಸಮಾನರೂ, ಶೂರರೂ ಆದ ಸಹಸ್ರಜಿತ್, ಕ್ರೋಷ್ಟು, ನೀಲ, ಜಿತ, ಮತ್ತು ಲಘುವೆಂಬ ಐದುಜನ ಕುಮಾರರು ಉದ್ಭವಿಸಿದರು.

೩. ಆ ಸಹಸ್ರಜಿತನಿಗೆ ಮಹದೈಶ್ವರ್ಯಸಂಪನ್ನನೂ ರಾಜನೂ ಆದ ಶತಜಿನ್ನಾಮಕ ಕುಮಾರನು ಉದ್ಭವಿಸಿದನು. ಅವನಿಗೆ ಪ್ರಖ್ಯಾತರೂ ಪರಮ ಧಾರ್ಮಿಕರೂ ಆದ ಮೂವರು ತನಯರಿದ್ದರು.

ಹೈಹಯಶ್ಚ ಹಯಶ್ಚೈವ ರಾಜಾ ವೇಣುಹಯಶ್ಚ ಯಃ ।
ಹೈಹಯಸ್ಯ ತು ದಾಯಾದೋ ಧರ್ಮತತ್ತ್ವ ಇತಿ ಶ್ರುತಿಃ ॥ ೪ ॥

ಧರ್ಮತಂತ್ರಸ್ತು ಕೀರ್ತಿಸ್ತು ಸಂಜ್ಞೇಯಸ್ತಸ್ಯ ಚಾತ್ಮಜಃ ।
ಸಂಜ್ಞೇಯಸ್ಯ ತು ದಾಯಾದೋ ಮಹಿಷ್ಮಾನ್ನಾಮ ಪಾರ್ಥಿವಃ ॥ ೫ ॥

ಆಸೀನ್ಮಹಿಷ್ಮತಃ ಪುತ್ರೋ ಭದ್ರಶ್ರೇಣ್ಯಃ ಪ್ರತಾಪವಾನ್ ।
ವಾರಾಣಸ್ಯಧಿಪೋ ರಾಜಾ ಕಥಿತಃ ಪೂರ್ವ ಏವ ಹಿ ॥ ೬ ॥

ಭದ್ರಶ್ರೇಣ್ಯಸ್ಯ ದಾಯಾದೋ ದುರ್ಮದೋ ನಾಮ ಪಾರ್ಥಿವಃ ।
ದುರ್ಮದಸ್ಯ ತತೋ ಧೀಮಾನ್ ಕನಕೋ ನಾಮ ವಿಶ್ರುತಃ ॥ ೭ ॥

ಕನಕಸ್ಯ ತು ದಾಯಾದಾಶ್ಚತ್ವಾರೋ ಲೋಕವಿಶ್ರುತಾಃ ।
ಕೃತವೀರ್ಯಃ ಕಾರ್ತವೀರ್ಯಃ ಕೃತವರ್ಮಾ ತಥೈವ ಚ ॥ ೮ ॥

---

೪-೫. ಆ ಕುಮಾರರು ಹೈಹಯ, ಹಯ, ವೇಣುಹಯರೆಂದು ಪ್ರಖ್ಯಾತರಾದರು. ಅವರಲ್ಲಿ ಹೈಹಯನಿಗೆ ಧರ್ಮತತ್ತ್ವನೆಂಬ ಪ್ರಸಿದ್ಧನಾದ ರಾಜಕುಮಾರನೂ, ಅವನಿಗೆ ಕೀರ್ತಿವಂತನೆಂಬ ಸುತನೂ, ಅವನಿಗೆ ಸಂಜಯನೆಂಬ ತನಯನೂ, ಅವನಿಗೆ ಮಹಿಷ್ಮಂತನೆಂಬ ಪುತ್ರನೂ ಜನಿಸಿ, ಲೋಕಮಾನ್ಯರಾಗಿದ್ದರು.

೬. ಆ ಮಹಿಷ್ಮಂತನಿಗೆ ಪ್ರತಾಪಶಾಲಿಯಾದ ಭದ್ರಶ್ರೇಣ್ಯನೆಂಬ ಕುಮಾರನು ಜನಿಸಿದನು. ಅವನು ಕಾಶೀನಗರಕ್ಕೆ ಅಧಿಪತಿಯಾಗಿದ್ದನೆಂದು ಮೊದಲೇ ನಿಮಗೆ ನಾನು ನಿರೂಪಿಸಿರುವೆನು.

೭. ಭದ್ರಶ್ರೇಣನಿಗೆ ದುರ್ಮದನೆಂಬ ರಾಜಕುಮಾರನೂ ಅವನಿಗೆ ಮಹಾಜ್ಞಾನಿಯೂ ಪ್ರಖ್ಯಾತನೂ ಆದ ಕನಕನೆಂಬ ಸುತನೂ ಆವಿರ್ಭವಿಸಿದರು.

೮. ಆ ಕನಕಮಹಾರಾಯನಿಗೆ ಲೋಕಮಾನ್ಯರಾದ ಕೃತವೀರ್ಯ, ಕಾರ್ತವೀರ್ಯ, ಕೃತವರ್ಮ, ಕೃತರೆಂಬ ನಾಲ್ವರು ಶೂರರಾದ ತನಯರು ಜನಿಸಿದರು. ಕೃತನೆಂಬುವನು ನಾಲ್ಕನೆಯವನಾಗಿರುವನು.

**ಕೃತೋ ಜಾತಶ್ಚತುರ್ಥೋಽಭೂತ್ಕೃತವೀರ್ಯಾತ್ತತೋಽರ್ಜುನಃ ।**
**ಜಜ್ಞೇ ಬಾಹುಸಹಸ್ರೇಣ ಸಪ್ತದ್ವೀಪೇಶ್ವರೋ ನೃಪಃ ॥ ೯ ॥**

**ಸ ಹಿ ವರ್ಷಾಯುತಂ ತಪ್ತ್ವಾ ತಪಃ ಪರಮದುಶ್ಚರಂ ।**
**ದತ್ತಮಾರಾಧಯಾಮಾಸ ಕಾರ್ತವೀರ್ಯೋಽತ್ರಿ ಸಂಭವಂ ॥ ೧೦ ॥**

**ತಸ್ಮೈ ದತ್ತೋ ವರಾನ್ ಪ್ರಾದಾಚ್ಚತುರೋ ಭೂರಿತೇಜಸಃ ।**
**ಪೂರ್ವಂ ಬಾಹುಸಹಸ್ರಂ ತು ಸ ವವ್ರೇ ಪ್ರಥಮಂ ವರಂ ॥ ೧೧ ॥**

**ಅಧರ್ಮೇ ದೀಯಮಾನಸ್ಯ ಸದ್ಭಿಸ್ತಸ್ಮಾನ್ನಿವಾರಣಂ ।**
**ಧರ್ಮೇಣ ಪೃಥಿವೀಂಜಿತ್ವಾ ಧರ್ಮೇಣೈವಾನುಪಾಲನಂ ॥ ೧೨ ॥**

೯. ಅವರಲ್ಲಿ ಕಾರ್ತವೀರ್ಯನಿಗೆ ಅರ್ಜುನನೆಂಬ ಕುಮಾರನು ಉದ್ಭವಿಸಿದನು. ಆ ಕಾರ್ತವೀರ್ಯಾರ್ಜುನನು ಸಹಸ್ರಬಾಹುಗಳಿಂದಲಂಕೃತನೂ, ಸಪ್ತದ್ವೀಪಗಳಿಗೆ ಅಧಿಪತಿಯೂ, ಮಹಾಶೂರನೂ, ಲೋಕವಿಖ್ಯಾತನೂ ಆಗಿದ್ದನು.

೧೦. ಆ ಕಾರ್ತವೀರ್ಯಾರ್ಜುನನು ಹತ್ತು ಸಹಸ್ರವರ್ಷಗಳು ಘೋರವೂ, ಅಸಾಧ್ಯವೂ ಆದ ತಪಸ್ಸನ್ನು ಮಾಡಿ ಅತ್ರಿಮಹರ್ಷಿಯ ಕುಮಾರನಾದ ದತ್ತಾತ್ರೇಯ ದೇವನನ್ನು ಆರಾಧಿಸಿದನು.

೧೧. ಸ್ವಾಮಿಯಾದ ದತ್ತಾತ್ರೇಯನು ಉತ್ತಮವೂ, ಶಕ್ತಿಯುತವೂ ಆದ ನಾಲ್ಕು ವರಗಳನ್ನು ಕೊಟ್ಟನು. ಅರ್ಜುನನು ಮೊದಲೇ ಭುಜಸಹಸ್ರಗಳನ್ನು ಕೊಡಬೇಕೆಂದು ಒಂದು ವರವನ್ನು ಕೇಳಿಕೊಂಡಿದ್ದನು.

೧೨. ಅಧರ್ಮನಿರತರಾದ ದುಷ್ಟರನ್ನು ಸಜ್ಜನರು ಶಿಕ್ಷಿಸಬೇಕೆಂಬ ಎರಡನೆಯ ವರವನ್ನೂ, ಧರ್ಮದಿಂದ ಭೂಮಿಯನ್ನು ಜಯಿಸಿ, ಧರ್ಮದಿಂದಲೇ ರಕ್ಷಣೆಯನ್ನು ಮಾಡಬೇಕೆಂಬ ಮೂರನೆಯ ವರವನ್ನೂ ಬೇಡಿಕೊಂಡನು.

ಸಂಗ್ರಾಮಾಂಸ್ತು ಬಹೂನ್ ಜಿತ್ವಾ ಹತ್ವಾ ಚಾರೀನ್ ಸಹಸ್ರಶಃ ।
ಸಂಗ್ರಾಮೇ ಯುದ್ಧ್ಯಮಾನಸ್ಯ ವಧಃಸ್ಯಾದಧಿಕಾದ್ರಣೇ ॥ ೧೩ ॥

ತೇನೇಯಂ ಪೃಥಿವೀ ಕೃತ್ಸ್ನಾ ಸಪ್ತದ್ವೀಪಾ ಸಪತ್ತನಾ ।
ಸಪ್ತೋದಧಿಪರಿಕ್ಷಿಪ್ತಾ ಕ್ಷಾತ್ರೇಣ ವಿಧಿನಾ ಜನಾಃ ॥ ೧೪ ॥

ತಸ್ಯ ಬಾಹುಸಹಸ್ರಂ ತು ಯುದ್ಧ್ಯತಃ ಕಿಲ ಧೀಮತಃ ।
ಯೌದ್ಧೋ ಧ್ವಜೋ ರಥಶ್ಚೈವ ಪ್ರಾದುರ್ಭವತಿ ಮಾಯಯಾ ॥ ೧೫ ॥

ದಶಯಜ್ಞಸಹಸ್ರಾಣಿ ತೇಷು ದ್ವೀಪೇಷು ಸಪ್ತಸು ।
ನಿರರ್ಗಲಾಃ ಸ್ಮ ನಿರ್ವತ್ತಾಃ ಶ್ರೂಯಂತೇ ತಸ್ಯ ಧೀಮತಃ ॥ ೧೬ ॥

೧೩. ಘೋರವಾದ ಸಂಗ್ರಾಮದಲ್ಲಿ ಅಸಂಖ್ಯಾತರಾದ ಶತ್ರುಗಳ ಸಂಗಡ ಹೋರಾಡಿ, ಸಹಸ್ರಾರು ಅರಿಗಳನ್ನು ಜಯಿಸಿ, ಮಹಾಶೂರನ ಸಂಗಡ ಯುದ್ಧ ಮಾಡುವಾಗ ಕೊಲೆಯಾಗಿ, ವೀರಸ್ವರ್ಗವನ್ನು ಪಡೆಯಬೇಕೆಂಬ ನಾಲ್ಕನೆಯ ವರವನ್ನೂ ಬೇಡಿಕೊಂಡನು.

೧೪. ಆ ಕಾರ್ತವೀರ್ಯಾರ್ಜುನನು ಸಪ್ತದ್ವೀಪಗಳು, ಸಪ್ತಸಮುದ್ರಗಳು, ಅನೇಕ ನಗರಗಳು ಇವುಗಳಿಂದ ಸಹಿತವಾದ ಭೂಮಂಡಲವನ್ನು ಕ್ಷಾತ್ರಧರ್ಮದಿಂದ ಪ್ರಜೆಗಳನ್ನೂ ಪಾಲಿಸುತ್ತಿದ್ದನು.

೧೫. ಕಾರ್ತವೀರ್ಯಾರ್ಜುನನು ಧೈರ್ಯದಿಂದ ಯುದ್ಧ ಮಾಡುತ್ತಿರುವಾಗ ಸಹಸ್ರ ಬಾಹುಗಳು, ಧ್ವಜಪತಾಕೆಗಳು, ಜಯಕರವಾದ ರಥವೂ ಸಹ ಮಾಯಾ ಸಿದ್ಧಿಯಿಂದ ಸಿದ್ಧವಾಗುವುವು.

೧೬. ಆ ಕಾರ್ತವೀರ್ಯಾರ್ಜುನನು ಆ ಸಪ್ತದ್ವೀಪಗಳಲ್ಲಿಯೂ ನಿಷ್ಕಂಟಕವಾಗಿ ಹತ್ತುಸಾವಿರ ಯಜ್ಞಗಳನ್ನು ಮಾಡಿ ದೇವತೆಗಳನ್ನು ತೃಪ್ತಿಗೊಳಿಸಿದನೆಂದು ಲೋಕವಿಖ್ಯಾತವಾಗಿದೆ.

**ಸರ್ವೇ ಯಜ್ಞಾ ಮಹಾಬಾಹೋ ಸ್ತಸ್ಯಾಸನ್ ಭೂರಿತೇಜಸಃ ।**
**ಸರ್ವೇ ಕಾಂಚನವೇದೀಕಾಃ ಸರ್ವೇ ಯೂಪೈಶ್ಚ ಕಾಂಚನೈಃ ॥ ೧೭ ॥**

**ಸರ್ವೇ ದೇವೈರ್ಮಹಾಭಾಗ್ಯೈರ್ವಿಮಾನಸ್ಥೈರಲಂಕೃತಾಃ ।**
**ಗಂಧರ್ವೈರಪ್ಸರೋಭಿಶ್ಚ ನಿತ್ಯಮೇವೋಪಶೋಭಿತಾಃ ॥ ೧೮ ॥**

**ತಸ್ಯ ರಾಜ್ಞೋ ಜಗೌ ಗಾಥಾಂ ಗಂಧರ್ವೋ ನಾರದಸ್ತಥಾ ।**
**ಚರಿತಂ ತಸ್ಯ ರಾಜರ್ಷೇರ್ಮಹಿಮಾನಂ ನಿರೀಕ್ಷ್ಯ ಚ ॥ ೧೯ ॥**

**ನ ನೂನಂ ಕಾರ್ತವೀರ್ಯಸ್ಯ ಗತಿಂ ಯಾಸ್ಯಂತಿ ಮಾನವಾಃ ।**
**ಯಜ್ಞೈರ್ದಾನೈಸ್ತಪೋಭಿಶ್ಚ ವಿಕ್ರಮೇಣ ಶ್ರುತೇನ ಚ ॥ ೨೦ ॥**

---

೧೭–೧೮. ಮಹಾಬಾಹುವೂ ಮಹಾತೇಜಸ್ವಿಯೂ ಆದ ಕಾರ್ತವೀರ್ಯಾರ್ಜುನನ ಸಮಸ್ತ ಯಜ್ಞಗಳೂ ಸುವರ್ಣಮಯ ಜಗುಲಿಗಳಿಂದಲೂ, ಕಾಂಚನ ಮಯವಾದ ಯೂಪಸ್ತಂಭಗಳಿಂದಲೂ, ಮಹಾನುಭಾವರಾದ ದೇವತೆಗಳ ದಿವ್ಯ ವಿಮಾನಗಳಿಂದಲೂ, ಗಂಧರ್ವರು, ಅಪ್ಸರಸಿಯರು, ಉರಗಗಳು, ಕಿನ್ನರಾದಿಗಳು ಇವರಿಂದಲೂ ನಿತ್ಯಭೂಷಿತವೂ ಆಗಿದ್ದುವು.

೧೯. ಆ ಮಹಾರಾಜನ ದಿವ್ಯಮಹಿಮೆಗಳನ್ನು ಗಂಧರ್ವರು, ನಾರದನು ಇವರೇ ಮೊದಲಾದ ದೇವರ್ಷಿಗಳು ಸ್ವರ್ಗಲೋಕದಲ್ಲಿಯೂ, ಭೂಲೋಕದಲ್ಲಿಯೂ, ವಿಶೇಷವಾಗಿ ಗಾನಮಾಡಿದರು.

೨೦. ಈ ಭೂಮಂಡಲದಲ್ಲಿ ಯಾವ ರಾಯನೂ ಯಜ್ಞ, ದಾನ, ತಪಸ್ಸು, ಶೌರ್ಯ ಮತ್ತು ಪ್ರಖ್ಯಾತಿ ಇವುಗಳ ವಿಷಯದಲ್ಲಿ ಕಾರ್ತವೀರ್ಯಾರ್ಜುನನಿಗೆ ಸಮಾನರಾಗಿ ಹಿಂದೆಯೂ ಹುಟ್ಟಿರಲಿಲ್ಲ. ಈಗಲೂ ಇಲ್ಲ. ಮುಂದೆಯೂ ಜನಿಸುವುದಿಲ್ಲವೆಂಬ ಪ್ರಖ್ಯಾತಿಯು ಲೋಕದಲ್ಲಿ ಹರಡಿತ್ತು.

ದ್ವೀಪೇಷು ಸಪ್ತಸು ಸ ವೈ ಖಡ್ಗೀ ವರಶರಾಸನೀ ।
ರಥೀ ರಾಜಾಪ್ಯನುಚರೋಽನ್ಯೋಽಗಾಚ್ಛೈವಾನುದೃಶ್ಯತೇ || ೨೧ ||

ಅನಷ್ಟದ್ರವ್ಯಶ್ಚೈವಾಸೀನ್ನ ಶೋಕೋ ನ ಚ ವಿಭ್ರಮಃ ।
ಪ್ರಭಾವೇಣ ಮಹಾರಾಜ್ಞಃ ಪ್ರಜಾ ಧರ್ಮೇಣ ರಕ್ಷತಃ || ೨೨ ||

ಪಂಚಾಶೀತಿಸಹಸ್ರಾಣಿ ವರ್ಷಾಣಾಂ ಸ ನರಾಧಿಪಃ ।
ಸಪ್ತ ಸಪ್ತ ವಾರಾನ್ ಸಮ್ರಾಟ್ ಚಕ್ರವರ್ತೀ ಬಭೂವ ಹ || ೨೩ ||

ಸ ಏವ ಪಶುಪಾಲೋಽಭೂತ್ ಕ್ಷೇತ್ರಪಾಲಸ್ತಥೈವ ಚ ।
ಸ ಏವ ವೃಷ್ಟ್ಯಾ ಪರ್ಜನ್ಯೋ ಯೋಗಿತ್ವಾದರ್ಜುನೋಽಭವತ್ || ೨೪ ||

ಸ ವೈ ಬಾಹುಸಹಸ್ರೇಣ ಜ್ಯಾಘಾತಕಠಿನೇನ ಚ ।
ಭಾತಿ ರಶ್ಮಿಸಹಸ್ರೇಣ ಶಾರದೇನೇವ ಭಾಸ್ಕರಃ || ೨೫ ||

೨೧. ಸಪ್ತದ್ವೀಪಗಳಲ್ಲಿಯೂ ಖಡ್ಗಧಾರಿಯೂ, ಉತ್ತಮವಾದ ಧನುರ್ಧಾರಿಯೂ, ರಥಿಕನೂ ಆದ ಅರ್ಜುನ ಮಹಾರಾಜನು ಸೇವಕರೊಡನೇ ಸಂಚರಿಸುತ್ತಿದ್ದನು. ಇತರ ರಾಜರಿಗೆ ಪ್ರವೇಶವೇ ಇರಲಿಲ್ಲ.

೨೨. ಆ ಮಹಾರಾಜನು ಧರ್ಮದಿಂದ ಪ್ರಜೆಗಳನ್ನು ಕಾಪಾಡಲಾಗಿ ಅವನ ಪ್ರಭಾವದಿಂದ ಯಾವ ಪುರುಷನೂ ದ್ರವ್ಯವನ್ನು ಕಳೆದುಕೊಂಡವನಾಗಿಯೂ, ದುಃಖಿತನಾಗಿಯೂ, ಭ್ರಾಂತನಾಗಿಯೂ ಇರಲಿಲ್ಲ. ಪ್ರಜೆಗಳೆಲ್ಲರೂ ಸುಖಿಯಾಗಿದ್ದರು.

೨೩. ಆ ಕಾರ್ತವೀರ್ಯಾರ್ಜುನನು ಚಕ್ರವರ್ತಿಸಾರ್ವಭೌಮನಾಗಿ ಏಕಾಧಿಪತ್ಯದಿಂದ ತೊಂಬತ್ತೈದು ಸಹಸ್ರದ ನಲವತ್ತೊಂಬತ್ತು ವರ್ಷಗಳವರೆಗೂ ಪ್ರಜೆಗಳನ್ನು ಧರ್ಮದಿಂದ ಪಾಲಿಸುತ್ತಿದ್ದನು.

೨೪. ಆ ಕಾರ್ತವೀರ್ಯಾರ್ಜುನರಾಜನೇ ಪಶುಪಾಲಕನೂ, ಕ್ಷೇತ್ರಪಾಲಕನೂ, ಮಳೆಯನ್ನು ಸುರಿಸುವ ಪರ್ಜನ್ಯನೂ, ಮಹಾಯೋಗಿಯೂ ಆಗಿದ್ದನು.

೨೫. ಆ ಸಹಸ್ರ ಭುಜಗಳಿಂದ ಕಾರ್ತವೀರ್ಯಾರ್ಜುನನು ಧನುಸ್ಸುಗಳ ಹೆದೆಗಳಿಂದ ಕಠಿಣವಾದ ಸಹಸ್ರ ಭುಜಗಳಿಂದ ಸಹಸ್ರ ಕಿರಣಗಳಿಂದ ಕೂಡಿರುವ ಶರತ್ಕಾಲದ ಸೂರ್ಯನಂತೆ ಹೊಳೆಯುತ್ತಿದ್ದನು.

**ಸ ಹಿ ನಾಗಸಹಸ್ರೇಣ ಮಾಹಿಷ್ಮತ್ಯಾಂ ನರಾಧಿಪಃ ।**
**ಕರ್ಕೋಟಕಸಭಾಂಜಿತ್ವಾ ಪುರೀಂ ತತ್ರ ನ್ಯವೇಶಯತ್ ॥ ೨೬ ॥**

**ಸ ವೈ ವೇಗೇ ಸಮುದ್ರಸ್ಯ ಪ್ರಾವೃಟ್ ಕಾಲಾಂಬುಜೇಕ್ಷಣಃ ।**
**ಕ್ರೀಡನ್ನಿವ ಸುಖೋದ್ವಿಗ್ನಃ ಪ್ರಾವೃಟ್ ಕಾಲಂಚಕಾರ ಹ ॥ ೨೭ ॥**

**ಲುಲಿತಾ ಕ್ರೀಡತಾ ತೇನ ಹೇಮಸ್ರಗ್ದಾಮಮಾಲಿನೀ ।**
**ಊರ್ಮಿಭ್ರೂಕುಟಿಸನ್ನಾದಾ ಶಂಕಿತಾಭ್ಯೇತಿ ನರ್ಮದಾ ॥ ೨೮ ॥**

**ಪುರಾ ಸ ತಾಮನುಸರನ್ನವಗಾಢೋ ಮಹಾರ್ಣವಂ ।**
**ಚಕಾರೋದ್ವೃತ್ಯ ವೇಲಾಂತಂ ಸ ಕಾಲಃ ಪ್ರಾವೃಷೋದ್ವನಂ ॥ ೨೯ ॥**

---

೨೬. ಆ ಅರ್ಜುನ ಮಹಾರಾಯನು ಸಾವಿರಾರು ಸರ್ಪಗಳಿಂದ ಕೂಡಿದ ಕರ್ಕೋಟಕರಾಜನ ಮಹಾಸಭೆಯನ್ನು ಜಯಿಸಿ, ತನ್ನ ಮಾಹಿಷ್ಮತೀ ಎಂಬ ರಾಜಧಾನಿಗೆ ತಂದು ಸ್ಥಾಪಿಸಿದನು.

೨೭. ಮಳೆಗಾಲದ ಕಮಲದಂತೆ ಕಾಂತಿಯುಳ್ಳ ಮಹಾರಾಯನು ಸಮುದ್ರದಲ್ಲಿ ಅತಿವಿನೋದವಾಗಿ ವಿಹಾರಮಾಡಿ ಸುಖದಿಂದ ಮಗ್ನನಾಗಿ ನೂತನವಾದ ವರ್ಷಾಕಾಲವನ್ನು ಏರ್ಪಡಿಸಿದನು.

೨೮. ಸುವರ್ಣಮಯವಾದ ಪುಷ್ಪಮಾಲೆಗಳಿಂದಲಂಕೃತಳೂ, ಮಹಾರಾಜನ ವಿಹಾರದಿಂದ ಚಲಿತಳೂ, ಅಲೆಗಳೆಂಬ ಹುಬ್ಬುಗೆಟ್ಟುಗಳಿಂದ ಸಹಿತಳೂ, ಮಹಾನಾದವುಳ್ಳವಳೂ, ಆದ ನರ್ಮದೆಯು ಹೆದರಿಕೊಂಡು ಸಿದ್ಧಳಾದಳು.

೨೯. ಪೂರ್ವದಲ್ಲಿ ಕಾರ್ತವೀರ್ಯಾರ್ಜುನನು ನರ್ಮದೆಯಲ್ಲಿ ವಿಹರಿಸುತ್ತಾ ಅವಳ ಮೂಲಕ ಸಮುದ್ರಕ್ಕೆ ಹೋಗಿ ಮುಳಿಗಿ ಅವಳನ್ನು ತೀರದಲ್ಲಿ ಎತ್ತಿ ಬಿಟ್ಟನು. ಆ ಕಾಲವು ಮಳೆಗಾಲಕ್ಕೆ ಸಮವಾಗಿತ್ತು. ಮಳೆಗಾಲವೋ ಏನೋ ಎಂಬಂತೆ ಕಾಣಿಸಿತು.

**ತಸ್ಯ ಬಾಹು ಸಹಸ್ರೇಣ ಕ್ಷೋಭ್ಯಮಾಣೇ ಮಹೋದಧೌ ।**
**ಭವಂತಿ ಲೀನಾ ನಿಶ್ಚೇಷ್ಟಾಃ ಪಾತಾಲಸ್ಥಾ ಮಹಾಸುರಾಃ ॥ ೩೦ ॥**

**ಚೂರ್ಣೀಕೃತಮಹಾವೀಚಿಲೀನಮೀನಮಹಾವಿಷಾಃ ।**
**ಪತಿತಾ ವಿದ್ಧಫೇನೌಘಮಾವರ್ತಕ್ಷಿಪ್ತದುಸ್ಸಹಂ ॥ ೩೧ ॥**

**ಚಕಾರ ಕ್ಷೋಭಯನ್ರಾಜಾ ದೋಃ ಸಹಸ್ರೇಣ ಸಾಗರಂ ।**
**ದೇವಾಸುರಪರಿಕ್ಷಿಪ್ತಂ ಕ್ಷೀರೋದಮಿವ ಸಾಗರಂ ॥ ೩೨ ॥**

**ಮಂದರಕ್ಷೋಭಣಕೃತಾ ಹ್ಯಮೃತೋದಕಶಂಕಿತಾಃ ।**
**ಸಹಸೋತ್ಪಾದಿತಾ ಭೀತಾ ಭೀಮಂ ದೃಷ್ಟ್ವಾ ನೃಪೋತ್ತಮಂ ॥ ೩೩ ॥**

---

೩೦. ಪೂರ್ವಕಾಲದಲ್ಲಿ, ಆ ಅರ್ಜುನನು ತನ್ನ ಸಹಸ್ರಭುಜಗಳಿಂದ ಸಮುದ್ರವನ್ನು ಅಲ್ಲೋಲಕಲ್ಲೋಲಮಾಡಲು, ಪಾತಾಳಲೋಕದಲ್ಲಿದ್ದ ಮಹಾಸುರರು ಅತ್ಯಂತ ಭೀತಿಯಿಂದ ನಿಶ್ಚೇಷ್ಟರಾಗಿ ಅವಿತುಕೊಂಡರು.

೩೧. ಆ ಅರ್ಜುನನು ತನ್ನ ಸಹಸ್ರಭುಜಗಳಿಂದ ಸಮುದ್ರದಲ್ಲಿ ಪಿಡಿಸಲಾಗಿ ಅಲೆಗಳೆಲ್ಲವೂ ಚೂರ್ಣವಾಗಿ ಅವುಗಳಲ್ಲಿದ್ದ ಮೀನುಗಳು, ಮೊಸಳೆಗಳು, ಸರ್ಪಗಳೂ ಕೂಡ ನೊರೆಗಳಿಂದ ಕೂಡಿ ಸುಳಿಗಳಿಂದ ಎಳೆಯಲ್ಪಟ್ಟು ಅಲ್ಲಲ್ಲಿ ಬಿದ್ದುವು.

೩೨. ಆ ರಾಜನು ಸಹಸ್ರಭುಜಗಳಿಂದ ಸಮುದ್ರವನ್ನು ಅಲ್ಲೋಲಕಲ್ಲೋಲವನ್ನಾಗಿ ಮಾಡಲು ಅದು ದೇವಾಸುರರಿಂದ ಮಥಿತವಾದ ಕ್ಷೀರಸಾಗರದ ಅವಸ್ಥೆಯನ್ನು ಹೊಂದಿತು.

೩೩. ಮಂದರಕ್ಷೋಭಣದಿಂದ ಪೀಡಿತವಾದ ಅನೇಕ ಪ್ರಾಣಿಗಳು, ಕ್ಷೀರಸಮುದ್ರವನ್ನು ಸ್ಮರಿಸುತ್ತಾ ಭಯವನ್ನು ಹೊಂದಿ ಭಯಂಕರನಾದ ಆ ರಾಜನನ್ನು ನೋಡಿ ಭ್ರಾಂತವಾದುವು.

**ನತನಿಶ್ಚಲಮೂರ್ಧಾನೋ ಬಭೂವುಶ್ಚ ಮಹೋರಗಾಃ ।**
**ಸಾಯಾಹ್ನೇ ಕದಲೀಷಂಡಾ ನಿರ್ವಾತಸ್ತಿಮಿತಾ ಇವ ॥ ೩೪ ॥**

**ಸ ವೈ ಬದ್ಧ್ವಾ ಧನುರ್ಯಾನ ಉತ್ಸಿಕ್ತಃ ಪಂಚಭಿಃ ಶತೈಃ ।**
**ಲಂಕಾಯಾಂ ಮೋಹಯಿತ್ವಾ ತು ಸಬಲಂ ರಾವಣಂ ಬಲಾತ್ ॥**
**ನಿರ್ಜಿತ್ಯ ಬದ್ಧ್ವಾ ಚಾನೀಯ ಮಾಹಿಷ್ಮತ್ಯಾಂ ಬಬಂಧ ತಂ ॥ ೩೫ ॥**

**ತತೋ ಗತ್ವಾ ಪುಲಸ್ತ್ಯಸ್ತು ಅರ್ಜುನಂ ಚ ಪ್ರಸಾದಯತ್ ।**
**ಮುಮೋಚ ರಾಜಾ ಪೌಲಸ್ತ್ಯಂ ಪುಲಸ್ತ್ಯೇನಾನುಪಾಲಿತಂ ॥ ೩೬ ॥**

**ತಸ್ಯ ಬಾಹುಸಹಸ್ರಸ್ಯ ಬಭೂವ ಜ್ಯಾತಲಸ್ವನಃ ।**
**ಯುಗಾಂತೇಂಬುದವೃಕ್ಷಸ್ಯ ಸ್ಫುಟಿತಸ್ಯಾಶನೇರಿವ ॥ ೩೭ ॥**

೩೪. ಆ ಮಹಾರಾಜನ ರಭಸಕ್ಕೆ ಬಗ್ಗಿ ನಿಶ್ಚಲವಾದ ಹೆಡೆಯುಳ್ಳ ಮಹಾಸರ್ಪಗಳು ಸಾಯಂಕಾಲದಲ್ಲಿ ಗಾಳಿಯಿಲ್ಲದೇ ನಿಶ್ಚಲವಾಗಿರುವ ಬಾಳೆಯ ಎಲೆಗಳಂತೆ ಸ್ತಬ್ಧವಾಗಿದ್ದುವು.

೩೫. ಆ ಕಾರ್ತವೀರ್ಯಾರ್ಜುನನು ತನ್ನ ರಥದಲ್ಲಿ ಐನೂರು ಶರಗಳಿಂದ ಸಹಿತವಾದ ಧನುಸ್ಸನ್ನು ಕಟ್ಟಿ, ಲಂಕೆಗೆ ಹೋಗಿ ಬಲಾತ್ಕಾರವಾಗಿ ಸೈನ್ಯಸಮೇತನಾದ ರಾವಣನನ್ನು ಯುದ್ಧದಲ್ಲಿ ಜಯಿಸಿ ಸೆರೆಹಿಡಿದು ಮಾಹಿಷ್ಮತೀ ನಗರಿಗೆ ತಂದು ಬಂಧನದಲ್ಲಿ ಇರಿಸಿದನು.

೩೬. ಅನಂತರ ಆ ರಾವಣನು ಕಾರ್ತವೀರ್ಯಾರ್ಜುನನ ಬಳಿಗೆ ಹೋಗಿ ಅವನನ್ನು ಹೊಗಳಿ ಸಮಧಾನಗೊಳಿಸಿದನು. ತರುವಾಯ ಅರ್ಜುನನು ರಾವಣಕೃತ ಸ್ತೋತ್ರದಿಂದ ಪ್ರೀತನಾಗಿ ಆ ರಾವಣನನ್ನು ದಯೆಯಿಂದ ಬಿಟ್ಟನು. ಅನಂತರ ರಾವಣನು ಲಂಕೆಗೆ ಹೋದನು.

೩೭. ಅವನ ಬಾಹುಸಹಸ್ರಗಳಿಂದ ಎಳೆಯಲ್ಪಟ್ಟ ಧನುಷ್ಟಂಕಾರವು ಪ್ರಲಯಕಾಲದ ಮೇಘಗಳೆಂಬ ವೃಕ್ಷಗಳು ಮುರಿಯುವುದರಿಂದುಂಟಾಗುವ ಸಿಡಿಲಿನ ಧ್ವನಿಯಂತೆ ಭಯಂಕರವಾಗಿತ್ತು.

**ಅಹೋ ಮೃಧೇ ಮಹಾವೀರ್ಯಂ ಭಾರ್ಗವೋ ಯಸ್ಯ ಸೋಽಚ್ಛಿನತ್ ।**
**ಮೃಧೇ ಸಹಸ್ರಂ ಬಾಹೂನಾಂ ಹೇಮತಾಲವನಂ ಯಥಾ ॥ ೩೮ ॥**

**ತೃಷಿತೇನ ಕದಾಚಿತ್ಸಭಿಕ್ಷಿತಶ್ಚಿತ್ರಭಾನುನಾ ।**
**ಸಪ್ತದ್ವೀಪಾಂಶ್ಚಿತ್ರಭಾನೋಃ ಸ್ಪ್ರಾದಾದ್ಭಿಕ್ಷಾಂ ವಿಶಾಂಪತಿಃ ॥ ೩೯ ॥**

**ಪುರಾಣಿ ಘೋಷಾನ್ ಗ್ರಾಮಾಂಶ್ಚ ಪತ್ತನಾನಿ ಚ ಸರ್ವಶಃ ।**
**ಜಜ್ವಾಲ ತಸ್ಯ ಬಾಣೇಷು ಚಿತ್ರಭಾನುರ್ದಿಧಕ್ಷಯಾ ॥ ೪೦ ॥**

**ಸ ತಸ್ಯ ಪುರುಷೇಂದ್ರಸ್ಯ ಪ್ರಭಾವೇಣ ಮಹಾಯಶಾಃ ।**
**ದದಾಹ ಕಾರ್ತವೀರ್ಯಸ್ಯ ಶೈಲಾಂಶ್ಚಾಪಿ ವನಾನಿ ಚ ॥ ೪೧ ॥**

೩೮. ಆ ಕಾರ್ತವೀರ್ಯಾರ್ಜುನನ ಅಂತಹ ವೀರ್ಯವು ಬಾಹುಸಹಸ್ರಗಳು ವ್ಯರ್ಥವು. ಅಯ್ಯೋ ಪಾಪ. ಏಕೆಂದರೆ ಪರಶುರಾಮನು ತನ್ನ ಕೊಡಲಿಯಿಂದ ಆ ಸಹಸ್ರ ಭುಜಗಳನ್ನು ಸುವರ್ಣದ ತಾಳೆಮರಗಳನ್ನು ಛೇದಿಸುವಂತೆ ಕತ್ತರಿಸಿದನು ಎಂಬುದು ಆಶ್ಚರ್ಯವು.

೩೯. ಒಂದಾನೊಂದುದಿವಸ ಹಸಿವು ಬಾಯಾರಿಕೆ ಇವುಗಳಿಂದ ಪೀಡಿತನಾದ ಅಗ್ನಿದೇವನು, ಅರ್ಜುನನ ಬಳಿಗೆ ಬಂದು ಆಹಾರವನ್ನು ಬೇಡಿದನು. ಆಗ ಆ ರಾಜನು ಅಗ್ನಿದೇವನಿಗೆ ಆಹಾರಕ್ಕಾಗಿ ಸಪ್ತದ್ವೀಪಗಳನ್ನೂ ದಾನಮಾಡಿದನು.

೪೦. ಆಗ ಯಜ್ಞಪುರುಷನು ಆ ಅರ್ಜುನನ ಪಟ್ಟಣಗಳು, ಹಳ್ಳಿಗಳು, ಗ್ರಾಮಗಳು, ದೇಶಗಳು ಇವುಗಳನ್ನು ಸಂಪೂರ್ಣವಾಗಿ ದಹಿಸಲಿಚ್ಛೆಯಿಂದ ಎಲ್ಲೆಲ್ಲಿಯೂ ದೇದೀಪ್ಯಮಾನನಾದನು.

೪೧. ಆಗ ಮಹಾಕೀರ್ತಿವಂತನಾದ ಅಗ್ನಿದೇವನು, ಮಹಾನುಭಾವನೂ, ಪುರುಷಶ್ರೇಷ್ಠನೂ ಆದ ಕಾರ್ತವೀರ್ಯಾರ್ಜುನನ ಪ್ರಭಾವದಿಂದ ನಗರಾದಿಗಳನ್ನು ಬಿಟ್ಟು ಗಿರಿವನಗಳನ್ನು ಮಾತ್ರ ದಹಿಸಿದನು.

ಸ ಶೂನ್ಯಮಾಶ್ರಮಂ ಸರ್ವಂ ವರುಣಸ್ಯಾತ್ಮಜಸ್ಯ ವೈ ।
ದದಾಹ ಸವನದ್ವೀಪಾಂಶ್ಚಿತ್ರಭಾನುಃ ಸಹೈಹಯಃ ॥ ೪೨ ॥

ಸಂಲೇಭೇ ವರುಣಃ ಪುತ್ರಂ ಪುರಾ ಭಾಸ್ವಿನಮುತ್ತಮಂ ।
ವಸಿಷ್ಠನಾಮಾ ಸ ಮುನಿಃ ಖ್ಯಾತಸ್ತಾಪಃ ಶ್ರಿತಃ ಶ್ರುತಃ ॥ ೪೩ ॥

ತತ್ರಾಪದಸ್ತದಾ ಕ್ರೋಧಾದರ್ಜುನಂ ಶಪ್ತವಾನ್ವಿಭುಃ ।
ಯಸ್ಮಾನ್ನ ವರ್ಜಿತಮಿದಂ ವನಂ ತೇ ಮಮ ಹೈಹಯ ॥ ೪೪ ॥

ತಸ್ಮಾತ್ ತೇ ದುಷ್ಕರಂ ಕರ್ಮ ಕೃತಮನ್ಯೋ ಹನಿಷ್ಯತಿ ।
ಅರ್ಜುನೋ ನಾಮ ಕೌಂತೇಯೋ ನ ಚ ರಾಜಾ ಭವಿಷ್ಯತಿ ॥ ೪೫ ॥

---

೪೨. ಅನಂತರ ಯಜ್ಞಪುರುಷನು ಅರ್ಜುನನ ಸಂಗಡ ವರುಣಕುಮಾರನ ಆಶ್ರಮವೆಲ್ಲವನ್ನೂ, ವನದ್ವೀಪಗಳೇ ಮೊದಲಾದುವುಗಳನ್ನೂ ದಹಿಸಿದನು.

೪೩. ಪೂರ್ವದಲ್ಲಿ ವರುಣನು ಉತ್ತಮನಾದ ಭಾಸ್ವಿನಾಮಕ ಕುಮಾರನನ್ನು ಪಡೆದನು. ಆ ಮುನಿಯು ವಸಿಷ್ಠನಾಮದಿಂದ ಪ್ರಖ್ಯಾತನಾಗಿದ್ದನು. ಆಶ್ರಮವು ನಷ್ಟವಾದ ಕೂಡಲೇ ಜಲವನ್ನು ಆಶ್ರಯಿಸಿದನು.

೪೪. ಆ ಆಶ್ರಮವು ದಗ್ಧವಾಗಲು ವಸಿಷ್ಠಮುನಿಯು ಕೋಪಗೊಂಡು, ಎಲೈ ಕಾರ್ತವೀರ್ಯಾರ್ಜುನನೇ, ಈ ನನ್ನ ಆಶ್ರಮವನ್ನೂ ಸಹ ನೋಡದೇ ದಹಿಸಲು ಅನುಮತಿಯನ್ನು ಕೊಟ್ಟಿರುವುದರಿಂದ ನಿನಗೆ ಶಾಪವನ್ನು ಕೊಡುವೆನು.

೪೫. ಎಲೈ ರಾಜನೇ, ನೀನು ಬಹಳ ನೀಚಕಾರ್ಯವನ್ನು ಮಾಡಿರುತ್ತೀ. ಆದುದರಿಂದ ನೀನು ಪರಪುರುಷನಿಂದ ಮೃತಿಯನ್ನು ಪಡೆ. ನಿನ್ನ ನಾಮವಿರುವ ಕುಂತೀಕುಮಾರನು ನಿನ್ನ ಶೌರ್ಯವನ್ನು ಹೊಂದುವನು. ನೀನು ರಾಜನಾಗಿರಲು ಯೋಗ್ಯನಲ್ಲವೆಂದನು.

ಅರ್ಜುನ ತ್ವಾಂ ಮಹಾವೀರ್ಯೋ ರಾಮಃ ಪ್ರಹರತಾಂ ವರಃ ।
ಛಿತ್ವಾ ಬಾಹುಸಹಸ್ರಂ ವೈ ಪ್ರಮಥ್ಯ ತರಸಾ ಬಲೀ ॥ ೪೬ ॥

ತಪಸ್ವೀ ಬ್ರಾಹ್ಮಣಶ್ಚೈವ ವಧಿಷ್ಯತಿ ಮಹಾಬಲಃ ।
ತಸ್ಯ ರಾಮಸ್ತದಾ ಹ್ಯಾಸೀನ್ಮೃತ್ಯುಶಾಪೇನ ಧೀಮತಃ ॥ ೪೭ ॥

ರಾಜ್ಞಾ ತೇನ ವರಶ್ಚೈವ ಸ್ವಯಮೇವ ವೃತಃ ಪುರಾ ।
ತಸ್ಯ ಪುತ್ರಶತಂ ಹ್ಯಾಸೀತ್ ಪಂಚ ತತ್ರ ಮಹಾರಥಾಃ ॥ ೪೮ ॥

ಕೃತಾಸ್ತ್ರಾ ಬಲಿನಃ ಶೂರಾ ಧರ್ಮಾತ್ಮಾನೋ ಯಶಸ್ವಿನಃ ।
ಶೂರಶ್ಚ ಶೂರಸೇನಶ್ಚ ವೃಷ್ಣ್ಯಾದ್ಯಂ ವೃಷ ಏವ ಚ ॥ ೪೯ ॥

೪೬. ಎಲೈ ಕಾರ್ತವೀರ್ಯಾರ್ಜುನನೇ, ಮಹಾಶೂರನೂ, ಶತ್ರುನಾಶಕರಲ್ಲಿ ಅಗ್ರಗಣ್ಯನೂ, ಬಲಿಷ್ಠನೂ ಆದ ಪರಶುರಾಮನು ಅನಾಯಾಸದಿಂದ ನಿನ್ನ ಸಹಸ್ರ ಭುಜಗಳನ್ನು ಛೇದಿಸಿ ಸಂಹರಿಸುವನು.

೪೭. "ಆ ಪರಶುರಾಮನು ತಪಸ್ವಿಯೂ, ಬ್ರಾಹ್ಮಣನೂ, ಮಹಾಬಲಿಷ್ಠನೂ ಆಗಿರುವುದರಿಂದ ನಿನ್ನನ್ನು ಸಂಹರಿಸುವನು" ಎಂದು ಜ್ಞಾನಿಯಾದ ವಸಿಷ್ಠಮುನಿಯು ಶಾಪ ಕೊಟ್ಟನು.

೪೮. ಹೀಗೆ ಮುನಿಯಿಂದ ಶಾಪವನ್ನು ಹೊಂದಿದ ಅರ್ಜುನನು ಪೂರ್ವದಲ್ಲಿ ಆ ಮುನಿಯಿಂದ ವರವನ್ನೂ ಕೂಡ ಪಡೆದಿದ್ದನು. ಆದುದರಿಂದ ಆ ಅರ್ಜುನನಿಗೆ ನೂರಾರುಜನ ಪುತ್ರರಿದ್ದರು. ಅವರಲ್ಲಿ ಐದು ಕುಮಾರರು ಮಹಾರಥಿಕರಾಗಿದ್ದರು.

೪೯. ಆ ತನಯರು ಅಸ್ತ್ರಜ್ಞರೂ, ಬಲಶಾಲಿಗಳೂ, ಶೂರರೂ, ಧರ್ಮಸ್ವಭಾವಿಗಳೂ, ಕೀರ್ತಿಯುತರೂ ಆಗಿದ್ದರು. ಆ ಮಕ್ಕಳಲ್ಲಿ ಶೂರ, ಶೂರಸೇನ, ವೃಷ್ಣ್ಯಾದ್ಯ, ವೃಷ ಮತ್ತು ಜಯಧ್ವಜರೆಂಬ ಐವರು ರಾಜಕುಮಾರರಾಗಿ ಅವಂತೀ ದೇಶದಲ್ಲಿ ಪ್ರಖ್ಯಾತರಾಗಿದ್ದರು.

ಜಯಧ್ವಜಶ್ಚ ವೈ ಪುತ್ರಾ ಅವಂತಿಷು ವಿಶಾಂಪತೇಃ ।
ಜಯಧ್ವಜಸ್ಯ ಪುತ್ರಸ್ತು ತಾಲಜಂಘಃ ಪ್ರತಾಪವಾನ್ ॥ ೫೦ ॥

ತಸ್ಯ ಪುತ್ರಶತಂ ಹ್ಯೇವ ತಾಲಜಂಘಾ ಇತಿ ಶ್ರುತಂ ।
ತೇಷಾಂ ಪಂಚಗಣಾಃ ಖ್ಯಾತಾ ಹೈಹಯಾನಾಂ ಮಹಾತ್ಮನಾಂ ॥ ೫೧ ॥

ವೀರಹೋತ್ರಾ ಹ್ಯಸಂಖ್ಯಾತಾ ಭೋಜಾಶ್ಚಾವರ್ತಯಸ್ತಥಾ ।
ತುಂಡಿಕೇರಾಶ್ಚ ವಿಕ್ರಾಂತಾಸ್ತಾಲಜಂಘಾಸ್ತಥೈವ ಚ ॥ ೫೨ ॥

ವೀರಹೋತ್ರಸುತಶ್ಚಾಪಿ ಅನಂತೋ ನಾಮ ಪಾರ್ಥಿವಃ ।
ದುರ್ಜಯಸ್ತಸ್ಯ ಪುತ್ರಸ್ತು ಬಭೂವಾಮಿತ್ರದರ್ಶನಃ ॥ ೫೩ ॥

ಅನಷ್ಟದ್ರವ್ಯತಾ ಚೈವ ತಸ್ಯ ರಾಜ್ಞೋ ಬಭೂವ ಹ ।
ಪ್ರಭಾವೇಣ ಮಹಾರಾಜಃ ಪ್ರಜಾಸ್ತಾಃ ಪರ್ಯಪಾಲಯತ್ ॥ ೫೪ ॥

---

೫೦. ಅವಂತೀದೇಶದ ದೊರೆಯಾದ ಜಯಧ್ವಜಮಹಾರಾಜನಿಗೆ ಪ್ರತಾಪ ಶಾಲಿಯಾದ, ತಾಲಜಂಘನಾಮಕನಾದ ಕುಮಾರನು ಜನಿಸಿ ಪ್ರಖ್ಯಾತನಾಗಿದ್ದನು.

೫೧. ಆ ತಾಲಜಂಘನಿಗೆ ನೂರಾರು ಮಕ್ಕಳಿದ್ದರು. ಅವರೆಲ್ಲರೂ ತಾಲ ಜಂಘರೆಂದೇ ಪ್ರಸಿದ್ಧರಾಗಿದ್ದರು. ಮಹಾತ್ಮರೂ ಹೇಹಯವಂಶೀಕರೂ ಆದ ಆ ತಾಲಜಂಘರಲ್ಲಿ ಐದು ಮಹಾಗಣಗಳು ಸುಪ್ರಸಿದ್ಧಗಳಾಗಿವೆ.

೫೨. ವೀರಹೋತ್ರರೂ, ಭೋಜರೂ, ಆವರ್ತಯರೂ, ತುಂಡಿಕೇರರೂ, ವಿಕ್ರಾಂತರೂ, ತಾಲಜಂಘರೂ ಎಂಬುದಾಗಿ ಅವರು ಖ್ಯಾತರಾಗಿರುವರು.

೫೩. ವೀರಹೋತ್ರನಿಗೆ ಅನಂತನೆಂಬ ರಾಜಕುಮಾರನು ಉದ್ಭವಿಸಿದನು. ಅವನಿಗೆ ದುರ್ಜಯನೆಂಬ ತನಯನೂ, ಅವನಿಗೆ ಅಮಿತ್ರದರ್ಶನನೆಂಬ ಪುತ್ರನೂ ಉದ್ಭವಿಸಿದರು.

೫೪. ಆ ರಾಜನ ದೇಶದಲ್ಲಿ ಯಾರಿಗೂ ದ್ರವ್ಯಹಾನಿಯು ಆಗುತ್ತಿರಲಿಲ್ಲ. ಆ ಮಹಾರಾಜನು ತನ್ನ ಪ್ರಭಾವದಿಂದ ಪ್ರಜೆಗಳನ್ನು ಪಾಲಿಸುತ್ತಿದ್ದನು.

ನ ತಸ್ಯ ವಿತ್ತನಾಶಶ್ಚ ನಷ್ಟಂ ಪ್ರತಿಲಭೇತ ಸಃ ।
ಕಾರ್ತವೀರ್ಯಸ್ಯ ಯೋ ಜನ್ಮ ಕಥಯೇದಿಹ ಧೀಮತಃ ॥ ೩೫ ॥

ವಿತ್ತವಾನ್ ಭವತ್ಯತ್ರೈವ ಧರ್ಮಶ್ಚಾಸ್ಯ ವಿವರ್ಧತೇ ।
ಯಥಾ ತ್ವಷ್ಟಾ ಯಥಾ ದಾತಾ ತಥಾ ಸ್ವರ್ಗೇ ಮಹೀಯತೇ ॥ ೩೬ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಕಾರ್ತವೀರ್ಯಾರ್ಜುನೋತ್ಪತ್ತಿ ವಿವರಣಂ" ನಾಮ ದ್ವಾತ್ರಿಂಶೋಽಧ್ಯಾಯಃ

---

೩೫–೩೬. ಆ ದೇಶದಲ್ಲಿ ದ್ರವ್ಯನಾಶವು ಯಾರಿಗೂ ಎಂದಿಗೂ ಆಗುತ್ತಿರಲಿಲ್ಲ ನಷ್ಟವಾದ ಧನವು ಕೂಡಲೇ ದೊರೆಯುತ್ತಿತ್ತು. ಕಾರ್ತವೀರ್ಯಾರ್ಜುನನ ಜನ್ಮ ವೃತ್ತಾಂತವನ್ನು ಯಾವನು ಕೇಳುವನೋ, ಅವನು ಮಹಾಭಾಗ್ಯವಂತನೂ, ಧರ್ಮಾತ್ಮನೂ, ಆಗುವನು. ಅವನ ಧರ್ಮವು ವೃದ್ಧಿಯಾಗುವುದು. ಆ ಪುರುಷನು ವಿಶ್ವಕರ್ಮನಂತೆಯೂ, ದಾತೃವಿನಂತೆಯೂ. ಸ್ವರ್ಗಲೋಕದಲ್ಲಿ ಮಾನ್ಯನಾಗುವನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಕಾರ್ತವೀರ್ಯಾರ್ಜುನನ ಉತ್ಪತ್ತಿಕಥನ" ವೆಂಬ ಮೂವತ್ತೆರಡನೆಯ ಅಧ್ಯಾಯವು ಮುಗಿದುದು



## ಮೂವತ್ತೆರಡನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಕಾರ್ತವೀರ್ಯಾರ್ಜುನನ ಉತ್ಪತ್ತಿಕ್ರಮವು ಉಕ್ತವಾಗಿದೆ. ಯದುಮಹಾರಾಜನಿಗೆ ಸಹಸ್ರಜಿತ್, ಶ್ರೇಷ್ಠ, ಕ್ರೋಷ್ಟು, ನೀಲ ಮತ್ತು ಜಿತನೆಂಬ ಐದು ಜನ ಕುಮಾರರೂ, ಅವರಿಗೆ ಮಹಿಷ್ಮಂತನೇ ಮೊದಲಾದ ಪುತ್ರರೂ ಜನಿಸಿದರು. ಈ ವಂಶದಲ್ಲಿಯೆ ಕನಕನೆಂಬ ರಾಯನೂ, ಅವನಿಗೆ ಕಾರ್ತವೀರ್ಯನೇ ಮೊದಲಾದ ತನಯರೂ ಉದ್ಭವಿಸಿದರು. ಅವನಿಗೆ ಕಾರ್ತವೀರ್ಯಾರ್ಜುನನು ಹುಟ್ಟಿದನು. ಅವನಿಗೆ ಸಹಸ್ರಭುಜಗಳಿದ್ದುವು. ಆ ಅರ್ಜುನನು ಸಪ್ತದ್ವೀಪಗಳಿಗೆ ಅಧಿಪತಿಯಾಗಿ ಅನೇಕ ಯಾಗಗಳನ್ನು ಮಾಡಿ ಸಪ್ತದ್ವೀಪಗಳಲ್ಲಿಯೂ ಸುವರ್ಣ ಮಯವಾದ ಯೂಪಸ್ತಂಭಗಳನ್ನು ಸ್ಥಾಪಿಸಿರುವನು. ಅವನು ಸಹಸ್ರಭುಜಗಳೊಡನೇ ಸಮುದ್ರದಲ್ಲಿ ಜಲಕ್ರೀಡೆಯನ್ನಾಡಲು ಕ್ಷೀರಸಾಗರವು ಮಂದರಗಿರಿಯಿಂದ ಮಥಿಸಿ ದಂತೆ ಅಲ್ಲೋಲಕಲ್ಲೋಲವಾಗುವುದು. ಅವನು ರಾವಣನನ್ನು ಜಯಿಸಿ ಸೆರೆ ಯಲ್ಲಿಟ್ಟನು. ಅವನು ಅಗ್ನಿದೇವನಿಂದ ವಸಿಷ್ಠಮುನಿಯ ಆಶ್ರಮವನ್ನು ದಹನ ಮಾಡಿಸಲು ಕುಪಿತನಾದ ಮುನಿಯು ಪರಶುರಾಮನಿಂದ ನಿನಗೆ ಮರಣವು ಸಂಭವಿಸ ಲೆಂದು ಶಾಪವನ್ನು ಕೊಟ್ಟನು. ಅವನ ವಂಶದಲ್ಲಿ ಶೂರ ಶೂರಸೇನ ಇವರೇ ಮೊದಲಾದವರು ಜನಿಸಿ ಆ ವಂಶವು ಅತಿವಿಶಾಲವೂ, ಪ್ರಖ್ಯಾತವೂ ಆಯಿತು. ಎಂಬ ವಿಷಯವು ಈ ಅಧ್ಯಾಯದಲ್ಲಿ ನಿರೂಪಿತವಾಗಿದೆ.

—|| ಹರಿಃ ಓಂ ||—

—|| ಶ್ರೀ ವೇದವ್ಯಾಸಾಯ ನಮಃ ||—

# ಶ್ರೀಮದ್ವಾಯುಮಹಾಪುರಾಣಂ

## ತ್ರಯಸ್ತ್ರಿಂಶೋಽಧ್ಯಾಯಃ

|| ಋಷಯ ಊಚುಃ ||

**ಕಿಮರ್ಥಂ ಭುವನಂ ದಗ್ಧಮುಷವಸ್ಯಂ ಮಹಾತ್ಮನಾಂ |**
**ಕಾರ್ತವೀರ್ಯೇಣ ವಿಕ್ರಮ್ಯ ತನ್ನಃ ಪ್ರಬ್ರೂಹಿ ಪೃಚ್ಛತಾಂ || ೧ ||**

**ರಕ್ಷಿತಾ ಸ ತು ರಾಜರ್ಷಿಃ ಪ್ರಜಾವಾನಪಿ ನಃ ಶ್ರುತಂ |**
**ಕಥಂ ಸ ರಕ್ಷಿತಾ ಭೂತ್ವಾ ನಾಶಯತ್ತತ್ತಪೋವನಂ || ೨ ||**

|| ಸೂತ ಉವಾಚ ||

**ಆದಿತ್ಯೋ ವಿಪ್ರರೂಪೇಣ ಕಾರ್ತವೀರ್ಯಮುಪಸ್ಥಿತಃ |**
**ತೃಪ್ತಿಕಾಮಃ ಪ್ರಯಚ್ಛಾನ್ನಮಾದಿತ್ಯೋಽಹಂ ನ ಸಂಶಯಃ || ೩ ||**

---

## ಮೂವತ್ತಮೂರನೆಯ ಅಧ್ಯಾಯವು

೧–೨. ಮುನಿಗಳು ಕೇಳಿದರು :—ಎಲೈ ಸೂತಮುನಿಯೇ, ಮಹಾತ್ಮನಾದ ಕಾರ್ತವೀರ್ಯಾರ್ಜುನನು ಮಹಾತ್ಮರಾದ ಮಹರ್ಷಿಗಳ ತಪೋವನಗಳೇ ಮೊದಲಾದುವುಗಳನ್ನು ಏತಕ್ಕಾಗಿ ಸುಡಿಸಿದನು? ಆ ರಾಜನು ಪ್ರಜೆಗಳನ್ನು ಧರ್ಮದಿಂದ ಪಾಲಿಸಿದನೆಂದೂ ಅನೇಕ ಸಹಸ್ರ ಅದ್ಭುತವಾದ ಯಾಗಗಳನ್ನು ಮಾಡಿದನೆಂದೂ, ಕೇಳಿರುತ್ತೇವೆ. ಅಂತಹ ಮಹಾತ್ಮನು ಗ್ರಾಮ–ನಗರ–ತಪೋವನಾದಿಗಳನ್ನು ದಹನ ಮಾಡಿಸಲು ಕಾರಣವೇನೆಂದು ಮುನಿಗಳು ಕೇಳಿದರು.

೩. ಸೂತಮುನಿಯು ಹೇಳಿದನು:—ಒಂದಾನೊಂದು ದಿವಸ ಸೂರ್ಯನು ವಿಪ್ರವೇಷದಿಂದ ಕಾರ್ತವೀರ್ಯಾರ್ಜುನನ ಬಳಿಗೆ ಬಂದು ಎಲೈ ರಾಜನೇ, ನನಗೆ ಬಹಳ ಹಸಿವಾಗಿದೆ. ನನಗೆ ಯೋಗ್ಯವಾದ ಆಹಾರವನ್ನು ಕೊಡು. ನಾನು ಸೂರ್ಯನು, ನಿನ್ನ ಬಳಿಗೆ ಈ ವೇಷದಿಂದ ಯಾಚಿಸಲು ಬಂದಿರುವೆನು. ಸಂದೇಹ ಬೇಡವೆಂದು ಹೇಳಿದನು.

|| ರಾಜೋವಾಚ ||

ಭಗವನ್ ಕೇನ ತೇ ತುಷ್ಟಿರ್ಭವೇದ್ ಬ್ರೂಹಿ ದಿವಾಕರ |
ಕೀದೃಶಂ ಭೋಜನಂ ದದ್ಮಿ ಶ್ರುತ್ವಾ ಚ ವಿದಧಾಮ್ಯಹಂ || ೪ ||

|| ಸೂರ್ಯ ಉವಾಚ ||

ಸ್ಥಾವರಂ ದೇಹಿ ಮೇ ಸರ್ವಮಾಹಾರಂ ದದತಾಂ ವರ |
ತೇನ ತೃಪ್ತೋ ಭವೇಯಂ ವೈ ನ ತುಷ್ಯೇಽನ್ಯೇನ ಪಾರ್ಥಿವ || ೫ ||

|| ರಾಜೋವಾಚ ||

ನ ಶಕ್ಯಂ ಸ್ಥಾವರಂ ಸರ್ವಂ ತೇಜಸಾ ಮಾನುಷೇಣ ತು |
ನಿರ್ದಗ್ಧುಂ ತಪತಾಂ ಶ್ರೇಷ್ಠ ತ್ವಾಮೇವ ಪ್ರಣಮಾಮ್ಯಹಂ || ೬ ||

|| ಆದಿತ್ಯ ಉವಾಚ ||

ತುಷ್ಟಸ್ತೇಽಹಂ ಶರಾನ್ ದದ್ಮಿ ಅಕ್ಷಯಾನ್ ಸರ್ವತಃ ಸುಖಾನ್ |
ಪ್ರಕ್ಷಿಪ್ತಾಃ ಪ್ರಜ್ವಲಿಷ್ಯಂತಿ ಮಮ ತೇಜಃ ಸಮನ್ವಿತಾಃ || ೭ ||

---

೪. ರಾಜನು ಹೇಳಿದನು :— ಅನಂತರ ರಾಜನು, ಎಲೈ ಪೂಜ್ಯನಾದ ಸೂರ್ಯದೇವನೇ, ನಿನಗೆ ಏತರಿಂದ ತೃಪ್ತಿಯಾಗುವುದು ? ಎಂತಹ ಆಹಾರವನ್ನು ಕೊಡಲಿ ? ನೀನು ಯಾವುದನ್ನು ಕೇಳಿದರೂ ಕೊಡುತ್ತೇನೆಂದು ಹೇಳಿದನು.

೫. ಸೂರ್ಯದೇವನು ಹೇಳಿದನು :— ಜ್ಞಾನಿಶ್ರೇಷ್ಠನಾದ ಮಹಾರಾಜನೇ, ಸ್ಥಾವರರೂಪಗಳಿಂದ ವನಗಿರ್ಯಾದಿಗಳನ್ನು ಆಹಾರವನ್ನಾಗಿಕೊಡು. ಅವು ಗಳಿಂದಲೇ ನನಗೆ ತೃಪ್ತಿಯಾಗುವುದು. ಬೇರೆ ಏತರಿಂದಲೂ ತೃಪ್ತಿಯಾಗದೆಂದು ಹೇಳಿದನು.

೬. ಆಗ ರಾಜನು ಇಂತೆಂದನು :— ಎಲೈ ಮಿತ್ರನೇ, ಮನುಷ್ಯ ತೇಜಸ್ಸಿನಿಂದ ಸಮಸ್ತವಾದ ಸ್ಥಾವರ ಪದಾರ್ಥಗಳನ್ನು ದಹಿಸಲು ಸಾಧ್ಯವೇ ಇಲ್ಲ. ಆದುದರಿಂದ ಪ್ರತಾಪಶಾಲಿಯಾದ ನಿನಗೆ ವಂದನೆಗಳೆಂದನು.

೭. ಸೂರ್ಯದೇವನು ಹೇಳಿದನು :— ಎಲೈ ಮಹಾರಾಜನೇ, ಸಂತುಷ್ಟನಾದ ನಾನು ನಿನಗೆ ಅಕ್ಷಯಗಳೂ, ಅತ್ಯಂತ ಸುಖಕರಗಳೂ, ಆದ ಬಾಣಗಳನ್ನು ಕೊಡುವೆನು. ನನ್ನ ಶಕ್ತಿಯಿಂದ ಯುಕ್ತವಾದ ಆ ಬಾಣಗಳನ್ನು ಬಿಟ್ಟರೆ ಅವು ಸರ್ವವಸ್ತುಗಳನ್ನೂ ದಹಿಸಿಬಿಡುತ್ತವೆಯೆಂದನು.

ಆದಿಷ್ಟಂ ತೇಜಸಾ ಮೇಘಸಾಗರಂ ಶೋಷಯಿಶ್ಯತಿ ।
ಶುಷ್ಕಂ ಭಸ್ಮ ಕರಿಷ್ಯಾಮಿ ತೇನ ಪ್ರೀತೋ ನರಾಧಿಪ ॥ ೮ ॥

ತತಃ ಶರಾನಥಾದಿತ್ಯಸ್ತ್ವರ್ಜನಾಯ ಪ್ರಯಚ್ಛತಿ ।
ತತಃ ಸಂಪ್ರಾಪ್ಯ ಸುಮುಹಸ್ಥಾವರಂ ಸರ್ವಮೇವ ಹಿ ॥ ೯ ॥

ಆಶ್ರಮಾನಥ ಗ್ರಾಮಾಂಶ್ಚ ಘೋಷಾಂಶ್ಚ ನಗರಾಣಿ ಚ ।
ತಪೋವನಾನಿ ರಮ್ಯಾಣಿ ವನಾನ್ಯುಪವನಾನಿ ಚ ॥ ೧೦ ॥

ಏವಂ ಪ್ರಾಚೀನಮುದಗುತ್ತತಃ ಸೂರ್ಯಪ್ರದಕ್ಷಿಣಂ ।
ನಿರ್ವೃಕ್ಷಾ ನಿಸ್ತೃಣಾ ಭೂಮಿರ್ದಗ್ಧಾ ಸೂರ್ಯೇಣ ತೇಜಸಾ ॥ ೧೧ ॥

---

೮. ತೇಜಸ್ಸುಗಳಿಂದ ಕೂಡಿದ ಆ ಶರಗಳು. ಮೇಘ ಸಮುದ್ರ ಇವುಗಳನ್ನು ಶೋಧಿಸಿಬಿಡುತ್ತವೆ. ಎಲೈ ರಾಜನೆ. ನಿನ್ನ ಅನುಗ್ರಹವಿದ್ದರೆ ಎಲ್ಲವನ್ನೂ ಸುಟ್ಟು ಭಸ್ಮವನ್ನಾಗಿ ಮಾಡುವೆನು.

೯. ಅನಂತರದಲ್ಲಿ ಸೂರ್ಯನು ಹೀಗೆ ಹೇಳಿ ಕಾರ್ತವೀರ್ಯಾರ್ಜುನನಿಗೆ ಬಾಣಗಳನ್ನು ಕೊಟ್ಟನು. ಅನಂತರ ಅವನು ಅವನ್ನು ಹೊಂದಿ ಸ್ಥಾವರರೂಪವೂ. ಮಹತ್ತೂ ಆದ ಸರ್ವವನ್ನೂ ದಹಿಸಿದನು.

೧೦. ಅವನು ಆ ಬಾಣಗಳನ್ನು ಸ್ವೀಕರಿಸಿ. ಆಶ್ರಮ, ಗ್ರಾಮ, ಹಳ್ಳಿ, ನಗರ, ತಪೋವನ, ಸುಂದರವಾದ ಉಪವನ ಮತ್ತು ವಟ್ಟವಾದ ಅರಣ್ಯ ಇವುಗಳನ್ನು ಸುಟ್ಟು ಭಸ್ಮಮಾಡಿದನು.

೧೧. ಅನಂತರ ಹೀಗೆ ಬಹಳ ಪುರಾತನವಾದ ಗ್ರಾಮ, ನಗರಾದಿಗಳು ಸೂರ್ಯನ ತೇಜಸ್ಸಿನಿಂದ ಭಸ್ಮವಾದುವು. ಅನಂತರ ಸೂರ್ಯನು ಪ್ರದಕ್ಷಿಣಾಕಾರವಾಗಿ ಸುತ್ತಿ ನೋಡಲು, ಭೂಮಿಯಲ್ಲಿ ತೃಣಗಳೂ, ವೃಕ್ಷಗಳೂ, ಗುಲ್ಮಗಳೂ, ಲತೆಗಳೂ, ಇವೇ ಮೊದಲಾದುವು ತೇಜಸ್ಸಿನಿಂದ ದಗ್ಧವಾಗಿದ್ದುವು.

**ಏತಸ್ಮಿನ್ನೇವ ಕಾಲೇ ತು ಅಪ್ಸೋ ನಿಲಯಮಾಶ್ರಿತಃ ।**
**ದಶವರ್ಷಸಹಸ್ರಾಣಿ ಜಲವಾಸಾ ಮಹಾನೃಷಿಃ ॥ ೧೨ ॥**

**ಪೂರ್ಣೇ ವ್ರತೇ ಮಹಾತೇಜಾ ಉದತಿಷ್ಠತ್ತಪೋಧನ ।**
**ಸೋಽಪಶ್ಯದಾಶ್ರಮಂ ದಗ್ಧಮರ್ಜುನೇನ ಮಹಾನೃಷಿಃ ॥**
**ಕ್ರೋಧಾಚ್ಛಶಾಪ ರಾಜರ್ಷಿಂ ಕೀರ್ತಿತಂ ವೋ ಯಥಾ ಮಯಾ ॥ ೧೩ ॥**

**॥ ಸೂತ ಉವಾಚ ॥**

**ಕ್ರೋಷ್ಟೋಃ ಶೃಣುತ ರಾಜರ್ಷೇರ್ವಂಶಮುತ್ತಮಪೂರುಷಂ ।**
**ಯಸ್ಯಾನ್ವವಾಯೇ ಸಂಭೂತೋ ವೃಷ್ಣಿರ್ವೃಷ್ಣಿಕುಲೋದ್ವಹಃ ॥ ೧೪ ॥**

**ಕ್ರೋಷ್ಟೋರೇಕೋಽಭವತ್ ಪುತ್ರೋ ವೃಜಿನೀವಾನ್ ಮಹಾಯಶಾಃ ।**
**ವಾರ್ಜಿನೀವತಮಿಚ್ಛಂತಿ ಸ್ವಾಹಿಂ ಸ್ವಾಹೋವತಾಂ ವರಂ ॥ ೧೫ ॥**

೧೨. ಇಷ್ಟರಲ್ಲಿ ಒಬ್ಬಾನೊಬ್ಬ ವಸಿಷ್ಠನಾಮಕ ಮುನಿಯು ಹತ್ತು ಸಾವಿರ ವರ್ಷಗಳವರೆಗೂ ಜಲದಲ್ಲಿ ವಾಸಿಸಿ ಘೋರವಾದ ತಪಸ್ಸನ್ನು ಮಾಡುತ್ತಿದ್ದನು.

೧೩. ಆ ತಪೋಧನನಾದ ಮಹರ್ಷಿಯು ಆ ತಪಸ್ಸು ಪೂರ್ಣವಾಗಲಾಗಿ ಮಹಾತೇಜಸ್ಸಿನಿಂದ ಕೂಡಿ ತನ್ನ ಆಶ್ರಮಕ್ಕೆ ಬಂದು ನೋಡಲಾಗಿ ಅರ್ಜುನನಿಂದ ಅದು ದಗ್ಧವಾಗಿದೆಯೆಂದು ತಿಳಿದು ಅತ್ಯಂತ ಕೋಪದಿಂದ ಆ ರಾಜರ್ಷಿಗೆ ಶಾಪವನ್ನು ಕೊಟ್ಟನು. ಈ ಶಾಪದ ವಿಚಾರವನ್ನು ನಾನು ನಿಮಗೆ ಮೊದಲೇ ತಿಳಿಸಿರುತ್ತೇನೆ ಎಂದನು.

೧೪. ಸೂತಮುನಿಯು ಹೇಳಿದನು:—ಎಲೈ ಮಹರ್ಷಿಗಳೇ, ಕ್ರೋಷ್ಟು ಮಹಾರಾಜನ ಉತ್ತಮರಾದ ಪುರುಷರಿರುವ ವಂಶವನ್ನು ನಿಮಗಾಗಿ ನಿರೂಪಿಸುವೆನು ಕೇಳಿರಿ. ಆ ರಾಜರ್ಷಿಯ ಕುಲದಲ್ಲಿ ವೃಷ್ಣಿಕುಲಕ್ಕೆ ಮೂಲಪುರುಷನಾದ ವೃಷ್ಣಿಯೆಂಬ ಮಹಾರಾಜನು ಜನಿಸಿದನು.

೧೫. ಕ್ರೋಷ್ಟುರಾಜನಿಗೆ ವೃಜಿನೀವಂತನೆಂಬ ಕೀರ್ತಿವಂತನಾದ ಕುಮಾರನು ಜನಿಸಿದನು. ಆ ವೃಜಿನೀವಂತನಿಗೆ ಯಾಜಕರಲ್ಲಿ ಉತ್ತಮನಾದ ಸ್ವಾಹಿ ಎಂಬ ಕುಮಾರನು ಜನಿಸಿದನು.

ಸ್ವಾಹೇಃ ಪುತ್ರೋ ಭವದ್ರಾಜಾ ರಶಾದುರ್ದಹತಾಂ ವರಃ ।
ಘೃತಂ ಪ್ರಸೂತ ಮಿಚ್ಛಂತಿ ರಶಾದೋರಗ್ರ್ಯಮಾತ್ಮಜಂ || ೧೬ ||

ಮಹಾಕ್ರತುಭಿರೀಜೇ ಸ ವಿವಿಧೈರಾಪ್ತದಕ್ಷಿಣೈಃ ।
ಚಿತ್ರೈಶ್ಚಿತ್ರರಥಸ್ತಸ್ಯ ಪುತ್ರಕರ್ಮಭಿರನ್ವಿತಃ || ೧೭ ||

ಏವಂ ಚಿತ್ರರಥೋ ವೀರೋ ಯಜ್ವಾನ್ ವಿಪುಲದಕ್ಷಿಣಾನ್ ।
ಶಶಬಿಂದುಃ ಪರಂ ವೃತ್ತೋ ರಾಜರ್ಷೀಣಾಮನುಷ್ಠಿತಃ || ೧೮ ||

ಚಕ್ರವರ್ತೀ ಮಹಾಸತ್ತ್ವೋ ಮಹಾವೀರ್ಯೋ ಬಹುಪ್ರಜಃ ।
ತತ್ರಾನುವಂಶಶ್ಲೋಕೋಽಯಂ ಯಸ್ಮಿನ್ ಗೀತಃ ಪುರಾವಿದೈಃ || ೧೯ ||

೧೬. ಆ ಸ್ವಾಹಿಯೆಂಬುವನಿಗೆ ದಾತೃಗಳಲ್ಲಿ ಅಗ್ರಗಣ್ಯನೂ, ರಶಾದುನಾಮಕನೂ, ಆದ ರಾಜಕುಮಾರನು ಉದ್ಭವಿಸಿದನು. ಆ ರಶಾದುವಿಗೆ ಲೋಕೋತ್ತಮನೂ ಅತ್ಯಂತ ಶೂರನೂ, ಆದ ಘೃತನೆಂಬ ಕುಮಾರನು ಹುಟ್ಟಿದನು.

೧೭. ಆ ರಾಯನು ನಾನಾವಿಧಗಳೂ, ಪ್ರಿಯಗಳೂ ಆದ ದಕ್ಷಿಣೆಗಳುಳ್ಳ ವಿಚಿತ್ರವಾದ ಮಹಾಯಾಗಗಳನ್ನು ಮಾಡಿ ಪ್ರಸಿದ್ಧನಾಗಿದ್ದನು. ಅವನಿಗೆ ಸತ್ಕರ್ಮಗಳನ್ನು ಮಾಡತಕ್ಕ ಅರ್ಹನಾದ ಚಿತ್ರರಥನೆಂಬ ತನಯನು ಜನಿಸಿದನು.

೧೮. ಹೀಗೆ ಆ ಚಿತ್ರರಥನು ಅತಿ ಶೂರನಾಗಿ ಭೂರಿದಕ್ಷಿಣೆಯುಳ್ಳ ಮಹಾಯಾಗಗಳನ್ನು ಮಾಡಿದನು. ಆ ಚಿತ್ರರಥನಿಗೆ ರಾಜರ್ಷಿಗಳಲ್ಲಿ ಶ್ರೇಷ್ಠನೂ, ಸದಾಚಾರ ಸಂಪನ್ನನೂ ಆದ ಶಶಬಿಂದುವೆಂಬ ಪುತ್ರನು ಜನಿಸಿದನು.

೧೯. ಆ ಶಶಬಿಂದುವು ಸಾರ್ವಭೌಮನೂ, ಮಹಾಬಲಿಷ್ಠನೂ, ಮಹಾಶೂರನೂ, ಬಹು ಸಂತಾನವುಳ್ಳವನೂ ಆಗಿದ್ದನು. ಅವನ ವಿಷಯದಲ್ಲಿ ಪ್ರಾಚೀನರಾದ ಮಹರ್ಷಿಗಳು ಈ ಶ್ಲೋಕವನ್ನು ಹೇಳುವರು.

**ಶಶಬಿಂದೋಸ್ತು ಪುತ್ರಾಣಾಂ ಶತಾನಾಮುಭವಚ್ಛತಂ ।**
**ಧೀಮತಾಮನುರೂಪಾಣಾಂ ಭೂರಿದ್ರವಿಣತೇಜಸಾಂ ॥ ೨೦ ॥**

**ತೇಷಾಂ ಷಟ್ ಚ ಪ್ರಧಾನಾಸ್ತು ಪೃಥುಷಾಟ್ಕಾ ಮಹಾಬಲಾಃ ।**
**ಪೃಥುಶ್ರವಾಃ ಪೃಥುಯಶಾಃ ಪೃಥುಧರ್ಮಾ ಪೃಥುಂಜಯಃ ॥ ೨೧ ॥**

**ಪೃಥುಕೀರ್ತಿಃ ಪೃಥುಂದಾತಾ ರಾಜಾನಃ ಶಶಾಬಿಂದವಾಃ ।**
**ಶಂಸಂತಿ ಚ ಪುರಾಣಾನಿ ಪಾರ್ಥಶ್ರವಸಮಂತರಂ ।**
**ಅಂತರಃ ಸ ಪುರಾ ಯಸ್ತು ಯಜ್ಞಸ್ಯ ತನಯೋಽಭವತ್ ॥ ೨೨ ॥**

**ಉಶನಾ ಸುತಧರ್ಮಾತ್ಮಾ ಅವಾಪ್ಯ ಪೃಥಿವೀಮಿಮಾಂ ।**
**ಆಜಹಾರಾಶ್ವಮೇಧಾನಾಂ ಶತಮುತ್ತಮಧಾರ್ಮಿಕಃ ॥ ೨೩ ॥**

೨೦. ಆ ಶಶಬಿಂದುವಿಗೆ ನೂರಾರು ಜನ ಮಕ್ಕಳು ಇದ್ದರು. ಅವರಲ್ಲಿ ಪ್ರತಿಯೊಬ್ಬರಿಗೂ ಮಹಾಜ್ಞಾನಿಗಳೂ, ಸುಂದರರೂ, ಅಧಿಕವಾದ ಐಶ್ವರ್ಯ, ತೇಜಸ್ಸು, ಶೌರ್ಯ, ಇವುಗಳುಳ್ಳವರೂ ಆದ ನೂರಾರು ಜನ ಮಕ್ಕಳು ಜನಿಸಿದರು

೨೧—೨೨. ಆ ಶಶಬಿಂದುವಿನ ಕುಮಾರರಲ್ಲಿ ಅತ್ಯಂತ ಶೂರರಾದವರು ಆರು ಜನಗಳಿರುವರು. ಅವರು ಯಾರಂದರೆ :—ಪೃಥುಶ್ರವಸ್ಸು, ಪೃಥುಯಶಸ, ಪೃಥುಧರ್ಮ, ಪೃಥುಂಜಯ, ಪೃಥುಕೀರ್ತಿ, ಪೃಥುಂದಾತರೆಂಬವರು. ಈ ರಾಜರು ಮಹಾಶೂರರೂ ಶಶಬಿಂದುವಿನ ವಂಶದವರೂ ಆಗಿರುವರು. ಪುರಾಣಜ್ಞರು ಇವರನ್ನು ಪೃಥುರಾಜನ ವಂಶೀಕರೆಂದು ವಿಶೇಷವಾಗಿ ಹೊಗಳುವರು. ಅವರು ಯಾಗವನ್ನು ಮಾಡುವ ಕಾಲದಲ್ಲಿ ಪುತ್ರಜನನವಾಯಿತು.

೨೩. ಅತ್ಯಂತ ಧಾರ್ಮಿಕನೂ, ಕೀರ್ತಿವಂತನೂ ಆದ ಉಶನಾ ಎಂಬ ರಾಜನು (ದೈತ್ಯಗುರುವಾದ ಶುಕ್ರನು) ಭೂಮಂಡಲವನ್ನು ಜಯಿಸಿ ನೂರು ಅಶ್ವಮೇಧ ಯಾಗಗಳನ್ನು ಮಾಡಿದನು.

ಮರುತ್ತಸ್ತಸ್ಯ ತನಯೋ ರಾಜರ್ಷಿರ್ಣಾಮನುಷ್ಠಿತಃ ।
ವೀರಃ ಕಂಬಲಬರ್ಹಿಸ್ತು ಮರುತ್ತತನಯಃ ಸ್ಮೃತಃ ॥ ೨೪ ॥

ಪುತ್ರಸ್ತು ರುಕ್ಮಕವಚೋ ವಿದ್ವಾನ್ ಕಂಬಲ ಬರ್ಹಿಷಃ ।
ನಿಹತ್ಯ ರುಕ್ಮಕವಚಃ ಪುರಾ ಕವಚಿನೋ ರಣೇ ॥ ೨೫ ॥

ಧನ್ವಿನೋ ನಿಶಿತೈರ್ಬಾಣೈರವಾಪ ಶ್ರಿಯಮುತ್ತಮಂ ।
ಬ್ರಾಹ್ಮಣೇಭ್ಯೋ ದದೌ ವಿತ್ತಮಶ್ವಮೇಧಮಹಾಯಶಾಃ ॥ ೨೬ ॥

ರಾಜ್ಞಸ್ತು ರುಕ್ಮಕವಚಾದಪರಾವೃತ್ಯ ವೀರಹಾಃ ।
ಜಜ್ಞಿರೇ ಪಂಚಪುತ್ರಾಸ್ತು ಮಹಾಸತ್ವಾ ಮಹಾಬಲಾಃ ॥ ೨೭ ॥

ರುಕ್ಮೇಷುಃ ಪೃಥುರುಕ್ಮಶ್ಚ ಜ್ಯಾಮಘಃ ಪರಿಘೋ ಹರಿಃ ।
ಪರಿಘಂ ಚ ಹರಿಂಚೈವ ವಿದೇಹೇಸ್ಥಾಪಯತ್ಪಿತಾ ॥ ೨೮ ॥

---

೨೪. ಅವನಿಗೆ ರಾಜರ್ಷಿಯಾದ ಮರುತ್ತನೆಂಬ ಕುಮಾರನು ಜನಿಸಿ ಅತಿ ಧಾರ್ಮಿಕನಾಗಿದ್ದನು. ಆ ಮರುತ್ತನಿಗೆ ಶೂರನಾದ ಕಂಬಲಬರ್ಹಿಯೆಂಬ ಪುತ್ರನು ಉದ್ಭವಿಸಿದನು.

೨೫. ಅವನಿಗೆ ಮಹಾಪಂಡಿತನಾದ ರುಕ್ಮಕವಚನೆಂಬ ಪುತ್ರನು ಜನಿಸಿದನು. ಆ ರುಕ್ಮಕವಚನು ಯುದ್ಧರಂಗದಲ್ಲಿ ಕವಚಧಾರಿಗಳಾದ ಶತ್ರುಗಳನ್ನು ಸಂಹಾರ ಮಾಡಿದನು.

೨೬. ಆ ರುಕ್ಮಕವಚನು ರಣರಂಗದಲ್ಲಿ ಹರಿತವಾದ ಬಾಣಗಳಿಂದ ಶತ್ರುಗಳನ್ನು ಸಂಹರಿಸಿ ಅವರ ಐಶ್ವರ್ಯಗಳನ್ನು ತಂದು ಅಶ್ವಮೇಧಯಾಗವನ್ನು ಮಾಡಿ ಬ್ರಾಹ್ಮಣರಿಗೆ ಆ ಧನವನ್ನು ದಾನಮಾಡಿ ಮಹಾಕೀರ್ತಿಯನ್ನು ಪಡೆದನು.

೨೭. ಆ ರಾಜನಿಗೆ ಆಜ್ಞಾಪರಿಪಾಲಕರೂ, ಶತ್ರುಸಂಹಾರಕರೂ, ಅತ್ಯಂತ ಶೂರರೂ, ಮಹಾಪರಾಕ್ರಮಿಗಳೂ ಆದ ಐದುಜನ ಮಕ್ಕಳು ಹುಟ್ಟಿದರು.

೨೮. ಆ ಪ್ರಭುವು ರುಕ್ಮೇಷು, ಪೃಥುರುಕ್ಮ, ಜ್ಯಾಮಘ, ಪರಿಘ, ಹರಿ ಎಂಬ ಶೂರರಾದ ಐವರು ಕುಮಾರರನ್ನು ಪಡೆದನು. ಅನಂತರ ತಂದೆಯು ಪರಿಘ ಮತ್ತು ಹರಿಯನ್ನು ವಿದೇಹ ದೇಶದಲ್ಲಿ ಸ್ಥಾಪಿಸಿದನು.

ಬೃಹನ್ಮೇಷುರಭವದ್ರಾಜಾ ಪೃಥುರುಕ್ಮಸ್ತದಾಶ್ರಯಃ ।
ತೇಭ್ಯಃ ಪ್ರವ್ರಜಿತೋ ರಾಜ್ಯಾಜ್ಜ್ಯಾಮಘೋಽಭವದಾಶ್ರಮೇ ॥ ೨೯ ॥

ಪ್ರಶಾಂತಸ್ತು ವನೇ ಘೋರೇ ಬ್ರಾಹ್ಮಣೇನಾವಬೋಧಿತಃ ।
ಜಗಾಮ ಧನುರಾದಾಯ ದೇಶಮಧ್ಯಂ ರಥೀ ಧ್ವಜೀ ॥ ೩೦ ॥

ನರ್ಮದಾನೂಪ ಏಕಾಕೀ ಮೇಕಲಾವೃತ್ತಿಕಾ ಅಪಿ ।
ಋಕ್ಷವಂತಂ ಗಿರಿಂ ಗತ್ವಾ ಶುಕ್ತಿಮನ್ಯಾಮಥಾವಿಶತ್ ॥ ೩೧ ॥

ಜ್ಯಾಮಘಸ್ಯಾಭವಾದ್ಭಾರ್ಯಾ ಶೈಬ್ಯಾ ಬಲವತೀ ಭೃಶಂ ।
ಅಪುತ್ರೋಽಪಿ ಸ ವೈ ರಾಜಾ ಭಾರ್ಯಾಮನ್ಯಾಂ ನವಿಂದತಿ ॥ ೩೨ ॥

---

೨೯. ಅವರಲ್ಲಿ ಬೃಹನ್ಮೇಷುವೆಂಬವನು ರಾಜನಾಗಿದ್ದನು. ಪೃಥುರುಕ್ಮನು ಅವನನ್ನು ಆಶ್ರಯಿಸಿಕೊಂಡಿದ್ದನು. ಇವರಿಗೆ ರಾಜ್ಯವನ್ನು ಕೊಟ್ಟು ರಾಜನು ಆಶ್ರಮಕ್ಕೆ ಹೋದನು. ಅಲ್ಲಿ ಜ್ಯಾಮಘನು ತಂದೆಯ ಸೇವೆಯನ್ನು ಮಾಡುತ್ತಿದ್ದನು.

೩೦ ಹೀಗೆ ಮಹಾರಾಜನು ಘೋರವಾದ ಕಾನನದಲ್ಲಿ ತಪಸ್ಸನ್ನು ಮಾಡುತ್ತಿರಲಾಗಿ, ಬ್ರಾಹ್ಮಣರು ಬಂದು ಆವನಿಗೆ ಬೋಧಿಸಿದರು. ಆಗ ದೊರೆಯು ಧನುಸ್ಸನ್ನು ಸ್ವೀಕರಿಸಿ ಧ್ವಜಪತಾಕೆಗಳಿಂದ ಕೂಡಿ ರಥಾರೂಢನಾಗಿ ತನ್ನ ದೇಶಕ್ಕೆ ಹೊರಟನು.

೩೧. ಅವನು ನರ್ಮದಾತೀರದಲ್ಲಿದ್ದ ಅನೂಪದೇಶದಲ್ಲಿಯೂ ಮೇಕಲಾ, ವೃತ್ತಿಕಾ ಎಂಬ ದೇಶದಲ್ಲಿಯೂ ಸಂಚರಿಸಿ ಅಲ್ಲಿಂದ ಋಕ್ಷವಂತವೆಂಬ ಗಿರಿಗೆ ಹೋಗಿ ಅಲ್ಲಿಂದ ಶಕ್ತಿವಂತ ದೇಶಕ್ಕೆ ಹೋದನು.

೩೨. ಜ್ಯಾಮಘನೆಂಬ ಮಹಾರಾಯನಿಗೆ ಅತ್ಯಂತ ಬಲಿಷ್ಠಳಾದ ಶೈಬ್ಯೆ ಎಂಬ ಪತ್ನಿಯಿದ್ದಳು. ಆ ರಾಯನಿಗೆ ಆ ಭಾರ್ಯೆಯಲ್ಲಿ ಸಂತಾನವಿಲ್ಲದಿದ್ದರೂ ಬೇರೆ ವಿವಾಹವನ್ನು ಮಾಡಿಕೊಳ್ಳಲಿಲ್ಲ.

ತಸ್ಯಾಸೀದ್ವಿಜಯೋ ಯುದ್ಧೇ ತತಃ ಕನ್ಯಾಮವಾಪ ಸಃ ।
ಭಾರ್ಯಾಮುವಾಚ ರಾಜಾ ಸ ಸ್ನುಷೇತಿ ತು ನರೇಶ್ವರಃ ॥ ೩೩ ॥

ಏವಮುಕ್ತಾಬ್ರವೀದೇವಂ ಕಾಮ್ಯೇಯಂತೇ ಸ್ನುಷೇತಿ ಸಾ ।
ಯಸ್ತೇ ಜನಿಷ್ಯತೇ ಪುತ್ರಸ್ತಸ್ಯ ಭಾರ್ಯಾ ಭವಿಷ್ಯತಿ ॥ ೩೪ ॥

ತಸ್ಯ ಸಾ ತಪಸೋಗ್ರೇಣ ಶೈಬ್ಯಾ ವೈಶಂ ಪ್ರಸೂಯತ ।
ಪುತ್ರಂ ವಿದರ್ಭಂ ಸುಭಗಾ ಶೈವ್ಯಾ ಪರಿಣತಾ ಸತೀ ॥ ೩೫ ॥

ರಾಜಪುತ್ರೌ ತು ವಿದ್ವಾಂಸೌ ಸ್ನುಷಾಯಾಂ ಕ್ರಥುಕೌಶಿಕೌ ।
ಪುತ್ರೌ ವಿದರ್ಭೋಽಜನಯಚ್ಛೂರೌ ರಣವಿಶಾರದೌ ॥ ೩೬ ॥

---

೩೩. ಅನಂತರ ಆ ರಾಜನು ಯುದ್ಧದಲ್ಲಿ ಜಯವನ್ನು ಹೊಂದಿ ಬರುವಾಗ ಒಬ್ಬ ಕನ್ನಿಕೆಯನ್ನು ನೋಡಿದನು. ಅನಂತರ ಮಹಾರಾಜನು ಆ ಹುಡುಗಿಯನ್ನು ಅರಮನೆಗೆ ಕರೆತಂದು, ಪತ್ನಿಯನ್ನು ಕುರಿತು ಎಲೈ ಪ್ರಿಯಳೇ, ಇವಳನ್ನು ನಿನ್ನ ಸೊಸೆಯೆಂದು ಭಾವಿಸು ಎಂದು ಹೇಳಿದನು.

೩೪. ತನ್ನ ಪ್ರಿಯಳಿಗೆ ಈ ಹುಡುಗಿಯು ನಿನಗೆ ಜನಿಸುವ ಪುತ್ರನಿಗೆ ಪತ್ನಿಯಾಗುವಳೆಂದೂ ಮತ್ತು ಇವಳನ್ನು ಪ್ರೀತಿಯಿಂದ ಸಾಕುವಂತೆಯೂ ಹೇಳಿದನು.

೩೫. ಪತಿಯ ಅನುಮತಿಯಿಂದ, ಪತ್ನಿಯು ಉಗ್ರವಾದ ತಪಸ್ಸನ್ನು ಮಾಡಿ ವೈಶನೆಂಬ ಕುಮಾರನನ್ನು ಪಡೆದಳು. ಸುಂದರಿಯೂ, ಸಾಧ್ವಿಯೂ, ಪರಿಣತ ವಯಸ್ಕಳೂ ಆದ ಶೈಬ್ಯಯು ವಿದರ್ಭನೆಂಬ ಬೇರೊಬ್ಬ ಪುತ್ರನನ್ನು ಪಡೆದಳು.

೩೬. ಆ ರಾಜಕುಮಾರರಿಬ್ಬರೂ ಮಹಾಪಂಡಿತರೂ, ಕ್ರಥುಕೌಶಕನಾಮಕರೂ ಆಗಿಯೂ ಇದ್ದರು. ತರುವಾಯ ವಿದರ್ಭಮಹಾರಾಜನಿಗೆ ರಣರಂಗದಲ್ಲಿ ಧೀರರೂ, ಶೂರರೂ ಆದ ಇಬ್ಬರು ಪುತ್ರರು ಜನಿಸಿದರು.

ಲೋಮಪಾದಂ ತೃತೀಯಂ ತು ಪಶ್ಚಾಜ್ಜಜ್ಞೇ ಸುಧಾರ್ಮಿಕಃ ।
ಲೋಮಪಾದಾತ್ಮಜೋವಸ್ತುರಾಹೃತಿಸ್ತಸ್ಯ ಚಾತ್ಮಜಃ ॥ ೩೭ ॥

ಕೌಶಿಕಸ್ಯ ಚಿದಿಃ ಪುತ್ರಸ್ತಸ್ಮಾಚ್ಚೈದ್ಯಾ ನೃಪಾಃ ಸ್ಮೃತಾಃ ।
ಕ್ರಥೋರ್ವಿದರ್ಭಪುತ್ರಸ್ತು ಕುಂತಿಸ್ತಸ್ಯಾತ್ಮಜೋಽಭವೇತ್ ॥ ೩೮ ॥

ಕುಂತೇರ್ಧೃಷ್ಟಸುತೋ ಜಜ್ಞೇ ಪುರೋಧೃಷ್ಟಃ ಪ್ರತಾಪವಾನ್ ।
ಧೃಷ್ಟಸ್ಯ ಪುತ್ರೋ ಧರ್ಮಾತ್ಮಾ ನಿರ್ವೃತ್ತಿಃ ಪರಿವೀರಹಾ ॥ ೩೯ ॥

ತಸ್ಯ ಪುತ್ರೋ ದಶಾರ್ಹಸ್ತು ಮಹಾಬಲಪರಾಕ್ರಮಃ ।
ದಶಾರ್ಹಸ್ಯ ಸುತೋ ವ್ಯೋಮಾ ತತೋ ಜೀಮೂತ ಉಚ್ಯತೇ ॥ ೪೦ ॥

---

೩೭. ಅತ್ಯಂತ ಧರ್ಮಾತ್ಮನಾದ ಆ ಮಹಾರಾಯನಿಗೆ ಕೊನೆಯಲ್ಲಿ ಲೋಮಪಾದನೆಂಬ ತೃತೀಯ ಕುಮಾರನು ಉದ್ಭವಿಸಿದನು. ಆ ಲೋಮಪಾದನಿಗೆ ವಸ್ತುವೆಂಬ ಪುತ್ರನೂ, ಅವನಿಗೆ ಆಹೃತಿಯೆಂಬ ಕುಮಾರನೂ ಹುಟ್ಟಿದರು.

೩೮. ಕೌಶಿಕಮಹಾರಾಯನಿಗೆ ಚಿದಿಯೆಂಬ ಕುಮಾರನು ಉದ್ಭವಿಸಿದನು. ಅವನಿಂದ ಆ ವಂಶದ ರಾಜರಿಗೆ ಚೈದ್ಯರೆಂಬ ನಾಮವು ಸಂಭವಿಸಿರುತ್ತದೆ. ವಿದರ್ಭ ರಾಜಕುಮಾರನಾದ ಕ್ರಥುಮಹಾರಾಜನಿಗೆ ಕುಂತಿಯೆಂಬ ಪುತ್ರನು ಹುಟ್ಟಿದನು.

೩೯. ಆ ಕುಂತಿರಾಜನಿಗೆ ಧೃಷ್ಟನೆಂಬ ಪುತ್ರನೂ, ಅವನಿಗೆ ಅತ್ಯಂತ ಶೂರನಾದ ಪುರೋಧೃಷ್ಟನೆಂಬ ರಾಜಕುಮಾರನೂ ಜನಿಸಿದರು. ಅಂತಹ ಧೃಷ್ಟ ಮಹಾರಾಜನಿಗೆ ಧರ್ಮಾತ್ಮನೂ, ಶತ್ರುನಾಶಕನೂ ಆದ ನಿರ್ವೃತಿಯೆಂಬ ಸುತನೂ ಉದ್ಭವಿಸಿದನು.

೪೦. ಆ ನಿರ್ವೃತಿಗೆ ಅತ್ಯಂತ ಬಲಿಷ್ಠನೂ, ಪರಾಕ್ರಮಿಯೂ ಆದ ದಶಾರ್ಹ ನೆಂಬ ತನಯನು ಹುಟ್ಟಿದನು. ಆ ದಶಾರ್ಹನಿಗೆ ವ್ಯೋಮನೆಂಬುವನೂ ಅವನಿಗೆ ಜೀಮೂತನೆಂಬ ಸುತನೂ ಹುಟ್ಟಿದರು.

ಜೀಮೂತಪುತ್ರೋ ವಿಕೃತಿಸ್ತಸ್ಯ ಭೀಮರಥಃ ಸುತಃ ।
ಅಥ ಭೀಮರಥಸ್ಯಾಸೀತ್ ಪುತ್ರೋ ರಥವರಃ ಕಿಲ ॥ ೪೧ ॥

ದಾತಾ ಧರ್ಮರತೋ ನಿತ್ಯಂ ಶೀಲಸತ್ಯಪರಾಯಣಃ ।
ತಸ್ಯ ಪುತ್ರೋ ನವರಥಸ್ತತೋ ದಶರಥಃ ಸ್ಮೃತಃ ॥ ೪೨ ॥

ತಸ್ಯ ಚೈಕಾದಶರಥಃ ಶಕುನಿಸ್ತಸ್ಯ ಚಾತ್ಮಜಃ ।
ತಸ್ಮಾತ್ ಕರಂಭಕೋ ಧನ್ವೀ ದೇವರತೋಽಭವತ್ತತಃ ॥ ೪೩ ॥

ದೇವಕ್ಷತ್ರೋಽಭವದ್ರಾಜಾ ದೇವರಾತಿರ್ಮಹಾಯಶಾಃ ।
ದೇವಕ್ಷತ್ರಸುತೋ ಜಜ್ಞೇ ದೇವನಃ ಕ್ಷತ್ರನಂದನಃ ॥ ೪೪ ॥

ದೇವನಾತ್ ಸ ಮಧುರ್ಜಜ್ಞೇ ಯಸ್ಯ ಮೇದಾರ್ಥಸಂಭವಃ ।
ಮಧೋಶ್ಚಾಪಿ ಮಹಾತೇಜಾ ಮನುರ್ಮನುವಶಸ್ತಥಾ ॥ ೪೫ ॥

---

೪೧. ಆ ಜೀಮೂತನಿಗೆ ವಿಕೃತಿ ಎಂಬ ಪುತ್ರನೂ, ಅವನಿಗೆ ಭೀಮರಥನೆಂಬ ಸುತನೂ, ಅವನಿಗೆ ರಥವರನೆಂಬ ಪುತ್ರನೂ ಜನಿಸಿದರಲ್ಲವೇ,

೪೨. ಆ ರಥವರನೆಂಬ ರಾಜನು ದಾನಶೂರನೂ, ಧರ್ಮಪರಾಯಣನೂ, ನಿರಂತರವೂ ಸತ್ಯಶೀಲನೂ, ಸತ್ಯಸ್ವಭಾವವುಳ್ಳವನೂ ಆಗಿದ್ದನು. ಆ ರಥವರನಿಗೆ ನವರಥನೆಂಬ ಕುಮಾರನೂ, ಅವನಿಗೆ ದಶರಥನೆಂಬ ಪುತ್ರನೂ ಆವಿರ್ಭವಿಸಿದರು.

೪೩. ಆ ದಶರಥರಾಯನಿಗೆ ಏಕಾದಶರಥನೆಂಬ ಮಗನೂ, ಅವನಿಗೆ ಶಕುನಿಯೆಂಬ ಸುತನೂ, ಅವನಿಗೆ ಕರಂಭಕನೆಂಬ ಪುತ್ರನೂ, ಅವನಿಗೆ ದೇವರಾತನೆಂಬ ತನಯನೂ ಜನಿಸಿದರು

೪೪. ಆ ದೇವರಾತನಿಗೆ ಮಹಾಕೀರ್ತಿವಂತನಾದ ದೇವಕ್ಷತ್ರನೆಂಬ ಪುತ್ರನೂ, ಆ ದೇವಕ್ಷತ್ರನಿಗೆ ಕ್ಷತ್ರಿಯಧರ್ಮಪ್ರವರ್ತಕನಾದ ದೇವನನೆಂಬ ಪುತ್ರನೂ ಜನಿಸಿ ಸುಪ್ರಸಿದ್ಧರಾದರು.

೪೫. ಆ ದೇವನನಿಗೆ ಅತ್ಯಂತ ಮೇಧಾವಂತನೂ, ಧನಿಕನೂ ಆದ ಮಧುವೆಂಬ ರಾಜನೂ, ಅವನಿಗೆ ಮಹಾತೇಜಸ್ವಿಯೂ, ಶೂರನೂ ಆದ ಮನುವೆಂಬ ಕುಮಾರನೂ, ಅವನಿಗೆ ಮನುವಂಶನೆಂಬ ಪುತ್ರನೂ ಉದ್ಭವಿಸಿದರು.

ನಂದನಶ್ಚ ಮಹಾತೇಜಾ ಮಹಾಪುರುವಶಸ್ತಥಾ ।
ಆಸೀತ್ ಪುರವಶಾತ್ ಪುತ್ರಃ ಪುರದ್ವಾನ್ ಪುರುಷೋತ್ತಮಃ ॥ ೪೬ ॥

ಜಜ್ಞೇ ಪುರದ್ವತಃ ಪುತ್ರೋ ಭದ್ರವತ್ಯಾಂ ಪುರೂದ್ವಹಃ ।
ಐಕ್ಷ್ವಾಕೀ ತ್ವಭವದ್ಭಾರ್ಯಾ ಸತ್ವಸ್ತಸ್ಯಾಮಜಾಯತ ॥
ಸತ್ವಾತ್ ಸತ್ವಗುಣೋಪೇತಃ ಸಾತ್ವತಃ ಕೀರ್ತಿವರ್ಧನಃ ॥ ೪೭ ॥

ಇಮಾಂ ವಿಸೃಷ್ಟಿಂ ವಿಜ್ಞಾಯ ಜ್ಯಾಮಘಸ್ಯ ಮಹಾತ್ಮನಃ ।
ಪ್ರಜಾವಾನೇತಿ ಸಾಯುಜ್ಯಂ ರಾಜ್ಞಃ ಸೋಮಸ್ಯ ಧೀಮತಃ ॥ ೪೮ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಜ್ಯಾಮಘವೃತ್ತಾಂತ ಕಥನಂ " ನಾಮ ತ್ರಯಸ್ತ್ರಿಂಶೋಽಧ್ಯಾಯಃ

---

೪೬. ಆ ಪುರುವಶನಿಗೆ ನಂದನನೆಂಬ ಕುಮಾರನೂ, ಅವನಿಗೆ ಮಹಾ ತೇಜಸ್ವಿಯಾದ ಮಹಾಪುರುವಶನೆಂಬ ಪುತ್ರನೂ, ಅವನಿಗೆ ಪುರುಷಶ್ರೇಷ್ಠನಾದ ಪುರುದ್ವಂತನೆಂಬ ಸುತನೂ ಜನಿಸಿದರು.

೪೭. ಆ ಪುರುದ್ವಂತನಿಗೆ ಭದ್ರವತಿಯಲ್ಲಿ ಪುರೂದ್ವಹನೆಂಬ ಪುತ್ರನು ಹುಟ್ಟಿದನು. ಅವನಿಗೆ ಐಕ್ಷ್ವಾಕಿಯೆಂಬ ಪತ್ನಿಯಿದ್ದಳು. ಅವಳಿಗೆ ಸತ್ವನೆಂಬ ಕುಮಾರನು ಉದ್ಭವಿಸಿದನು ಅವನಿಗೆ ಸತ್ವಗುಣಸಂಪನ್ನನೂ, ಕೀರ್ತಿವರ್ಧಕನೂ ಆದ ಸಾತ್ವತನೆಂಬ ಕುಮಾರನು ಜನಿಸಿದನು.

೪೮. ಯಾವನು ಮಹಾತ್ಮನಾದ ಜ್ಯಾಮಘನ ಮತ್ತು ಜ್ಞಾನಿಯೂ, ರಾಜನೂ ಆದ ಸೋಮದೇವನು ಇವರ ಸೃಷ್ಟಿಕ್ರಮವನ್ನು ಸಾಂಗವಾಗಿ ತಿಳಿಯುವನೋ, ಅವನು ಈ ಲೋಕದಲ್ಲಿ ಪ್ರಜಾವಂತನೂ, ಸುಖಿಯೂ ಆಗಿ ಪರದಲ್ಲಿ ಜ್ಞಾನಿಯಾದ ಸ್ವಾಮಿಯ ಅನುಗ್ರಹದಿಂದ ದಿವ್ಯವೂ ಸಾಯುಜ್ಯರೂಪವೂ ಆದ ಸುಖವನ್ನು ಪಡೆಯುವನೆಂದು ಸೂತಮುನಿಯು ಋಷಿಗಳಿಗೆ ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಜ್ಯಾಮಘನನ ವೃತ್ತಾಂತ ಕಥನವೆಂಬ " ಮೂವತ್ತಮೂರನೆಯ ಅಧ್ಯಾಯವು ಮುಗಿದುದು.



# ಮೂವತ್ತಮೂರನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ಜ್ಯಾಮಘರಾಯನ ವಂಶವರ್ಣನೆಯು ಕಥಿತವಾಗಿದೆ. ಪೂರ್ವದಲ್ಲಿ ಸೂರ್ಯನು ಕಾರ್ತವೀರ್ಯಾರ್ಜುನನ ಬಳಿಗೆ ಬಂದು ತನಗೆ ಆಹಾರವನ್ನು ಕೊಡಬೇಕೆಂದು ಬೇಡಿದನು. ಅದರಂತೆ ರಾಜನು, ಒಪ್ಪಲು ಸೂರ್ಯನು ಗ್ರಾಮನಗರಾದಿಗಳನ್ನೂ, ಆಶ್ರಮಗಳನ್ನೂ ದಹಿಸಿದನು. ಆ ಸಮಯದಲ್ಲಿ ನೀರಲ್ಲಿ ಮುಳುಗಿ ತಪಸ್ಸನ್ನು ಮಾಡುತ್ತಿದ್ದ ವಸಿಷ್ಠಮುನಿಯು ತನ್ನ ಆಶ್ರಮ ಭಸ್ಮವಾಗಿದ್ದುದನ್ನು ನೋಡಿ ಪರಶುರಾಮನಿಂದ ನಿನಗೆ ಮರಣವು ಸಂಭವಿಸಲೆಂದು ಅವನಿಗೆ ಶಾಪವನ್ನು ಕೊಟ್ಟನು.

ಆ ಕಾರ್ತವೀರ್ಯಾರ್ಜುನನ ಕುಲದಲ್ಲಿಯೇ ಕ್ರೋಷ್ಟು, ವೃಷ್ಣಿ, ಚೈತ್ರರಥ, ಶಶಿಬಿಂದು, ಪೃಥುಶ್ರವ ಇವರೇ ಮೊದಲಾದ ರಾಜರು ಜನಿಸಿದರು. ಅವರ ಸಂತತಿಯಲ್ಲಿ ರುಕ್ಮನು, ಜ್ಯಾಮಘನನು ಹುಟ್ಟಿದರು. ಆ ಜ್ಯಾಮಘನನಿಗೆ ದಶಾರ್ಹ, ನವರಥ, ವರರಥ, ದಶರಥ, ಮಧು, ನಂದನ ಇವರೇ ಮೊದಲಾದ ಅನೇಕ ರಾಜಕುಮಾರರು ಉದ್ಭವಿಸಿದರು. ಹೀಗೆ ಆ ರಾಯನ ವಂಶವು ವೃದ್ಧಿಯಾಯಿತು, ಎಂಬ ವಿಷಯಗಳು ಉಕ್ತವಾಗಿವೆ



—॥ ಹರಿಃ ಓಂ ॥—

—॥ ಶ್ರೀ ವೇದವ್ಯಾಸಾಯ ನಮಃ ॥—

# ಶ್ರೀ ಮ ದ್ವಾ ಯು ಮ ಹಾ ಪು ರಾ ಣ ಂ

## ಚತುಸ್ತ್ರಿಂಶೋಽಧ್ಯಾಯಃ

॥ ಸೂತ ಉವಾಚ ॥

**ಸಾತ್ವತೀ ರೂಪಸಂಪನ್ನಂ ಕೌಶಲ್ಯಾ ಸುಷುವೇ ಸುತಂ ।**
**ಭಜಿನಂ ಭಜಮಾನಂ ಚ ದಿವ್ಯಂ ದೇವಾವೃಧಂ ನೃಪಂ ॥ ೧ ॥**

**ಅಂಧಕಂ ಚ ಸಹಾಭೋಜಂ ವೃಷ್ಣಿಂ ಚ ಯದುನಂದನಂ ।**
**ತೇಷಾಂಹಿ ಸರ್ಗಾಶ್ಚತ್ವಾರಃ ಶೃಣುಧ್ವಂ ವಿಸ್ತರೇಣ ವೈ ॥ ೨ ॥**

**ಭಜಮಾನಸ್ಯ ಶೃಂಜಯ್ಯಾಂ ಬಾಹ್ಯಕೋಽಪರಿ ಬಾಹ್ಯಕಃ ।**
**ಶೃಂಜಯಸ್ಯ ಸುತೇ ದ್ವೇ ತು ಬಾಹ್ಯಕಸ್ತೇ ಉದಾವಹತ್ ॥ ೩ ॥**

---

## ಮೂವತ್ತನಾಲ್ಕನೆಯ ಅಧ್ಯಾಯವು

೧–೨. ಸೂತಮುನಿಯು ಹೇಳಿದನು:— ಸಾತ್ವತನ ಪತ್ನಿಯಾದ ಕೌಶಲ್ಯೆಯು ಅತ್ಯಂತ ಸುಂದರರಾದ ಭಜಿನ, ಭಜಮಾನ, ದಿವ್ಯ, ದೇವಾವೃಧ, ಅಂಧಕ, ಸಹಾಭೋಜ, ಯದುನಂದನನಾದ ವೃಷ್ಣಿ ಎಂಬ ಕುಮಾರರನ್ನು ಪಡೆದಳು. ಅವರಲ್ಲಿ ಸುಪ್ರಸಿದ್ಧವಾದ ನಾಲ್ಕು ವಂಶವನ್ನು ವಿಸ್ತಾರವಾಗಿ ವರ್ಣಿಸುವೆನು ಕೇಳಿರೆಂದನು.

೩. ಭಜಮಾನನಿಗೆ ಶೃಂಜಯಿಯಲ್ಲಿ ಬಾಹ್ಯ, ಬಾಹ್ಯಕರೆಂಬ ಇಬ್ಬರು ಕುಮಾರರು ಜನಿಸಿದರು. ಅವರಿಬ್ಬರಲ್ಲಿ ಬಾಹ್ಯಕನು ಶೃಂಜಯನ ಇಬ್ಬರು ಪುತ್ರಿಯರನ್ನು ಮದುವೆಯಾದನು.

ತಸ್ಯ ಭಾರ್ಯೇ ಭಗಿನ್ಯೌ ತೇ ಪ್ರಸೂತೇತಿ ಸುತಾನ್ ಬಹೂನ್ ।
ನಿಮಿಶ್ಚ ಪಣವಶ್ಚೈವ ವೃಷ್ಣಿಃ ಪರಪುರಂಜಯಃ ॥ ೪ ॥

ಯೇ ಬಾಹ್ಯಕಾರ್ಯಶ್ಶೃಂಜಯ್ಯಾಂ ಭಜಮಾನಾದ್ದ್ವಿಜಜ್ಞಿರೇ ।
ಅಯುತಾಯುತ ಸಾಹಸ್ರ ಶತಜಿದಥ ವಾಮಕಃ ॥ ೫ ॥

ಬಾಹ್ಯಕಾರ್ಯಾಭಗಿನ್ಯಾಂಯೇ ಭಜಮಾನಾ ದ್ವಿಜಜ್ಞಿರೇ ।
ತೇಷಾಂ ದೇವಾವೃಧೋ ರಾಜಾ ಚಚಾರ ಪರಮಂ ತಪಃ ॥ ೬ ॥

ಪುತ್ರಃ ಸರ್ವಗುಣೋಪೇತೋ ಮಮ ಭೂಯಾದಿತಿ ಸ್ಮ ಹ ।
ಸಂಯೋಜ್ಯಾತ್ಮಾನಮೇವಂ ಸಾವರ್ಣಾಸಾಜಲಮುಸ್ಪೃಶತ್ ॥ ೭ ॥

ಸಾ ಚೋಪಸ್ಪರ್ಶನಾತ್ತಸ್ಯ ಚಕಾರ ಋಷಿಮಾಪಗಾ ।
ಕಲ್ಯಾಣಂ ಚ ನರಪತೇಸ್ತಸ್ಯ ಸಾ ನಿಮ್ನಗೋತ್ತಮಾ ॥ ೮ ॥

---

೪. ಅವನ ಪತ್ನಿಯರೂ ಮತ್ತು ಭಗಿನಿಯರೂ ಕೂಡ ಅನೇಕ ಪುತ್ರರನ್ನು ಪಡೆದರು. ಅವರು ನಿಮಿ, ಪಣಹ, ವೃಷ್ಣಿ, ಪರಪುರಂಜಯರೆಂಬ ಪುತ್ರರನ್ನು ಪಡೆದರು.

೫. ಭಜಮಾನನಿಗೆ ಬಾಹ್ಯಕಾರಿಯಾದ ಅಶ್ರೃಂಜೆಯಲ್ಲಿ ಶತಜಿತ್, ವಾಮಕ ಇವರೇ ಮೊದಲಾದ ಹತ್ತಾರುಸಹಸ್ರ ಮಕ್ಕಳು ಹುಟ್ಟಿದರು.

೬. ಬಾಹ್ಯಕನ ಆರ್ಯಳಾದ ಭಗಿನಿಯಲ್ಲಿ ಭಜಮಾನನಿಂದ ಯಾವ ಸುಪ್ರಸಿದ್ಧರಾದ ಕುಮಾರರು ಜನಿಸಿದರೋ, ಅವರಲ್ಲಿ ದೇವಾವೃಧನೆಂಬ ಮಹಾರಾಜನು ಅತಿ ಭಯಂಕರವಾದ ತಪಸ್ಸನ್ನು ಮಾಡಿ ವರವನ್ನು ಪಡೆದನು.

೭. ಆ ಮಹಾರಾಜನು ನನಗೆ ಸರ್ವಗುಣೋಪೇತನಾದ ಪುತ್ರನು ಜನಿಸಬೇಕೆಂದು ಧ್ಯಾನಮಾಡುತ್ತಾ ಸಮುದ್ರದ ಜಲವನ್ನು ಸ್ಪರ್ಶಮಾಡಿದನು.

೮. ಸರಿದ್ವರೆಯಾದ ಆ ಮಹಾದೇವಿಯು ತನ್ನನ್ನು ಸ್ಪರ್ಶಮಾಡಿದ ರಾಜರ್ಷಿಗೆ ಮಂಗಳವನ್ನು ಮಾಡಬೇಕೆಂಬುದಾಗಿ ಯೋಚಿಸಿ ಕಲ್ಯಾಣವನ್ನು ಬಯಸಿದಳು.

ಚಿಂತಯಾಭಿಪರೀತಾಂಗಾ ಜಗಾಮಾಥ ವಿನಿಶ್ಚಯಂ ।
ನಾಧಿಗಚ್ಛಾಮಿ ತಾಂ ನಾರೀಂ ಯಸ್ಯಾ ಮೇವಂವಿಧಃ ಸುತಃ ॥ ೯ ॥

ಭವೇತ್ಸರ್ವಗುಣೋಪೇತೋ ರಾಜ್ಞೋ ದೇವಾವೃಧಸ್ಯ ಹಿ ।
ತಸ್ಮಾದಸ್ಯ ಸ್ವಯಂ ಚಾಹಂ ಭವಾಮ್ಯದ್ಯ ಸಹವ್ರತಾ ।
ಜಜ್ಞೇ ತಸ್ಯಾಃ ಸ್ವಯಂ ಹಸ್ತ್ರೀ ಭಾವಸ್ತಸ್ಯ ಯಥೇರಿತಃ ॥ ೧೦ ॥

ಅಥ ಭೂತ್ವಾ ಕುಮಾರೀ ತು ಸಾಪಿತ್ರೀ ಪರಮಂ ವಚಃ ।
ಚಿಂತಯಾಮಾಸ ರಾಜಾನಂ ತಾಮಿಯೇಷ ಸ ಪಾರ್ಥಿವಃ ॥ ೧೧ ॥

ತಸ್ಯಾಮಾಧತ್ತ ಗರ್ಭಂ ಸ ತೇಜಸ್ವಿನಮುದಾರಧೀಃ ।
ಅಥ ಸಾ ನವಮೇ ಮಾಸಿ ಸುಷುವೇ ಸರಿತಾಂವರಾ ॥ ೧೨ ॥

---

೯. ಆ ಸಾಧ್ವೀಮಣಿಯು ಒಹಳವಾಗಿ ಯೋಚಿಸಿ ಅವನಿಗೆ ಕಲ್ಯಾಣವನ್ನು ಮಾಡಬೇಕೆಂದು ನಿಶ್ಚಯಿಸಿದಳು. ಅನಂತರ ಅಂತಹ ಸರ್ವಗುಣಸಂಪನ್ನನಾದ ಪುತ್ರನನ್ನು ಪಡೆಯುವ ಸುಯೋಗವು ಯಾವ ನಾರೀಮಣಿಗೆ ಇದೆಯೆಂದು ಯೋಚಿಸಿದಳು.

೧೦. ಈ ದೇವಾವೃಧಮಹಾರಾಜನಿಗೆ ಸರ್ವಗುಣಸಂಪನ್ನನಾದ ಕುಮಾರನು ಜನಿಸಬೇಕು. ಆದುದರಿಂದ ನಾನೇ ಮಹಾರಾಜನಿಗೆ ಪತ್ನಿಯಾಗುವೆನೆಂದು ಭಾವಿಸಿ ಬಾಲಿಕೆಯಾಗಿ ಅವನ ದೃಷ್ಟಿಗೆ ವಿಷಯಳಾದಳು.

೧೧. ತರುವಾಯ ಆ ಸಾವಿತ್ರಿಯು ಕುಮಾರಿಯಾಗಿ ರಾಜನಿಗೆ ಪ್ರಿಯೋಕ್ತಿಗಳನ್ನು ಹೇಳಿದಳು. ಆಗ ಆ ರಾಜನು ಯೋಚಿಸಿ ಮದುವೆಯಾಗುವೆನೆಂದು ನಿಶ್ಚಯಿಸಿದನು.

೧೨. ತರುವಾಯ ರಾಜನು ಅವಳನ್ನು ಮದುವೆಯಾದನು. ಅನಂತರ ಸರಿದ್ವರೆಯಾದ ನಾರೀಮಣಿಯು ಉದಾರಹೃದಯನಾದ ರಾಜನಿಂದ ಗರ್ಭವನ್ನು ಧರಿಸಿ ನವಮಾಸಾನಂತರ ಉತ್ತಮನಾದ ಕುಮಾರನನ್ನು ಹೆತ್ತಳು.

ಪುತ್ರಂ ಸರ್ವಗುಣೋಪೇತಂ ಯಥಾ ದೇವಾವೃಧೇಪ್ಸಿತಃ ।
ತತ್ರ ವಂಶೇ ಪುರಾಣಜ್ಞಾ ಗಾಥಾಂ ಗಾಯಂತಿ ವೈ ದ್ವಿಜಾಃ ॥ ೧೩ ॥

ಗುಣಾನ್ ದೇವಾವೃಧಸ್ಯಾಪಿ ಕೀರ್ತಯಂತೋ ಮಹಾತ್ಮನಃ ।
ಯಥೈವ ಶೃಣುತೇ ದೂರಾತ್ ಸಂಪಶ್ಯತಿ ತಥಾಂತಿಕಾತ್ ॥ ೧೪ ॥

ಬಭ್ರುಃ ಶ್ರೇಷ್ಠೋ ಮನುಷ್ಯಾಣಾಂ ದೇವೈರ್ದೇವಾವೃಧಃ ಸಮಃ ।
ಪುರುಷಾಃ ಪಂಚಷಷ್ಟಿಶ್ಚ ಸಹಸ್ರಾಣಿ ಚ ಸಪ್ತತಿಃ ॥
ಯೇಽಮೃತತ್ವಮನುಪ್ರಾಪ್ತಾ ಬಭ್ರುರ್ದೇವಾವೃಧಾದಪಿ ॥ ೧೫ ॥

ಯಜ್ವಾ ದಾನಪತಿರ್ವೀರೋ ಬ್ರಹ್ಮಣ್ಯಃ ಸತ್ಯವಾಗ್ ಬುಧಃ ।
ಕೀರ್ತಿಮಾಂಶ್ಚ ಮಹಾಭಾಗಃ ಸಾತ್ವತಾನಾಂ ಮಹಾರಥಃ ॥ ೧೬ ॥

೧೩. ದೇವಾವೃಧಮಹಾರಾಜನು ಎಂತಹ ಮಗನನ್ನು ಕೋರಿದ್ದನೋ ಅಂತಹ ಸರ್ವಗುಣೋಪೇತನಾದ ಪುತ್ರನು ಹುಟ್ಟಿದನು. ಆ ವಂಶದಲ್ಲಿ ಜನಿಸಿದ ಅಂತಹ ಮಗನನ್ನು ನೋಡಿ ಪುರಾಣಜ್ಞರಾದ ವಿಪ್ರರು ಈ ಗಾದೆಯನ್ನು ಹೇಳುವರು.

೧೪. ಮಹಾತ್ಮನಾದ ದೇವಾವೃಧರಾಜನ ಮಹಾಗುಣಗಳನ್ನು ಬಂದಿಗಳು ಹೊಗಳಿದರೆ ಅವು ದೂರದಿಂದ ಕೇಳಲ್ಪಡುತ್ತಿದ್ದುವು. ಅಂತಹ ಗುಣಗಳನ್ನು ಆ ಶಿಶುವಿನಲ್ಲಿ ಪ್ರತ್ಯಕ್ಷವಾಗಿ ಸಮೀಪದಲ್ಲಿಯೇ ನೋಡಬಹುದು.

೧೫. ಬಭ್ರುನಾಮಕನಾದ ಆ ಕುಮಾರನು ಪುರುಷರಲ್ಲಿ ಶ್ರೇಷ್ಠನಾಗಿರುವನು. ದೇವಾವೃಧನು ದೇವತೆಗಳಿಗೆ ಸಮನು. ಯಾವ ಎಪ್ಪತ್ತುಸಾವಿರದಅರವತ್ತೈದು ಸಂಖ್ಯಾಕರಾದ ದೇವತೆಗಳಿರುವರೋ ಅವರು ಮುಕ್ತಿಯನ್ನು ಹೊಂದಿದರು. ಅದರಂತೆ ಬಭ್ರುವು ದೇವಾವೃಧನಿಂದ ಅಮೃತವನ್ನು ಪಡೆದನು.

೧೬. ಆ ಬಭ್ರುರಾಯನು ಯಾಗಶೀಲನೂ, ದಾನಶೂರನೂ, ಪರಾಕ್ರಮಿಯೂ, ಬ್ರಾಹ್ಮಣಪ್ರಿಯನೂ, ಸತ್ಯವಂತನೂ, ಜ್ಞಾನಿಯೂ, ಕೀರ್ತಿವಂತನೂ, ಮಹಾಭಾಗ್ಯವಂತನೂ, ಸಾತ್ವತರಲ್ಲಿ ಮಹಾರಥಿಕನೂ ಆಗಿ ಲೋಕವಿಖ್ಯಾತನಾಗಿದ್ದನು.

ತತೋ ವಿಗ್ರಹವಂತಂ ತಂ ದದರ್ಶ ನೃಪತಿಸ್ತದಾ ।
ಪ್ರತಿಮಾಮಥ ತಾಂ ದೃಷ್ಟ್ವಾ ಮುಹೂರ್ತಂ ಕೃತವಾಂಸ್ತಥಾ ॥ ೨೬ ॥

ತಮತಿಪ್ರಸ್ಥಿತಂ ಭೂಯೋ ವಿವಸ್ವಂತಂ ಶಕ್ರಜಿತ್ ।
ಪ್ರೋವಾಚಾಗ್ನಿಸವರ್ಣಂ ತ್ವಂ ಯೇನ ಲೋಕಾನ್ ಪ್ರಯಾಸ್ಯತಿ ॥
ತದ್ದೈವ ಮಣಿರತ್ನಂ ತನ್ಮಾಂ ಭವಾನ್ ದಾತುಮರ್ಹತಿ ॥ ೨೭ ॥

ಸ್ಯಮಂತಕಂ ನಾಮ ಮಣಿಂ ದತ್ತವಾಂಸ್ತಸ್ಯ ಭಾಸ್ಕರಃ ।
ಸ ತಮಾಬಧ್ಯ ನಗರಂ ಪ್ರವಿವೇಶ ಮಹೀಪತಿಃ ॥ ೨೮ ॥

ತಂ ಜನಾಃ ಪರ್ಯಧಾವಂತಸೂರ್ಯೋಽಯಂ ಗಚ್ಛತೀತಿ ಹ ।
ಸಭಾಂ ವಿಸ್ಮಾಯಯಿತ್ವಾಥ ಪುರಿಮಂತಃಪುರಂ ತಥಾ ॥ ೨೯ ॥

---

೨೬. ಅನಂತರ ಪ್ರಸೇನಮಹಾರಾಜನು ಮೂರ್ತಿವಂತನಾದ ಸೂರ್ಯದೇವನನ್ನು ನೋಡಿ ಆ ಮಹಾನುಭಾವನನ್ನು ವಿಶೇಷವಾಗಿ ಹೊಗಳಿದನು. ಸೂರ್ಯದೇವನನ್ನು ಪ್ರತ್ಯಕ್ಷವಾಗಿ ನೋಡಿದ್ದರಿಂದ ಅವನ ಆಕಾರವು ಮುಹೂರ್ತಮಾತ್ರ ಸ್ಥಾಪಿತವಾಯಿತು.

೨೭. ತರುವಾಯ ಸೂರ್ಯದೇವನು ಅನುಗ್ರಹಿಸಿ ಹೊರಡಲಾಗಿ ಇಂದ್ರನನ್ನು ಜಯಿಸಿರುವ ಮಹಾರಾಜನು ಅಗ್ನಿಸಮಾನವರ್ಣವುಳ್ಳವನೂ ತೇಜೋರೂಪಿಯೂ ಆದ ಸೂರ್ಯನನ್ನು ನೋಡಿ ನೀನೇ ಲೋಕರಕ್ಷಕನಾಗಿರುತ್ತೀಯೆ. ಆದುದದರಿಂದ ಆ ಮಣಿರತ್ನವನ್ನು ನನಗೆ ಕೊಡಬೇಕೆಂದು ಪ್ರಾರ್ಥಿಸಿದನು.

೨೮. ಸೂರ್ಯನು ಮಹಾರಾಜನ ಪ್ರಾರ್ಥನೆಯಂತೆ ಆ ಮಹಾರತ್ನವನ್ನು ಅವನಿಗೆ ಕೊಟ್ಟನು. ಅನಂತರ ಮಹಾರಾಜನು ಆ ರತ್ನವನ್ನು ಕಂಠಕ್ಕೆ ಕಟ್ಟಿಕೊಂಡು ನಗರಕ್ಕೆ ಹೋದನು.

೨೯. ಆ ನಗರದ ಪ್ರಜೆಗಳು ಅವನನ್ನು ನೋಡಿ ಸೂರ್ಯನೇ ಸಾಕ್ಷಾತ್ತಾಗಿ ಬಂದಿರುವನೆಂದು ತಿಳಿದು ಭಯದಿಂದ ಓಡಿಹೋದರು. ಅನಂತರ ಅವನು ಸಭೆಗೆ ಆಶ್ಚರ್ಯವನ್ನುಂಟುಮಾಡಿ ಅಂತಃಪುರಕ್ಕೆ ಹೋದನು.

ತಂ ಪ್ರಸೇನಜಿತೇ ದಿವ್ಯಂ ಮಣಿರತ್ನಂ ಸ್ಯಮಂತಕಂ ।
ದದೌ ಭ್ರಾತ್ರೇ ನರಪತಿಃ ಪ್ರೇಮ್ಣಾ ಶಕ್ರಜಿದುತ್ತಮಂ ॥ ೩೦ ॥

ಸ್ಯಮಂತಕೋ ನಾಮ ಮಣಿರ್ಯಸ್ಯ ರಾಷ್ಟ್ರೇ ಸ್ಥಿತೋ ಭವೇತ್ ।
ಕಾಲವರ್ಷೀ ಚ ಪರ್ಜನ್ಯೋ ನ ಚ ವ್ಯಾಧಿಭಯಂ ತದಾ ॥ ೩೧ ॥

ಲಿಪ್ಸಾಂ ಚಕ್ರೇ ಪ್ರಸೇನಾತ್ತು ಮಣಿರತ್ನಂ ಸ್ಯಮಂತಕಂ ।
ಗೋವಿಂದೋ ನ ಚ ತಂ ಲೇಭೇ ಶಕ್ತೋಽಪಿ ನ ಜಹಾರ ಚ ॥ ೩೨ ॥

ಕದಾಚಿನ್ಮೃಗಯಾಂ ಯಾತಃ ಪ್ರಸೇನಸ್ತೇನ ಭೂಷಿತಃ ।
ಸ್ಯಮಂತಕಕೃತೇ ಸಿಂಹಾದ್ವಧಂ ಪ್ರಾಪ್ತಃ ಸುದಾರುಣಂ ॥ ೩೩ ॥

ಜಾಂಬವಾನೃಕ್ಷರಾಜಸ್ತು ತಂ ಸಿಂಹಂ ನಿಜಘಾನ ವೈ ।
ಆದಾಯ ಚ ಮಣಿಂ ದಿವ್ಯಂ ಸ್ವಂ ಬಿಲಂ ಪ್ರವಿವೇಶಹ ॥ ೩೪ ॥

---

೩೦. ಅನಂತರ ಇಂದ್ರನನ್ನು ಜಯಿಸಿದ ಪ್ರಸೇನಮಹಾರಾಜನು ದಿವ್ಯವಾದ ಸ್ಯಮಂತಕರತ್ನವನ್ನು ತಮ್ಮನಾದ ಸತ್ರಾಜಿದ್ರಾಜನಿಗೆ ಪ್ರೀತಿಯಿಂದ ಕೊಟ್ಟನು.

೩೧. ಆ ಸ್ಯಮಂತಕರತ್ನವು ಯಾವ ದೇಶದಲ್ಲಿರುತ್ತದೆಯೋ ಆ ದೇಶದಲ್ಲಿ ಸಕಾಲಕ್ಕೆ ಮಳೆಯಾಗುವುದು. ಬೆಳೆಯು ಸಮೃದ್ಧಿಯಾಗುವುದು. ರೋಗಾದ್ಯುಪದ್ರವಗಳಾವವೂ ಇರುವುದಿಲ್ಲವೆಂದು ಹೇಳುವರು.

೩೨. ಶ್ರೀಕೃಷ್ಣನು ಆ ರತ್ನವನ್ನು ನೋಡಿ ವಿಸ್ಮಯದಿಂದ ತನಗೆ ಕೊಡುವಂತೆ ಪ್ರಸೇನನನ್ನು ಬೇಡಿದನು. ಆದರೆ ರಾಜನು ರತ್ನವನ್ನು ಶ್ರೀಕೃಷ್ಣನಿಗೆ ಕೊಡಲಿಲ್ಲ. ಶ್ರೀಹರಿಯು ಶಕ್ತನಾದರೂ ಬಲಾತ್ಕಾರದಿಂದ ಅದನ್ನು ಅಪಹರಿಸಲಿಲ್ಲ.

೩೩. ಹೀಗಿರಲು ಒಂದಾನೊಂದು ದಿವಸ ಪ್ರಸೇನನು ರತ್ನವನ್ನು ಧರಿಸಿ ಬೇಟೆಗೆ ಹೋದನು. ಆಗ ಒಂದು ಸಿಂಹವು ಆ ರತ್ನವನ್ನು ನೋಡಿ ಆ ರಾಜನನ್ನು ಸಂಹರಿಸಿ ರತ್ನವನ್ನು ಅಪಹರಿಸಿತು.

೩೪. ತರುವಾಯ ಕರಡಿಗಳಿಗೆ ರಾಜನಾದ ಜಾಂಬವಂತನು ಸಿಂಹವನ್ನು ಕೊಂದು ಆ ರತ್ನವನ್ನು ಸ್ವೀಕರಿಸಿಕೊಂಡು ತನ್ನ ಗುಹೆಯನ್ನು ಪ್ರವೇಶಿಸಿದನು.

ತತ್ಕರ್ಮ ಕೃಷ್ಣಸ್ಯ ತತೋ ವೃಷ್ಣ್ಯಂಧಕಮಹತ್ತರಾಃ |
ಮಣಿಗೃಧ್ನುಂ ತು ಮನ್ವಾನಾಸ್ತಾಮೇವ ವಿಶಶಂಕಿರೇ || ೩೫ ||

ಮಿಥ್ಯಾಭಿಶಸ್ತಿಂ ತೇಭ್ಯಸ್ತಾಂ ಬಲವಾನರಿಸೂದನಃ |
ಅಮೃಷ್ಯಮಾಣೋ ಭಗವಾನ್ ವನಂ ಸ ವಿಚಚಾರ ಹ || ೩೬ ||

ಸ ತು ಪ್ರಸೇನ ಮೃಗಯಾ ವಚರತ್ತತ್ರ ಚಾಪ್ಯಥ |
ಪ್ರಸೇನಸ್ಯ ಪದಂ ಗೃಹ್ಯ ಪುರುಷೈರಾಪ್ತಕಾರಿಭಿಃ || ೩೭ ||

ಋಕ್ಷವಂತಂ ಗಿರಿವರಂ ವಿಂಧ್ಯಂ ಚ ನಗಮುತ್ತಮಂ |
ಅನ್ವೇಷಣಪ್ರರಿಶ್ರಾಂತಃ ಸ ದದರ್ಶ ಮಹಾಮನಾಃ || ೩೮ ||

---

೩೫. ಪ್ರಸೇನರಾಯನು ಮೃತನಾಗಲು ವೃಷ್ಣಿವಂಶದವರೂ ಅಂಧಕವಂಶದವರೂ ಸಹ ಕೃಷ್ಣನೇ ರತ್ನದ ಲೋಭದಿಂದ ಈ ಕಾರ್ಯವನ್ನು ಮಾಡಿರುವನೆಂದು ತಿಳಿದು ಅವನ ಮೇಲೆ ಅಪವಾದವನ್ನು ಹೊರಸಿದರು.

೩೬. ಶತ್ರುನಾಶಕನಾದ ಶ್ರೀಕೃಷ್ಣನು ಆ ಮಿಥ್ಯಾಪವಾದವನ್ನು ಕೇಳಿ ಸಹನವಿಲ್ಲದೆಯೇ ಆ ಪ್ರಸೇನಮಹಾರಾಜನನ್ನು ಹುಡುವುದಕ್ಕಾಗಿ ಪರಿವಾರದೊಂದಿಗೆ ವನಕ್ಕೆ ಹೋದನು.

೩೭. ಪ್ರಸೇನರಾಜನು ಮೃಗಯಾವಿನೋದಕ್ಕಾಗಿ ಯಾವ ವನಕ್ಕೆ ಹೋಗಿದ್ದನೋ ಅಲ್ಲಿಗೆ ಅವನ ಹೆಜ್ಜೆಯನ್ನು ಹುಡುಕಿಕೊಂಡು ಆಪ್ತರಾದ ಪುರುಷರ ಸಂಗಡ ಹೊರಟನು.

೩೮. ಆಗ ಮಹಾಬುದ್ಧಿವಂತನಾದ ಶ್ರೀಕೃಷ್ಣನು ಋಕ್ಷವಂತವೆಂಬ ಪರ್ವತೋತ್ತಮದಲ್ಲಿಯೂ, ವಿಂಧ್ಯವೆಂಬ ಗಿರಿವರದಲ್ಲಿಯೂ ಹುಡುಕಿ ಸಿಕ್ಕದೆ ಬಹಳವಾಗಿ ಶ್ರಾಂತನಾದನು.

ಸಾಶ್ವಂ ಹತಂ ಪ್ರಸೇನಂ ತಂ ನಾವಿಂದತ್ರತ್ರ ವೈ ಮಣಿಂ ।
ಅಥ ಸಿಂಹಃ ಪ್ರಸೇನಸ್ಯ ಶರೀರಸ್ಯಾವಿದೂರತಃ ॥ ೩೯ ॥

ಋಕ್ಷೇಣ ನಿಹತೋ ದೃಷ್ಟಃ ಪಾದ್ಯೈರ್ಋಕ್ಷಸ್ಯ ಸೂಚಿತಾಂ ।
ಪದೈರನ್ವೇಷಯಾಮಾಸ ಗುಹಾಮೃಕ್ಷಸ್ಯ ಯಾದವಃ ॥ ೪೦ ॥

ಮಹತ್ಯತಿಬಿಲೇ ವಾಣೀಂ ಶುಶ್ರಾವ ಪ್ರಮದೇರಿತಾಂ ।
ಧಾತ್ರ್ಯಾ ಕುಮಾರಮಾದಾಯ ಸುತಂ ಜಾಂಬವತೋ ದ್ವಿಜಾಃ ॥
ಪ್ರೀತಿಮತ್ಯಾಥ ಮಣಿನಾ ಮಾರೋದೀರಿತ್ಯುದೀರಿತಾಂ ॥ ೪೧ ॥

॥ ಧಾತ್ರ್ಯುವಾಚ ॥

ಪ್ರಸೇನಮವಧೀತ್ ಸಿಂಹಃ ಸಿಂಹೋ ಜಾಂಬವತಾ ಹತಃ ।
ಸುಕುಮಾರಕ ಮಾರೋದೀಸ್ತವ ಹ್ಯೇಷ ಸ್ಯಮಂತಕಃ ॥ ೪೨ ॥

---

೩೯. ಕೊನೆಗೆ ಶ್ರೀಹರಿಯು ಅಶ್ವಸಮೇತನಾಗಿ ಹತನಾಗಿ ಬಿದ್ದಿರುವ ಪ್ರಸೇನರಾಜನನ್ನು ನೋಡಿದನು. ಆದರೆ ಅವನ ಬಳಿಯಲ್ಲಿ ಆ ರತ್ನವು ಮಾತ್ರ ಇರಲಿಲ್ಲ. ಇನ್ನೂ ಸ್ವಲ್ಪ ದೂರ ಹುಡುಕಲಾಗಿ ಪ್ರಸೇನನನ್ನು ಕೊಂದು ಸಿಂಹವು ಮೃತವಾಗಿ ಬಿದ್ದಿತು.

೪೦. ಆ ಸ್ಥಳದಲ್ಲಿ ಕರಡಿಯ ಹೆಜ್ಜೆಗಳು ಕಂಡುಬಂದುದರಿಂದ ಕರಡಿಯೇ ಸಿಂಹವನ್ನು ಕೊಂದಿರಬೇಕೆಂದು ಊಹಿಸಿದರು. ಆಗ ಯದುಕುಲೋತ್ಪನ್ನನಾದ ಕೃಷ್ಣನು ಕರಡಿಯ ಪಾದಗಳ ಗುರುತುಗಳಿಂದ ವಾಸವಾಗಿರುವ ಅದುಗುಹೆಯನ್ನು ತಿಳಿದನು.

೪೧. ಅತಿವಿಶಾಲವೂ, ಅತಿದೀರ್ಘವೂ ಆದ ಆ ಬಿಲದಲ್ಲಿ ಸ್ತ್ರೀಯರ ವಾಣಿಯನ್ನು ಕೇಳಿದನು. ಎಲೈ ವಿಪ್ರವರ್ಯರೇ, ಆ ಗವಿಯಲ್ಲಿ ಒಬ್ಬ ದಾದಿಯು ಜಾಂಬವಂತನ ಸುತನನ್ನು ಆಡಿಸುತ್ತಾ ನಿಮ್ಮ ತಂದೆಯು ನಿನಗಾಗಿ ದಿವ್ಯರತ್ನವನ್ನು ತಂದಿರುವನು. ಆದುದರಿಂದ ಅಳಬೇಡವೆಂದಳು.

೪೨. ದಾದಿಯು ಹೇಳಿದಳು :—ಸಿಂಹವು ಬೇಟೆಗೆ ಬಂದ ಪ್ರಸೇನರಾಯನನ್ನು ಕೊಂದಿತು. ಆ ಸಿಂಹವದ್ನು ಜಾಂಬವಂತನು ಸಂಹಾರಮಾಡಿದನು. ಎಲೈ ಸುಂದರನಾದ ಕುಮಾರನೇ, ನಿನ್ನ ಆಟಕ್ಕಾಗಿ ಈ ಸ್ಯಮಂತಕರತ್ನವು ದೊರೆತಿದೆ. ಅಳಬೇಡವೆಂದು ಸಮಾಧಾನಮಾಡಿದಳು.

**ವ್ಯಕ್ತೀಕೃತಂ ಚ ಶಬ್ದಂ ತಂ ತೂರ್ಣಂ ಸೋಽಪಿ ಯಯೌ ಬಿಲಂ।**
**ಅಪಶ್ಯಚ್ಚ ವಿಲಭ್ಯಾಶೇ ಪ್ರಸೇನಮುವದಾರಿತಂ ॥ ೪೩ ॥**

**ಪ್ರವಿಶ್ಯ ಚಾಪಿ ಭಗವಾಂಸ್ತದ್ವೃಕ್ಷಬಿಲಮಂಜಸಾ।**
**ದದರ್ಶ ಋಕ್ಷರಾಜಾನಂ ಜಾಂಬವಂತಮುದಾರಧೀಃ ॥ ೪೪ ॥**

**ಯುಯುಧೇ ವಾಸುದೇವಸ್ತು ಬಿಲೇ ಜಾಂಬವತಾ ಸಹ।**
**ಬಾಹುಭ್ಯಾಮೇವ ಗೋವಿಂದೋ ದಿವಸಾನೇಕವಿಂಶತಿಂ ॥ ೪೫ ॥**

**ಪ್ರವಿಷ್ಟೇ ಚ ಬಿಲಂ ಕೃಷ್ಣೇ ವಸುದೇವಪುರಃ ಸರಾಃ।**
**ಪುನರ್ದ್ವಾರವತೀಮೇತ್ಯ ಹತಂ ಕೃಷ್ಣಂ ನ್ಯವೇದಯನ್ ॥ ೪೬ ॥**

**ವಾಸುದೇವಸ್ತು ನಿರ್ಜಿತ್ಯ ಜಾಂಬವಂತಂ ಮಹಾಬಲಂ।**
**ಲೇಭೇ ಜಾಂಬವತೀಂ ಕನ್ಯಾಮೃಕ್ಷರಾಜಸ್ಯ ಸಮ್ಮತಾಂ ॥ ೪೭ ॥**

---

೪೩. ಆ ಕೃಷ್ಣನು ಶಬ್ದವನ್ನು ಕೇಳಿ ನಿಶ್ಚಯಿಸಿ ಬಿಲದಲ್ಲಿ ಪ್ರಸೇನನ ರತ್ನವಿದೆಯೆಂದು ಊಹಿಸಿ ಅಲ್ಲಿಗೆ ಹೋದನು. ಆ ಬಿಲದ ಸಮೀಪದಲ್ಲಿಯೇ ಪ್ರಸೇನರಾಯನು ಸತ್ತುಬಿದ್ದಿದ್ದನು.

೪೪. ಅನಂತರ ವಿಶಾಲಹೃದಯನಾದ ಶ್ರೀಕೃಷ್ಣನು ಆ ಬಿಲವನ್ನು ಧೈರ್ಯದಿಂದ ಪ್ರವೇಶಿಸಿದನು. ತರುವಾಯ ಅಲ್ಲಿರತಕ್ಕ ಋಕ್ಷಪತಿಯಾದ ಜಾಂಬವಂತನನ್ನು ಕಂಡನು.

೪೫. ಆಗ ವಸುದೇವಕುಮಾರನಾದ ಕೃಷ್ಣನು ಆ ಗುಹೆಯಲ್ಲಿಯೇ ಜಾಂಬವಂತನ ಕೂಡ ಇಪ್ಪತ್ತೊಂದು ದಿವಸ ಬಾಹುಯುದ್ಧವನ್ನು ಮಾಡಿದನು.

೪೬. ಶ್ರೀಕೃಷ್ಣನು ಬಿಲವನ್ನು ಪ್ರವೇಶಿಸಿ ಬಹುಕಾಲ ಬರದಿರಲು ವಸುದೇವನೇ ಮೊದಲಾದವರು ಸ್ವಲ್ಪಕಾಲ ಕಾದಿದ್ದು ಕೃಷ್ಣನು ಮೃತನಾಗಿರುವನೆಂದು ಭಾವಿಸಿ ವ್ಯಸನದಿಂದ ದ್ವಾರಕೆಗೆ ಹೋಗಿ ಹತನಾದ ಸಂಗತಿಯನ್ನು ಎಲ್ಲರಿಗೂ ತಿಳಿಸಿದರು.

೪೭. ಅನಂತರ ವಸುದೇವಕುಮಾರನಾದ ಶ್ರೀಕೃಷ್ಣನು ಮಹಾಬಲಿಷ್ಠನಾದ ಜಾಂಬವಂತನನ್ನು ಸೋಲಿಸಿ ಅವನು ಭಕ್ತಿಯಿಂದ ಕೊಟ್ಟ ಆ ರತ್ನವನ್ನೂ ಅವನ ಪುತ್ರಿಯಾದ ಜಾಂಬವತೀದೇವಿಯನ್ನೂ ಸ್ವೀಕರಿಸಿದನು.

ಭಗವತ್ತೇಜಸಾಗ್ರಸ್ತೋ ಜಾಂಬವಾನ್ ಪ್ರಸಭಂ ಮಣಿಂ ।
ಸುತಾಂ ಜಾಂಬವತೀಮಾಶು ವಿಷ್ವಕ್ಸೇನಾಯ ದತ್ತವಾನ್ ॥ ೪೮ ॥

ಮಣಿಂ ಸ್ಯಮಂತಕಂ ಚೈವ ಜಗ್ರಾಹಾತ್ಮವಿಶುದ್ಧಯೇ ।
ಅನುನೀಯ ಋಕ್ಷರಾಜಂ ನಿರ್ಯಯೌ ಚ ತದಾ ಬಿಲಾತ್ ॥ ೪೯ ॥

ಏವಂ ಸ ಮಣಿಮಾದಾಯ ವಿಶೋಧ್ಯಾತ್ಮಾನ ಮಾತ್ಮನಾ ।
ದದೌ ಸತ್ರಾಜಿತೇ ತಂ ವೈ ಮಣಿಂ ಸಾತ್ವತಸನ್ನಿಧೌ ॥ ೫೦ ॥

ಕನ್ಯಾಂ ಪುನರ್ಜಾಂಬವತೀಮುವಾಚ ಮಧುಸೂದನಃ ।
ತಸ್ಮಾನ್ಮಿಥ್ಯಾಭಿಶಾಪಾತ್ ಸ ವ್ಯಮುಚ್ಯತ ಜನಾರ್ದನಃ ॥ ೫೧ ॥

---

೪೮. ಶ್ರೀಕೃಷ್ಣನ ಮಹಾತೇಜಸ್ಸಿನಿಂದ ಪರಾಜಿತನಾದ ಜಾಂಬವಂತನು ಅವನನ್ನು ಶ್ರೀಭಗವಂತನೆಂದು ತಿಳಿದು ಜಾಗ್ರತೆಯಾಗಿ ರತ್ನವನ್ನೂ ಮತ್ತು ತನ್ನ ಕುಮಾರಿಯನ್ನು ಕೂಡ ಪರಮಾತ್ಮನಾದ ಶ್ರೀಕೃಷ್ಣನಿಗೆ ಕೊಟ್ಟನು.

೪೯. ಅನಂತರ ಕೃಷ್ಣನು ಆ ಸ್ಯಮಂತಕಮಣಿಯನ್ನೂ, ಜಾಂಬವತಿಯನ್ನೂ ಸ್ವೀಕರಿಸಿಕೊಂಡು ಋಕ್ಷಾಧಿಪತಿಯಾದ ಜಾಂಬವಂತನಿಗೆ ಸಮಾಧಾನ ಹೇಳಿ ಅಪವಾದ ಪರಿಹಾರಕ್ಕಾಗಿ ಆ ರತ್ನವನ್ನು ಸ್ವೀಕರಿಸಿ ಬಿಲದಿಂದ ಹೊರಟನು.

೫೦. ಹೀಗೆ ಶ್ರೀಕೃಷ್ಣನು ಲೋಕಾಪವಾದ ಪರಿಹಾರಕ್ಕಾಗಿ ಆ ಸ್ಯಮಂತಕ ರತ್ನವನ್ನು ತಂದು ಸಮಸ್ತ ಯಾದವರ ಸಭೆಯಲ್ಲಿ ಪ್ರಸೇನನ ತಮ್ಮನಾದ ಸತ್ರಾಜಿದ್ರಾಜನಿಗೆ ಕೊಟ್ಟನು.

೫೧. ಅನಂತರ ಪೂಜ್ಯನಾದ ಶ್ರೀಕೃಷ್ಣನು ಋಕ್ಷರಾಜನ ಕುಮಾರಿಯಾದ ಜಾಂಬವತಿಗೆ ಎಲೈ ಪ್ರಿಯಳೇ, ಈ ರತ್ನದ ನಿಮಿತ್ತವಾಗಿ ನನಗೆ ಲೋಕಾಪವಾದವು ಬಂದಿದೆ. ಈ ರತ್ನವು ಸಿಕ್ಕಿದ ಮೇಲೆ ಆ ಅಪವಾದವು ಪರಿಹೃತವಾಯಿತೆಂದು ಹೇಳಿದನು.

ಇಮಾಂ ಮಿಥ್ಯಾಭಿಶಸ್ತಿಂ ಯಃ ಕೃಷ್ಣಸ್ಯೇಹ ವ್ಯಪೋಹಿತಾಂ ।
ವೇದ ಮಿಥ್ಯಾಭಿಶಸ್ತೇಃ ಸ ನಾಭಿಶಸ್ಯತಿ ಕರ್ಹಿಚಿತ್ ॥ ೫೨ ॥

ದಶಸ್ವಸೃಭ್ಯೋ ಭಾರ್ಯಾಭ್ಯಃ ಶತ್ರುಜಿತ್ತಃ ಶತಂ ಸುತಾಃ ।
ಖ್ಯಾತಿಮಂತಸ್ತ್ರಯಸ್ತೇಷಾಂ ಭಂಗಕಾರಸ್ತು ಪೂರ್ವಜಃ ॥
ವೀರೋ ವ್ರತಪತಿಶ್ಚೈವ ಹ್ಯಪಸ್ವಾಂತಶ್ಚ ಸುಪ್ರಿಯಃ ॥ ೫೩ ॥

ಅಥ ದ್ವಾರವತೀ ನಾಮ ಭಂಗಕಾರಸ್ಯ ಸುಪ್ರಜಾ ।
ಸುಷುವೇ ಸಾ ಕುಮಾರೀಸ್ತು ತಿಸ್ರೋ ರೂಪಗುಣಾನ್ವಿತಾಃ ॥ ೫೪ ॥

ಸತ್ಯಭಾಮೋತ್ತಮಾ ಸ್ತ್ರೀಣಾಂ ವ್ರತಿನೀವ ಧೃಡವ್ರತಾ ।
ತಥಾ ತಪಸ್ವಿನೀ ಚೈವ ಪಿತಾ ಕೃಷ್ಣಸ್ಯ ತಾಂ ದದೌ ॥ ೫೫ ॥

---

೫೨. ಶ್ರೀಕೃಷ್ಣನು ಮಣಿಯನ್ನು ತಂದುಕೊಟ್ಟು ಅಪವಾದವನ್ನು ಪರಿಹರಿಸಿಕೊಂಡನೆಂದು ಯಾವನು ತಿಳಿಯಲಾರನೋ ಅವನಿಗೆ ಅಂತಹ ಅಪವಾದಗಳು ಸಂಭವಿಸುವುವು. ಅವನಿಗೆ ಒಳ್ಳೆಯದಾಗುವುದಿಲ್ಲ ಎಂದು ಹೇಳಿದನು.

೫೩. ಶತ್ರುಸಂಹಾರಕನಾದ ಶ್ರೀಕೃಷ್ಣನಿಗೆ ಹತ್ತು ಜನ ಪತ್ನಿಯರಲ್ಲಿಯೂ ನೂರಾರುಜನ ಮಕ್ಕಳು ಜನಿಸಿದರು. ಅವರಲ್ಲಿ ಪ್ರಖ್ಯಾತರಾದವರು ಮೂವರಿರುವರು. ಅವರಲ್ಲಿ ಭಾಸ್ಕರನು ಅಗ್ರಜನಾಗಿರುವನು. ಅವರಲ್ಲಿ ವೀರನಾದ ವ್ರತಪತಿ, ಅಪಸ್ವಾಂತ, ಸುಪ್ರಿಯರೆಂಬುವರು ಪ್ರಮುಖರಾಗಿರುವರು.

೫೪. ತರುವಾಯ ಭಂಗಕಾರಕನ ಪತ್ನಿಯೂ, ಉತ್ತಮಸಂತಾನವುಳ್ಳವಳೂ ಆದ ದ್ವಾರವತೀ ಎಂಬುವಳು ರೂಪಗುಣಸಂಪನ್ನರಾದ ಮೂವರು ಪುತ್ರಿಯರನ್ನು ಪಡೆದಳು.

೫೫. ಅವರಲ್ಲಿ ಸತ್ಯಭಾಮೆಯು ಉತ್ತಮಳೂ, ವ್ರತಸಂಪನ್ನಳೂ, ಧೃಢವ್ರತಳೂ ಮತ್ತು ತಪಸ್ವಿನಿಯೂ ಆಗಿದ್ದಳು. ಇಂತಹ ಕುಮಾರಿಯನ್ನು ಕೃಷ್ಣನಿಗೆ ದಾನಮಾಡಿದನು.

ಯತ್ತತ್ ಸತ್ರಾಜಿತೇ ಕೃಷ್ಣೋ ಮಣಿರತ್ನಂ ಸ್ಯಮಂತಕಂ ।
ಸ್ಪ್ರಾದಾತ್ತದಾಹರದ್ರತ್ನಂ ಭೋಜೇನ ಶತಧನ್ವನಾ || ೫೬ ||

ತದಾ ಹಿ ಪ್ರಾರ್ಥಯಾಮಾಸ ಸತ್ಯಭಾಮಾಮನಿಂದಿತಾಂ ।
ಅಕ್ರೂರೋ ರತ್ನಮನ್ವಿಚ್ಛನ್ ಮಣಿಂಚೈವ ಸ್ಯಮಂತಕಂ || ೫೭ ||

ಭದ್ರಕಾರಂ ತತೋ ಹತ್ವಾ ಶತಧನ್ವಾ ಮಹಾಬಲಃ ।
ರಾತ್ರೌ ತಂ ಮಣಿಮಾದಾಯ ತತೋಽಕ್ರೂರಾಯ ದತ್ತವಾನ್ || ೫೮ ||

ಅಕ್ರೂರಸ್ತು ತದಾ ರತ್ನಮಾದಾಯ ಸ ನರರ್ಷಭಃ ।
ಸಮಯಂ ಕಾರಣಂ ಚಕ್ರೇ ಬೋಧ್ಯೋ ನಾನ್ಯೈಸ್ತ್ವಯೇತ್ಯುತ ||೫೯ ||

ವಯಮಭ್ಯುಪಪತ್ಸ್ಯಾಮಃ ಕೃಷ್ಣೇನ ತ್ವಂ ಪ್ರಧರ್ಷಿತಃ ।
ಮಮ ಚ ದ್ವಾರಕಾಃ ಸರ್ವಾ ವಶೇ ತಿಷ್ಠಂತ್ಯಸಂಶಯಂ || ೬೦ ||

---

೫೬. ಯಾವ ಸ್ಯಮಂತಕರತ್ನವನ್ನು ಶ್ರೀಕೃಷ್ಣನು ಸತ್ರಾಜಿದ್ರಾನಿಗೆ ಕೊಟ್ಟಿದ್ದನೋ, ಅದನ್ನು ಭೋಜದೇಶಾಧಿಪತಿಯಾದ ಶತಧನ್ವನು ಅಪಹರಿಸಿದನು.

೫೭. ಆಗ ಅಕ್ರೂರನು ನಿರ್ದೋಷಿಯಾದ ಸತ್ಯಭಾಮೆಯನ್ನು ಆ ಸ್ಯಮಂತಕರತ್ನವನ್ನು ಕೊಡುವಂತೆ ಪ್ರಾರ್ಥಿಸಿಕೊಂಡನು.

೫೮. ಅನಂತರ ಮಹಾಬಲಶಾಲಿಯಾದ ಶತಧನ್ವನು ಭದ್ರಕಾರನನ್ನು ಸಂಹರಿಸಿ ಅದೇ ರಾತ್ರಿಯಲ್ಲಿಯೇ ಅದನ್ನು ತಂದು ಅಕ್ರೂರನಿಗೆ ಕೊಟ್ಟನು.

೫೯. ಪುರುಷಶ್ರೇಷ್ಠನಾದ ಅಕ್ರೂರನು ಆ ರತ್ನವನ್ನು ಸ್ವೀಕರಿಸಿ ಈ ರತ್ನವು ನಿನ್ನನ್ನು ಬಿಟ್ಟರೆ ಯಾರಿಂದಲೂ ಅಪಹರಿಸಲು ಅಸಾಧ್ಯವೆಂದು ಪ್ರತಿಜ್ಞೆಯನ್ನು ಮಾಡಿದನು.

೬೦. ನಾವು ಆ ರತ್ನವನ್ನು ಪಡೆಯಲು ಯೋಗ್ಯರಾಗಿರುತ್ತೇವೆ. ಶ್ರೀಕೃಷ್ಣನು ನಿನ್ನನ್ನು ಹೆದರಿಸಿರುವನು. ದ್ವಾರಕಾವಾಸಿಗಳಾದ ಸಮಸ್ತ ಜನರೂ ನನ್ನ ಅಧೀನದಲ್ಲಿರುವರು ಎಂದು ಹೇಳಿದನು. ಈ ವಿಷಯದಲ್ಲಿ ಸಂದೇಹವಿಲ್ಲವೆಂದನು.

**ಹತೇ ಪಿತರಿ ದುಃಖಾರ್ತಾ ಸತ್ಯಭಾಮಾ ಯಶಸ್ವಿನೀ ।**
**ಪ್ರಯಯೌ ರಥಮಾರುಹ್ಯ ನಗರಂ ವಾರಣಾವತಂ ॥ ೬೧ ॥**

**ಸತ್ಯಭಾಮಾ ತು ತದ್ವೃತ್ತಂ ಭೋಜಸ್ಯ ಶತಧನ್ವನಃ ।**
**ಭರ್ತುರ್ನಿವೇದ್ಯ ದುಃಖಾರ್ತಾ ಪಾರ್ಶ್ವಸ್ಥಾಶ್ರೂಣ್ಯವರ್ತಯತ್ ॥ ೬೨ ॥**

**ಪಾಂಡವಾನಾಂ ತು ದಗ್ಧಾನಾಂ ಹರಿಃ ಕೃತ್ವೋದಕಕ್ರಿಯಾಂ ।**
**ತುಲ್ಯಾರ್ಥೇ ಚೈವ ಭ್ರಾತೄಣಾಂ ನಿಯೋಜಯತಿ ಸಾತ್ಯಕಿಂ ॥ ೬೩ ॥**

**ತತಸ್ತ್ವರಿತಮಾಗಮ್ಯ ದ್ವಾರಕಾಂ ಮಧುಸೂದನಃ ।**
**ಪೂರ್ವಜಿಂ ಹಲಿನಂ ಶ್ರೀಮಾನ್ನಿದಂ ವಚನಮಬ್ರವೀತ್ ॥ ೬೪ ॥**

---

೬೧. ಅನಂತರ ಸತ್ಯಭಾಮೆಯು ತನ್ನ ತಂದೆಯು ಹತನಾಗಲು ದುಃಖಿತಳಾಗಿ ಈ ಸಂಗತಿಯನ್ನು ತನ್ನ ಪತಿಗೆ ತಿಳಿಸುವುದಕ್ಕಾಗಿ ರಥವನ್ನೇರಿಕೊಂಡು ವಾರಣಾವತನಗರಕ್ಕೆ ಹೋದಳು.

೬೨. ಅನಂತರ ಸತ್ಯಭಾಮೆಯು ಈ ಕಾರ್ಯವನ್ನು ಭೋಜಾಧಿಪತಿಯಾದ ಶತಧನ್ವನು ಮಾಡಿದನೆಂದು ತಿಳಿಸಲು, ತನ್ನ ಪತಿಯ ಬಳಿಗೆ ಹೋಗಿ ಈ ವೃತ್ತಾಂತವನ್ನು ತಿಳಿಸಿ ಖಿನ್ನಳಾಗಿ ಪಕ್ಕದಲ್ಲಿ ನಿಂತು ಕಣ್ಣೀರನ್ನು ಸುರಿಸಿದಳು.

೬೩. ಶ್ರೀಕೃಷ್ಣನು ದಗ್ಧರಾದ ಪಾಂಡವರಿಗೆ ತಿಲೋದಕವನ್ನು ಕೊಟ್ಟು ತೃಪ್ತಿಪಡಿಸಿದಂತೆ ಭಾತೃಗಳಿಗೆ ಹೀಗೆ ಮಾಡಬೇಕೆಂದು ಸತ್ಯಭಾಮೆಯು ಸಾತ್ಯಕಿಗೆ ಹೇಳಿದಳು.

೬೪. ಅನಂತರ ಸಂಪದ್ಯುಕ್ತನೂ ಮಧುನಾಮಕದೈತ್ಯನನ್ನು ಸಂಹರಿಸಿದವನೂ ಆದ ಶ್ರೀಕೃಷ್ಣನು (ಮದುಸೂದನನಾದ) ದ್ವಾರಕಾನಗರಕ್ಕೆ ಶೀಘ್ರವಾಗಿ ಬಂದು, ಅಣ್ಣನಾದ ಬಲರಾಮನಿಗೆ ಈ ವೃತ್ತಾಂತವನ್ನು ತಿಳಿಸಿದನು.

ಹತಃ ಪ್ರಸೇನಃ ಸಿಂಹೇನ ಸತ್ರಾಜಿಚ್ಛತಧನ್ವನಾ ।
ಸ್ಯಮಂತಕಮಹಂ ಮಾರ್ಗೇ ತಸ್ಯ ಪ್ರಹರ ಹೇ ಪ್ರಭೋ || ೬೫ ||

ತದಾರೋಹ ರಥಂ ಶೀಘ್ರಂ ಭೋಜಂ ಹತ್ವಾ ಮಹಾಬಲಂ ।
ಸ್ಯಮಂತಕೋ ಮಹಾಬಾಹೋ ತದಾಸ್ಮಾಕಂ ಭವಿಷ್ಯತಿ || ೬೬ ||

ತತಃ ಪ್ರವೃತ್ತೇ ಯುದ್ಧೇ ತು ತುಮುಲೇ ಭೋಜಕೃಷ್ಣಯೋಃ ।
ಶತಧನ್ವಾ ನ ಚಾಕ್ರೂರಮನ್ವೈಕ್ಷತ್ ಸರ್ವತೋ ದಿಶಿ || ೬೭ ||

ಅನಷ್ವಾಶ್ವಾವರೋಹಂ ತು ಕೃತ್ವಾ ಭೋಜಜನಾರ್ದನೌ ।
ಶಕ್ತೋಽಪಿ ಸಾಧ್ಯಾದ್ವಾರ್ಧಕ್ಯಾನ್ನಾಕ್ರೂರೋಽಭ್ಯುಪಪದ್ಯತ || ೬೮ ||

---

೬೫. ಎಲೈ ಹಿರಿಯವನಾದ ಅಣ್ಣನೇ (ಪ್ರಭುವೇ) ಬೇಟೆಯಾಡುವಾಗ ಸಿಂಹವು ಪ್ರಸೇನರಾಜನನ್ನು ಸಂಹರಿಸಿತು. ಆ ಸಿಂಹವನ್ನು ಜಾಂಬುವಂತನು ಸಂಹರಿಸಿದನು. ಆ ಜಾಂಬುವಂತನನ್ನು ಗೆದ್ದು ನಾನು ಆ ರತ್ನವನ್ನು ತಂದು ಸತ್ರಾಜಿದ್ರಾಜನಿಗೆ ಕೊಟ್ಟೆನು. ಶತಧನ್ವನು ಸತ್ರಾಜಿತನಿಂದ ಅದನ್ನು ಅಪಹರಿಸಿದನು. ನಾನು ಅದನ್ನು ಬಯಸುತ್ತೇನೆ. ಆದುದರಿಂದ ನೀನು ಅದನ್ನು ತಂದು ಕೊಡು ಎಂದು ಕೃಷ್ಣನು ಬಲರಾಮನಿಗೆ ಹೇಳಿದನು.

೬೬. ತರುವಾಯ ಶೂರನಾದ ಬಲರಾಮನೇ ಬೇಗನೆ ರಥಾರೂಢನಾಗಿ ಅತಿ ಬಲಿಷ್ಠನಾದ ಭೋಜಾಧಿಪತಿಯನ್ನು ಸಂಹರಿಸಿ ಆ ಸ್ಯಮಂತಕಮಣಿಯನ್ನು ತಂದು ನನಗೆ ಕೊಡು ಎಂದು ಶ್ರೀಕೃಷ್ಣನು ಬೇಡಿದನು.

೬೭. ಅನಂತರ ಭೋಜಕೃಷ್ಣರಿಗೆ ಅತಿಭಯಂಕರವಾದ ಯುದ್ಧವು ನಡೆಯಲು ಶತಧನ್ವನು ಅಕ್ರೂರನನ್ನು ಎಲ್ಲಿಯೂ ಕಾಣದೇ ಭ್ರಾಂತನಾದನು.

೬೮. ಆ ಅಕ್ರೂರನು ಭೋಜಜನಾರ್ದನರನ್ನು ಅಶ್ವರಥರಹಿತರನ್ನಾಗಿ ಮಾಡಲು ಶಕ್ತನಾದರೂ, ಹಾಗೆ ಮಾಡದೆಯೇ ವಾರ್ಧಕ್ಯದಿಂದ ಉದಾಸೀನನಾಗಿದ್ದನು.

**ಅಪಯಾನೇ ತತೋ ಬುದ್ಧಿಂ ಭೂಯಶ್ಚಕ್ರೇ ಭಯಾನ್ವಿತಃ ।**
**ಯೋಜನಾನಾಂ ಶತಂ ಸಾಗ್ರಂ ಯಯಾ ಚ ಪ್ರತ್ಯಪದ್ಯತ ॥ ೧೯ ॥**

**ವಿಜ್ಞಾತಹೃದಯಾ ನಾಮ ಶತಯೋಜನಗಾಮಿನೀ ।**
**ಭೋಜಸ್ಯ ವಡವಾದಿತ್ಯೋ ಯಯಾ ಕೃಷ್ಣಮಯೋಧಯತ್ ॥ ೨೦ ॥**

**ಪ್ರವೃದ್ಧವೇಗಾ ವಡವಾ ತ್ವಧ್ವನಾಂ ಶತಯೋಜನಂ ।**
**ದೃಷ್ಟ್ವಾ ರಥಗತಿಸ್ತಸ್ಯ ಶತಧನ್ವಾನಮುರ್ದ್ಧಯತ್ ॥ ೨೧ ॥**

**ತತಸ್ತಸ್ಯ ಹಯಾಸ್ತೇ ತು ಶ್ರಮಾತ್ ಖೇದಾಚ್ಚ ವೈ ದ್ವಿಜಾಃ ।**
**ಖಮುತ್ಪೇತೂ ರಥಪ್ರಾಣಾಃ ಕೃಷ್ಣೋ ರಾಮಮಥಾಬ್ರವೀತ್ ॥ ೨೨ ॥**

---

೧೯. ಅನಂತರ ಮಧುಸೂದನನು ಭಯಭ್ರಾಂತನಾಗಿ ಪಲಾಯನವನ್ನು ಮಾಡಲು ನಿಶ್ಚಯಿಸಿದನು. ಮತ್ತು ತನ್ನ ಮಾಯೆಯಿಂದ ನೂರುಯೋಜನದಷ್ಟು ದೂರವಾಗಿ ಯಾರಿಗೂ ಕಾಣದಂತೆ ಹೋದನು.

೨೦. ಶತಧನ್ವನಲ್ಲಿ ಯಜಮಾನನ ಹೃದಯವನ್ನರಿತ ನೂರುಯೋಜನದಷ್ಟು ವೇಗವಾಗಿ ಹೋಗುವ ಸೂರ್ಯನ ಕುದುರೆಗೆ ಸಮನಾದ ಹೇಸರಕತ್ತೆಯು ಇತ್ತು. ಅದರಿಂದ ಅವನು ವೇಗವಾಗಿ ಹೋಗಿ ಕೃಷ್ಣನ ಸಂಗಡ ಪುನಃ ಹೋರಾಡಿದನು.

೨೧. ಪುನಃ ಭೋಜಾಧಿಪತಿಯಾದ ಶತಧನ್ವನನು ವೇಗವಾದ ಅಶ್ವಗಳಿಂದ ನೂರುಯೋಜನದಷ್ಟು ದೂರವಾಗಿ ಹೋದನು. ಶ್ರೀಕೃಷ್ಣನು ಈ ವಿಷಯಗಳನ್ನು ತಿಳಿದು ವೇಗವಾಗಿ ಅಲ್ಲಿಗೆ ಹೋಗಿ ಅವನನ್ನು ಮರ್ದಿಸಿದನು.

೨೨. ಅನಂತರ ಅವನ ಕುದುರೆಗಳು ಅತ್ಯಾಯಾಸದಿಂದಲೂ, ಖೇದದಿಂದಲೂ ಕೂಡಿ ರಥವನ್ನು ಬಿಟ್ಟು ಆಕಾಶಕ್ಕೆ ಹಾರಿದುವು. ಆಗ ಶ್ರೀಕೃಷ್ಣನು ಬಲರಾಮನನ್ನು ಕುರಿತು ಹೀಗೆ ಹೇಳಿದನು.

ತಿಷ್ಠ ಸ್ತ್ವೇಹ ಮಹಾಬಾಹೋ ದೃಷ್ಟದೋಷಾ ಮಯಾ ಹಯಾಃ ।
ಪದ್ಭ್ಯಾಂ ಗತ್ವಾ ಹರಿಷ್ಯಾಮಿ ಮಣಿರತ್ನಂ ಸ್ಯಮಂತಕಂ ॥ ೭೩ ॥

ಪದ್ಭ್ಯಾಮೇವ ತತೋ ಗತ್ವಾ ಶತಧನ್ವಾನಮಚ್ಯುತಃ ।
ಮಿಥಿಲಾಧಿಪತಿಂ ತಂ ವೈ ಜಘಾನ ಪರಮಾಸ್ತ್ರವಿತ್ ॥ ೭೪ ॥

ಸ್ಯಮಂತಕಂ ನ ಚಾಪಶ್ಯದ್ಧತ್ವಾ ಭೋಜಂ ಮಹಾಬಲಂ ।
ನಿವೃತ್ತಂ ಚಾಬ್ರವೀತ್ ಕೃಷ್ಣಂ ರತ್ನಂ ದೇಹೇತಿ ಲಾಂಗಲೀ ॥ ೭೫ ॥

ನಾಸ್ತೀತಿ ಕೃಷ್ಣಶ್ಚೋವಾಚ ತತೋ ರಾಮೋ ರುಷಾನ್ವಿತಃ ।
ಧಿಕ್ಛಬ್ದಮಸಕೃತ್ ಪೂರ್ವಂ ಪ್ರತ್ಯುವಾಚ ಜನಾರ್ದನಂ ॥ ೭೬ ॥

---

೭೩. ಎಲೈ ಮಹಾನುಭಾವನೇ, ಇನ್ನು ನಿಲ್ಲು. ನಿನ್ನ ಅಶ್ವಗಳು ಶಕ್ತಿಹೀನವಾಗಿವೆಯೆಂಬುವುದು ವ್ಯಕ್ತವಾಗಿದೆ. ಈಗ ಪಾದಗಳಿಂದಲೇ ಸಂಚರಿಸಿ ಸ್ಯಮಂತನಾಮಕವಾದ ಉತ್ತಮರತ್ನವನ್ನು ಅಪಹರಿಸುವೆನೆಂದನು.

೭೪. ಅನಂತರ ಶ್ರೇಷ್ಠವಾದ ಅಸ್ತ್ರಗಳನ್ನು ತಿಳಿದಿರುವನೂ, ನಾಶರಹಿತನೂ, ಆದ ಶ್ರೀಕೃಷ್ಣನು ಪಾದಗಳಿಂದಲೇ ನಡೆದುಹೋಗಿ ಮಿಥಿಲಾಧಿಪತಿಯಾದ ಶತಧನ್ವನನ್ನು ಸಂಹರಿಸಿದನು.

೭೫. ತರುವಾಯ ಶ್ರೀಕೃಷ್ಣನು ಮಹಾಬಲಶಾಲಿಯಾದ ಭೋಜರಾಜನನ್ನು ಸಂಹರಿಸಿ ನೋಡಲಾಗಿ ಅವನ ಬಳಿಯಲ್ಲಿ ಆ ರತ್ನವು ಇರಲೇ ಇಲ್ಲ. ಆಗ ಅವನು ಹಿಂದಕ್ಕೆ ಬರಲು ಬಲರಾಮನು ಅವನನ್ನು ನೋಡಿ ರತ್ನವನ್ನು ಕೊಡುವಂತೆ ಕೇಳಿದನು.

೭೬. ಅನಂತರ ರತ್ನವು ಸಿಕ್ಕಲಿಲ್ಲವೆಂದು ಹೇಳಲಾಗಿ ಬಲರಾಮನು ಶ್ರೀಕೃಷ್ಣನ ಮೇಲೆ ಬಹಳವಾಗಿ ಕೋಪಿಸಿಕೊಂಡನು. ಪೂರ್ವದಂತೆ ಈಗಲೂ ಅನೃತವನ್ನು ಹೇಳುತ್ತೀಯೆಂದು ಧಿಕ್ಕಾರಪೂರ್ವಕವಾಗಿ ದೂಷಿಸಿದನು.

ಭ್ರಾತೃತ್ವಾನ್ಮರ್ಷಯಾ ಮ್ಯೇಷ ಸ್ವಸ್ತಿ ತೇಽಸ್ತು ವ್ರಜಾಮ್ಯಹಂ ।
ಕೃತ್ಯಂ ನ ಮೇ ದ್ವಾರಕಯಾ ನ ತ್ವಯಾ ನ ಚ ವೃಷ್ಣಿಭಿಃ ॥ ೭೭ ॥

ಪ್ರವಿವೇಶ ತತೋ ರಾಮೋ ಮಿಥಿಲಾಮರಿಮರ್ದನಃ ।
ಸರ್ವಕಾಮ್ಯೈರುಪಹೃತ್ಯೈರ್ಮೈಥಿಲೇನೈವ ಪೂಜಿತಃ ॥ ೭೮ ॥

ಏತಸ್ಮಿನ್ನೇವ ಕಾಲೇ ತು ಬಭ್ರುರ್ಮತಿಮತಾಂವರಃ ।
ನಾನಾರೂಪಾನ್ ಕ್ರತೂನ್ ಸರ್ವಾನಾಜಹಾರ ನಿರರ್ಗಲಾನ್ ॥ ೭೯ ॥

ದೀಕ್ಷಾಮಯಂ ಸಕವಚಂ ರಕ್ಷಾರ್ಥಂ ಪ್ರವಿವೇಶ ಹ ।
ಸ್ಯಮಂತಕಕೃತೇ ರಾಜಾ ಗಾಧಿಪುತ್ರೋ ಮಹಾಯಶಾಃ ॥ ೮೦ ॥

---

೭೭. ಓ ಕೃಷ್ಣನೇ, ನೀನು ನನಗೆ ಭ್ರಾತೃವಾದ ಕಾರಣ ಈ ಅಪರಾಧವನ್ನು ಕ್ಷಮಿಸಿರುವೆನು. ಒಳ್ಳೆಯದು ನಿನಗೆ ಮಂಗಳವಾಗಲಿ, ನಾನು ಹೊರಡುವೆನು. ಇನ್ನು ಮೇಲೆ ನಿನ್ನಿಂದಲೂ, ದ್ವಾರಕಾನಗರದಿಂದಲೂ, ವೃಷ್ಣಿಗಳಿಂದಲೂ ನನಗೆ ಏನೂ ಆಗಬೇಕಾಗಿಲ್ಲವೆಂದು ಹೇಳಿ ಬಲರಾಮನು ಹೊರಟನು.

೭೮. ಅನಂತರ ಶೂರನಾದ ಬಲರಾಮನು ಹೀಗೆ ಹೇಳಿ ಮಿಥಿಲಾನಗರಿಗೆ ಹೋದನು. ಆಗ ಮಿಥಿಲಾಧಿಪತಿಯು ಸಕಲ ಮರ್ಯಾದೆಗಳಿಂದ ಬಲರಾಮನನ್ನು ಪೂಜಿಸಿದನು.

೭೯. ಈ ಸಂದರ್ಭದಲ್ಲಿ ಜ್ಞಾನಿಶ್ರೇಷ್ಠನಾದ ಬಭ್ರುರಾಜನು ಅನೇಕ ರೂಪಗಳುಳ್ಳ ಯಾಗಗಳನ್ನು ಸರ್ವವೈಭವದೊಡನೇ ನಿಷ್ಕಂಟವಾಗಿ ಮಾಡಿದನು.

೮೦. ಆಗ ಮಹಾಕೀರ್ತಿವಂತನೂ, ಗಾಧಿಪುತ್ರನೂ ಆದ ಮಹಾರಾಜನು ಸ್ಯಮಂತಕಮಣಿಯನ್ನು ಹೊಂದುವುದಕ್ಕಾಗಿಯೂ ಮತ್ತು ರಕ್ಷಣೆಗಾಗಿಯೂ ದೀಕ್ಷಾಮಯವಾದ ಕವಚವನ್ನು ಹೊಂದಿದ್ದನು.

ಅರ್ಥಾನ್ರತ್ನಾನಿ ಚಾಗ್ರ್ಯಾಣಿ ದ್ರವ್ಯಾಣಿ ವಿವಿಧಾನಿ ಚ ।
ಷಷ್ಟಿವರ್ಷಗತೇ ಕಾಲೇ ಯಜ್ಞೇಷು ವಿನ್ಯಯೋಜಯತ್ || ೮೧ ||

ಅಕ್ರೂರಯಜ್ಞ ಇತ್ಯೇತೇ ಖ್ಯಾತಾಸ್ತಸ್ಯ ಮಹಾತ್ಮನಃ ।
ಬಹ್ವನ್ನದಕ್ಷಿಣಾಃ ಸರ್ವೇ ಸರ್ವಕಾಮಪ್ರದಾಯಿನಃ || ೮೨ ||

ಅಥ ದುರ್ಯೋಧನೋ ರಾಜಾ ಗತ್ವಾಽಥ ಮಿಥಿಲಾಂ ಪ್ರಭುಃ ।
ಗದಾಶಿಕ್ಷಾಂ ತತೋ ದಿವ್ಯಾಂ ಬಲಭದ್ರಾದವಾಪ್ತವಾನ್ || ೮೩ ||

ಪ್ರಸಾದ್ಯ ತು ತತೋ ವಿಪ್ರಾ ವೃಷ್ಣ್ಯಂಧಕಮಹಾರಥೈಃ ।
ಆನೀತೋ ದ್ವಾರಕಾಮೇವ ಕೃಷ್ಣೇನ ಚ ಮಹಾತ್ಮನಾ || ೮೪ ||

ಅಕ್ರೂರಮಂಧಕೈಃ ಸಾರ್ಧಮುಪಾಯಾತ್ ಪುರುಷರ್ಷಭಃ ।
ಯುದ್ಧೇ ಹತ್ವಾ ತು ಶತ್ರುಘ್ನಂ ಸಹ ಬಂಧುಮತಾ ಬಲೀ || ೮೫ ||

---

೮೧. ಆ ಯಾಗಗಳು ಅರವತ್ತು ವರ್ಷಗಳು ನಡೆದದ್ದರಿಂದ ಅದಕ್ಕಾಗಿ ಅನೇಕ ಅಮೂಲ್ಯವಾದ ದ್ರವ್ಯಗಳೂ, ಅನರ್ಘವಾದ ವಿವಿಧರತ್ನಗಳೂ, ನಾನಾವಿಧವಾದ ವಸ್ತುಗಳೂ ಬಂದು ಒದಗಿದುವು.

೮೨. ಆ ಮಹಾಯಾಗಗಳು ಮಹಾತ್ಮನಾದ ಅಕ್ರೂರನ ಯಾಗಗಳೆಂದು ಪ್ರಖ್ಯಾತವಾದುವು. ಆ ಸಮಸ್ತ ಯಾಗಗಳೂ ಬಹು ದ್ರವ್ಯದಕ್ಷಿಣೆ ಅನ್ನಪಾನವುಳ್ಳವುಗಳಾಗಿಯೂ, ಸರ್ವೇಷ್ಟಾರ್ಥಪ್ರದವಾಗಿಯೂ ಇದ್ದುವು.

೮೩. ಅನಂತರ ದುರ್ಯೋಧಮಹಾರಾಜನು ಮಿಥಿಲಾನಗರಿಗೆ ಹೋಗಿ ಬಲರಾಮನಿಂದ ದಿವ್ಯವಾದ ಗದಾವಿದ್ಯಾಶಿಕ್ಷೆಯನ್ನು ಕ್ರಮವಾಗಿ ಮಾಡಿದನು.

೮೪. ಅನಂತರ ವೃಷ್ಣಿಗಳು, ಅಂಧಕರು ಇವರೇ ಮೊದಲಾದ ಮಹಾರಥಿಕರು ಬಲರಾಮನನ್ನು ಸಮಾಧಾನವನ್ನು ಮಾಡಿ ಮಹಾತ್ಮನಾದ ಕೃಷ್ಣನ ಸಂಗಡ ದ್ವಾರಕಾನಗರಿಗೆ ಕರೆತಂದರು.

೮೫. ಅನಂತರ ಪುರುಷಶ್ರೇಷ್ಠನಾದ ಬಲರಾಮನು ಬಂಧುಗಳಿಂದಲೂ, ಅಂಧಕರಿಂದಲೂ ಕೂಡಿ ಅಕ್ರೂರನ ಸಂಗಡ ಯುದ್ಧಮಾಡಿ ಶತ್ರುವನ್ನು ಸಂಹಾರ ಮಾಡಿದನು.

ಶ್ವಫಲ್ಕತನಯಾಯಾಂ ತು ನರಾಯಾಂ ನರಸತ್ತಮೌ ।
ಭಂಗಕಾರಸ್ಯ ತನಯೌ ವಿಶ್ರುತೌ ಸುಮಹಾಬಲೌ ॥ ೮೬ ॥

ಜಜ್ಞಾತೇಂಧಕಮುಖ್ಯಸ್ಯ ಶತ್ರುಘ್ನೌ ಬಂಧುಮಾಂಶ್ಚ ತೌ ।
ವಧಾರ್ಥಂ ಭಂಗಕಾರಸ್ಯ ಕೃಷ್ಣೋ ನ ಪ್ರೀತಿಮಾನ್ ಭವೇತ್ ॥ ೮೭ ॥

ಜ್ಞಾತಿಭೇದಭಯಾದ್ಭೀತಃ ಸಮುಪೇಕ್ಷಿತವಾಂಸ್ತಥಾ ।
ಅಪಯಾತೇ ತಥಾಕ್ರೂರೇ ನಾವರ್ಷತ್ಪಾಕಶಾಸನಃ ॥ ೮೮ ॥

ಅನಾವೃಷ್ಟ್ಯಾ ಹತಂ ರಾಷ್ಟ್ರಮಭವತ್ತದ್ವಧೋದ್ಯತಂ ।
ತತಃ ಪ್ರಸಾದಯಾಮಾಸುರಕ್ರೂರಂ ಕುಕುರಾಂಧಕಾಃ ॥ ೮೯ ॥

---

೮೬. ಅಕ್ರೂರ ಕುಮಾರಿಯಾದ ನರೆಯೆಂಬುವಳಲ್ಲಿ ಭಂಗಕಾರಕನಿಗೆ ಪುರುಷ ಶ್ರೇಷ್ಠರೂ, ಲೋಕವಿಖ್ಯಾತರೂ, ಮಹಾಬಲಶಾಲಿಗಳೂ ಆದ ಇಬ್ಬರು ಪುತ್ರರು ಜನಿಸಿದರು.

೮೭. ಅಂಧಕಮುಖ್ಯನಿಗೆ ಶತ್ರುಸಂಹಾರಕರೂ, ಬಂಧುವಂತರೂ ಆದ ಇಬ್ಬರು ಕುಮಾರರು ಇದ್ದರು. ಅವರು ಭಂಗಕಾರಕನನ್ನು ಸಂಹಾರಮಾಡುವುದು ಶ್ರೀಕೃಷ್ಣನಿಗೆ ಸಮ್ಮತವಾಗಿರಲಿಲ್ಲ.

೮೮. ಅನಂತರ ಶ್ರೀಕೃಷ್ಣನು ಜ್ಞಾತಿಗಳ ಭಂಗವಾಗುವುದೆಂಬ ಭೀತಿಯಿಂದ ಉದಾಸೀನನಾದನು. ಅನಂತರ ಅಕ್ರೂರನೂ ಕೂಡ ಮನಸ್ಸಮಾಧಾನವಿಲ್ಲದೆ ಬೇರೆ ಊರಿಗೆ ಹೋದನು.

೮೯. ಆಗ ದೇಶವು ಅನಾವೃಷ್ಟಿಯಿಂದ ಬಹಳವಾಗಿ ಪೀಡಿತವಾಗಲು ಕೆಲವರು ಅವನನ್ನು ಕೊಲ್ಲಲು ಪ್ರಯತ್ನಿಸಿದರು. ಆಗ ಕುಕುರರು, ಅಂಧಕರೂ ಕೂಡಿ ಹೋಗಿ ಅಕ್ರೂರನನ್ನು ಬಹಳವಾಗಿ ಪೂಜಿಸಿ ಸಮಾಧಾನಮಾಡಿದನು.

ಪುನರ್ದ್ವಾರವತೀಂ ಪ್ರಾಪ್ತೇ ತದಾ ದಾನಪತೌ ತಥಾ ।
ಪ್ರವವರ್ಷ ಸಹಸ್ರಾಕ್ಷಃ ಕುಕ್ಷೌ ಜಲನಿಧೇಸ್ತತಃ ॥ ೯೦ ॥

ಕನ್ಯಾಂ ಚ ವಾಸುದೇವಾಯ ಸ್ವಸಾರಂ ಶೀಲಸಂಮ್ಮತಾ ।
ಅಕ್ರೂರಃ ಪ್ರದದೌ ಶ್ರೀಮಾನ್ ಪ್ರೀತ್ಯರ್ಥಂ ಯದುಪುಂಗವಃ ॥ ೯೧ ॥

ಅಥ ವಿಜ್ಞಾಯ ಯೋಗೇನ ಕೃಷ್ಣೋ ಬಭ್ರುಗತಂ ಮಣಿಂ ।
ಸಭಾಮಧ್ಯೇ ತದಾ ಪ್ರಾಹ ತಮಕ್ರೂರಂ ಜನಾರ್ದನಃ ॥ ೯೨ ॥

ಯಚ್ಚ ರತ್ನಂ ಮಣಿವರಂ ತವ ಹಸ್ತಗತಂ ಪ್ರಭೋ ।
ತತ್ ಪ್ರಯಚ್ಛಸ್ವ ಮಾನಾರ್ಹ ವಿಮತಿಂಚಾತ್ರಮಾಕೃಥಾಃ ॥ ೯೩ ॥

---

೯೦. ಹೀಗೆ ಪ್ರಜೆಗಳು ಸಮಾಧಾನಮಾಡಿದ ತರುವಾಯ ಅಕ್ರೂರನು ದ್ವಾರಕಾನಗರಕ್ಕೆ ಬಂದನು. ಹೀಗೆ ಅಕ್ರೂರನು ದ್ವಾರಕಾನಗರಕ್ಕೆ ಬಂದಕೂಡಲೇ ದೇವೇಂದ್ರನು ಸಮುದ್ರದ (ಕುಕ್ಷಿ) ನಾಭಿಯಂತೆ ಮಧ್ಯದಲ್ಲಿರುವ ದ್ವಾರಕಾನಗರದಲ್ಲಿ ಯಥೇಚ್ಛವಾಗಿ ಮಳೆಯನ್ನು ಕರೆದನು.

೯೧. ಅನಂತರ ಸಂಪದ್ಯುಕ್ತನೂ, ಯದುಶ್ರೇಷ್ಠನೂ ಆದ ಅಕ್ರೂರನು ತನ್ನ ಭಗಿನಿಯೂ, ಶೀಲಸಂಪನ್ನಳೂ, ಗುಣವಂತಳೂ ಆದ ನಾರೀಮಣಿಯನ್ನು, ಶ್ರೀಕೃಷ್ಣನ ಪ್ರೀತಿಯನ್ನು ಸಂಪಾದಿಸುವುದಕ್ಕಾಗಿ ಶ್ರೀಕೃಷ್ಣನಿಗೆ ಕನ್ಯಾದಾನವನ್ನು ಪ್ರೀತಿಯಿಂದ ಮಾಡಿದನು.

೯೨. ವಿವಾಹಸಮಯದಲ್ಲಿ ಶ್ರೀಕೃಷ್ಣನು ಯೋಗಶಕ್ತಿಯಿಂದ ಆ ಸ್ಯಮಂತಕ ಮಣಿಯು ಬಭ್ರುವಿನಲ್ಲಿದೆಯೆಂದು ತಿಳಿದು ಸಭಾಮಧ್ಯದಲ್ಲಿ ಅಕ್ರೂರನಿಗೆ ಮಣಿಯಿರುವ ಸ್ಥಳವನ್ನು ಸಿಳಿಸಿದನು.

೯೩. ಆಗ ಎಲೈ ಪ್ರಭುವಾದ ಅಕ್ರೂರನೇ, ಬಭ್ರುವಿನಲ್ಲಿರುವ ರತ್ನವು ನಿನ್ನ ಹಸ್ತಗತವೆಂದೇ ಭಾವಿಸುತ್ತೇನೆ. ಆದುದರಿಂದ ದಯವಿಟ್ಟು ಅದನ್ನು ಕೊಡು. ಈ ವಿಷಯದಲ್ಲಿ ಅಸಮಾಧಾನಮಾಡಬೇಡವೆಂದನು.

ಷಷ್ಠಿವರ್ಷಗತೇ ಕಾಲೇ ಯದ್ರೋಷೋಽಭೂತ್ತದಾಮುಮ |
ಸುಸಂರೂಢಃ ಸಕೃಶ್ ಪ್ರಾಪ್ತಸ್ತತ್ಕಾಲಾಶ್ರಿತ್ಯ ಸ ಮಹಾನ್ || ೯೪ ||

ತತಃ ಕೃಷ್ಣಸ್ಯ ವಚನಾತ್ ಸರ್ವಸಾತ್ವತಸಂಸದಿ |
ಪ್ರದದೌ ತಂ ಮಣಿಂ ಬಭ್ರುರಕ್ಲೇಶೇನ ಮಹಾಮತಿಃ || ೯೫ ||

ತತ ಆರ್ಜವ ಸಂಪ್ರಾಪ್ತ ಬಭ್ರುಹಸ್ತಾದರಿಂದಮಃ |
ದದೌ ಪ್ರಹೃಷ್ಟಮನಸಾ ತಂ ಮಣಿಂ ಬಭ್ರವೇ ಪುನಃ || ೯೬ ||

ಸ ಕೃಷ್ಣಹಸ್ತಾತ್ ಸಂಪ್ರಾಪ್ಯ ಮಣಿರತ್ನಂ ಸ್ಯಮಂತಕಂ |
ಆಬದ್ಧ್ಯ ಗಾಂದಿನೀಪುತ್ರೋ ವಿರರಾಜಾಂಶುಮಾನಿವ || ೯೭ ||

---

೯೪. ಓ ಪ್ರಿಯನಾದ ಅಕ್ರೂರನೇ, ಅರವತ್ತು ವರ್ಷಗಳು ಕಳೆದುಹೋದರೂ ಕೂಡ ಯಾವ ಕೋಪವು ಶಾಂತವಾಗುವುದಿಲ್ಲವೋ, ಅಂತಹ ಕೋಪಗಳಿಗೆ ಅವಕಾಶ ಕೊಡದೇ ರತ್ನವನ್ನು ಕೊಡುವಂತೆ ಅಕ್ರೂರನಿಗೆ ತಿಳಿಸಿದನು.

೯೫. ಅನಂತರ ಶ್ರೀಕೃಷ್ಣನ ಮಾತಿನಂತೆ ಉದಾರಮನಸ್ಕನಾದ ಬಭ್ರುವು ಸಮಸ್ತರಾದ ಯಾದವರ ಸಭೆಯಲ್ಲಿ ಸಂತೋಷವಾಗಿ ಮನಸ್ತಾಪಕ್ಕೆ ಅವಕಾಶವಿಲ್ಲದಂತೆ ಆ ರತ್ನವನ್ನು ಕೃಷ್ಣನಿಗೆ ಕೊಟ್ಟನು.

೯೬. ಅನಂತರ ಶತ್ರುಸಂಹಾರಕನಾದ ಶ್ರೀಕೃಷ್ಣನು ವಿನಯದಿಂದ ಅರ್ಪಿಸಿದ ಆ ಸ್ಯಮಂತಕರತ್ನವನ್ನು ಸ್ವೀಕರಿಸಿ ಸಂತೋಷಯುಕ್ತನಾಗಿ ಆ ಮಣಿಯನ್ನು ಪುನಃ ಬಭ್ರುವಿಗೆ ಕೊಟ್ಟನು.

೯೭. ಆಗ ಅವನು ಶ್ರೀಕೃಷ್ಣನ ಹಸ್ತದಿಂದಲೇ ಪ್ರಾಪ್ತವಾದ ಆ ರತ್ನವನ್ನು ಗಾಂಧಿನೀಪುತ್ರನಾದ ಬಭ್ರುವು ತನ್ನ ಕಂಠದಲ್ಲಿ ಕಟ್ಟಿಕೊಂಡು ಸೂರ್ಯನಂತೆ ಪ್ರಕಾಶಿಸಿದನು.

ಇಮಾಂ ಮಿಥ್ಯಾಭಿಶಸ್ತಿಂ ಯೋ ವಿಶುದ್ಧಾಮುಪಿ ಚೋತ್ತಮಾಂ ।
ವೇದಮಿಥ್ಯಾಭಿಶಸ್ತಿಂ ಸ ನ ವ್ರಜೇಚ್ಛ ಕಥಂಚನ ॥ ೯೮ ॥

ಅನಿಮಿತ್ರಾಚ್ಛನಿರ್ಜಜ್ಞೇ ಕನಿಷ್ಠಾದ್ವೃಷ್ಣಿನಂದನಾತ್ ॥ ೯೯ ॥

ಸತ್ಯವಾಕ್ ಸತ್ಯಸಂಪನ್ನಃ ಸತ್ಯಕಸ್ತಸ್ಯ ಚಾತ್ಮಜಃ ।
ಸಾತ್ಯಕೀಯುುಯುರ್ಯುಧಾನಸ್ಯ ತಸ್ಯ ಭೂತಿಃ ಸುತೋಽಭವತ್ ॥ ೧೦೦ ॥

ಭೂತೇರ್ಯುಗಂಧರಃ ಪುತ್ರ ಇತಿ ಭೌತ್ಯಾಃ ಪ್ರಕೀರ್ತಿತಾಃ ।
ಜಜ್ಞಾತೇ ತನಯೌ ಪೃಶ್ನೇಃ ಶ್ವಫಲ್ಕಶ್ಚಿತ್ರಕಶ್ಚ ಯಃ ॥ ೧೦೧ ॥

ಶ್ವಫಲ್ಕಸ್ತು ಮಹಾರಾಜೋ ಧರ್ಮಾತ್ಮಾ ಯತ್ರ ವರ್ತತೇ ।
ನಾಸ್ತಿ ವ್ಯಾಧಿಭಯಂ ತತ್ರ ನ ಚಾವೃಷ್ಟಿಭಯಂ ತಥಾ ॥ ೧೦೨ ॥

---

೯೮. ಹೀಗೆ ಯಾವ ಪುರುಷರು ಶ್ರೀಕೃಷ್ಣನಿಗೆ ಬಂದ ವಿಶುದ್ಧವೂ, ಉತ್ತಮವೂ ಆದ ಮಿಥ್ಯಾಪವಾದವನ್ನು ಕೇಳುವರೋ, ಅವರು ಎಂದಿಗೂ ಇಂತಹ ಮಿಥ್ಯಾಪವಾದಗಳಿಗೆ ಭಾಗಿಯಾಗದೆ ಕೀರ್ತಿವಂತರಾಗುವರು.

೯೯. ಆ ವಂಶದಲ್ಲಿ ಕೀರ್ತಿವಂತನೂ, ಕಿರಿಯವನೂ, ವೃಷ್ಣಿಕುಮಾರನೂ ಆದ ಅನಿಮಿತ್ರನಿಂದ ಶನಿನಾಮಕನಾದ ಕುಮಾರನು ಜನಿಸಿದನು.

೧೦೦. ಆ ಶನಿರಾಯನಿಗೆ ಸತ್ಯವಾಕ್ಯನೂ, ಸತ್ಯಸಂಪನ್ನನೂ ಆದ ಸಾತ್ಯಕನೆಂಬ ಕುಮಾರನು ಉದ್ಭವಿಸಿದನು. ಅವನಿಗೆ ಸಾತ್ಯಕಿಯೆಂಬ ಪುತ್ರನೂ, ಅವನಿಗೆ ಯುಯುಧಾನನೆಂಬ ಸುತನೂ, ಅವನಿಗೆ ಭೂತಿಯೆಂಬ ತನಯನೂ ಹುಟ್ಟಿದರು.

೧೦೧. ಆ ಭೂತಿಗೆ ಯುಗಂಧರನೆಂಬ ಕುಮಾರನು ಜನಿಸಿದನು. ಆ ವಂಶದವರಿಗೆ ಭೌತ್ಯರೆಂದು ಪ್ರಖ್ಯಾತಿಯು ಉಂಟಾಯಿತು. ಪೃಶ್ನಿಯೆಂಬುವನಿಗೆ ಶ್ವಫಲ್ಕ, ಚಿತ್ರಸೇನರೆಂಬ ಇಬ್ಬರು ಪುತ್ರರು ಜನಿಸಿದರು.

೧೦೨. ಧರ್ಮಾತ್ಮನಾದ ಶ್ವಫಲ್ಕಮಹಾರಾಜನು ಯಾವ ದೇಶದಲ್ಲಿ ವಾಸ ಮಾಡುವನೋ ಆ ದೇಶದಲ್ಲಿ ರೋಗಾದ್ಯುಪದ್ರವಗಳೂ, ಅನಾವೃಷ್ಟಿ ಭಯವೂ ಸ್ವಲ್ಪವೂ ಇಲ್ಲ.

ಕದಾಚಿತ್ ಕಾಶಿರಾಜಸ್ಯ ವಿಭೋಸ್ತು ದ್ವಿಜಸತ್ತಮಾಃ ।
ತ್ರೀಣಿ ವರ್ಷಾಣಿ ವಿಷಯೇ ನಾವರ್ಷತ್ಪಾಕಶಾಸನಃ ॥ ೧೦೩ ॥

ಸ ತತ್ರ ವಾಸಯಾಮಾಸ ಶ್ವಫಲ್ಕಂ ಪರಮಾರ್ಚಿತಂ ।
ಶ್ವಫಲ್ಕಪರಿವಾಸೇನ ಪ್ರಾವರ್ಷತ್ಪಾಕಶಾಸನಃ ॥ ೧೦೪ ॥

ಶ್ವಫಲ್ಕಃ ಕಾಶಿರಾಜಸ್ಯ ಸುತಾಂ ಭಾರ್ಯಾಮನಿಂದಿತಾಂ ।
ಗಾಂದಿನೀಂ ನಾಮಗಾಂ ಸಾ ಹಿ ದದೌ ವಿಪ್ರಾಯ ನಿತ್ಯಶಃ ॥ ೧೦೫ ॥

ಸಾ ಮಾತುರುದರಸ್ಥಾ ವೈ ಬಹುವರ್ಷಶತಾನ್ ಕಿಲ ।
ವಸತಿ ಸ್ಮ ನ ವೈ ಜಜ್ಞೇ ಗರ್ಭಸ್ಥಾಂ ತಾಂ ಪಿತಾಬ್ರವೀತ್ ॥ ೧೦೬ ॥

---

೧೦೩. ಎಲೈ ವಿಪ್ರೋತ್ತಮರೇ, ಒಂದಾನೊಂದು ಕಾಲದಲ್ಲಿ ವಿಭುಪುತ್ರನಾದ ಕಾಶಿರಾಜನ ದೇಶದಲ್ಲಿ ಇಂದ್ರನು ಮೂರುವರ್ಷಗಳಕಾಲ ಮಳೆಯನ್ನೇ ಕರೆಸಲಿಲ್ಲ. (ಸುರಿಸಲಿಲ್ಲ)

೧೦೪. ಆಗ ಕಾಶಿರಾಜನು ಶ್ವಫಲ್ಕನನ್ನು ಸಮಸ್ತ ಮರ್ಯಾದೆಗಳಿಂದ ಸತ್ಕರಿಸಿ ತಮ್ಮೂರಿನಲ್ಲಿ ವಾಸಿಸುವಂತೆ ಪ್ರಾರ್ಥಿಸಿದನು. ಅದರಂತೆ ಅವನು ಅಲ್ಲಿ ವಾಸಮಾಡಿದ್ದರಿಂದ ಯಥೇಚ್ಛವಾಗಿ ವೃಷ್ಟಿಯುಂಟಾಯಿತು.

೧೦೫. ಅನಂತರ ಶ್ವಫಲ್ಕರಾಜನು ಕಾಶಿರಾಜನ ಕುಮಾರಿಯೂ, ನಿರ್ದೋಷಿಯೂ ಆದ ಗಾಂದಿನೀನಾಮಕಳನ್ನು ಮದುವೆಯಾದನು ಆಗ ಕಾಶಿ ರಾಜನು ಕನ್ಯಾದಾನಕಾಲದಲ್ಲಿ ಗೋದಾನವನ್ನೂ ಮಾಡಿದನು.

೧೦೬. ಆ ಕುಮಾರಿಯು ತಾಯಿಯ ಉದರದಲ್ಲಿಯೇ ಅನೇಕ ಶತಮಾನಗಳವರೆಗೂ ವಾಸಮಾಡಿದ್ದಳು. ಬೇಗನೆ ಜನಿಸಲಿಲ್ಲ. ಆಗ ತಂದೆಯಾದ ಕಾಶಿರಾಜನು ಗರ್ಭಗತಳಾದ ಕುಮಾರಿಗೆ ಹೀಗೆ ಹೇಳಿದನು.

**ಜಾಯಸ್ವ ಶೀಘ್ರಂ ಭದ್ರಂ ತೇ ಕಿಮರ್ಥಂ ಚಾಪಿ ತಿಷ್ಠಸಿ ।**
**ಪ್ರೋವಾಚ ಚೈನಂ ಗರ್ಭಸ್ಥಾ ಸಾ ಕನ್ಯಾ ಗೌರ್ದಿನೇ ದಿನೇ ॥ ೧೦೭ ॥**

**ಯದಿ ದತ್ತಾ ತದಾ ಸ್ಯಾಂ ಹಿ ಯದಿ ಸ್ಯಾವಿಹತಾಂ ಪಿತಃ ।**
**ತಥೇತ್ಯುವಾಚ ತಾಂ ತಸ್ಯಾಃ ಪಿತಾ ಕಾಮಮಪೂಪುರತ್ ॥ ೧೦೮ ॥**

**ದಾತಾ ಯಜ್ವಾ ಚ ಶೂರಶ್ಚ ಶ್ರುತವಾನತಿಥಿಪ್ರಿಯಃ ।**
**ತಸ್ಯಾಃ ಪುತ್ರಃ ಸ್ಮೃತೋಽಕ್ರೂರಃ ಶ್ವಫಲ್ಕೋ ಭೂರಿದಕ್ಷಿಣಃ ॥ ೧೦೯ ॥**

**ಉಪಮಂಗುಸ್ತಥಾ ಮಂಗುರ್ಮೃದುರಶ್ಚಾರಿಮೇಜಯಃ ।**
**ಗಿರಿರಕ್ಷಸ್ತತೋ ಯಕ್ಷಃ ಶತ್ರುಘ್ನೋ ವಾರಿಮರ್ದನಃ ॥ ೧೧೦ ॥**

**ಧರ್ಮಭೃಚ್ಚ ಶೃಷ್ಟಚಯೋ ವರ್ಗಮೋಚಸ್ತಥಾಪರಃ ।**
**ಆವಾಹಪ್ರತಿವಾಹೌ ಚ ವಸುದೇವಾ ವರಾಂಗನಾ ॥ ೧೧೧ ॥**

---

೧೦೭–೧೦೮. ಎಲೌ ಕುಮಾರಿಯೇ ಬೇಗನೆ ಜನಿಸುವಳಾಗು. ನಿನಗೆ ಮಂಗಳವಾಗಲಿ. ಏತಕ್ಕಾಗಿ ಇಷ್ಟು ಸಾವಕಾಶವನ್ನು ಮಾಡುತ್ತೀಯೆ, ಎಂದ ಕೇಳಿದನು. ಆಗ ಗರ್ಭದಲ್ಲಿದ್ದ ಕುಮಾರಿಯು ತಂದೆಯನ್ನು ಕುರಿತು, ಎಲೈ ತಂದೆಯೇ, ನೀನು ನನಗೋಸ್ಕರ ಪ್ರತಿನಿತ್ಯವೂ ಒಂದಾನೊಂದು ಗೋವನ್ನು ವಿಪ್ರರಿಗೆ ದಾನಮಾಡಿದರೆ ನಾನು ಶೀಘ್ರವಾಗಿ ಜನಿಸುವೆನೆಂದು ಹೇಳಿದಳು. ಹಾಗೆಯೇ ಆಗಬಹುದೆಂದು ತಂದೆಯು ಹೇಳಿ ಪ್ರತಿದಿನವೂ ಗೋದಾನವನ್ನು ಮಾಡಿ ಪುತ್ರಿಯ ಅಭಿಮತವನ್ನು ನೆರವೇರಿಸಿದನು.

೧೦೯ ಆಕೆಯ ಕುಮಾರನೇ ಅಕ್ರೂರನು. ಅವನು ದಾನಶೂರನೂ, ಯಾಗನಿರತನೂ, ಶೂರನೂ, ಜ್ಞಾನಿಯೂ, ಅತಿಥಿಪೂಜಾಪ್ರಿಯನೂ, ಶ್ವಫಲ್ಕ ನಾಮಕನೂ, ಭೂರಿದಕ್ಷಿಣೆಯನ್ನು ಕೊಡತಕ್ಕವನೂ ಆಗಿರುವನು.

೧೧೦–೧೧೧. ಅದರಂತೆ ಉಪಮಂಗು, ಮಂಗು, ಮೃದುರ, ಅರಿಮೇಜಯ, ಗಿರಿರಕ್ಷ, ಯಕ್ಷ, ಶತ್ರುಘ್ನ, ವಾರಿಮರ್ದನ, ಧರ್ಮಭೃತ, ಶೃಷ್ಟಚಯ, ವರ್ಗಮೋಚ, ಆವಾಹಪ್ರತಿವಾಹರೂ ಮತ್ತು ವಸುದೇವನಾಮಕಳಾದ ನಾರೀಮಣಿಯೂ ಜನಿಸಿದರು.

ಅಕ್ರೂರಾದುಗ್ರಸೇನಾಯಾಂ ತು ಸುತೌ ದ್ವೌ ಕುಲನಂದಿನೌ ।
ದೇವಶ್ಚಾನುಪದೇವಶ್ಚ ಜಜ್ಞಾತೇ ದೇವಸಂಮಿತೌ ॥ ೧೧೩ ॥

ಚಿತ್ರಕಸ್ಯಾಭವನ್ ಪುತ್ರಾಃ ಪೃಥುರ್ವಿಪೃಥುರೇವ ಚ ।
ಅಶ್ವಗ್ರೀವೋಽಶ್ವಬಾಹುಶ್ಚ ಸುಪಾರ್ಶ್ವಕಗವೇಷಣೌ ॥ ೧೧೪ ॥

ಅರಿಷ್ಟನೇಮಿರಶ್ವಶ್ಚ ಸುವರ್ಮಾ ವರ್ಮಚರ್ಮಭೃತ್ ।
ಅಭೂಮಿರ್ಬಹುಭೂಮಿಶ್ಚ ಶ್ರವಿಷ್ಠಾಶ್ರವಣೇ ಸ್ತ್ರಿಯೌ ॥ ೧೧೫ ॥

ಸತ್ಯಕಾತ್ ಕಾಶಿದುಹಿತಾ ಲೇಭೇ ಸಾ ಚತುರಃ ಸುತಾನ್ ।
ಕಕುದಂ ಭಜಮಾನಂ ಚ ಶಮೀಕಬಲಬರ್ಹಿಷೌ ॥ ೧೧೬ ॥

ಕಕುದಸ್ಯ ಸುತೋ ವೃಷ್ಣಿರ್ವೃಷ್ಣೇಸ್ತು ತನಯೋಽಭವತ್ ।
ಕಪೋತ ರೋಮಾ ತಸ್ಯಾಥ ರೇವತೋಽಭವದಾತ್ಮಜಃ ॥ ೧೧೭ ॥

---

೧೧೩. ಅಕ್ರೂರಮಹಾರಾಯನಿಗೆ ಉಗ್ರಸೇನೆಯಲ್ಲಿ ವಂಶವರ್ಧಕರೂ, ಲೋಕಪ್ರಿಯರೂ, ದೇವತೆಗಳಿಗೆ ಇಷ್ಟರೂ ಆದ ದೇವ, ಅನುಪದೇವರೆಂಬ ಇಬ್ಬರು ಪುತ್ರರು ಜನಿಸಿದರು.

೧೧೪. ಚಿತ್ರಕನಿಗೆ ಪೃಥು, ವಿಪೃಥು, ಅಶ್ವಗ್ರೀವ, ಅಶ್ವಬಾಹು ಸುಪಾರ್ಶ್ವಕ, ಗವೇಷಣರೆಂಬ ಕುಮಾರರು ಹುಟ್ಟಿದರು.

೧೧೫. , ಮತ್ತು ಅರಿಷ್ಟನೇಮಿ, ಅಶ್ವ, ಸುವರ್ಮಾಣ, ವರ್ಮಚರ್ಮಭೃತ, ಅಭೂಮಿ, ಬಹುಭೂಮಿ ಎಂಬ ಪುತ್ರರೂ, ಶ್ರವಿಷ್ಠೆ, ಶ್ರವಣೆಯರೆಂಬ ಇಬ್ಬರು ಪುತ್ರಿಯರೂ ಜನಿಸಿದರು.

೧೧೬. ಸತ್ಯಕಾಮನಿಗೆ ಕಾಶಿರಾಜನ ಪುತ್ರಿಯಲ್ಲಿ ಕಕುದ, ಭಜಮಾನ, ಶಮೀಕ, ಬಲಬರ್ಹಿಷರೆಂಬ ನಾಲ್ವರು ಕುಮಾರರು ಉದ್ಭವಿಸಿದರು.

೧೧೭. ಅವರಲ್ಲಿ ಹಿರಿಯವನಾದ ಕಕುದನಿಗೆ ವೃಷ್ಣಿಯೆಂಬ ಕುಮಾರನೂ, ಅವನಿಗೆ ಕಪೋತರೋಮನೆಂಬ ಪುತ್ರನೂ, ಅವನಿಗೆ ರೇವತನೆಂಬ ಸುತನೂ ಹುಟ್ಟಿದರು.

ತಸ್ಯಾಸೀತ್ತುಂಬುರುಸಖಾ ವಿದ್ವಾನ್ ಪುತ್ರೋ ಭವತ್ಕಿಲ ।
ಖ್ಯಾಯತೇ ಯಸ್ಯ ನಾಮ್ನಾ ಸ ಚಂದನೋದಕದುಂದುಭಿಃ ॥ ೧೧೭ ॥

ತಸ್ಯಾಪ್ಯಭಿಜಿತಃ ಪುತ್ರ ಉತ್ಪನ್ನಸ್ತು ಪುನರ್ವಸುಃ ।
ಅಶ್ವಮೇಧಂ ತು ಪುತ್ರಾರ್ಥೇ ಆಜಹಾರ ನರೋತ್ತಮಃ ॥ ೧೧೮ ॥

ತಸ್ಯ ಮಧ್ಯೇತಿರಾತ್ರಸ್ಯ ಸದೋಮಧ್ಯಾತ್ಸಮುತ್ಥಿತಂ ।
ತತಸ್ತು ವಿದ್ವಾನ್ ಧರ್ಮಜ್ಞೋ ದಾತಾ ಯಜ್ವಾ ಪುನರ್ವಸುಃ । ॥ ೧೧೯ ॥

ತಸ್ಯಾಪಿ ಪುತ್ರಮಿಥುನಂ ಬಾಹುಬಾಣಾಜಿತಃ ಕಿಲ ।
ಆಹುಕಶ್ಚಾಹುಕೀ ಚೈವ ಖ್ಯಾತೌ ಮತಿಮತಾಂವರೌ ॥ ೧೨೦ ॥

ಇಮಾಂಶ್ಚೋದಾಹರಂತ್ಯತ್ರ ಶ್ಲೋಕಾನ್ ಪ್ರತಿ ತಮಾಹುಕಂ ।
ಸೋಪಾಸಂಗಾನುಕರ್ಷಾಣಾಂ ಸಧ್ವಜಾನಾಂ ವರೂಥಿನಾಂ ॥ ೧೨೧ ॥

---

೧೧೭. ಆ ರೇವತನಿಗೆ ತುಂಬುರುಪ್ರಿಯನೂ, ವಿದ್ವಾಂಸನೂ, ವಿಖ್ಯಾತನೂ ಆದ ಚಂದನೋದಕದುಂದುಭಿಯೆಂಬ ಪ್ರಖ್ಯಾತನಾದ ಕುಮಾರನು ಜನಿಸಿದನು.

೧೧೮. ಆ ರಾಜನಿಗೆ ಸತ್ಕುಲಪ್ರಸೂತನೂ, ಲೋಕಮಾನ್ಯನೂ ಆದ ಪುನರ್ವಸುವೆಂಬ ತನಯನು ಉತ್ಪನ್ನನಾದನು. ಆ ರಾಯನು ಸಂತಾನಕ್ಕೋಸ್ಕರ ಅಶ್ವಮೇಧಯಾಗವನ್ನು ಮಾಡಿದನು.

೧೧೯. ಆ ಅತಿರಾತ್ರಯಾಗದ ಮಧ್ಯಕಾಲದಲ್ಲಿ, ಸಭಾಮಧ್ಯದಿಂದ ವಿದ್ವಾಂಸನೂ, ಧರ್ಮಜ್ಞನೂ, ದಾನಶೂರನೂ, ಯಾಗಶಾಲಿಯೂ ಆದ ಪುನರ್ವಸು ನಾಮಕನಾದ ಕುಮಾರನು ಹುಟ್ಟಿದನು.

೧೨೦. ಆ ಪುನರ್ವಸುವಿಗೆ ಬಾಹುಬಾಣಾಜಿತರೆಂಬ ಅವಳಿಜವಳಿ ಮಕ್ಕಳೂ, ಆಹುಕ, ಆಹುಕಿಯರೆಂಬ ಪ್ರಖ್ಯಾತರೂ, ಜ್ಞಾನಶ್ರೇಷ್ಠರೂ ಆದ ಇಬ್ಬರು ಮಕ್ಕಳೂ ಜನಿಸಿದರು.

೧೨೧–೧೨೨. ಆಹುಕರಾಜನ ವಿಚಾರವಾಗಿ ಮಹಾತ್ಮರು ಈ ಶ್ಲೋಕಗಳನ್ನು ಹೇಳುವರು. ಆ ಆಹುಕರಾಜನಲ್ಲಿ ಸರಳವಾದ ಬತ್ತಳಿಕೆ, ಧ್ವಜ ಇವುಗಳಿಂದ ಸಹಿತವೂ ಮೇಘಗರ್ಜನೆಯುಳ್ಳ ರಥಗಳಿಂದ ಮಂಡಿತವೂ ಆದ ಸಾವಿರದನೂಡು

ರಥಾನಾಂ ಮೇಘಘೋಷಾಣಾಂ ಸಹಸ್ರಾಣಿ ದಶೈವ ತು ।
ನಾಸತ್ಯವಾದೀ ತ್ವಾಸೀತ್ತು ನಾಯಜ್ವಾ ನಾಸಹಸ್ರದಃ ॥ ೧೨೨ ॥

ನಾಶುಚಿರ್ನಾಪ್ಯಧರ್ಮಾತ್ಮಾ ನಾವಿದ್ವಾನ್ನ ಕೃಶೋಽಭವತ್ ।
ಆಹುಕಸ್ಯ ಧೃತಿಃ ಪುತ್ರ ಇತ್ಯೇವಮನುಶುಶ್ರುಮಃ ॥ ೧೨೩ ॥

ಶ್ವೇತೇನ ಪರಿಚಾರೇಣ ಕಿಶೋರ ಪ್ರತಿಮಾ ಹಯಾಃ ।
ಅಶೀತಿಯುಕ್ತನಿಯುತಾನ್ಯಾಹುಕಪ್ರತಿಮೋಽವ್ರಜತ್ ॥ ೧೨೪ ॥

ಪೂರ್ವಸ್ಯಾಂ ದಿಶಿ ನಾಗಾನಾಂ ಭೋಜಸ್ಯ ಪ್ರತಿರೇಜಿರೇ ।
ರೂಪ್ಯಕಾಂಚನಕಕ್ಷಾಣಾಂ ಸಹಸ್ರಾಣ್ಯೇಕವಿಂಶತಿಃ ॥ ೧೨೫ ॥

ತಾವಂತ್ಯೇವ ಸಹಸ್ರಾಣಿ ಉತ್ತರಸ್ಯಾಂ ತಥಾ ದಿಶಿ ।
ಭೂಮಿಪಾಲಸ್ಯ ಭೋಜಸ್ಯ ಉತ್ತಿಷ್ಠೇತ್ ಕಿಂಕಿಣೀ ಕಿಲ ॥ ೧೨೬ ॥

---

ಸೈನ್ಯದಳದವರೂ ಇದ್ದರು. ಆ ಮಹಾರಾಜನು ಅಸತ್ಯವಾದಿಯೂ, ಯಾಗ ಮಾಡದವನೂ, ಸಾವಿರಾರು ದಾನಗಳನ್ನು ಮಾಡದವನೂ ಆಗಲಿಲ್ಲ. ಅಂದರೆ ಅವನು ಸತ್ಯವಾದಿಯೂ, ಯಾಗಿಯೂ, ದಾನಿಯೂ ಆಗಿದ್ದನು.

೧೨೩. ಮತ್ತು ಆಹುಕನು ಅಶುಚಿಯೂ, ಅಧರ್ಮಾತ್ಮನೂ, ಅಪಂಡಿತನೂ, ಅಕೃಶನೂ ಆಗಿರಲಿಲ್ಲ. ಅಂದರೆ ಶುಚಿಯೂ, ಧರ್ಮಾತ್ಮನೂ, ಪಂಡಿತನೂ, ಸ್ಥೂಲನೂ ಆಗಿದ್ದನು. ಅವನಿಗೆ ಧೃತಿಯೆಂಬ ಪುತ್ರನಿದ್ದನೆಂದು ನಾವು ಕೇಳುತ್ತೇವೆ

೧೨೪. ಆ ರಾಜಕುಮಾರನು ಶುಭ್ರವೂ, ಅಸದೃಶವೂ, ತರುಣವೂ ಆದ ಹತ್ತುಸಾವಿರದ ಎಂಭತ್ತು ಅಶ್ವಸೈನ್ಯಗಳಿಂದ ಕೂಡಿ ಆಹುಕನಿಗೆ ಸಮನಾಗಿದ್ದನು.

೧೨೫. ಆ ದೇಶದ ಪೂರ್ವದಿಗ್ಭಾಗದಲ್ಲಿ ರಜತಸುವರ್ಣ ಇವುಗಳಿಂದಲಂಕೃತವಾದ ಜೀನುಳ್ಳ ಇಪ್ಪತ್ತೊಂದು ಸಹಸ್ರ ಆನೆಗಳೂ, ಭೋಜರಾಜನ ಸೈನ್ಯದಲ್ಲಿ ಪ್ರಕಾಶಿಸಿದುವು. ಅಂದರೆ ಅವನಿಗೆ ಗಜಸೈನ್ಯವಿದ್ದಿತು.

೧೨೬. ಹಾಗೆಯೆ ಉತ್ತರದಿಕ್ಕಿನಲ್ಲಿಯೂ ಕೂಡ ಭೂಪತಿಯಾದ ಭೋಜ ಮಹಾರಾಜನಿಗೆ ಕಿರುಗಂಟೆಗಳಿಂದಲಂಕೃತವಾದ ಇಪ್ಪತ್ತೊಂದು ಸಹಸ್ರ ಗಜಗಳು ಪ್ರಕಾಶಿಸಿದುವು.

ಆಹುಕಶ್ಚಾಹುಕಾಂಧಾಯ ಸ್ವಸಾರಂ ತ್ವಾಹುಕಿಂ ದದೌ ।
ಆಹುಕಾಂಧಾಸ್ಯ ದುಹಿತಾ ದ್ವೌ ಪುತ್ರೌ ಸಂಬಭೂವತುಃ ॥ ೧೨೭ ॥

ದೇವಕಶ್ಚೋಗ್ರಸೇನಶ್ಚ ದೇವಗರ್ಭಸಮಾವುಭೌ ।
ದೇವಕಸ್ಯ ಸುತಾ ವೀರಾ ಜಜ್ಞಿರೇ ತ್ರಿದಶೋಪಮಾಃ ॥ ೧೨೮ ॥

ದೇವಾನಾಮಪಿ ದೇವಶ್ಚ ಸುದೇವೋ ದೇವರಂಜಿತಾ ।
ತೇಷಾಂ ಸ್ವಸಾರಃ ಸಪ್ತಾಸನ್ ವಸುದೇವಾಯ ಸಂದದೌ ॥ ೧೨೯ ॥

ವೃಕದೇವೋಪದೇವಾ ಚ ತಥಾನ್ಯಾ ದೇವರಕ್ಷಿತಾ ।
ಶ್ರೀದೇವಾ ಶಾಂತಿದೇವಾ ಚ ಮಹಾದೇವಾ ತಥಾಪರಾ ॥ ೧೩೦ ॥

ಸಪ್ತಮೀ ದೇವಕೀ ತಾಸಾಂ ಸುನಾಮಾ ಚಾರುದರ್ಶನಾ ।
ಸರ್ವೋಗ್ರಸೇನಸ್ಯ ಸುತಾಃ ಕಂಸಸ್ತೇಷಾಂ ತು ಪೂರ್ವಜಃ ॥ ೧೩೧ ॥

---

೧೨೭. ಆಹುಕಮಹಾರಾಯನು ತನ್ನ ಭಗಿನಿಯಾದ ಆಹುಕಿಯೆಂಬ ನಾರೀಮಣಿಯನ್ನು ಆಹುಕಾಂಧನಿಗೆ ಕೊಟ್ಟು ಮದುವೆಮಾಡಿದನು. ಅವನಿಗೆ ಒಬ್ಬ ಪುತ್ರಿಯು ಜನಿಸಿದಳು. ಅವಳಿಗೆ ಇಬ್ಬರು ಕುಮಾರರೂ ಉದ್ಭವಿಸಿದರು.

೧೨೮. ದೆವಕ, ಉಗ್ರಸೇನರೆಂಬ ಇಬ್ಬರು ಕುಮಾರರು ಇಂದ್ರಪುತ್ರನಾದ ಜಯಂತನಿಗೆ ಸಮನಾಗಿದ್ದರು. ಅಂತಹ ದೇವಕಮಹಾರಾಜನಿಗೆ, ದೇವತೆಗಳಿಗೆ ಸಮರೂ, ಶೂರರೂ, ವಿಖ್ಯಾತರೂ ಆದ ಅನೇಕ ಪುತ್ರರು ಜನಿಸಿದರು.

೧೨೯. ಮತ್ತು ದೇವತೆಗಳಿಗೂ ಕೂಡ ಶ್ರೇಷ್ಠನೂ, ದೇವರಂಜಕನೂ ಆದ ಸುದೇವನೆಂಬ ತನಯನೂ ಉದ್ಭವಿಸಿದನು. ಅವರಿಗೆ ಸಹೋದರಿಯರು ಏಳು ಜನರಿದ್ದರು. ಅವರನ್ನು ವಸುದೇವರಾಯನಿಗೆ ಕೊಟ್ಟರು.

೧೩೦–೧೩೧. ಉಗ್ರಸೇನ ಮಹಾರಾಜನಿಗೆ ವೃಕದೇವೀ, ಉಪದೇವೀ, ದೇವರಕ್ಷಿತೆ, ಶ್ರೀದೇವೀ, ಶಾಂತಿದೇವೀ, ಮಹಾದೇವೀ ಮತ್ತು ಏಳನೆಯವಳಾದ ದೇವಕೀದೇವಿ ಎಂಬ ಕುಮಾರಿಯರು ಜನಿಸಿದರು. ಅವರಲ್ಲಿ ದೇವಕೀದೇವಿಯು ಸುಂದರಿಯೂ ವಿಶಾಲಹೃದಯಳೂ ಆಗಿದ್ದಳು. ಅವನಿಗೆ ಕಂಸನೆಂಬ ಕುಮಾರನೂ ಹುಟ್ಟಿದನು. ಆ ಕಂಸನೇ ಎಲ್ಲರಿಗಿಂತಲೂ ಹಿರಿಯವನಾಗಿದ್ದನು.

ನ್ಯಗ್ರೋಧಶ್ಚ ಸುನಾಮಾ ಚ ಕದ್ವಶಂಕುಶ್ಚ ಭೂಮಯಃ ।
ಸುತನ್ ರಾಷ್ಟ್ರಪಾಲಶ್ಚ ಯುದ್ಧಸ್ತುಷ್ಟಃ ಸುಪುಷ್ಟಿ ಮಾ॰ || ೧೩೨ ||

ತೇಷಾಂ ಸ್ವಸಾರಃ ಪಂಚೈವ ಕರ್ಮಧರ್ಮವತೀ ತಥಾ ।
ಶತಾಂಕ್ರೂ ರಾಷ್ಟ್ರಪಾಲಾ ಚ ಕಹ್ವಾ ಚೈವ ವರಾಂಗನಾ || ೧೩೩ ||

ಉಗ್ರಸೇನೋ ಮಹಾಪತ್ಯೋ ವಿಖ್ಯಾತಃ ಕುಕುರೋದ್ಭವಃ ।
ಕುಕುರಾಣಾಮಿಮಂ ವಂಶಂ ಧಾರಯನ್ನಮಿತೌಜಸಾಂ ||
ಆತ್ಮನೋ ವಿಪುಲಂ ವಂಶಂ ಪ್ರಜಾವಾಂಶ್ಚ ಭವೇನ್ನರಃ || ೧೩೪ ||

ಭಜಮಾನಸ್ಯ ಪುತ್ರಸ್ತು ರಥಿಮುಖ್ಯೋ ವಿದೂರಥಃ ।
ರಾಜ್ಯಾಧಿದೇವಃ ಶೂರಶ್ಚ ವಿದೂರಶ್ಚ ಸುತೋಽಭವತ್ || ೧೩೫ ||

---

೧೩೨. ಉಗ್ರಸೇನನಿಗೆ ನ್ಯಗ್ರೋಧ, ಸುಮನಸ, ಕದ್ವಶಂಕು, ಭೂಮಿ, ಸುತನು, ರಾಷ್ಟ್ರಪಾಲ, ಯುದ್ಧ, ತುಷ್ಟ, ಸುಪುಷ್ಟಿಮಂತರೆಂಬ ಸುಪ್ರಸಿದ್ಧರಾದ ಕುಮಾರರು ಉತ್ಪನ್ನರಾದರು.

೧೩೩. ಈ ಕುಮಾರರಿಗೆ ಕರ್ಮವತೀ, ಧರ್ಮವತೀ. ಶತಾಂಕ್ರೂ, ರಾಷ್ಟ್ರಪಾಲಾ ಮತ್ತು ಕಹ್ವಾ ಎಂಬ ಐವರು ಭಗಿನಿಯರು ಜನಿಸಿ ಅತಿಸುಂದರಿಯರಾಗಿದ್ದರು.

೧೩೪. ಕುಕುರವಂಶೋತ್ಪನ್ನನಾದ ಉಗ್ರಸೇನನಿಗೆ ಅಸಂಖ್ಯಾತರಾದ ಸುಪ್ರಸಿದ್ಧ ಕುಮಾರರಿದ್ದರು. ಹೀಗೆ ಯಾವ ಪುರುಷನು ಮಹಾತೇಜಸ್ವಿಗಳಾದ ಕುಕುರವಂಶದವರನ್ನು ವರ್ಣಿಸುವನೋ ಅವನ ವಂಶವು ವಿಸ್ತಾರವಾಗುವುದು. ಅವನು ಪುತ್ರವಂತನಾಗುವನು.

೧೩೫. ಭಜಮಾನನಿಗೆ ಮಹಾರಥಿಕರಲ್ಲಿ ಅಗ್ರಗಣ್ಯರೂ, ಪೂಜ್ಯರೂ ಆದ ವಿದೂರಥ, ರಾಜ್ಯಾಧಿದೇವ, ಶೂರ, ವಿದೂರರೆಂಬ ಪ್ರಖ್ಯಾತರಾದ ಪುತ್ರರು ಜನಿಸಿದರು.

ತಸ್ಯ ಶೂರಸ್ಯ ತು ಸುತಾ ಜಜ್ಞಿರೇ ಬಲವತ್ತರಾಃ ।
ವಾತಶ್ಚೈವ ನಿವಾತಶ್ಚ ಶೋಣಿತಃ ಶ್ವೇತವಾಹನಃ ॥ ೧೩೬ ॥

ಶಮೀ ಚ ಗದವರ್ಮಾ ಚ ನಿದಾತಃ ಶಕ್ರಶಕ್ರಜಿತ್ ।
ಶಮಿಪುತ್ರಃ ಪ್ರತಿಕ್ಷಿಪ್ತಃ ಪ್ರತಿಕ್ಷಿಪ್ತಸ್ಯ ಚಾತ್ಮಜಃ ॥ ೧೩೭ ॥

ಸ್ವಯಂಭೋಜಃ ಸ್ವಯಂಭೋಜಾದ್ಧೃದಿಕಃ ಸಂಬಭೂವ ಹ ।
ಹೃದಿಕಸ್ಯ ಸುತಾಸ್ತ್ವಾಸ‍ನ್ ದಶಭೀಮಪರಾಕ್ರಮಾಃ ॥ ೧೩೮ ॥

ಕೃತವರ್ಮಾ ಕೃತಸ್ತೇಷಾಂ ಶತಧನ್ವಾ ತು ಮಧ್ಯಮಃ ।
ದೇವಾರ್ಹಶ್ಚ ವನಾರ್ಹಶ್ಚ ಭಿಷಗ್ದ್ವೈತರಥಶ್ಚ ಯಃ ॥ ೧೩೯ ॥

ಸುದಾಂತಶ್ಚ ಧಿಯಾಂತಶ್ಚ ನಕವಾನ್ ಕನಕೋದ್ಭವಃ ।
ದೇವಾರ್ಹಸ್ಯ ಸುತೋ ವಿದ್ವಾನ್ ಜಜ್ಞೇ ಕಂಬಲಬರ್ಹಿಷಃ ॥ ೧೪೦ ॥

೧೩೬–೧೩೭. ಆ ಶೂರರಾಜನಿಗೆ ಅತ್ಯಂತ ಬಲಿಷ್ಠರಾದ ವಾತ, ನಿವಾತ, ಶೋಣಿತ, ಶ್ವೇತವಾಹನ, ಶಮೀ, ಗದವರ್ಮ, ನಿವಾತ ಮತ್ತು ಶಕ್ರಜಿತ್ ಎಂಬ ಸುತರು ಹುಟ್ಟಿದರು. ಅವರಲ್ಲಿ ಶಮಿಗೆ ಪ್ರತಿಕ್ಷಿಪ್ತನೆಂಬ ತನಯನು ಜನಿಸಿ, ಸುಪ್ರಸಿದ್ಧನಾಗಿದ್ದನು.

೧೩೮. ಅಂತಹ ಪ್ರತಿಕ್ಷಿಪ್ತನಿಗೆ ಸ್ವಯಂಭೋಜನೆಂಬ ಕುಮಾರನೂ ಅವನಿಗೆ ಹೃದಿಕನೆಂಬ ಪುತ್ರನೂ ಇದ್ದರು. ಆ ಹೃದಿಕನಿಗೆ ಭೀಮಪರಾಕ್ರಮಿಗಳಾದ ಹತ್ತು ಜನ ಸುಪ್ರಸಿದ್ಧರಾದ ಕುಮಾರರು ಜನಿಸಿದರು.

೧೩೯–೧೪೦. ಆ ಹೃದಿಕನಿಗೆ ಕೃತವರ್ಮಾ, ಶತಧನ್ವಾನ, ದೇವಾರ್ಹ, ವನಾರ್ಹ, ಭಿಷಜ, ದ್ವೈತರಥ, ಸುದಾಂತ, ಧಿಯಾಂತ, ನಕ್ರವಂತ, ಕನಕೋದ್ಭವರೆಂಬ ಹತ್ತು ಜನ ಪುತ್ರರು ಜನಿಸಿದರು. ಅವರಲ್ಲಿ ಜ್ಞಾನಿಯಾದ ದೇವಾರ್ಹನಿಗೆ ಪಂಡಿತನಾದ ಕಂಬಲಬರ್ಹಿಷನೆಂಬ ಸುತನು ಉದ್ಭವಿಸಿದನು

ಅಸಮೌಜಾಃ ಸುತಸ್ತಸ್ಯ ಸುಮಹೌಜಾಶ್ಚ ವಿಶ್ರುತಃ ।
ಅಜಾವಪುತ್ರಾಯ ತತಃ ಪ್ರದದಾವಸಮೌಜಸೇ ॥
ಸುದಂಷ್ಟ್ರಂ ಚ ಸುರೂಪಂ ಚ ಕೃಷ್ಣ ಇತ್ಯಂಧಕಾಃ ಸ್ಮೃತಾಃ ॥ ೧೪೧ ॥

ಅಂಧಕಾನಾಮಿಮಂ ವಂಶಂ ಕೀರ್ತಯಾನಸ್ತು ನಿತ್ಯಶಃ ।
ಆತ್ಮನೋ ವಿಪುಲಂ ವಂಶಂ ಲಭತೇ ನಾತ್ರ ಸಂಶಯಂ ॥ ೧೪೨ ॥

ಅಸ್ಮಕ್ಯಾಂ ಜನಯಾಮಾಸ ಶೂರೋ ವೈ ದೇವಮಾನುಷಿಂ ।
ಮಾಷ್ಯಾಂ ತು ಜನಯಾಮಾಸ ಶೂರೋ ವೈ ದೇವಮೀಢುಷಂ ॥ ೧೪೩ ॥

ಭಾಷ್ಯಾಂ ತು ಜಜ್ಞಿರೇ ಶೂರಾದ್ಭೋಜಾಯಾಂ ಪುರುಷಾ ದಶ ।
ವಸುದೇವೋ ಮಹಾಬಾಹುಃ ಪೂರ್ವಮಾನಕದುಂದುಭಿಃ ॥ ೧೪೪ ॥

---

೧೪೧. ಅವನಿಗೆ ಅಸಮೋಜಸನೆಂಬ ಪುತ್ರನೂ ಮತ್ತು ಸುಮಹೋಜಸನೆಂಬ ಸುತನೂ ಹುಟ್ಟಿದರು ಅವರು ಪ್ರಖ್ಯಾತರಾಗಿದ್ದರು. ಅನಂತರ ಅಜೆಯನ್ನು ಸಂತಾನ ಶೂನ್ಯನಾದ ಅಸಮೋಜಸನಿಗೆ ಕೊಟ್ಟನು. ಆ ವಂಶದವರಾದ ಅಂಧಕರು, ಸುದಂಷ್ಟ್ರರು. ಸುರೂಪರು. ಕೃಷ್ಣರು ಎಂಬುದಾಗಿ ಪ್ರಖ್ಯಾತರಾದರು.

೧೪೨. ಯಾವ ಪುರುಷನು ಈ ಅಂಧಕರ ವಂಶವನ್ನು ನಿತ್ಯವೂ ವರ್ಣಿಸುವನೋ ಅವನ ಕುಲವು ಅತಿವಿಶಾಲವಾಗುವುದು. ಈ ವಿಷಯದಲ್ಲಿ ಸ್ವಲ್ಪವೂ ಸಂದೇಹವಿರುವುದಿಲ್ಲ.

೧೪೩. ಶೂರರಾಜನು ಅಸ್ಮಕಿಯೆಂಬುವಳಲ್ಲಿ ದೇವಮಾನುಷಿಯನ್ನೂ, ಮಾಷಿಯೆಂಬ ಪತ್ನಿಯಲ್ಲಿ ದೇವಮೀಢುಷನೆಂಬ ಸುತನನ್ನೂ ಪಡೆದನು.

೧೪೪. ಶೂರರಾಜನಿಗೆ ಭಾಷಿಯೆಂಬ ಪತ್ನಿಯಲ್ಲಿ ಸುಪ್ರಸಿದ್ಧರಾದ ಹತ್ತು ಜನ ಪುತ್ರರು ಜನಿಸಿದರು. ಮತ್ತು ಭೋಜೆಯೆಂಬ ಭಾರ್ಯೆಯಲ್ಲಿ ಮಹಾಬಾಹುವೂ ಆನಕ ದುಂದುಭಿನಾಮಕನೂ ಆದ ವಸುದೇವಮಹಾರಾಜನು ಉದ್ಭವಿಸಿದನು.

ಜಜ್ಞೇ ತಸ್ಯ ಪ್ರಸೂತಸ್ಯ ದುಂದುಭಿಃ ಪ್ರಾಣದದ್ದಿವಿ ।
ಆನಕಾನಾಂ ಚ ಸಂಹ್ರಾದಃ ಸುಮಹಾನಭವದ್ದಿವಿ ॥ ೧೪೫ ॥

ಪಪಾತ ಪುಷ್ಪವರ್ಷಂ ಚ ಶೂರಸ್ಯ ಭವನೇ ಮಹತ್ ।
ಮನುಷ್ಯಲೋಕೇ ಕೃತ್ಸ್ನೇಽಪಿ ರೂಪೇ ನಾಸ್ತಿ ಸಮೋ ಭುವಿ ॥ ೧೪೬ ॥

ಯಸ್ಯಾಸೀತ್ ಪುರಷಾಗ್ರ್ಯಸ್ಯ ಕೀರ್ತಿಶ್ಚಂದ್ರಮಸೋ ಯಥಾ ।
ದೇವಭಾಗಸ್ತತೋ ಜಜ್ಞೇ ತತೋ ದೇವಶ್ರವಾಃ ಪುನಃ ॥ ೧೪೭ ॥

ಅನಾಧೃಷ್ಟಿಃಕಡಶ್ಚೈವ ನಂದನಶ್ಚೈವ ಭೃಂಜಿನಃ ।
ಶ್ಯಾಮಃ ಶಮಿಕೋ ಗಂಡೂಷಃ ಚತಸ್ರಸ್ತು ವರಾಂಗನಾಃ ॥ ೧೪೮ ॥

ಪೃಥಾ ಚ ಶ್ರುತದೇವಾ ಚ ಶ್ರುತಕೀರ್ತಿಃ ಶ್ರುತಶ್ರವಾಃ ।
ರಾಜಾಧಿದೇವೀ ಚ ತಥಾ ಪಂಚೈತಾ ವೀರಮಾತರಃ ॥ ೧೪೯ ॥

---

೧೪೫. ಆ ವಸುದೇವರಾಯನು ಭೂಮಿಯಲ್ಲಿ ಜನಿಸಿದ ಕೂಡಲೇ ದುಂದುಭಿ ಧ್ವನಿಯು ಆಕಾಶದಲ್ಲಿ ಉದ್ಭವಿಸಿತು. ಸ್ವರ್ಗಲೋಕದಲ್ಲಿರುವ ದೇವತೆಗಳಿಗೆ ಪರಮಾನಂದವು ಉಂಟಾಯಿತು.

೧೪೬. ವಸುದೇವರಾಜನು ಹುಟ್ಟಿದ ಕೂಡಲೇ ಶೂರರಾಯನ ಗೃಹದ ಮೇಲೆ ಮಹತ್ತಾದ ಪುಷ್ಪವೃಷ್ಟಿಯಾಯಿತು. ಈ ಸಮಸ್ತವಾದ ಭೂಲೋಕದಲ್ಲಿಯೂ ಕೂಡ ರೂಪದಲ್ಲಿ ವಸುದೇವನಿಗೆ ಸಮಾನರಾದವರು ಯಾರೂ ಇರಲಿಲ್ಲ.

೧೪೭. ವಸುದೇವರಾಯನಿಗೆ, ಪೂಜ್ಯನಾದ ಚಂದ್ರನಂತೆ ಈ ಲೋಕದಲ್ಲಿ ಅತ್ಯಂತವಾದ ಕೀರ್ತಿಯು ಉಂಟಾಯಿತು. ಅನಂತರ ದೇವಭಾಗನೂ ಮತ್ತು ದೇವಶ್ರವಸ್ಸೆಂಬುವನೂ ಜನಿಸಿದರು.

೧೪೮-೧೪೯. ಅನಂತರ ಅನಾಧೃಷ್ಟಿಕಡ, ನಂದನ, ಭೃಂಜನ, ಶ್ಯಾಮ, ಶಮಿಕ, ಗಂಡೂಷರೆಂಬ ಪುತ್ರರೂ, ಪೃಥಾ, ಶ್ರುತದೇವಿ, ಶ್ರುತಕೀರ್ತಿ, ಶ್ರುತ, ಶ್ರವಸ್ಸು, ರಾಜದೇವಿಯರೆಂಬ ಐದುಜನ ವೀರಮಾತೆಯರೂ ಉದ್ಭವಿಸಿ ಲೋಕ ಮಾನ್ಯರಾಗಿದ್ದರು.

ಪೃಥಾಂ ದುಹಿತರಂ ಚಕ್ರೇ ಕುಂತಿಸ್ತಾಂ ಪಾಂಡುರಾವಹತ್ ।
ಅನಪತ್ಯಾಯ ವೃದ್ಧಾಯ ಕುಂತಿಭೋಜಾಯ ತಾಂ ದದೌ ॥ ೧೫೦ ॥

ತಸ್ಮಾತ್ ಕುಂತೀತಿ ವಿಖ್ಯಾತಾ ಕುಂತಿಭೋಜಾತ್ಮಜಾ ಪೃಥಾ ।
ಕುರುವೀರಃ ಪಾಂಡುಮುಖ್ಯಸ್ತಸ್ಮಾದ್ಭಾರ್ಯಾಮವಿಂದತ ॥ ೧೫೧ ॥

ಪೃಥಾ ಜಜ್ಞೇ ತತಃ ಪುತ್ರಾನ್ ತ್ರೀನಗ್ನಿಸಮತೇಜಸಃ ।
ಲೋಕೇ ಪ್ರತಿರಥಾನ್ ವೀರಾನ್ ಶಕ್ರತುಲ್ಯಪರಾಕ್ರಮಾನ್ ॥ ೧೫೨ ॥

ಧರ್ಮಾದ್ಯುಧಿಷ್ಠಿರಂ ಪುತ್ರಂ ಮಾರುತಾಚ್ಚ ವೃಕೋದರಂ ।
ಇಂದ್ರಾದ್ಧನಂಜಯಂಚೈವ ಪೃಥಾ ಪುತ್ರಾನಜೀಜನತ್ ॥ ೧೫೩ ॥

---

೧೫೦. ಕುಂತಿಭೋಜನೆಂಬ ಮಹಾರಾಜನು ಆ ಐದುಜನ ಕುಮಾರಿಯರಲ್ಲಿ ಕುಂತೀದೇವಿಯನ್ನು ಪುತ್ರಿಯನ್ನಾಗಿ ದತ್ತು ಸ್ವೀಕರಿಸಿದನು. ಅವಳನ್ನು ಪಾಂಡು ಮಹಾರಾಜನು ಮದುವೆಯಾದನು. ಕುಂತಿಭೋಜನಿಗೆ ಸಂತಾನವಿಲ್ಲದ್ದರಿಂದ ಕುಂತೀದೇವಿಯನ್ನು ದತ್ತು ಮಾಡಿಕೊಂಡನು.

೧೫೧. ಆ ಪೃಥಾದೇವಿಯು ಕುಂತಿಭೋಜನಿಗೆ ಕೃತಕ ಪುತ್ರಿಯಾದುದರಿಂದ ಕುಂತಿಯೆಂಬ ನಾಮವನ್ನು ಪಡೆದಳು. ಕುರುವಂಶದಲ್ಲಿ ಉತ್ತಮನಾದ ಪಾಂಡು ಮಹಾರಾಜನು ಅವನಿಂದ ಕುಂತಿಯನ್ನು ಪತ್ನಿತ್ವೇನ ಸ್ವೀಕರಿಸಿದನು

೧೫೨ ಆ ಪೃಥಾದೇವಿಯು ಅಗ್ನಿಗೆ ಸಮಾನತೇಜಸ್ವಿಗಳಾದ ಮೂವರು ಕುಮಾರರನ್ನು ಪಡೆದಳು. ಆ ಕುಮಾರರು ಲೋಕದಲ್ಲಿ ಮಹಾರಥಿಕರೂ, ವೀರರೂ ದೇವೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳವರೂ, ಮಾನವರೂ ಆಗಿದ್ದರು.

೧೫೩. ಆ ಮೂವರು ಕುಮಾರರಲ್ಲಿ ಕುಂತೀದೇವಿಯು ಯಮಧರ್ಮನಿಂದ ಯುಧಿಷ್ಠಿರನೆಂಬ ಕುಮಾರನನ್ನೂ, ವಾಯುದೇವನಿಂದ ಭೀಮಸೇನನನ್ನೂ, ಇಂದ್ರನಿಂದ ಅರ್ಜುನನನ್ನೂ ಪಡೆದಳು. ಹೀಗೆ ಈ ಮೂವರೂ ಕುಂತೀಪುತ್ರರಾಗಿ ಪ್ರಖ್ಯಾತರಾಗಿದ್ದರು.

**ಮಾದ್ರವತ್ಯಾಂ ತು ಜನಿತಾವಾಶ್ವಿನಾವಿತಿ ವಿಶ್ರುತಂ ।**
**ನಕುಲಃ ಸಹದೇವಶ್ಚ ರೂಪಸತ್ವಗುಣಾನ್ವಿತೌ ॥ ೧೫೪ ॥**

**ಜಜ್ಞೇ ಚ ಶ್ರುತದೇವಾಯಾಂ ತನಯೋ ವೃದ್ಧಶರ್ಮಣಃ ।**
**ಕರೂಷಾಧಿಪತಿರ್ವೀರೋ ದಂತವಕ್ತ್ರೋ ಮಹಾಬಲಃ ॥ ೧೫೫ ॥**

**ಕೈಕೇಯಾಂ ಶ್ರುತಿಕೀರ್ತ್ಯಾಂ ತು ಜಜ್ಞೇ ಸಂತರ್ದನಃ ಪುನಃ ।**
**ಚೇಕಿತಾನಬೃಹತ್ ಕ್ಷತ್ರೋ ತಥೈವಾನ್ಯೌ ಮಹಾಬಲೌ ॥ ೧೫೬ ॥**

**ವಿಂದಾನುವಿಂದಾವಾವಂತ್ಯೌ ಭ್ರಾತರೌ ಸುಮಹಾಬಲೌ ।**
**ಶ್ರುತಶ್ರವಾಯಾಂ ಚೈದ್ಯಸ್ತು ಶಿಶುಪಾಲೋ ಬಭೂವ ಹ ॥ ೧೫೭ ॥**

---

೧೫೪. ಪಾಂಡುರಾಯನ ಕಿರಿಯ ಪತ್ನಿಯಾದ ಮಾದ್ರೀದೇವಿಯಲ್ಲಿ ಅಶ್ವಿನೀ ದೇವತೆಗಳ ಅನುಗ್ರಹದಿಂದ ಸೌಂದರ್ಯ, ಶೌರ್ಯ ಗುಣಸಂಪನ್ನರಾದ ನಕುಲ ಸಹದೇವರೆಂಬ ಇಬ್ಬರು ಕುಮಾರರು ಉತ್ಪನ್ನರಾದರು.

೧೫೫. ವೃದ್ಧಶರ್ಮನಿಗೆ ಶ್ರುತದೇವಿಯಲ್ಲಿ ಕರೂಷದೇಶಾಧಿಪತಿಯೂ, ಮಹಾಶೂರನೂ ಅತ್ಯಂತ ಬಲಶಾಲಿಯೂ ಆದ ದಂತವಕ್ತ್ರನೆಂಬ ತನಯನು ಉದ್ಭವಿಸಿದನು.

೧೫೬. ಕೇಕೆಯ ರಾಜನ ಕುಮಾರಿಯಾದ ಶ್ರುತಕೀರ್ತಿಯಲ್ಲಿ ಸಂತರ್ದನ ನೆಂಬ ಪುತ್ರನು ಮತ್ತು ಮಹಾಬಲಶಾಲಿಗಳಾದ ಚೇಕಿತಾನ, ಬೃಹಕ್ಷೇತ್ರರೆಂಬ ಇಬ್ಬರು ಕುಮಾರರೂ ಹುಟ್ಟಿದರು.

೧೫೭. ವಿಂದಾನುವಿಂದರೆಂಬುವರು ಅವಂತೀದೇಶದ ರಾಜಕುಮಾರರೂ, ಸಹೋದರರೂ ಅತ್ಯಂತ ಬಲಿಷ್ಠರೂ ಆಗಿದ್ದರು. ಶ್ರುತಶ್ರುವೆಯೆಂಬುವಳಲ್ಲಿ ಚೇದಿ ದೇಶಾಧಿಪತಿಯಾದ ಶಿಶುಪಾಲನು ಉದ್ಭವಿಸಿದನು.

ದಮಘೋಷಸ್ಯ ರಾಜರ್ಷೇಃ ಪುತ್ರೋ ವಿಖ್ಯಾತಪೌರುಷಃ ।
ಯಃ ಪುರಾಸೀದ್ದಶಗ್ರೀವಃ ಸಂಬಭೂವಾರಿಮರ್ದನಃ ॥ ೧೫೮ ॥

ಯದುಶ್ರವಾನುಜಸ್ತಸ್ಯ ರುಜುಕನ್ಯೋನುಜಸ್ತಥಾ ।
ಪತ್ನ್ಯಸ್ತು ವಸುದೇವಸ್ಯ ತ್ರಯೋದಶ ವರಾಂಗನಾಃ ॥ ೧೫೯ ॥

ಪೌರವೀ ರೋಹಿಣೀ ಚೈವ ಮದಿರಾ ಚಾಪರಾ ತಥಾ ।
ತಥೈವ ಭದ್ರ ವೈಶಾಖೀ ದೇವಕೀ ಸಪ್ತಮೀ ತಥಾ ॥ ೧೬೦ ॥

ಸುಗಂಧಿರ್ವನರಾಜೀ ಚ ದ್ವೇ ಚಾನ್ಯೇ ಪರಿಚಾರಿಕೇ ।
ರೋಹಿಣೀ ಪೌರವೀ ಚೈವ ವಾಲ್ಮೀಕಸ್ಯಾತ್ಮಜಾಭವತ್ ॥ ೧೬೧ ॥

---

೧೫೮. ದಮಘೋಷನೆಂಬ ರಾಜರ್ಷಿಗೆ ಪ್ರಖ್ಯಾತವಾದ ಪರಾಕ್ರಮವುಳ್ಳ ಪುತ್ರನು ಹುಟ್ಟಿದನು. ಅವನು ಪೂರ್ವದಲ್ಲಿ ಶತ್ರುಸಂಹಾರಕನಾದ ಹತ್ತು ಶಿರಸ್ಸುಳ್ಳ ರಾವಣನಾಗಿ ಹುಟ್ಟಿದ್ದನು.

೧೫೯. ಅವನಿಗೆ ಯದುಶ್ರವಾನುಜ ರುಜಕನ್ಯಾನುಜರೆಂಬ ಇಬ್ಬರು ಪುತ್ರರು ಹುಟ್ಟಿದರು. ವಸುದೇವಮಹಾರಾಜನಿಗೆ ಅತಿಸುಂದರಿಯರಾದ ಹದಿಮೂರು ಜನ ಪತ್ನಿಯರಿದ್ದರು.

೧೬೦. ಅವರು ಯಾರೆಂದರೆ ಪೌರೀ, ರೋಹಿಣೀ, ಮದಿರಾ, ಭದ್ರಾ, ವೈಶಾಖೀ ಎಂಬುವರು. ಇವರಲ್ಲಿ ಏಳನೆಯವಳು ದೇವಕೀದೇವಿಯಾಗಿದ್ದಳು.

೧೬೧ ವಸುದೇವಮಹಾರಾಜನಿಗೆ ಸುಗಂಧಿ. ವನರಾಜಿಯರೆಂಬ ಇಬ್ಬರು ಪರಿಚಾರಕಿಯರಿದ್ದರು. ಮತ್ತು ವಾಲ್ಮೀಕಿಯ ಪುತ್ರಿಯರಾದ ರೋಹಿಣೀ, ಪೌರವೀ ಎಂಬ ಇಬ್ಬರು ಹೆಂಡತಿಯರಿದ್ದರು.

ಜ್ಯೇಷ್ಠಾ ಪತ್ನೀ ಮಹಾಭಾಗಾ ದಯಿತಾನಕದುಂದುಭೇಃ ।
ಜ್ಯೇಷ್ಠಂ ಲೇಭೇ ಸುತಂ ರಾಮಂ ಸಾರಣಂ ನಿಶವಂ ತಥಾ ॥ ೧೬೨ ॥

ದುರ್ದಮಂ ದಮನಂ ಶುಭ್ರಂ ಪಿಂಡಾರಕಕುಶೀತಕೌ ।
ಚಿತ್ರಾಂ ನಾಮ ಕುಮಾರೀಂ ಚ ರೌಹಿಣ್ಯಷ್ಟೌ ವ್ಯಜಾಯತ ॥ ೧೬೩ ॥

ಪೌತ್ರೌ ರಾಮಸ್ಯ ಜಜ್ಞಾತೇ ವಿಜ್ಞಾತೌ ನಿಶಿತೋತ್ಸುಕೌ ।
ಪಾರ್ಶ್ವೀ ಚ ಪಾರ್ಶ್ವನಂದೀ ಚ ಶಿಶುಃ ಸತ್ಯಧೃತಿಸ್ತಥಾ ॥ ೧೬೪ ॥

ಮಂದಬಾಹ್ಯೋಽಥ ರಾಮಾಣಗಿರಿಕೌ ಗಿರ ಏವ ಚ ।
ಶುಕ್ಲಗುಲ್ಮೋತಿ ಗುಲ್ಮಶ್ಚ ದರಿದ್ರಾಂತಕ ಏವ ಚ ॥ ೧೬೫ ॥

ಕುಮಾರ್ಯಶ್ಚಾಪಿ ಪಂಚಾದ್ಯಾ ನಾಮತಸ್ತಾ ನಿಬೋಧತ ।
ಅರ್ಚಿಷ್ಮತೀ ಸುನಂದಾ ಚ ಸುರಸಾ ಸುವಚಾಸ್ತಥಾ ॥ ೧೬೬ ॥

---

೧೬೨–೧೬೩. ವಸುದೇವರಾಜನ ಹಿರಿಯ ಪತ್ನಿಯಾದ ಪೌರವಿಯು ಮಹಾನುಭಾವಳೂ, ಪರಮಪ್ರಿಯಳೂ ಆಗಿದ್ದಳು. ಅವಳಿಗೆ ಜ್ಯೇಷ್ಠಪುತ್ರನು ಬಲರಾಮನಾಗಿದ್ದನು. ಅವನ ತರುವಾಯ ಸಾರಣ, ನಿಶವ, ದುರ್ದ್ದಮ, ದವನ, ಶುಭ್ರ, ಪಿಂಡಾರಕ, ಕುಶೀತಕರೆಂಬ ಕುಮಾರರೂ ಚಿತ್ರೆಯೆಂಬ ಕುಮಾರಿಯೂ ಉತ್ಪನ್ನರಾದರು. ರೋಹಿಣೀದೇವಿಯಲ್ಲಿಯೂ ಸಹ ಎಂಟು ಮಕ್ಕಳು ಜನಿಸಿದರು.

೧೬೪. ಶ್ರೀಬಲರಾಮನಿಗೆ ಪ್ರಖ್ಯಾತಪರಾಕ್ರಮಿಗಳೂ, ಶೂರರೂ ಆದ ನಿಶಿತ, ಉತ್ಸುಕರೆಂಬ ಇಬ್ಬರು ಮೊಮ್ಮಕ್ಕಳೂ ಇದ್ದರು. ಮತ್ತು ಪಾರ್ಶ್ವ, ಪಾರ್ಶ್ವನಂದೀ, ಶಿಶು ಮತ್ತು ಸತ್ಯಧೃತಿಯೇ ಮೊದಲಾದ ಪುತ್ರರು ಉದ್ಭವಿಸಿದರು.

೧೬೫-೧೬೬. ಮಂದಬಾಹ್ಯ, ರಾಮಾಣ, ಗಿರಿಕ, ಗಿರ, ಶುಲ್ಕಗುಲ್ಮ, ಗುಲ್ಮ, ದರಿದ್ರಾಂತಿಕ, ಇವರೂ ಸಹ ರೋಹಿಣಿಯ ಮಕ್ಕಳಾಗಿರುವರು. ಮತ್ತು ಅರ್ಚಿಷ್ಮತೀ, ಸುನಂದಾ, ಸುರಸಾ, ಸುವಚಸಾ, ಶತಬಲಾ, ಎಂಬ ಐವರು ಹೆಣ್ಣು ಮಕ್ಕಳು ರೋಹಿಣೀದೇವಿಗೆ ಹುಟ್ಟಿದರು. ಮೇಲೆ ನಿರೂಪಿಸಿದ ಪುತ್ರರೂ, ಪುತ್ರಿಯರೂ ಸಹ ರೋಹಿಣಿಗೆ ಉತ್ಪನ್ನರಾದರು.

ತಥಾ ಶತಬಲಾ ಚೈವ ಸಾರಣಸ್ಯ ಸುತಾಸ್ತ್ರಿಯಃ ।
ಭದ್ರಾಶ್ವೋ ಭದ್ರಗುಪ್ತಿಶ್ಚ ಭದ್ರವಿಷ್ಣುಸ್ತಥೈವ ಚ ॥ ೧೬೭ ॥

ಭದ್ರಬಾಹುರ್ಭದ್ರರಥೋ ಭದ್ರಕಲ್ಪಸ್ತಥೈವ ಚ ।
ಸುಪಾರ್ಶ್ವಕಃ ಕೀರ್ತಿಮಾಂಶ್ಚ ರೋಹಿತಾಶ್ವಶ್ಚ ಭದ್ರಜಃ ॥ ೧೬೮ ॥

ದುರ್ಮದಶ್ಚಾಭಿಭೂತಶ್ಚ ರೋಹಿಣ್ಯಾಃ ಕುಲಜಾಃ ಸ್ಮೃತಾಃ ।
ನಂದೋಪನಂದೌ ಮಿತ್ರಶ್ಚ ಕುಕ್ಷಿಮಿತ್ರಸ್ತಥಾಚಲಃ ॥ ೧೬೯ ॥

ಚಿತ್ರೋಪ ಚಿತ್ರೇ ಕನ್ಯೇ ಚ ಸ್ಥಿತಃ ಪುಷ್ಟಿರಥಾಪರಃ ।
ಮದಿರಾಯಾ ಸುತಾ ಹ್ಯೇತೇ ಸುದೇವೋಽಥ ವಿಜಜ್ಞಿರೇ ॥ ೧೭೦ ॥

ಉಪಬಿಂಬೋಽಥ ಬಿಂಬಶ್ಚ ಸತ್ವದಂತಮಹೌಜಸೌ ।
ಚತ್ವಾರ ಏತೇ ವಿಖ್ಯಾತಾ ಭದ್ರಾಪುತ್ರಾ ಮಹಾಬಲಾಃ ॥ ೧೭೧ ॥

---

೧೬೭-೧೬೮. ಸಾರಣನಿಗೆ ಶತಬಲೆಯೆಂಬ ಕುಮಾರಿಯೂ, ಭದ್ರಾಶ್ವ, ಭದ್ರಗುಪ್ತಿ, ಭದ್ರವಿಷ್ಣು, ಭದ್ರಬಾಹು, ಭದ್ರರಥ, ಭದ್ರಕಲ್ಪ, ಸುಪಾರ್ಶ್ವಕ, ಕೀರ್ತಿಮಂತ, ರೋಹಿತಾಶ್ವ, ಭದ್ರಜ, ದುರ್ಮದ, ಅಭಿಭೂತ, ಇವರು ರೋಹಿಣೀ ದೇವಿಯ ವಂಶೀಕರಾಗಿರುವರು.

೧೬೯-೧೭೦. ಮದಿರಾದೇವಿಗೆ ನಂದೋಪನಂದರು, ಮಿತ್ರನು, ಕುಕ್ಷಮಿತ್ರ, ಮತ್ತು ಅಚಲ, ಪುಷ್ಟಿಯೆಂಬ ಸುತರೂ, ಚಿತ್ರೆ, ಉಪಚಿತ್ರೆಯರೆಂಬ ಕುಮಾರಿಯರೂ ಉತ್ಪನ್ನರಾದರು. ತರುವಾಯ ಸುದೇವನೆಂಬುವನೂ ಉದ್ಭವಿಸಿದನು.

೧೭೧. ತರುವಾಯ ಭದ್ರಾದೇವಿಗೆ ಮಹಾಬಲಶಾಲಿಗಳೂ, ಲೋಕವಿಖ್ಯಾತರೂ, ಆದ ಉಪಬಿಂಬ, ಬಿಂಬ, ಸತ್ವದಂತ, ಮಹೋಜಸರೂ ಎಂಬ ನಾಲ್ವರು ಕುಮಾರರು ಉದ್ಭವಿಸಿದರು.

ವೈಶಾಖ್ಯಾಂ ಸಮುದಾಚ್ಛೂರಿಃ ಪುತ್ರಂ ಕೌಶಿಕಮುತ್ತಮಂ ।
ದೇವಕ್ಯಾಂ ಜಜ್ಞಿರೇ ಶೌರಿಃ ಸುಷೇಣಃ ಕೀರ್ತಿಮಾನಪಿ || ೧೭೨ ||

ತದಯೋ ಭದ್ರಸೇನಶ್ಚ ಯಜುದಾಯಶ್ಚ ಪಂಚಮಃ ।
ಷಷ್ಠೋ ಭದ್ರವಿದೇಕಶ್ಚ ಕಂಸಃ ಸರ್ವಾಂಜಘಾನತಾನ್ || ೧೭೩ ||

ಅಥ ತಸ್ಯಾಮವಸ್ಥಾಯಾಂ ಆಯುಷ್ಮಾನ್ ಸಂಬಭೂವ ಹ ।
ಲೋಕನಾಥಃ ಪುನರ್ವಿಷ್ಣುಃ ಪೂರ್ವಕೃಷ್ಣಃ ಪ್ರಜಾಪತಿಃ || ೧೭೪ ||

ಅನುಜಾತಾಭವತ್ ಕೃಷ್ಣಾ ಸುಭದ್ರಾ ಭದ್ರಭಾಷಿಣೀ ।
ಕೃಷ್ಣಾ ಸುಭದ್ರೇತಿ ಪುನರ್ವ್ಯಾಖ್ಯಾತಾ ವೃಷ್ಣಿನಂದಿನೀ || ೧೭೫ ||

---

೧೭೨-೧೭೩. ಸಮುದನಾಮಕನಾದ ಶೂರರಾಜನಿಗೆ ವೈಶಾಖಿಯೆಂಬುವಳಲ್ಲಿ ಅತ್ಯುತ್ತಮನಾದ ಕೌಶಿಕನೆಂಬ ಪುತ್ರನು ಹುಟ್ಟಿದನು. ಶೂರಕುಮಾರನಾದ ವಸುದೇವರಾಯನಿಗೆ ಸುಷೇಣ, ಕೀರ್ತಿಮಂತ, ತದಯ, ಭದ್ರಸೇನ, ಯಜುದಾಯರೆಂಬ ಐದುಜನ ಮಕ್ಕಳೂ ಭದ್ರವಿದೇಕನೆಂಬ ಆರನೆಯ ಕುಮಾರನೂ ಉದ್ಭವಿಸಿದರು. ಕಂಸನು ಅವರೆಲ್ಲರನ್ನೂ ಸಂಹಾರಮಾಡಿದನು.

೧೭೪. ಅನಂತರ ಆಯುಷ್ಮಂತನೂ, ಲೋಕಗಳಿಗೆ ಸ್ವಾಮಿಯೂ, ಪ್ರಜಾಪತಿಯೂ, ಆದ ಶ್ರೀ ಮಹಾವಿಷ್ಣುವು ದೇವಕೀದೇವಿಯಲ್ಲಿ ಶ್ರೀಕೃಷ್ಣನೆಂಬ ನಾಮದಿಂದ ಅವತರಿಸಿದನು.

೧೭೫. ಶ್ರೀಕೃಷ್ಣನು ದೇವಕೀದೇವಿಯಲ್ಲಿ ಅವತಾರ ಮಾಡಿದ ಕೆಲವು ದಿವಸವಾದನಂತರ ಕೃಷ್ಣನಾಮಕ ಕುಮಾರಿಯು ಮಧುರಭಾಷಿಣಿಯಾದ ಸುಭದ್ರೆಯೆಂದು ಲೋಕದಲ್ಲಿ ಖ್ಯಾತಿವಂತಳಾದಳು. ವೃಷ್ಣಿವಂಶಕ್ಕೆ ಆನಂದದಾಯಕಳಾದ ಕೃಷ್ಣೆಯು ಸುಭದ್ರೆಯೆಂದೇ ಪ್ರಖ್ಯಾತಳಾದಳು.

**ಸುಭದ್ರಾಯಾಂ ರಥೀ ಪಾರ್ಥಾದಭಿಮನ್ಯುರಜಾಯತ ।**
**ವಸುದೇವಸ್ಯ ಭಾರ್ಯಾಸು ಮಹಾಭಾಗಾಸು ಸಪ್ತಸು ॥**
**ಯೇ ಪುತ್ರಾ ಜಜ್ಞಿರೇ ಶೂರಾ ನಾಮತಸ್ತಾನ್ನಿಬೋಧತ ॥ ೧೭೬ ॥**

**ಅಥೋಽಸ್ಯ ಸಹದೇವಾಯಾಂ ಶೂರೋ ಜಜ್ಞೇಭಯಾಸಖಃ ।**
**ಶಾಂರ್ಗದೇವಾಜನತ್ತುಂಬುಂ ಶೌರೀ ಜಜ್ಞೇ ಕುಲೋದ್ವಹಂ ॥ ೧೭೭ ॥**

**ಉಪಸಂಗಂ ವಸುಂಚಾಪಿ ತನಯೌ ದೇವರಕ್ಷಿತೌ ।**
**ಏವಂ ದಶ ಸುತಾಸ್ತಸ್ಯ ಕಂಸಸ್ತಾನಸ್ಯಘಾತಯತ್ ॥ ೧೭೮ ॥**

**ವಿಜಯಂ ರೋಚನಂಚೈವ ವರ್ಧಮಾನಂ ತಥೈವ ಚ ।**
**ಏತಾನ್ ಸರ್ವಾನ್ ಮಹಾಭಾಗಾನುಪದೇವಾ ವ್ಯಜಾಯತ ॥ ೧೭೯ ॥**

---

೧೭೬. ಅರ್ಜುನನಿಗೆ ಸುಭದ್ರೆಯಲ್ಲಿ ಮಹಾರಥಿಕನೂ, ಮಹಾಶೂರನೂ ಆದ ಅಭಿಮನ್ಯುನಾಮಕ ಕುಮಾರನು ಜನಿಸಿದನು. ವಸುದೇವರಾಯನ ಪತ್ನಿಯರೂ, ಮಹಾನುಭಾವರೂ ಸಪ್ತದೇವಿಯರಲ್ಲಿ ಯಾವ ಯಾವ ಶೂರರಾದ ಕುಮಾರರು ಜನಿಸಿದರೋ ಅವರನ್ನು ನಾಮಗಳೊಡನೆ ಹೇಳುವೆನು ಕೇಳಿರೆಂದು ಸೂತನು ಹೇಳಿದನು.

೧೭೭-೧೭೮. ಅನಂತರ ಸಹದೇವಿಯಲ್ಲಿ ಶತ್ರುಗಳಿಗೆ ಭಯಪ್ರದನಾದ ಶೂರಕುಮಾರನು ಜನಿಸಿದನು. ತರುವಾಯ ಶಾಂರ್ಗದೇವಿಯು ವಂಶವರ್ಧಕನಾದ ತುಂಬುವೆಂಬ ಕುಮಾರನನ್ನು ಪಡೆದಳು. ಶೌರೀ ಎಂಬುವಳು ಉಪಸಂಗ, ವಸು, ಎಂಬ ದೇವಸಹಾಯವುಳ್ಳ ಇಬ್ಬರು ಮಕ್ಕಳನ್ನು ಪಡೆದಳು. ಹೀಗೆ ವಸುದೇವನಿಗೆ ಹತ್ತು ಜನ ಮಕ್ಕಳಿದ್ದರು. ಕಂಸನು ಅವರೆಲ್ಲರನ್ನೂ ಸಂಹರಿಸಿದನು

೧೭೯. ಉಪದೇವಿಯೆಂಬ ರಾಣಿಯು ಮಹಾನುಭಾವರಾದ [illegible], ರೋಚನ ಮತ್ತು ವರ್ಧಮಾನರೆಂಬ ಸುಪ್ರಸಿದ್ಧರಾದ ಕುಮಾರರನ್ನು ಪಡೆದಳು.

**ಸ್ವಗಾಹವಂ ಮಹಾತ್ಮಾನಂ ವೃಕದೇವೀ ತ್ವಜಾಯತ ।**
**ಅಗಾಹೀ ಚ ಸ್ವಸಾ ಚೈವ ಸುರೂಪಾ ಶಿಶಿರಾಯಿಣೀ ॥ ೧೮೦ ॥**

**ಸಪ್ತಮಂ ದೇವಕೀ ಪುತ್ರಂ ಸುನಾಸಾ ಸುಷುವೇ ಭುವಂ ।**
**ಗವೇಷಣಂ ಮಹಾಭಾಗಂ ಸಂಗ್ರಾಮೇ ಚಿತ್ರಯೋಧಿನಂ ॥ ೧೮೧ ॥**

**ಶ್ರಾದ್ಧದೇವಂ ಪುರಾ ಯೇನ ವನೇ ವಿರಚಿತಾ ದ್ವಿಜಾಃ ।**
**ಶೈಬ್ಯಾಯಾಮದದಚ್ಛೌರಿಃ ಪುತ್ರಂ ಕೌಶಿಕಮವ್ಯಯಂ ॥ ೧೮೨ ॥**

**ಸುಗಂಧೀ ವನರಾಜೀ ಚ ಶೌರೇರಾಸ್ತಾಂ ಪರಿಗ್ರಹಃ ।**
**ಪುಂಡ್ರಶ್ಚ ಕಪಿಲಶ್ಚೈವ ವಸುದೇವಾತ್ಮಜೌ ಹಿ ತೌ ॥**
**ತಯೋ ರಾಜಾಽಭವತ್ ಪುಂಡ್ರಃ ಕಪಿಲಸ್ತು ವನಂ ಯಯೌ ॥ ೧೮೩ ॥**

---

೧೮೦. ವಸುದೇವರಾಯನ ಭಾರ್ಯೆಯಾದ ವೃಕದೇವಿಯು ಮಹಾನುಭಾವನೂ ಪೂಜ್ಯನೂ ಆದ ಸ್ವಗಾಹವನು ಉತ್ಪನ್ನನಾದನು. ಆ ಸ್ವಗಾಹವನಿಗೆ ಅಗಾಹವೀ ಮತ್ತು ಅತ್ಯಂತ ಸುಂದರಿಯಾದ ಶಿಶಿರಾಯಣಿಯರೆಂಬ ಇಬ್ಬರು ತಂಗಿಯರಿದ್ದರು.

೧೮೧. ದೇವಕೀದೇವಿಯು ಏಳನೆಯವನಾದ ಕೃಷ್ಣನೆಂಬ ಪುತ್ರನನ್ನು ಪಡೆದಳು. ಸುನಾಸೆಯು ಭುವನನ್ನೂ ಮಹಾಭಾಗ್ಯಶಾಲಿಯೂ ಯುದ್ಧದಲ್ಲಿ ವಿಚಿತ್ರಕರವಾಗಿ ಹೋರಾಡುವವನೂ ಆದ ಗವೇಷಣನೆಂಬ ಕುಮಾರನನ್ನೂ ಪಡೆದಳು.

೧೮೨. ಪೂರ್ವಕಾಲದಲ್ಲಿ ಬ್ರಾಹ್ಮಣರು ಋ[illegible]ಗಳನ್ನು ವನದಲ್ಲಿ ಶ್ರಾದ್ಧದೇವನನ್ನಾಗಿ ಮಾಡಿಕೊಂಡಿದ್ದರೋ ಅಂತಹ ಅವ್ಯಯನೂ ನಾಶರಹಿತನೂ ಕೌಶಿಕನಾಮಕನೂ ಆದ ಪುತ್ರನನ್ನು ಶೌರಿಯು ಶೈಬ್ಯೆ ಎಂಬ ಪತ್ನಿಯಲ್ಲಿ ಪಡೆದನು.

೧೮೩. ಶೂರರಾಜನ ಕುಮಾರನಾದ ವಸುದೇವನಿಗೆ ಸುಗಂಧೀ, ವನರಾಜೀ ಎಂಬ ಇಬ್ಬರು ಪತ್ನಿಯರಿದ್ದರು. ಅವರಲ್ಲೊಬ್ಬಳಲ್ಲಿ ವಸುದೇವರಾಯನಿಗೆ ಪುಂಡ್ರ, ಕಪಿಲನೆಂಬ ಇಬ್ಬರು ಕುಮಾರರಿದ್ದರು. ಅವರಲ್ಲಿ ಪುಂಡ್ರನು ದೊರೆಯಾಗಿ ರಾಜ್ಯವನ್ನು ಪಾಲಿಸಿದನು. ಕಪಿಲನು ತಪಸ್ಸಿಗಾಗಿ ವಿರಕ್ತಿಯಿಂದ ವನಕ್ಕೆ ಹೋದನು.

ತಸ್ಯಾಂ ಸಮುಭವದ್ವೀರೋ ವಸುದೇವಾತ್ಮಜೋ ಬಲೀ ।
ರಾಜಾ ನಾಮ ನಿಷಾದೋಽಸೌ ಪ್ರಥಮಃ ಸ ಧನುರ್ಧರಃ ॥ ೧೮೪ ॥

ವಿಖ್ಯಾತೋ ದೇವರಾತಸ್ಯ ಮಹಾಭಾಗಃ ಸುತೋಽಭವತ್ ।
ಪಂಡಿತಾನಾಂ ಮತಂ ಪ್ರಾಹುರ್ದೇವಶ್ರವಸಮುದ್ಭವಂ ॥ ೧೮೫ ॥

ಅಸ್ಮಕ್ಯಾಂ ಲಭತೇ ಪುತ್ರಮನಾದೃಷ್ಟಿಂ ಯಶಸ್ವಿನಂ ।
ನಿವರ್ತಃ ಶಕ್ರಶತ್ರುಘ್ನಂ ಶ್ರಾದ್ಧದೇವಂ ಮಹಾಬಲಂ ॥ ೧೮೬ ॥

ಅಜಾಯತ ಶ್ರಾದ್ಧದೇವೋ ನಿಷಧಾದಿರ್ಯತಃ ಶ್ರುತಃ ।
ಏಕಲವ್ಯೋ ಮಹಾವೀರ್ಯೋ ನಿಷಾದೈಃ ಪರಿವರ್ಧಿತಃ ॥ ೧೮೭ ॥

---

೧೮೪. ವಸುದೇವಮಹಾರಾಜನಿಗೆ ವನರಾಜಿಯಲ್ಲಿ ಅತ್ಯಂತ ಶೂರನೂ ಬಲಶಾಲಿಯೂ ಆದ ನಿಷಾದನೆಂಬ ರಾಜಕುಮಾರನು ಜನಿಸಿದನು. ಅವನು ಧನುಸ್ಸನ್ನು ಧರಿಸುವವರಲ್ಲಿ ಅಗ್ರಗಣ್ಯನಾಗಿರುವನು.

೧೮೫. ದೇವರಾತನೆಂಬುವನಿಗೆ ಮಹಾನುಭಾವನೂ, ಲೋಕವಿಖ್ಯಾತನೂ ಆದ ಸುತನು ಹುಟ್ಟಿದನು. ಅವನು ಪಂಡಿತರಿಗೆ ಪ್ರಿಯನೂ ದೇವಶ್ರವಸನಾಮಕನೂ ಪ್ರಖ್ಯಾತನೂ ಆಗಿದ್ದನು.

೧೮೬. ನಿವರ್ತನಿಗೆ ಅಸ್ಮಕಿಯಲ್ಲಿ ಕೀರ್ತಿವಂತನಾದ ಅನಾದೃಷ್ಟಿಯೆಂಬ ಕುಮಾರನನ್ನೂ ಮತ್ತು ಇಂದ್ರನ ಶತ್ರುವಾದ ದೈತ್ಯರ ಸಂಹಾರಕನೂ ಮಹಾ ಬಲಶಾಲಿಯೂ ಆದ ಶ್ರಾದ್ಧದೇವನು ಹುಟ್ಟಿದನು.

೧೮೭. ಅಂತಹ ಶ್ರಾದ್ಧದೇವನಿಗೆ ಲೋಕಪ್ರಸಿದ್ಧನಾದ ನಿಷಧಾದಿ ಎಂಬುವನೂ ಅವನಿಗೆ ಮಹಾವೀರ್ಯವಂತನಾದ ಏಕಲವ್ಯನೆಂಬ ಕುಮಾರನೂ ಜನಿಸಿ ಬೇಡರಿಂದ ವರ್ಧಿತರಾದರು.

**ಗಂಡೂಷಾಯಾನಪತ್ಯಾಯ ಕೃಷ್ಣಸ್ತುಷ್ಟೋಽದದತ್ ಸುತೌ ।**
**ಚಾರುದೇಷ್ಣಂ ಚ ಸಾಂಬಂ ಚ ಕೃತಾಸ್ತ್ರೌ ಶಸ್ತ್ರಲಕ್ಷಣೌ ॥ ೧೮೮ ॥**

**ತಂತಿಜಸ್ತಂತಿ ಮಾಲಶ್ಚ ಸ್ವಪುತ್ರೌ ಕನಕಸ್ಯ ತು ।**
**ವಸ್ತಾವನೇಸ್ತ್ವಪುತ್ರಾಯ ವಸುದೇವಃ ಪ್ರತಾಪವಾನ್ ॥**
**ಸೌತಿರ್ದದೌ ಸುತಂ ವೀರಂ ಶೌರಿಂ ಕೌಶಿಕಮೇವ ಚ ॥ ೧೮೯ ॥**

**ತಾಪಶ್ಚ ಕ್ರೋಧನುಶ್ಚೈವ ವಿರಜಾಃ ಶ್ಯಾಮುಸೃಂಜಿಮೌ ।**
**ಅನಪತ್ಯೋಽಭವಚ್ಛ್ಯಾಮಃ ಶ್ಯಾಮಕಸ್ತು ವನಂ ಯಯೌ ॥**
**ಜುಗುಪ್ಸಮಾನೋ ಭೋಜತ್ವಂ ರಾಜರ್ಷಿತ್ವಮವಾಪ್ನುಯಾತ್ ॥ ೧೯೦ ॥**

**ಯ ಇದಂ ಜನ್ಮ ಕೃಷ್ಣಸ್ಯ ಪಠತೇ ನಿಯತವ್ರತಃ ।**
**ಶ್ರಾವಯೇದ್ಬ್ರಾಹ್ಮಣಂಚಾಪಿ ಸುಮತ್ಸುಖಮಾಪ್ನುಯಾತ್ ॥ ೧೯೧ ॥**

---

೧೮೮. ಶ್ರೀಕೃಷ್ಣನು ಪ್ರೀತನಾಗಿ ಅತ್ಯಂತಪ್ರಿಯನೂ, ಸಂತಾನರಹಿತನೂ ಆದ ಗಂಡೂಷನಿಗೆ ಅಸ್ತ್ರವಿದ್ಯಾಪಾರಂಗತರೂ, ಪ್ರಶಸ್ತವಾದ ಲಕ್ಷಣವಂತರೂ ಆದ ಚಾರುದೇಷ್ಣ, ಸಾಂಬನೆಂಬ ಇಬ್ಬರು ಕುಮಾರರನ್ನು ವರಪ್ರದಾನಮಾಡಿದನು.

೧೮೯. ಕನಕನೆಂಬುವನಿಗೆ ತಂತಿಜ, ತಂತಿಮಾಲರೆಂಬ ಇಬ್ಬರು ಕುಮಾರರು ಉದ್ಭವಿಸಿದರು. ಪ್ರತಾಪವಂತನಾದ ವಸುದೇವನು ಸಂತಾನರಹಿತನಾದ ವಸ್ತಾವನಿಗೆ ಸಂತಾನವನ್ನು ಕೊಟ್ಟನು. ಮತ್ತು ಸೌತಿಯು ವೀರನಾದ ಶೌರಿಯೆಂಬ ಕುಮಾರನನ್ನೂ, ಕೌಶಿಕನೆಂಬ ಪುತ್ರನನ್ನೂ ಕೊಟ್ಟನು.

೧೯೦. ಇವರ ವಂಶದಲ್ಲಿ ತಪನ, ಕ್ರೋಧನು, ವಿರಜಸ, ಶ್ಯಾಮ, ಸೃಂಜಮ ಎಂಬ ತನಯರು ಜನಿಸಿ, ಪ್ರಸಿದ್ಧರಾಗಿರುವರು. ಅವರಲ್ಲಿ ಶ್ಯಾಮನಿಗೆ ಸಂತಾನ ವಿಲ್ಲದೆ ವಿರಕ್ತಿಯಿಂದ ತಪಸ್ಸಿಗಾಗಿ ವನಕ್ಕೆ ಹೋದನು. ಭೋಜನೂ ಕೂಡ ಜುಗುಪ್ಸಿತನಾಗಿ ರಾಜರ್ಷಿಯಾದನು.

೧೯೧. ಯಾವ ಪುರುಷನು ನಿಯಮಿತನಾಗಿ ಈ ಕೃಷ್ಣ ಜನ್ಮವೃತ್ತಾಂತವನ್ನು ಪಠನಮಾಡುವನೋ ಅಥವಾ ಬ್ರಾಹ್ಮಣರಿಗೆ ಶ್ರವಣಮಾಡಿಸುವನೋ ಅವನು ಅತಿ ಮಹತ್ತೂ, ಉತ್ತಮವೂ ಆದ ಪರಮಸುಖವನ್ನು ಹೊಂದುವನು.

ದೇವದೇವೋ ಮಹಾತೇಜಾಃ ಪೂರ್ವಂ ಕೃಷ್ಣಃ ಪ್ರಜಾಪತಿಃ ।
ವಿಹಾರಾರ್ಥಂ ಮನುಷ್ಯೇಷು ಜಜ್ಞೇ ನಾರಾಯಣಃ ಪ್ರಭುಃ ॥ ೧೯೨ ॥

ದೇವಕ್ಯಾಂ ವಸುದೇವೇನ ತಪಸಾ ಪುಷ್ಕರೇಕ್ಷಣಃ ।
ಚತುರ್ಬಾಹುಃ ಸ ವಿಜ್ಞೇಯೋ ದಿವ್ಯರೂಪಃ ಶ್ರಿಯಾನ್ವಿತಃ ॥ ೧೯೩ ॥

ಪ್ರಕಾಶೋ ಭಗವಾನ್ ಯೋಗೀ ಕೃಷ್ಣೋ ಮಾನುಷಮಾಗತಃ ।
ಅವ್ಯಕ್ತೋವ್ಯಕ್ತಲಿಂಗಸ್ಥಃ ಸ ಏವ ಭಗವಾನ್ ಪ್ರಭುಃ ॥ ೧೯೪ ॥

ನಾರಾಯಣೋ ಯತಶ್ಚಕ್ರೇ ಪ್ರಭವಂ ಚಾವ್ಯಯೋಹಿ ಸಃ ।
ದೇವೋ ನಾರಾಯಣೋ ಭೂತ್ವಾ ಹರಿರಾಸೀತ್ಸನಾತನಃ ॥ ೧೯೫ ॥

---

೧೯೨. ಪೂರ್ವದಲ್ಲಿ ದೇವದೇವನೂ, ಮಹಾತೇಜಸ್ವಿಯೂ, ಪ್ರಜಾಪತಿಯೂ, ಸ್ವಾಮಿಯೂ ಆದ ಶ್ರೀಮನ್ನಾರಾಯಣನು ವಿಹಾರಾರ್ಥವಾಗಿ ಮನುಷ್ಯರಲ್ಲಿ ಕೃಷ್ಣನೆಂಬ ನಾಮದಿಂದ ಅವತಾರಮಾಡಿದನು.

೧೯೩. ದೇವಕೀವಸುದೇವರು ಮಹತ್ತರವಾದ ತಪಸ್ಸನ್ನು ಮಾಡಲಾಗಿ ಪ್ರೀತನಾದ ಶ್ರೀಹರಿಯು ದೇವಕಿಯ ಗರ್ಭದಲ್ಲಿ ಕಮಲೇಕ್ಷಣನೂ, ಚತುರ್ಬಾಹುವೂ, ದಿವ್ಯರೂಪಿಯೂ, ಸಂಪದ್ಯುಕ್ತನೂ ಆದ ಶ್ರೀಕೃಷ್ಣರೂಪದಿಂದ ಅವತರಿಸಿದನು.

೧೯೪. ಮಹಾಯೋಗಿಯೂ, ಷಡ್ಗುಣೈಶ್ವರ್ಯಸಂಪನ್ನನೂ ಆದ ಶ್ರೀಹರಿಯು ಪ್ರಕಾಶಕವಾದ ಕೃಷ್ಣರೂಪದಿಂದ ಮನುಷ್ಯನಾಗಿ ಹುಟ್ಟಿದನು. ಸ್ವಾಮಿಯಾದ ಆ ಭಗವಂತನು ನಿಜರೂಪದಿಂದ ಅವ್ಯಕ್ತನೂ, ಶ್ರೀಕೃಷ್ಣಾದಿರೂಪಗಳಿಂದ ವ್ಯಕ್ತನೂ ಆಗಿ ಅವತರಿಸಿದನು.

೧೯೫. ನಾಶರಹಿತನೂ, ಸ್ವಾಮಿಯೂ ಆದ ಶ್ರೀಮನ್ನಾರಯಣನೇ ಅವತರಿಸಿರುವನು. ಸನಾತನನೂ, ಕ್ರೀಡಾದಿಗುಣಯುಕ್ತನೂ, ಕ್ಷೀರಸಮುದ್ರಶಾಯಿಯೂ ಆದ ಶ್ರೀಹರಿಯೇ ಕೃಷ್ಣನಾಗಿ ಅವತರಿಸಿರುವನು.

**ಯೋತ್ಸೃಜಚ್ಚಾದಿಪುರುಷಂ ಪುರಾ ಚಕ್ರೇ ಪ್ರಜಾಪತಿಂ ।**
**ಅದಿತೇರಪಿ ಪುತ್ರತ್ವಮೇತ್ಯ ಯಾದವನಂದನಃ ॥**
**ದೇವೋ ವಿಷ್ಣುರಿತಿ ಖ್ಯಾತಃ ಶಕ್ರಾದವರಜೋಽಭವತ್ ॥ ೧೯೬ ॥**

**ಪ್ರಸಾದಜಂ ಯಸ್ಯ ವಿಭೋರದಿತ್ಯಾಃ ಪುತ್ರಕಾರಣಂ ।**
**ವಧಾರ್ಥಂ ಸುರಶತ್ರೂಣಾಂ ದೈತ್ಯದಾನವರಕ್ಷಸಾಂ ॥ ೧೯೭ ॥**

**ಯಯಾತಿವಂಶಜಸ್ಯಾಥ ವಸುದೇವಸ್ಯ ಧೀಮತಃ ।**
**ಕುಲಂ ಪುಣ್ಯಂ ಯತಃ ಕರ್ಮ ಭೇಜೇ ನಾರಾಯಣಃ ಪ್ರಭುಃ ॥ ೧೯೮ ॥**

**ಸಾಗರಾಃ ಸಮಕಂಪಂತ ಚೇಲುಶ್ಚ ಧರಣೀಧರಾಃ ।**
**ಜಜ್ವಲುಶ್ಚಾಗ್ನಿಹೋತ್ರಾಣಿ ಜಾಯಮಾನೇ ಜನಾರ್ದನೇ ॥ ೧೯೯ ॥**

**ಶಿವಾಶ್ಚ ಪ್ರವವುರ್ವಾತಾಃ ಪ್ರಶಾಂತಿಮಭವದ್ರಜಃ ।**
**ಜ್ಯೋತೀಂಷ್ಯಭ್ಯಧಿಕಂ ರೇಜುರ್ಜಾಯಮಾನೇ ಜನಾರ್ದನೇ ॥ ೨೦೦ ॥**

---

೧೯೬. ಆದಿಪುರುಷನಾದ ಶ್ರೀಹರಿಯೇ ಪೂರ್ವದಲ್ಲಿ ಸೃಷ್ಟಿಕರ್ತನೂ, ಆದಿಪುರುಷನೂ ಆದ ಬ್ರಹ್ಮದೇವನನ್ನು ಸೃಷ್ಟಿಮಾಡಿರುವನು. ಆ ಹರಿಯೇ ಅದಿತಿಯಾದ ದೇವಕೀದೇವಿಯ ಕುಮಾರನಾಗಿಯೂ, ಯಾದವನಂದನನಾಗಿಯೂ ಆದನು. ಪ್ರಖ್ಯಾತನೂ, ಸ್ವಾಮಿಯೂ ಆದ ವಿಷ್ಣುವೇ ಉಪೇಂದ್ರನಾಗಿಯೂ ಅವತರಿಸಿರುವನು.

೧೯೭–೧೯೮. ಸ್ವಾಮಿಯಾದ ಶ್ರೀಮನ್ನಾರಾಯಣನು ಅದಿತೀದೇವಿಯ ಪ್ರಾರ್ಥನಾನುಸಾರವಾಗಿಯೂ ದೇವತೆಗಳಿಗೆ ಶತ್ರುಗಳಾದ ದೈತ್ಯರು, ದಾನವರು, ರಾಕ್ಷಸರು ಇವರ ಸಂಹಾರಕ್ಕಾಗಿಯೂ ಯಯಾತಿವಂಶಭೂಷಣನೂ, ಜ್ಞಾನಿಯೂ ಆದ ವಸುದೇವಮಹಾರಾಜನ ಗೃಹದಲ್ಲಿ ಜನಿಸಿ ವಿಚಿತ್ರವೂ, ಅದ್ಭುತವೂ, ಪುಣ್ಯಪ್ರದವೂ ಆದ ದಿವ್ಯಮಹಾಕಾರ್ಯಗಳನ್ನು ಮಾಡಿ ಭೂಭಾರಗಳನ್ನು ಪರಿಹರಿಸಿದನು.

೧೯೯–೨೦೦. ಶ್ರೀಕೃಷ್ಣನು ವಸುದೇವಮಹಾರಾಜನ ಗೃಹದಲ್ಲಿ ಅವತರಿಸಲಾಗಿ ಸಮುದ್ರಗಳು ಕಂಪಿಸಿದುವು. ಗಿರಿಗಳು ಚಲಿಸಿದುವು. ಅಗ್ನಿತ್ರಯಗಳು ಅತಿಯಾಗಿ ಪ್ರಕಾಶಿಸಿದುವು. ಗಾಳಿಯು ಮಂದವಾಗಿಯೂ, ಶಾಂತವಾಗಿಯೂ ಬೀಸಿತು. ಧೂಳು ವೃಷ್ಟಿಯಿಂದ ಶಾಂತವಾಯಿತು. ಜ್ಯೋತಿರ್ಮಂಡಲವು, ನಕ್ಷತ್ರಾದಿಗಳು ಬಹಳವಾಗಿ ಹೊಳೆದವು. ದುಷ್ಟರು ದುಃಖವನ್ನೂ, ಸಜ್ಜನರು ಸಂತೋಷವನ್ನೂ ಹೊಂದಿದರು.

ಅಭಿಜಿನ್ನಾಮನಕ್ಷತ್ರಂ ಜಯಂತೀ ನಾಮ ಶರ್ವರೀ ।
ಮುಹೂರ್ತೋ ವಿಜಯೋ ನಾಮ ಯತ್ರ ಜಾತೋ ಜನಾರ್ದನಃ॥ ೨೦೧ ॥

ಅವ್ಯಕ್ತಃ ಶಾಶ್ವತಃ ಕೃಷ್ಣೋ ಹರಿರ್ನಾರಾಯಣಃ ಪ್ರಭುಃ ।
ಜಾಯತೇ ಸ್ಮೈವ ಭಗವಾನ್ಮಾಯಯಾ ಮೋಹಯನ್ ಪ್ರಜಾಃ ॥ ೨೦೨ ॥

ಆಕಾಶಾತ್ ಪುಷ್ಪವೃಷ್ಟೀಶ್ಚ ವವರ್ಶ ತ್ರಿದಶೇಶ್ವರಃ ।
ಗರ್ಭಿಮರ್ಂಗಲಯುಕ್ತಾಭಿಃ ಸ್ತುವಂತೋ ಮಧುಸೂದನಂ ॥
ಮಹರ್ಷಯಃ ಸಗಂಧರ್ವಾ ಉಪತಸ್ಥುಃ ಸಹಸ್ರಶಃ ॥ ೨೦೩ ॥

ವಸುದೇವಸ್ತು ತಂ ರಾತ್ರೌ ಜಾತಂ ಪುತ್ರಮಧೋಕ್ಷಜಂ ।
ಶ್ರೀವತ್ಸಲಕ್ಷಣಂ ದೃಷ್ಟ್ವಾ ದಿವಿ ದಿವ್ಯೈಃ ಸುಲಕ್ಷಣೈಃ ॥
ಉವಾಚ ವಸುದೇವಃ ಸ್ವಂ ರೂಪಂ ಸಂಹರ ವೈ ಪ್ರಭೋ ॥ ೨೦೪ ॥

---

೨೦೧. ಶ್ರೀಮನ್ನಾರಾಯಣನು ಅಭಿಜಿನ್ನಾಮಕ ಮುಹೂರ್ತದಲ್ಲಿ ಅವತರಿಸಿದನು. ಆ ರಾತ್ರಿಯು ಜಯಂತೀನಾಮಕವಾಗಿತ್ತು. ವಿಜಯನಾಮಕಮುಹೂರ್ತವು ಇತ್ತು. ಇಂತಹ ಸುದಿನದಲ್ಲಿ ಶ್ರೀಕೃಷ್ಣನು ಅವತರಿಸಿದನು.

೨೦೨. ಅವ್ಯಕ್ತನೂ, ಶಾಶ್ವತನೂ, ಹೃದಯಹಾರಕನೂ, ಮುಕ್ತರಿಗೆ ಆಶ್ರಯನೂ, ಸಮರ್ಥನೂ, ಸಕಲೈಶ್ವರ್ಯಸಂಪನ್ನನೂ ಆದ ಶ್ರೀಹರಿಯು ದರ್ಶನ ಮಾತ್ರದಿಂದ ಸರ್ವರನ್ನೂ ಮೋಹಗೊಳಿಸುತ್ತಾ ಕೃಷ್ಣರೂಪಿಯಾಗಿ ಅವತಾರ ಮಾಡಿದನು.

೨೦೩. ದೇವೇಂದ್ರನು ತುಷ್ಟನಾಗಿ ಸ್ವರ್ಗಲೋಕದಿಂದ ಪುಷ್ಪವೃಷ್ಟಿಯನ್ನು ಕರೆದನು. ಗಂಧರ್ವಾದಿಗಳು ಮಂಗಳಕರವೂ, ಮಧುರವೂ ಆದ ಸ್ತೋತ್ರಗಳಿಂದ ಮಧುಸೂಧನನಾದ ಕೃಷ್ಣನನ್ನು ಹೊಗಳಿದರು. ಮಹರ್ಷಿಗಳೂ, ದೇವಗಂಧರ್ವರೂ ಸಾವಿರಾರು ಜನರು ಬಂದರು.

೨೦೪. ವಸುದೇವಮಹಾರಾಜನು ಶ್ರೀವತ್ಸನೆಂಬ ಮಚ್ಚೆಯು ಹೃದಯದಲ್ಲುಳ್ಳವನೂ, ಅಧೋಕ್ಷಜನೂ, ದಿವ್ಯಸುಲಕ್ಷಣಗಳಿಂದ ಸಂಪನ್ನನೂ ಆದ ಕೃಷ್ಣನ ದಿವ್ಯರೂಪವನ್ನು ನೋಡಿ ಓ ಸ್ವಾಮಿಯೇ ಈ ನಿನ್ನ ದಿವ್ಯರೂಪವನ್ನು ಉಪಸಂಹಾರ ಮಾಡಿಕೋ ಎಂದು ಪ್ರಾರ್ಥಿಸಿಕೊಂಡನು.

ಭೀತೋಽಹಂ ಕಂಸತಸ್ತಾತ ಏತದೇವ ಬ್ರವೀಮ್ಯಹಂ ।
ಮಮ ಪುತ್ರಾ ಹತಾಸ್ತೇನ ಜ್ಯೇಷ್ಠಾಸ್ತೇಽದ್ಭುತದರ್ಶನಾಃ || ೨೦೫ ||

ವಸುದೇವವಚಃ ಶ್ರುತ್ವಾ ರೂಪಂ ಸ ಹೃತವಾನ್ ಪ್ರಭುಃ ।
ಅನುಜ್ಞಾತಃ ಪಿತಾ ತ್ವೇನಂ ನಂದಗೋಪಗೃಹಂ ಗತಃ ||
ಉಗ್ರಸೇನಮತೇ ತಿಷ್ಠನ್ ಯಶೋದಾಯೈ ತದಾ ದದೌ || ೨೦೬ ||

ತುಲ್ಯಕಾಲಂ ತು ಗರ್ಭಿಣ್ಯೌ ಯಶೋದಾ ದೇವಕೀ ತಥಾ ।
ಯಶೋದಾ ನಂದಗೋಪಸ್ಯ ಪತ್ನೀ ಸಾ ನಂದಗೋಪತೇಃ || ೨೦೭ ||

ಯಾಮೇವ ರಜನೀಂ ಕೃಷ್ಣೋ ಜಜ್ಞೇ ವೃಷ್ಣಿಕುಲಪ್ರಭುಃ ।
ತಾಮೇವ ರಜನೀಂ ಕನ್ಯಾಂ ಯಶೋದಾಪಿ ವ್ಯಜಾಯತ || ೨೦೮ ||

---

೨೦೫. ಎಲೈ ಪ್ರಭುವೇ, ಕಂಸಮಹಾರಾಜನಿಂದ ಬಹಳ ಭಯವಾಗಿದೆ. ಆ ಕಂಸನು ನನ್ನ ಜ್ಯೇಷ್ಠಪುತ್ರರೂ, ಅತಿಸುಂದರರೂ ಆದ ಕುಮಾರರನ್ನು ಸಂಹಾರ ಮಾಡಿದನು

೨೦೬. ಅನಂತರ ಸ್ವಾಮಿಯಾದ ಕೃಷ್ಣನು ವಸುದೇವರಾಯನ ಮಾತನ್ನು ಕೇಳಿ ಆ ದಿವ್ಯರೂಪವನ್ನು ಮರೆಮಾಚಿದನು. ಕೃಷ್ಣನ ಮಾತನ್ನು ಕೇಳಿ ವಸುದೇವನು ನಂದಗೋಪನ ಗೃಹಕ್ಕೆ ಹೋದನು. ಉಗ್ರಸೇನನ ಇಷ್ಟದಂತೆ ಆ ಶಿಶುವನ್ನು ಯಶೋದಾದೇವಿಗೆ ಕೊಟ್ಟನು

೨೦೭. ಯಶೋದಾ ಮತ್ತು ದೇವಕೀ ಇವರಿಬ್ಬರೂ ಏಕಕಾಲದಲ್ಲಿ ಗರ್ಭಿಣಿಯ ರಾಗಿದ್ದರು. ನಂದಗೋಪನ ಪತ್ನಿಯಾದ ಯಶೋದಾದೇವಿಯು ಸಕಲರಿಗೂ ಆನಂದದಾಯಕಳಾಗಿದ್ದಳು.

೨೦೮. ಯಾವ ರಾತ್ರಿಯಲ್ಲಿ ಶ್ರೀಕೃಷ್ಣನು ವೃಷ್ಣಿವಂಶದಲ್ಲಿ ಅವತರಿಸಿದನೋ ಅವೇ ರಾತ್ರಿಯಲ್ಲಿಯೇ ಯಶೋದಾದೇವಿಯೂ ಕೂಡ ಕನ್ಯಾರತ್ನವನ್ನು ಪಡೆದಳು.

ತಂ ಜಾತಂ ರಕ್ಷಮಾಣಸ್ತು ವಸುದೇವೋ ಮಹಾಯಶಾಃ ।
ಪ್ರಾದಾತ್ ಪುತ್ರಂ ಯಶೋದಾಯೈ ಕನ್ಯಾಂ ತು ಜಗೃಹೇ ಸ್ವಯಂ ॥೨೦೯॥

ದತ್ವೈನಂ ನಂದಗೋಪಸ್ಯ ರಕ್ಷಮಾಮಿತಿ ಚಾಬ್ರವೀತ್ ।
ಸುತಸ್ತೇ ಸರ್ವಕಲ್ಯಾಣೋ ಯಾದವಾನಾಂ ಭವಿಷ್ಯತಿ ॥
ಅಯಂ ಸ ಗರ್ಭೋ ದೇವಕ್ಯಾ ಅಸ್ಮತ್ ಕ್ಲೇಶಾನ್ ಹನಿಷ್ಯತಿ ॥ ೨೧೦ ॥

ಉಗ್ರಸೇನಾತ್ಮಜಾಯಾಂ ಚ ಕನ್ಯಾಮಾನಕದುಂದುಭೇಃ ।
ನಿವೇದಯಾಮಾಸ ತದಾ ಕನ್ಯೇತಿ ಶುಭಲಕ್ಷಣಾ ॥ ೨೧೧ ॥

ಸ್ವಸಾಯಾಂ ತನಯಂ ಕಂಸೋ ಜಾತಂ ನೈವಮಧಾರಯತ್ ।
ಅಥ ತಾಮಪಿ ದುಷ್ಟಾತ್ಮಾ ಹ್ಯುತ್ಸಸರ್ಜ ಮುದಾನ್ವಿತಃ ॥ ೨೧೨ ॥

---

೨೦೯. ಅನಂತರ ಮಹಾಕೀರ್ತಿವಂತನಾದ ವಸುದೇವರಾಯನು ಸದ್ಯೋಜಾತನಾದ ಆ ಕುಮಾರನನ್ನು ಎತ್ತಿಕೊಂಡು ಗೋಕುಲಕ್ಕೆ ಹೋಗಿ ಯಶೋದೆಗೆ ಅವನನ್ನು ಕೊಟ್ಟು ಅವಳಿಂದ ಆ ಕುಮಾರಿಯನ್ನು ಸ್ವೀಕರಿಸಿದನು.

೨೧೦. ವಸುದೇವರಾಯನು ಆ ಮಗುವನ್ನು ನಂದಗೋಪನಿಗೆ ಕೊಟ್ಟು ಈ ಶಿಶುವನ್ನು ನಿನ್ನ ಔರಸಕುಮಾರನಂತೆ ರಕ್ಷಿಸುವನಾಗು. ಈ ಕುಮಾರನು ಸಮಸ್ತ ಯಾದವರಿಗೂ, ಗೋಪರಿಗೂ ಮಂಗಳದಾಯಕನಾಗುವನು. ದೇವಕೀ ಗರ್ಭಸಂಭೂತನಾದ ಇವನು ನಮ್ಮ ಸರ್ವದುಃಖಗಳನ್ನು ಪರಿಹರಿಸುವನೆಂದು ವಸುದೇವನು ನಂದಗೋಪನಿಗೆ ಹೇಳಿದನು.

೨೧೧. ಶೂರ ನಂದನನಾದ ವಸುದೇವಮಹಾರಾಜನಿಗೆ ದೇವಕೀದೇವಿಯಲ್ಲಿ ಸರ್ವಲಕ್ಷಣಸಂಪನ್ನಳಾದ ಕನ್ಯೆಯು ಜನಿಸಿರುವಳೆಂದು ದೂತರು ಕಂಸನಿಗೆ ಅರಿಕೆ ಮಾಡಿಕೊಂಡರು

೨೧೨. ಆಗ ಕಂಸನು ತನ್ನ ತಂಗಿಗೆ ಹೆಣ್ಣುಮಗುವು ಜನಿಸಿರುವುದನ್ನು ಕೇಳಿ ಅದನ್ನು ನಂಬದೇಹೋದನು. ಕನ್ಯಾಜನನವಾದುದನ್ನು ಕೇಳಿ ಸಂತೋಷಯುಕ್ತನಾಗಿ ದುಷ್ಟಾತ್ಮನಾದರೂ ಆ ಕುಮಾರಿಯನ್ನು ಸಂಹರಿಸದೇ ತ್ಯಜಿಸಿದನು.

**ಹತಾ ವೈ ಯಾ ಯದಾ ಕನ್ಯಾ ಜಪತ್ಯೇಷ ವೃಥಾಮತಿಃ ।**
**ಕನ್ಯಾ ಸಾ ವವೃಧೇ ತತ್ರ ವೃಷ್ಣಿಸದ್ಮನಿ ಪೂಜಿತಾ ॥ ೨೧೩ ॥**

**ಪುತ್ರವತ್ಪರಿಪಾಲ್ಯಂತೋ ದೇವಾ ದೇವಾರ್ ಯಥಾ ತದಾ ।**
**ತಾಮೇವ ವಿಧಿನೋತ್ಪನ್ನಾಮಾಹುಃ ಕನ್ಯಾಂ ಪ್ರಜಾಪತಿಂ ॥ ೨೧೪ ॥**

**ಏಕಾದಶಾ ತು ಜಜ್ಞೇ ವೈ ರಕ್ಷಾರ್ಥಂ ಕೇಶವಸ್ಯ ಹ ।**
**ತಾಂ ವೈ ಸರ್ವೇ ಸುಮನಸಃ ಪೂಜಯಿಷ್ಯಂತಿ ಯಾದವಾಃ ॥**
**ದೇವದೇವೋದಿವ್ಯವಪುಃ ಕೃಷ್ಣಃ ಸಂರಕ್ಷಿತೋಽನಯಾ ॥ ೨೧೫ ॥**

**॥ ಋಷಯ ಊಚುಃ ॥**

**ಕಿಮರ್ಥಂ ವಸುದೇವಸ್ಯ ಭೋಜಃ ಕಂಸೋ ನರಾಧಿಪಃ ।**
**ಜಘಾನ ಪುತ್ರಾನ್ ಬಾಲಾನ್ ವೈ ತನ್ನೋಽವ್ಯಾಖ್ಯಾತುಮರ್ಹಸಿ ॥ ೨೧೬ ॥**

---

೨೧೩. ಅನಂತರ ದುಷ್ಟನಾದ ಕಂಸನು ಆ ಹುಡುಗಿಯನ್ನು ಕೊಲ್ಲಲು ಯತ್ನಿಸಿದಾಗ ಆಕೆಯು ಮಾಯವಾದಳು. ಈ ಬಾಲಿಕೆಯನ್ನು ಸಂಹರಿಸಲು ವ್ಯರ್ಥ ಪ್ರಯತ್ನಮಾಡಿದೆನೆಂದು ಖಿನ್ನನಾದನು. ತರುವಾಯ ಆ ಕನ್ನಿಕೆಯು ವೃಷ್ಣಿರಾಜನ ಗೃಹದಲ್ಲಿ ಪೂಜಿತಳಾಗಿ ಬೆಳೆದಳು.

೨೧೪. ದೇವತೆಗಳು ತಮ್ಮ ಪುತ್ರರನ್ನು ಪ್ರೀತಿಯಿಂದ ಹೇಗೆ ಸಾಕುವರೋ ಹಾಗೆಯೇ ಆ ಹುಡುಗಿಯನ್ನು ಸಾಕಿದರು. ಪ್ರಜಾಪ್ರತಿಯೇ ದೈವಯೋಗದಿಂದ ಕನ್ಯಾರೂಪನಾಗಿ ಅವತರಿಸುವನೆಂದು ಹೇಳುವರು.

೨೧೫. ಹನ್ನೊಂದನೆಯವಳಾದ ಈಕೆಯು ಶ್ರೀಕೃಷ್ಣನ ರಕ್ಷಣೆಗಾಗಿ ಹುಟ್ಟಿರುವಳೆಂದು ತಿಳಿದು ಸಮಸ್ತರಾದ ಯಾದವರೂ ಮುನಿಗಳೂ ಸಹ ಆ ಪುತ್ರಿಯನ್ನು ಪೂಜಿಸಿದರು. ದೇವದೇವನೂ, ದಿವ್ಯಶರೀರಿಯೂ, ಸ್ವಾಮಿಯೂ ಆದ ಶ್ರೀಕೃಷ್ಣನಿಂದ ರಕ್ಷಿಸಲ್ಪಟ್ಟಳೆಂದು ತಿಳಿದು ಪೂಜಿಸಿದರು.

೨೧೬. ಋಷಿಗಳು ಹೇಳಿದರು:—ಎಲೈ ಸೂತಪುರಾಣಿಕನೆ ಭೋಜಾಧಿಪತಿಯೂ ಮನುಷ್ಯೋತ್ತಮನೂ ಆದ ಕಂಸನು ವಸುದೇವರಾಯನ ಪುತ್ರರೂ ಬಾಲಕರೂ ಆದ ಶಿಶುಗಳನ್ನು ಏತಕ್ಕಾಗಿ ಸಂಹಾರಮಾಡಿದನು. ಅದನ್ನು ವಿಶದವಾಗಿ ನಿರೂಪಿಸಬೇಕೆಂದು ಬೇಡಿದರು.

|| ಸೂತ ಉವಾಚ ||

ಶೃಣುಧ್ವಂ ವೈ ಯಥಾ ಕಂಸಃ ಪುತ್ರಾನಾನಕದುಂದುಭೇಃ |
ಜಾತಾಂಜಾತಾಚ್ಛಿಶೂನ್ ಸರ್ವಾನ್ ನಿಷ್ಪಿಪೇಷ ವೃಥಾಮತಿಃ || ೨೧೭ ||

ಭಯಾದ್ಯಥಾ ಮಹಾಬಾಹುರ್ಜಾತಃ ಕೃಷ್ಣೋ ವಿವಾಸಿತಃ |
ತಥಾ ಚ ಗೋಷು ಗೋವಿಂದಃ ಸಂವೃದ್ಧಃ ಪುರುಷೋತ್ತಮಃ || ೨೧೮ ||

ಉಕ್ತಂ ಹಿ ಕಿಲ ದೇವಕ್ಯಾ ವಸುದೇವಸ್ಯ ಧೀಮತಃ |
ಸಾರಥ್ಯಂ ಕೃತವಾನ್ ಕಂಸೋ ಯುವರಾಜಸ್ತದಾಽಭವತ್ || ೨೧೯ ||

ತತೋಽಂತರಿಕ್ಷೇ ವಾಗಾಸೀದ್ದಿವ್ಯಾ ಭೂತಸ್ಯ ಕಸ್ಯಚಿತ್ |
ಕಂಸೋ ಯಯಾ ಸದಾ ಭೀತಃ ಪುಷ್ಕಲಾಲೋಕಸಾಕ್ಷಿಣೀ || ೨೨೦ ||

---

೨೧೭. ಸೂತಮುನಿಯು ಹೇಳಿದನು :—ಎಲೈ ಮುನಿವರ್ಯರೇ, ವಸುದೇವನ ಕುಮಾರರು ಹುಟ್ಟಿದ ಕೂಡಲೇ ಆ ಶಿಶುಗಳೆಲ್ಲವನ್ನೂ ಅವಿವೇಕಿಯಾದ ಕಂಸನು ಹೇಗೆ ಸಂಹಾರಮಾಡಿದನೋ ಆ ವಿಷಯಗಳನ್ನು ನಿರೂಪಿಸುವೆನು ಕೇಳಿರೆಂದನು.

೨೧೮. ಮಹಾನುಭಾವನಾದ ವಸುದೇವನು ಭಯದಿಂದ ಆ ಶಿಶುವನ್ನು ಜನಿಸಿದ ಕೂಡಲೇ ಹೇಗೆ ಪ್ರಸ್ಥಾನಮಾಡಿದನೋ ಮತ್ತು ಪುರುಷೋತ್ತಮನಾದ ಗೋವಿಂದನು ಗೋಕುಲದಲ್ಲಿ ಹೇಗೆ ವೃದ್ಧಿಯನ್ನು ಹೊಂದಿದನೋ ಅದನ್ನು ತಿಳಿಸುವೆನು.

೨೧೯. ಪೂರ್ವದಲ್ಲಿ ಯುವರಾಜನಾದ ಕಂಸನು ತಂಗಿಯಾದ ದೇವಕೀದೇವಿಯ ವಿವಾಹಕಾಲದಲ್ಲಿ ದಂಪತಿಗಳನ್ನು ರಥದಲ್ಲಿ ಕುಳ್ಳಿರಿಸಿ ಸಾರಥ್ಯವನ್ನು ಮಾಡಿದನು.

೨೨೦. ಆ ಕಾಲದಲ್ಲಿ ಆಕಾಶದಲ್ಲಿ ಯಾವುದೋ ಒಂದು ಭೂತದ ಆಕಾಶವಾಣಿಯು ಉಂಟಾಯಿತು. ಅದನ್ನು ಕೇಳಿ ಕಂಸನು ಬಹಳವಾಗಿ ಭಯಪಟ್ಟನು. ಆ ವಾಣಿಯು ಲೋಕಸಾಕ್ಷಿಯಾಗಿತ್ತು.

**ಯಾಮೇತಾಂ ವಹಸೇ ಕಂಸ ರಥೇನ ಪರಕಾರಣಾತ್ ।**
**ಅಸ್ಯಾಯಃ ಸಪ್ತಮೋ ಗರ್ಭಃ ಸ ತೇ ಮೃತ್ಯುರ್ಭವಿಷ್ಯತಿ ॥ ೨೨೧ ॥**

**ತಾಂ ಶ್ರುತ್ವಾ ವ್ಯಥಿತೋ ವಾಣೀಂ ತದಾ ಕಂಸೋ ವೃಥಾಮತಿಃ ।**
**ನಿಷ್ಕ್ರಮ್ಯ ಖಡ್ಗಂ ತಾಂ ಕನ್ಯಾಂ ಹಂತುಕಾಮೋಽಭವತ್ತದಾ ॥ ೨೨೨ ॥**

**ತಮುವಾಚ ಮಹಾಬಾಹುರ್ವಸುದೇವಃ ಪ್ರತಾಪವಾನ್ ।**
**ಉಗ್ರಸೇನಾತ್ಮಜಂ ಕಂಸಂ ಸೌಹೃದಾತ್ಪ್ರಣಯೇನ ಚ ॥ ೨೨೩ ॥**

**ನ ಸ್ತ್ರಿಯಂ ಕ್ಷತ್ರಿಯೋ ಜಾತು ಹಂತುಮರ್ಹತಿ ಕಶ್ಚನ ।**
**ಉಪಾಯಃ ಪರಿದೃಷ್ಟೋಽತ್ರ ಮಯಾ ಯಾದವನಂದನ ॥ ೨೨೪ ॥**

---

೨೨೧. ಓ ಕಂಸನೇ ಯಾವ ದೇವಕೀದೇವಿಯನ್ನು ರಥದಲ್ಲಿ ಕುಳ್ಳಿರಿಸಿ ರಥವನ್ನು ಸಂತೋಷದಿಂದ ನಡೆಸುತ್ತೀಯೋ, ಆಕೆಯ ಎಂಟನೆಯ ಗರ್ಭದಲ್ಲಿ ಜನಿಸಿದ ಕುಮಾರನು ನಿನ್ನ ಪ್ರಾಣಗಳನ್ನು ಹರಣಮಾಡುವನು. ಸಂಹರಿಸುವನು ಎಂದು ವಾಣಿಯು ಆಕಾಶದಲ್ಲಿ ಉದ್ಭವಿಸಿತು.

೨೨೨. ಕಂಸಮಹಾರಾಜನು ಆ ಆಕಾಶವಾಣಿಯನ್ನು ಕೇಳಿದ ಕೂಡಲೇ ದುಃಖಿತನಾಗಿ ಮನೆಗೆ ಬಂದು ಖಡ್ಗವನ್ನು ಸ್ವೀಕರಿಸಿ ಆ ದೇವಕಿಯನ್ನು ಸಂಹಾರ ಮಾಡಲಿಚ್ಛಿಸಿದನು.

೨೨೩. ಆಗ ವಸುದೇವಮಹಾರಾಜನು ಮಹಾಬುದ್ಧಿಶಾಲಿಯಾದ ಕಾರಣ ಉಗ್ರಸೇನರಾಜನ ಕುಮಾರನಾದ ಕಂಸನಿಗೆ ವಿನಯದಿಂದಲೂ, ಪ್ರೀತಿಯಿಂದಲೂ ಸಮಯೋಚಿತವಾದ ಭಾಷಣವನ್ನು ಮಾಡಿದನು.

೨೨೪. ಯದುಕುಲೋತ್ತಮನೂ, ಮಹಾವೀರನೂ ಆದ ಕಂಸಮಹಾರಾಜನೇ ಕ್ಷತ್ರಿಯರು ಯಾರೂ ಇದುವರೆಗೂ ಸ್ತ್ರೀಹತ್ಯವನ್ನು ಮಾಡಿದವರಿಲ್ಲ ಮಾಡಲೂ ಕೂಡದು. ಅದು ಶಾಸ್ತ್ರವಿರುದ್ಧವು. ನಿನಗೆ ಯಾವ ವಿಷಯದಲ್ಲಿ ಭೀತಿ ಇರುತ್ತದೆಯೋ ಆ ವಿಷಯದಲ್ಲಿ ಒಂದು ಯುಕ್ತಿಯನ್ನು ಹೇಳುತ್ತೇನೆ ಕೇಳುವವನಾಗೆಂದನು.

ಯೋಽಸ್ಯಾಃ ಸಂಭವತೇ ಗರ್ಭಃ ಸಪ್ತಮಃ ಪೃಥಿವೀಪತೇ ।
ತಮಹಂತೇ ಪ್ರಯಚ್ಛಾಮಿ ತತ್ರ ಕುರ್ಯಾ ಯಥಾಕ್ರಮಂ ॥ ೨೨೫ ॥

ತ್ವಂ ತ್ವಿದಾನೀಂ ಯಥೇಷ್ಟಸ್ತ್ವಂ ವರ್ತೇಥಾ ಭೂರಿದಕ್ಷಿಣ ।
ಸರ್ವಾನಸ್ಯಾಸ್ತು ವೈ ಗರ್ಭಾನ್ ಸತ್ಯಂ ನೇಷ್ಯಾಮಿ ತೇ ವಶಂ ॥ ೨೨೬ ॥

ಏವಂ ಮಿಥ್ಯಾ ನರಶ್ರೇಷ್ಠ ವಾಗೇಷಾ ನ ಭವಿಷ್ಯತಿ ।
ಏವಮುಕ್ತೋಽನುನೀತಃ ಸ ಜಗ್ರಾಹ ತನಯಾಂಸ್ತದಾ ॥ ೨೨೭ ॥

ವಸುದೇವಶ್ಚ ತಾಂ ಭಾರ್ಯಾಮವಾಪ್ಯ ಮುದಿತೋಽಭವತ್ ।
ಕಂಸಶ್ಚಾಸ್ಯಾವಧೀತ್ ಪುತ್ರಾನ್ ಪಾಪಕರ್ಮಾ ವೃಥಾಮತಿಃ ॥ ೨೨೮ ॥

---

೨೨೫. ಎಲೈ ಕಂಸಮಹಾರಾಯನೇ ಈಕೆಯ ಗರ್ಭದಲ್ಲಿ ಜನಿಸುವ ಎಂಟನೆಯ ಮಗುವನ್ನು ಹುಟ್ಟಿದ ಕ್ಷಣದಲ್ಲಿಯೇ ನಿನ್ನ ವಶದಲ್ಲಿ ಬಿಡುವೆನು. ನೀನು ಆ ಕುಮಾರನನ್ನು ನಿನ್ನಿಷ್ಟ ಬಂದಂತೆ ಮಾಡು ತಂಗಿಯನ್ನು ಸಂಹರಿಸಬೇಡವೆಂದು ಪ್ರಾರ್ಥಿಸಿದನು.

೨೨೬. ಓ ರಾಯನೇ ಅಷ್ಟುಮಾತ್ರವಲ್ಲದೇ ನಿನಗೆ ಇವಳಿಗೆ ಹುಟ್ಟುವ ಮಕ್ಕಳಲ್ಲಿ ಅನುಮಾನವಿದ್ದರೆ ಅವರೆಲ್ಲರನ್ನೂ ಬೇಕಾದರೆ ನಿನ್ನ ವಶದಲ್ಲಿ ಬಿಡುವೆನು. ಈ ವಿಷಯದಲ್ಲಿ ಸಂದೇಹವನ್ನು ಬಿಡು. ಪ್ರಮಾಣವಾಗಿಯೂ ತಿಳಿಸುವೆನೆಂದನು.

೨೨೭. ಓ ರಾಯನೇ ಈ ಆಕಾಶವಾಣಿಯು ಸುಳ್ಳಾಗುವುದಿಲ್ಲ. ನಿಜವಾಗಿಯೇ ಅದರಂತೆ ಆಗುತ್ತದೆಯೆಂಬ ನಂಬಿಕೆಯು ನಿನಗಿದ್ದರೆ ನನ್ನ ಸರ್ವಕುಮಾರರನ್ನೂ ಖಂಡಿತವಾಗಿಯೂ ನಿನಗೆ ಅರ್ಪಿಸುವೆನೆಂದು ಆಗ ಸಮಾಧಾನಮಾಡಿದನು ಅದರಂತೆ ಪುತ್ರರನ್ನು ಕಂಸನಿಗೆ ಕೊಟ್ಟನು.

೨೨೮. ಆಗ ಕಂಸನು ಆ ಮಾತುಗಳನ್ನು ಕೇಳಿ ಸಮಾಧಾನವನ್ನು ಹೊಂದಿ ಸುಮ್ಮನಾದನು. ವಸುದೇವನೂ ಕೂಡ ಪ್ರಿಯಳಿಗೆ ಸಮಾಧಾನ ಹೇಳಿ ಸಂತುಷ್ಟನಾದನು. ಪಾಪಿಷ್ಟನಾದ ಕಂಸನು ವಸುದೇವನ ಮಾತಿನಂತೆ ಅರ್ಪಿಸಿದ ಪುತ್ರರೆಲ್ಲರನ್ನೂ ಸಂಹರಿಸಿದನೆಂದು ಸೂತಮುನಿಯು ಹೇಳಿದನು.

॥ ಋಷಯ ಊಚುಃ ॥

ಕ ಏಷ ವಸುದೇವಶ್ಚ ದೇವಕೀ ಚ ಯಶಸ್ವಿನೀ ।
ನಂದಗೋಪಸ್ತು ಕಸ್ತ್ವೇಷ ಯಶೋದಾ ಚ ಮಹಾಯಶಾಃ ॥
ಯೋ ವಿಷ್ಣುಂ ಜನಯಾಮಾಸ ಯಾ ಚೈನಂ ಚಾಭ್ಯವರ್ಧಯತ್ ॥೨೨೯॥

॥ ಸೂತ ಉವಾಚ ॥

ಪುರುಷಾಃ ಕಶ್ಯಪಸ್ಯಾಸನ್ನಾದಿತ್ಯಾಸ್ತು ಸ್ತ್ರಿಯಾಸ್ತಥಾ ।
ಅಥ ಕಾಮಾನ್ ಮಹಾಬಾಹುರ್ದೇವಕ್ಯಾಃ ಸಮವರ್ಧಯತ್ ॥ ೨೩೦ ॥

ಅಚರತ್ ಸ ಮಹೀಂ ದೇವಃ ಪ್ರವಿಷ್ಟೋ ಮಾನುಷೀಂ ತನುಂ ।
ಮೋಹಯನ್ ಸರ್ವಭೂತಾನಿ ಯೋಗಾತ್ಮಾ ಯೋಗಮಾಯಯಾ॥೨೩೧॥

---

೨೨೯. ಆಗ ಮಹರ್ಷಿಗಳು ಕೇಳಿದರು :—ಎಲೈ ಸೂತಮುನಿಯೇ ಮಹಾನುಭಾವನಾದ ವಸುದೇವನು ಯಾರು ? ಕೀರ್ತಿವಂತಳಾದ ದೇವಕೀದೇವಿಯು ಪೂರ್ವದಲ್ಲಿ ಯಾವಳಾಗಿದ್ದಳು ? ಮಹಾಕೀರ್ತಿವಂತರಾದ ನಂದಗೋಪ ಯಶೋದೆ ಇವರು ಯಾರು ? ಶ್ರೀಮಹಾವಿಷ್ಣುವು ಅವತರಿಸಲೂ, ವೃದ್ಧಿಯಾಗಲೂ ಈ ದಂಪತಿಗಳಿಬ್ಬರೂ ಕಾರಣರಾಗಿರುವರು ಎಂದನು.

೨೩೦. ಸೂತಮುನಿಯು ಹೇಳಿದನು :—ಪ್ರಜಾಸೃಷ್ಟಿಕಾಮುಕನಾದ ಕಶ್ಯಪರಿಗೆ ಅನೇಕ ಪುತ್ರರು ಜನಿಸಿದರು. ಆ ಕಶ್ಯಪಪುತ್ರನಾದ ವೈವಸ್ವತಾದಿಗಳಿಗೆ ಅನೇಕ ಸ್ತ್ರೀಯರು ಉದ್ಭವಿಸಿದರು. ಆ ಕಶ್ಯಪರೇ ವಸುದೇವನಾಗಿಯೂ ಅದಿತಿಯೇ ದೇವಕೀದೇವಿಯಾಗಿಯೂ ಜನಿಸಿರುವರು. ಆ ದಂಪತಿಗಳಿಗೆ ವರದಾನಮಾಡಿದಂತೆ ಶ್ರೀಹರಿಯು ಅವರ ಮನೆಯಲ್ಲಿ ಅವತರಿಸಿದನು.

೨೩೧. ಸ್ವಾಮಿಯಾದ ಆ ಪರಮಾತ್ಮನು ದುಷ್ಟನಿಗ್ರಹಕ್ಕಾಗಿ ಭೂಮಿಯಲ್ಲಿ ಮನುಷ್ಯರೂಪನಾಗಿ ಅವತರಿಸಿ ಸರ್ವತ್ರ ಸಂಚಾರಮಾಡಿ ತನ್ನ ಯೋಗಮಹಿಮೆಯ ಶಕ್ತಿಯಿಂದ ಎಲ್ಲರನ್ನೂ ಮೋಹಗೊಳಿಸಿದನು.

ನಷ್ಟೇ ಧರ್ಮೇ ತದಾ ಜಜ್ಞೇ ವಿಷ್ಣುರ್ವೃಷ್ಣಿಕುಲೇ ಸ್ವಯಂ ।
ಕರ್ತುಂ ಧರ್ಮವ್ಯವಸ್ಥಾನಮಸುರಾಣಾಂ ಪ್ರಣಾಶನಂ ॥ ೨೩೨ ॥

ಆಹೃತಾ ರುಕ್ಮಿಣೀ ಕನ್ಯಾ ಸತ್ಯಾ ನಗ್ನಜಿತಸ್ತದಾ ।
ಸಾತ್ರಾಜಿತೀ ಸತ್ಯಭಾಮಾ ಜಾಂಬವತ್ಯಪಿ ರೋಹಿಣೀ ॥ ೨೩೩ ॥

ಶೈಬ್ಯಾ ಸುದೇವೀ ಮಾದ್ರೀ ಚ ಸುಶೀಲಾ ನಾಮ ಚಾಪರಾ ।
ಕಾಲಿಂದೀ ಮಿತ್ರವಿಂದಾ ಚ ಲಕ್ಷ್ಮಣಾ ಜಾಲವಾಸಿನೀ ॥ ೨೩೪ ॥

ಏವಮಾದೀನಿ ದೇವೀನಾಂ ಸಹಸ್ರಾಣಿ ಚ ಷೋಡಶ ।
ಚತುರ್ದಶ ತು ಯೇ ಪ್ರೋಕ್ತಾ ಗಣಾಶ್ಚಾಪ್ಸರಸಾಂ ದಿವಿ ॥
ವಿಚಿಂತ್ಯ ದೇವೈಃ ಶಕ್ರೇಣ ವಿಶಿಷ್ಟಾಸ್ತ್ವಿಹ ಪ್ರೇಷಿತಾಃ ॥ ೨೩೫ ॥

ಪತ್ನ್ಯರ್ಥಂ ವಾಸುದೇವಸ್ಯ ಉತ್ಪನ್ನಾ ರಾಜವೇಶ್ಮಸು ।
ಏತಾಃ ಪತ್ನ್ಯೋ ಮಹಾಭಾಗಾ ವಿಷ್ವಕ್ಸೇನಸ್ಯ ವಿಶ್ರುತಾಃ ॥ ೨೩೬ ॥

---

೨೩೨. ಹೀಗೆ ಅಧರ್ಮಗಳು ಹೆಚ್ಚಾಗಿ ಧರ್ಮವು ನಾಶವಾಗಲಾಗಿ ಪರಮ ಕರುಣಾಳುವಾದ ಶ್ರೀಮನ್ನಾರಾಯಣನು ಧರ್ಮವನ್ನು ಸ್ಥಾಪಿಸುವುದಕ್ಕಾಗಿಯೂ, ಅಸುರರನ್ನು ನಿಗ್ರಹಮಾಡುವುದಕ್ಕಾಗಿಯೂ ಭೂಮಿಯಲ್ಲಿ ಅವತರಿಸಿದನು.

೨೩೩–೨೩೫. ಹೀಗೆ ಧರ್ಮಸ್ಥಾಪನೆಗಾಗಿ ಅವತರಿಸಿರುವ ಶ್ರೀಮನ್ನಾರಾಯಣನ ಸೇವೆಗಾಗಿ ರುಕ್ಮಿಣೀದೇವಿ, ಸತ್ರಾಜಿದ್ರಾಜಕುಮಾರಿಯಾದ ಸತ್ಯಭಾಮೆ, ಜಾಂಬವತೀ, ರೋಹಿಣೀ, ಶೈಬ್ಯೆ, ಸುದೇವೀ, ಮಾದ್ರೀ, ಸುಶೀಲೆ, ಕಾಲಿಂದೀ, ಮಿತ್ರವಿಂದೆ, ಲಕ್ಷ್ಮಣೆ, ಜಾಲವಾಸಿನೀ ಇವರೇ ಮೊದಲಾದ ಹದಿನಾರುಸಾವಿರದ ಹದಿನಾಲ್ಕುಜನ ಗೋಪಿಕಾಸ್ತ್ರೀಯರು ಅವತರಿಸಿದ್ದರು. ಇವರೆಲ್ಲರೂ ಅಪ್ಸರಸಿಯರಾಗಿರುವರು. ದೇವೇಂದ್ರನು ಅವತರಿಸಿರುವ ಭಗವಂತನ ಸೇವೆಗಾಗಿ ಅವರನ್ನು ಭೂಮಿಯಲ್ಲಿ ಸ್ತ್ರೀಯರಾಗಿ ಅವತರಿಸಲು ಆಜ್ಞಾಪಿಸಿರುವುದರಿಂದ ಆ ಅಪ್ಸರಸಿಯರೇ ಅವತರಿಸಿರುವರೆಂದು ತಿಳಿಯಿರೆಂದನು.

೨೩೬. ಈ ಅಪ್ಸರಸ್ತ್ರೀಯರು ರಾಜರ ಗೃಹಗಳಲ್ಲಿ ಅವತರಿಸಿ ಶ್ರೀ ಭಗವಂತನಾದ ಕೃಷ್ಣನ ಪತ್ನಿಯರಾದರು. ಈ ದೇವಕನ್ನಿಕೆಯರು ಮಹಾಭಾಗ್ಯಶಾಲಿಗಳಾದುದರಿಂದ ಶ್ರೀ ಪರಮಾತ್ಮನ ಪತ್ನಿಯರಾಗಿ ಪ್ರಖ್ಯಾತರಾದರು.

ಪ್ರದ್ಯುಮ್ನಶ್ಚಾರುದೇಷ್ಣಶ್ಚ ಸುದೇಷ್ಣಃ ಶರಭಸ್ತಥಾ ।
ಚಾರುಶ್ಚ ಚಾರುಭದ್ರಶ್ಚ ಭದ್ರಚಾರುಸ್ತಥಾಽಪರಃ ॥ ೨೩೭ ॥

ಚಾರುವಿಂಧ್ಯಶ್ಚ ರುಕ್ಮಿಣ್ಯಾಂ ಕನ್ಯಾ ಚಾರುಮತೀ ತಥಾ ।
ಸಾನುರ್ಭಾನುಸ್ತಥಾಕ್ಷಶ್ಚ ರೋಹಿತೋ ಮಂತ್ರಯುಸ್ತಥಾ ॥ ೨೩೮ ॥

ಜರಾಂಧಕಸ್ತಾಮ್ರವಕ್ಷಾ ಭೌಮಿರಶ್ಚ ಜರಂಧಮಃ ।
ಚತಸ್ರೋ ಜಜ್ಞಿರೇ ತೇಷಾಂ ಸ್ವಸಾರೋ ಗರುಡಧ್ವಜಾತ್ ॥ ೨೩೯ ॥

ಭಾನುರ್ಭೌಮರಿಕಾ ಚೈವ ತಾಮ್ರಪರ್ಣೀ ಜರಂಧಮಾ ।
ಸತ್ಯಭಾಮಾಸುತಾನೇತಾಂಜಾಂಬವತ್ಯಾಃ ಪ್ರಜಾಃ ಶೃಣು ॥ ೨೪೦ ॥

ಭದ್ರಶ್ಚ ಭದ್ರಗುಪ್ತಶ್ಚ ಭದ್ರವಿಂದ್ರಸ್ತಥೈವ ಚ ।
ಸಪ್ತಬಾಹುಶ್ಚ ವಿಖ್ಯಾತಃ ಕನ್ಯಾಃ ಭದ್ರಾವತೀ ತಥಾ ॥
ಸಂಬೋಧನೀ ಚ ವಿಖ್ಯಾತಾ ಜ್ಞೇಯಾ ಜಾಂಬವತೀಸುತಾಃ ॥ ೨೪೧ ॥

---

೨೩೭. ಶ್ರೀಕೃಷ್ಣನಿಗೆ ರುಕ್ಮಿಣೀದೇವಿಯಲ್ಲಿ ಪ್ರದ್ಯುಮ್ನ, ಚಾರುದೇಷ್ಣ, ಸುದೇಷ್ಣ, ಶರಭ, ಚಾರು, ಚಾರುಭದ್ರ, ಭದ್ರಚಾರು, ಚಾರುವಿಂಧ್ಯರೆಂಬ ಕುಮಾರರೂ ಚಾರುಮತೀ ಎಂಬ ಕುಮಾರಿಯೂ ಸಹ ಉದ್ಭವಿಸಿದರು.

೨೩೮–೨೪೦. ಶ್ರೀಹರಿಗೆ ಸತ್ಯಭಾಮಾದೇವಿಯಲ್ಲಿ ಸಾನು, ಭಾನು, ಅಕ್ಷ, ರೋಹಿತ, ಮಂತ್ರಯು, ಜರಾಂಧಕ, ತಾಮ್ರವಕ್ಷಸ, ಭೌಮರಿ, ಜರಂಧಮರೆಂಬ ಪುತ್ರರೂ ಬಾನು, ಭೌಮರಿಕಾ, ತಾಮ್ರಪರ್ಣೀ ಮತ್ತು ಜರಂಧಮಾ ಎಂಬ ನಾಲ್ವರು ಪುತ್ರಿಯರೂ ಅವತರಿಸಿ ಖ್ಯಾತಿವಂತರಾಗಿಯೂ, ಮಾನ್ಯರಾಗಿಯೂ ಇದ್ದರು. ಈ ಮೇಲೆ ನಿರೂಪಿಸಿದವರೆಲ್ಲರೂ ಸತ್ಯಭಾಮೆಯ ಮಕ್ಕಳಾಗಿರುವರು. ಈಗ ಜಾಂಬವತಿಯ ಸಂತಾನವನ್ನು ಹೇಳುವೆನು ಕೇಳಿರೆಂದನು.

೨೪೧. ಶ್ರೀಕೃಷ್ಣನಿಗೆ ಜಾಂಬವತಿಯಲ್ಲಿ ಭದ್ರ, ಭದ್ರಗುಪ್ತ, ಭದ್ರವಿಂದ, ಸಪ್ತಬಾಹು ಎಂಬ ಕುಮಾರರೂ ಭದ್ರಾವತೀ, ಸಂಬೋಧಿನೀ ಎಂಬ ಕುಮಾರಿಯರೂ ಜನಿಸಿದರು

ಸಂಗ್ರಾಮಜಿಚ್ಚ ಶತಜಿತ್ ತಥೈವ ಚ ಸಹಸ್ರಜಿತ್ ।
ಏತೇ ಪುತ್ರಾಃ ಸುದೇವ್ಯಾಶ್ಚ ವಿಶ್ವಕ್ಸೇನಸ್ಯ ಕೀರ್ತಿತಾಃ ॥ ೨೪೨ ॥

ವೃಕೋ ವೃಕಾಶ್ವೋ ವೃಕಜಿದ್ವೃಜಿನೀ ಚ ಸುರಾಂಗನಾ ।
ಮಿತ್ರಬಾಹುಃ ಸುನೀಥಶ್ಚ ನಾಗ್ನಜಿತ್ಯಾಃ ಪ್ರಜಾಸ್ತ್ವಿಹ ॥ ೨೪೩ ॥

ಏವಮಾದೀನಿ ಪುತ್ರಾಣಾಂ ಸಹಸ್ರಾಣಿ ನಿಬೋಧತ ।
ಪ್ರಯುತಂ ತು ಸಮಾಖ್ಯಾತಂ ವಾಸುದೇವಸ್ಯ ಯೇ ಸುತಾಃ ॥ ೨೪೪ ॥

ಅಯುತಾನಿ ತಥಾಷ್ಟೌ ಚ ಶೂರಾ ರಣವಿಶಾರದಾಃ ।
ಜನಾರ್ದನಸ್ಯ ವಂಶೋ ವಃ ಕೀರ್ತಿತೋಽಯಂ ಯಥಾತಥಂ ॥ ೨೪೫ ॥

---

೨೪೨. ಶ್ರೀ ವಾಸುದೇವನಿಗೆ ಸುದೇವಿಯಲ್ಲಿ ಸಂಗ್ರಾಮಜಿತ್, ಶತಜಿತ್, ಸಹಸ್ರಜಿತ್, ಎಂಬ ಸುತರೂ ಜನಿಸಿ ಪ್ರಖ್ಯಾತರೂ, ಕೀರ್ತಿವಂತರೂ ಆದರು.

೨೪೩. ಶ್ರೀಹರಿಗೆ ನಗ್ನಜಿತಿಯೆಂಬ ದೇವಿಯಲ್ಲಿ ವೃಕ ವೃಕಾಶ್ವ, ವೃಕಜಿತ್, ಮಿತ್ರಬಾಹು, ಸುನೀಥನೆಂಬ ಸುತರೂ ವೃಜಿನೀ, ಸುರಾಂಗನೆಯರೆಂಬ ಹೆಣ್ಣು ಮಕ್ಕಳೂ ಉತ್ಪನ್ನರಾದರು.

೨೪೪. ಹೀಗೆ ಭಗವಂತನಾದ ಶ್ರೀಕೃಷ್ಣನಿಗೆ ಮೇಲೆ ನಿರೂಪಿಸಿರುವ ನೂರಾರು ಮತ್ತು ಸಾವಿರಾರು ಜನ ಪುತ್ರರು ಅನೇಕ ಪತ್ನಿಯರಲ್ಲಿ ಜನಿಸಿದರು.

೨೪೫. ಹೀಗೆ ವಸುದೇವಕುಮಾರನಾದ ಶ್ರೀಕೃಷ್ಣನಿಗೆ ಶೂರರೂ, ಯುದ್ಧದಲ್ಲಿ ಮಹಾಸಮರ್ಥರೂ ಆದ ಹದಿನೆಂಟುಸಾವಿರ ಕುಮಾರರು ಲೋಕವಿಖ್ಯಾತರಾಗಿದ್ದರು. ಈ ರೀತಿ ಶ್ರೀಕೃಷ್ಣವಂಶವನ್ನು ಯಥಾಸ್ಥಿತವಾಗಿ ನಿನಗೆ ನಿರೂಪಿಸಿರುವೆನು ಎಂದು ಹೇಳಿದನು.

ಬೃಹತೀ ನರ್ತಕೋನ್ನೇಯಿೞ ಸುನಯೀ ಸಂಗತಾ ತಥಾ ।
ಕನ್ಯಾ ಸಾ ಬೃಹದುಚ್ಛಸ್ಯ ಶೌನೇಯಸ್ಯ ಮಹಾತ್ಮನಃ ॥ ೨೪೬ ॥

ತಸ್ಯಾಃ ಪುತ್ರಾಸ್ತು ವಿಖ್ಯಾತಸ್ತ್ರಯಃ ಸಮಿತಿಶೋಭನಾಃ ।
ಅಂಗದಃ ಕುಮುದಃ ಶ್ವೇತಃ ಕನ್ಯಾ ಶ್ವೇತಾ ತಥೈವ ಚ ॥ ೨೪೭ ॥

ಅವಗಾಹಶ್ಚ ಚಿತ್ರಶ್ಚ ಶೂರಶ್ಚಿತ್ರವರಶ್ಚ ಯಃ ।
ಚಿತ್ರಸೇನಃ ಸುತಶ್ಚಾಸ್ಯ ಕನ್ಯಾ ಚಿತ್ರವತೀ ತಥಾ ॥ ೨೪೮ ॥

ತುಂಬಶ್ಚ ತುಂಬಬಾಣಶ್ಚ ಜನಸ್ತಂಬಶ್ಚ ತಾವುಭೌ ।
ಉಪಾಂಗಸ್ಯ ಸ್ಮೃತೌ ದ್ವೌ ತು ವಜ್ರಾರಃ ಕ್ಷಿಪ್ರ ಏವ ಚ ॥ ೨೪೯ ॥

ಭೂರೀಂದ್ರಸೇನೋ ಭೂರಿಶ್ಚ ಗವೇಷಸ್ಯ ಸುತಾವುಭೌ ।
ಯುಧಿಷ್ಠಿರಸ್ಯ ಕನ್ಯಾ ತು ಸುತನುರ್ನಾಮ ವಿಶ್ರುತಾ ॥ ೨೫೦ ॥

೨೪೬. ಮಹಾತ್ಮನೂ, ಶೌನೇಯನೂ ಆದ ಬೃಹದಚ್ಛನಿಗೆ ಬೃಹತಿ, ಮರ್ತಕ. ಉನ್ನೇಯಿ, ಸುನಯೀ. ಸಂಗತೀಯರೆಂಬ ಕುಮಾರಿಯರು ಉತ್ಪನ್ನರಾದರು.

೨೪೭. ಅವರ ಮಕ್ಕಳು ಪ್ರಖ್ಯಾತರೂ, ಅತ್ಯಂತ ಸುಂದರರೂ, ಅಂಗದ. ಕುಮುದ, ಶ್ವೇತರೆಂಬುದಾಗಿ ಪ್ರಖ್ಯಾತರೂ ಆಗಿ ಇದ್ದರು. ಶ್ವೇತಾನಾಮಕಳಾದ ಕುಮಾರಿಯೂ ಇದ್ದಳು.

೨೪೮. ಆ ಭಗವಂತನಾದ ಬೃಹದುಚ್ಛನಿಗೆ ಅವಗಾಹ, ಚಿತ್ರ, ಶೂರ, ಚಿತ್ರವರ, ಚಿತ್ರಸೇನ, ಚಿತ್ರವತೀ ಎಂಬ ಮಕ್ಕಳು ಜನಿಸಿ ಸುಪ್ರಸಿದ್ಧರಾಗಿದ್ದರು.

೨೪೯. ಜನಸ್ತಂಭನಿಗೆ ತುಂಬ, ತುಂಬಬಾಣರೆಂಬ ಅತ್ಯಂತ ಶೂರರಾದ ಇಬ್ಬರು ಕುಮಾರರಿದ್ದರು. ಉಪಾಂಗನಿಗೆ ವಜ್ರಾರ, ಕ್ಷಿಪ್ರರೆಂಬ ಶೂರರಾದ ಇಬ್ಬರು ಸುತರಿದ್ದರು.

೨೫೦. ಗವೇಷನಿಗೆ ಭೂರೀಂದ್ರಸೇನ, ಭೂರಿ ಎಂಬ ಇಬ್ಬರು ಸುತರೂ, ಯುಧಿಷ್ಠರನಿಗೆ ಸುತನುವೆಂದೂ, ಲೋಕವಿಖ್ಯಾತಳಾದ ಕುಮಾರಿಯೂ ಇದ್ದರು.

ತಸ್ಯಾಮಶ್ವಸುತೋ ಜಜ್ಞೇ ವಜ್ರೋ ನಾಮ ಮಹಾಯಶಾಃ ।
ವಜ್ರಸ್ಯ ಪ್ರತಿಬಾಹುಸ್ತು ಸುಚಾರುಸ್ತಸ್ಯ ಚಾತ್ಮಜಃ ॥ ೨೫೧ ॥

ಕಾಶ್ಯಾ ಸುಪಾರ್ಶ್ವಂ ತನಯಂ ಜಜ್ಞೇ ಸಾಂಬಾ ತರಸ್ವಿನಂ ।
ತಿಸ್ರಃ ಕೋಟ್ಯಸ್ತು ಪುತ್ರಾಣಾಂ ಯಾದವಾನಾಂ ಮಹಾತ್ಮನಾಂ ॥ ೨೫೨ ॥

ಷಷ್ಟಿಂ ಶತಸಹಸ್ರಾಣಿ ವೀರ್ಯವಂತೋ ಮಹಾಬಲಾಃ ।
ದೇವಾಂಶಾಃ ಸರ್ವ ಏವೇಹ ಉತ್ಪನ್ನಾಸ್ತೇ ಮಹೌಜಸಃ ॥ ೨೫೩ ॥

ದೈವಾಸುರೇ ಹತಾ ಯೇ ಚ ಅಸುರಾ ವೈ ಮಹಾತಪಾಃ ।
ಇಹೋತ್ಪನ್ನಾ ಮನುಷ್ಯೇಷು ಬಾಧಂತೇ ಸರ್ವಮಾನವಾನ್ ॥
ತೇಷಾಮುತ್ಸಾದನಾರ್ಥಂ ತು ಉತ್ಪನ್ನಾ ಯಾದವೇ ಕುಲೇ ॥ ೨೫೪ ॥

---

೨೫೧. ಆ ಸುತನುವಿನಲ್ಲಿ ಮಹಾಕೀರ್ತಿವಂತನೂ, ಶೂರನೂ ಆದ ಅಶ್ವಸುತನೆಂಬ ಕುಮಾರನು ಜನಿಸಿದನು. ಅವನಿಗೆ ವಜ್ರನೆಂಬ ಪುತ್ರನೂ, ಅವನಿಗೆ ಪ್ರತಿಬಾಹುವೆಂಬ ಕುಮಾರನೂ, ಅವನಿಗೆ ಸುಚಾರುವೆಂಬ ತನಯನೂ ಜನಿಸಿದರು.

೨೫೨. ಅವರಲ್ಲಿ ಕಾಶ್ಯಾವೆಂಬುವಳು ಸುಪಾರ್ಶ್ವನೆಂಬ ತನಯನನ್ನೂ, ಸಾಂಬಾ ಎಂಬುವಳು ತರಸ್ವಿನನೆಂಬ ಮಗನನ್ನೂ ಪಡೆದರು. ಹೀಗೆ ಮಹಾತ್ಮರಾದ ಯಾದವರಿಗೆ ಮೂರುಕೋಟಿ ಸಂಖ್ಯಾಕರಾದ ಕುಮಾರರು ಜನಿಸಿ ಲೋಕವಿಖ್ಯಾತರಾದರು.

೨೫೩. ಅರವತ್ತು ಲಕ್ಷ ಸಂಖ್ಯಾಕರೂ, ವೀರ್ಯವಂತರೂ, ಮಹಾಬಲಶಾಲಿಗಳೂ, ಮಹಾತೇಜಸ್ವಿಗಳೂ ಆದ ಈ ಕುಮಾರರೆಲ್ಲರೂ ದೇವಾಂಶಸಂಭೂತರಾಗಿದ್ದರು.

೨೫೪. ದೇವದೈತ್ಯರ ಮಹಾಯುದ್ಧದಲ್ಲಿ ಯಾವ ಮಹಾಸುರರು ದೇವತೆಗಳಿಂದ ಮೃತರಾಗಿ ಮಹಾತಪಸ್ವಿಗಳಾಗಿ ಈ ಭೂಮಿಯಲ್ಲಿ ಹುಟ್ಟಿ ಸಜ್ಜನರನ್ನು ಪೀಡಿಸುತ್ತಾ ಇದ್ದರೋ ಅಂತಹ ರಾಕ್ಷಸರನ್ನು ಸಂಹಾರವ ಮಾಡುವುದಕ್ಕಾಗಿ ಆ ದೇವತೆಗಳು ಭೂಮಿಯಲ್ಲಿ ಅವತರಿಸಿದ್ದರು.

**ಕುಲಾನಿ ದಶ ಚೈಕಂ ಚ ಯಾದವಾನಾಂ ಮಹಾತ್ಮನಾಂ ।**
**ಸರ್ವಮೇಕಕುಲಂ ಯದ್ವದ್ವರ್ತತೇ ವೈಷ್ಣವೇ ಕುಲೇ ॥ ೨೫೫ ॥**

**ವಿಷ್ಣುಸ್ತೇಷಾಂ ಪ್ರಮಾಣೇಚ ಪ್ರಭುತ್ವೇ ಚ ವ್ಯವಸ್ಥಿತಃ ।**
**ನಿದೇಶಸ್ಥಾಯಿಭಿಸ್ತಸ್ಯ ಬದ್ಧ್ಯಂತೇ ಸರ್ವಮಾನುಷಾಃ ॥ ೨೫೬ ॥**

**ಇತಿ ಪ್ರಸೂತಿರ್ವೃಷ್ಣೀನಾಂ ಸಮಾಸವ್ಯಾಸಯೋಗತಃ ।**
**ಕೀರ್ತಿತಾ ಕೀರ್ತನಾಚ್ಚೈವ ಕೀರ್ತಿಸಿದ್ಧಿಮಭೀಪ್ಸಿತಾಂ ॥ ೨೫೭ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ವಿಷ್ಣುವಂಶಾನುಕೀರ್ತನಂ" ನಾಮ ಚತುಸ್ತ್ರಿಂಶೋಽಧ್ಯಾಯಃ**

---

೨೫೫. ಮಹಾತ್ಮರಾದ ಯಾದವರ ವಂಶದಲ್ಲಿ ಹನ್ನೊಂದು ವಂಶಗಳು ಸುಪ್ರಸಿದ್ಧವಾಗಿದ್ದುವು. ಹೀಗೆ ಈ ಹನ್ನೊಂದು ವಂಶೀಕರೆಲ್ಲರೂ ಒಂದೇ ವಂಶದಲ್ಲಿ ಹುಟ್ಟಿದವರಂತೆ ಏಕಮತಿಕರಾಗಿಯೂ ವೈಷ್ಣವಕುಲಸಂಭೂತರಾಗಿಯೂ ಇದ್ದರು.

೨೫೬. ಯಾದವರೆಲ್ಲರಿಗೆ ಪ್ರಮಾಣದವಿಚಾರದಲ್ಲಿಯೂ ಅಧಿಕಾರವಿಷಯದಲ್ಲಿಯೂ ಶ್ರೀ ಮಹಾವಿಷ್ಣುವೇ ಮುಖ್ಯವ್ಯವಸ್ಥಾಪಕನಾಗಿದ್ದನು. ಸಮಸ್ತರಾದ ಯಾದವರೂ ಶ್ರೀಕೃಷ್ಣನ ಮಾತಿಗೆ ಒಳಪಟ್ಟು ಅಧೀನರಾಗಿದ್ದರು. ಯಾರೂ ಅವನ ಮಾತನ್ನು ಮೀರಿ ನಡೆಯುತ್ತಿರಲಿಲ್ಲ. ಸರ್ವರೂ ಅವನ ನಿಯಮಕ್ಕೆ ಬದ್ಧರಾಗಿದ್ದರು.

೨೫೭. ಈ ರೀತಿಯಾಗಿ ವೃಷ್ಣಿವಂಶವನ್ನು ಸಂಕ್ಷೇಪವಿಸ್ತಾರಗಳಿಂದ ವರ್ಣಿಸಿರುತ್ತೇನೆ. ಯಾವ ಪುರುಷರು ಈ ವಂಶವನ್ನು ಕೀರ್ತನೆಮಾಡುತ್ತಾರೋ ಮತ್ತು ಶ್ರವಣಮಾಡಿಸುತ್ತಾರೆಯೋ ಅವರು ಈ ಲೋಕದಲ್ಲಿ ಅಭೀಪ್ಸಿತವಾದ ಮಹಾಸಿದ್ಧಿಯನ್ನೂ, ಕೀರ್ತಿಯನ್ನೂ ಪಡೆದು ಸುಖಿಗಳಾಗಿರುವರು ಎಂದು ಸೂತಮುನಿಯು ಮಹರ್ಷಿಗಳಿಗೆ ತಿಳಿಸಿದನು.

ಹೀಗೆ ವಾಯುಪ್ರೋಕ್ತವಾದ ಶ್ರೀಮಹಾಪುರಾಣದಲ್ಲಿ ವಿಷ್ಣುವಂಶವರ್ಣನವೆಂಬ ಮೂವತ್ತನಾಲ್ಕನೆಯ ಅಧ್ಯಾಯವು ಸಮಾಪ್ತವಾದುದು.



# ಮೂವತ್ತನಾಲ್ಕನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ಶ್ರೀಕೃಷ್ಣನ ವಂಶವು ವರ್ಣಿತವಾಗಿದೆ. ಭಕ್ತಳಾದ ಕೌಶಲ್ಯೆಯು ಭಜಮಾನ, ದೇವಾವೃಧ, ಅಂಧಕ, ವೃಷ್ಣಿಯೆಂಬ ನಾಲ್ವರು ಮಕ್ಕಳನ್ನು ಪಡೆದಳು. ಈ ವಂಶದಲ್ಲಿಯೇ ಸತ್ರಾಜಿದ್ರಾಜನು ಜನಿಸಿ ಸ್ಯಮಂತಕರತ್ನವನ್ನು ಸಂಪಾದಿಸಿದನು. ಅದನ್ನು ಕೃಷ್ಣನು ಕೇಳಿದ್ದನು. ಆ ರಾಜನು ಒಂದು ದಿವಸ ಬೇಟೆಗೆ ಹೋಗಲು ಸಿಂಹದಿಂದ ಮೃತನಾದನು. ಆ ಸಿಂಹವು ಜಾಂಬವಂತನಿಂದ ಕೊಲ್ಲಲ್ಪಟ್ಟಿತು. ಈ ಅಪವಾದವು ಕೃಷ್ಣನಿಗೆ ಬರಲು ಜಾಂಬವಂತನನ್ನು ಜಯಿಸಿ ಆ ರತ್ನವನ್ನು ತಂದುಕೊಟ್ಟನು. ಆ ವಂಶದಲ್ಲಿಯೇ ದೇವಕ, ಉಗ್ರಸೇನರು ಜನಿಸಿದರು. ದೇವಕನಿಗೆ ದೇವಕಿಯೆಂಬ ಪುತ್ರಿಯೂ, ಉಗ್ರಸೇನನಿಗೆ ಕಂಸನೆಂಬ ಪುತ್ರನೂ ಹುಟ್ಟಿದರು. ಆ ದೇವಕಿಯನ್ನು ವಸುದೇವನು ಮದುವೆಯಾದನು. ಈ ದಂಪತಿಗಳಲ್ಲಿಯೇ ಶ್ರೀಹರಿಯು ಕೃಷ್ಣನಾಮದಿಂದ ಅವತರಿಸಿದನು. ಆ ವಂಶದಲ್ಲಿಯೇ ಪಾಂಡವರು ಜನಿಸಿದರು. ಕೃಷ್ಣನು ಜನನವಾದ ಕೂಡಲೆ ವಸುದೇವನು ಕಂಸನಿಗೆ ಹೆದರಿ ಆ ಮಗುವನ್ನು ಯಶೋದಾದೇವಿಯ ಹಾಸಿಗೆಯಲ್ಲಿ ಬಿಟ್ಟು ಅವಳ ಕುಮಾರಿಯನ್ನು ಕರೆತಂದು ದೇವಕಿಯ ಹಾಸಿಗೆಯಲ್ಲಿ ಮಲಗಿಸಿದನು. ಅನಂತರ ಕಂಸನು ಆ ಮಗುವನ್ನು ಕೊಲ್ಲಲು ಯತ್ನಿಸಿದಾಗ ತಪ್ಪಿಸಿಕೊಂಡು ಮಗುವು ಮಾಯವಾಯಿತು. ಹೀಗೆ ಕೃಷ್ಣನು ಚಂದ್ರನಂತೆ ವೃದ್ಧಿಯನ್ನು ಹೊಂದಿ ಕಂಸಾದಿ ದುಷ್ಟರಾಕ್ಷಸರನ್ನು ಸಂಹರಿಸಿ ದೇವಕಾರ್ಯವನ್ನು ನೆರವೇರಿಸಿದನು. ಮತ್ತು ರುಕ್ಮಿಣೀದೇವಿಯೇ ಮೊದಲಾದ ಅನೇಕ ಪತ್ನಿಯರನ್ನು ಹೊಂದಿ ಅಸಂಖ್ಯಾತರಾದ ಸಂತಾನವನ್ನು ಪಡೆದನು. ಎಂಬ ವಿಷಯಗಳು ಈ ಅಧ್ಯಾಯದಲ್ಲಿ ಉಕ್ತವಾಗಿವೆ.



—|| ಹರಿಃ ಓಂ ||—

—|| ಶ್ರೀ ವೇದವ್ಯಾಸಾಯ ನಮಃ ||—

# ಶ್ರೀ ಮ ದ್ವಾ ಯು ಮ ಹಾ ಪು ರಾ ಣ ಂ

## ಪಂಚತ್ರಿಂಶೋಽಧ್ಯಾಯಃ

**ಮನುಷ್ಯಪ್ರಕೃತೀನ್ ದೇವಾನ್ ಕೀರ್ತ್ಯಮಾನಾನ್ನಿಬೋಧತ ।**
**ಸಂಕರ್ಷಣೋ ವಾಸುದೇವಃ ಪ್ರದ್ಯುಮ್ನಃ ಸಾಂಬ ಏವ ಚ || ೧ ||**

**ಅನಿರುದ್ಧಶ್ಚ ಪಂಚೈತೇ ವಂಶವೀರಾಃ ಪ್ರಕೀರ್ತಿತಾಃ ।**
**ಸಪ್ತರ್ಷಯಃ ಕುಬೇರಶ್ಚ ಯಕ್ಷೋ ಮಣಿವರಸ್ತಥಾ || ೨ ||**

**ಶಾಲಕೀ ಬದರಶ್ಚೈವ ವಿದ್ವಾನ್ ಧನ್ವಂತರಿಸ್ತಥಾ ।**
**ನಂದಿನಶ್ಚ ಮಹಾದೇವಃ ಶಾಲಂಕಾಯನ ಉಚ್ಯತೇ ।**
**ಆದಿದೇವಸ್ತಥಾ ಜಿಷ್ಣುರೇಭಿಶ್ಚ ಸಹ ದೈವತೈಃ || ೩ ||**

## ಮೂವತ್ತೈದನೆಯ ಅಧ್ಯಾಯವು

೧–೩. ಎಲೈ ವಿಪ್ರವರ್ಯರೇ, ದೇವತೆಗಳು ಮನುಷ್ಯರೂಪವನ್ನು ಹೊಂದಿ ಭೂಮಿಯಲ್ಲಿ ಅವತರಿಸಿರುವ ವಿಷಯಗಳನ್ನು ವರ್ಣಿಸುವೆನು ಕೇಳಿರಿ :– ಸಂಕರ್ಷಣ, ವಾಸುದೇವ, ಪ್ರದ್ಯುಮ್ನ, ಸಾಂಬ ಮತ್ತು ಅನಿರುದ್ಧರೆಂಬ ಈ ಐವರೂ ವೃಷ್ಣಿವಂಶದ ಮಹಾವೀರರೆಂದು ಪ್ರಖ್ಯಾತರಾಗಿರುವರು. ಅನಾದಿಯಾದ ಮಹಾವಿಷ್ಣುವು, ಸಪ್ತರ್ಷಿಗಳು, ಕುಬೇರ, ಯಕ್ಷ, ಮಣಿವರ, ಶಾಲಿಕೀ, ಬದರ, ವಿದ್ವಾಂಸನಾದ ಧನ್ವಂತರಿ, ನಂದಿನ, ಮಹಾದೇವ, ಶಾಲಂಕಾಯನರೆಂಬ ದೇವತೆಗಳ ಸಂಗಡ ಭೂಮಿಯಲ್ಲಿ ಧರ್ಮಸ್ಥಾಪನೆಗಾಗಿ ಅವತರಿಸಿರುವನು.

|| ಋಷಯ ಊಚುಃ ||

ವಿಷ್ಣೋಃ ಕಿಮರ್ಥಂ ಸಂಭೂತಃ ಸ್ಮೃತಾಃ ಸಂಭೂತಯಃ ಕತಿ ।
ಭವಿಷ್ಯಾಃ ಕತಿ ವಾನ್ಯೇ ತು ಪ್ರಾದುರ್ಭಾವ ಮಹಾತ್ಮನಃ || ೪ ||

ಬ್ರಹ್ಮಕ್ಷೇತ್ರೇ ಯುಗಾಂತೇಷು ಕಿಮರ್ಥಮಿಹ ಜಾಯತೇ ।
ಪುನಃ ಪುನರ್ಮನುಷ್ಯೇಷು ತನ್ನಃ ಪ್ರಬ್ರೂಹಿ ಪೃಚ್ಛತಾಂ || ೫ ||

ವಿಸ್ತರೇಣೈವ ಸರ್ವಾಣಿ ಕರ್ಮಾಣಿ ರಿಪುಘಾತಿನಃ ।
ಶ್ರೋತುಮಿಚ್ಛಾಮಹೇ ಸಂಮ್ಯಗ್ ದೇಹ್ಯೈಃ ಕೃಷ್ಣಸ್ಯ ಧೀಮತಃ || ೬ ||

ಕರ್ಮಣಾಮಾನುಪೂರ್ವ್ಯಂ ಚ ಪ್ರಾದುರ್ಭಾವಾಶ್ಚ ಯೇ ಪ್ರಭೋ ।
ಯಾ ಚಾಸ್ಯ ಪ್ರಕೃತಿಃ ಸೂತ ತಾಶ್ಚಾಸ್ಮಾನ್ ವಕ್ತುಮರ್ಹಸಿ || ೭ ||

---

೪–೫. ಮುನಿಗಳು ಪುರಾಣಿಕನನ್ನು ಕೇಳಿದರು :—ಎಲೈ ಸೂತಪುರಾಣಿಕನೇ. ಶ್ರೀಮನ್ನಾರಾಯಣನು ಈ ಭೂಮಿಯಲ್ಲಿ ಮನುಷ್ಯರೂಪದಿಂದ ಏತಕ್ಕಾಗಿ ಅವತರಿಸಿರುವನು ? ಅವನ ಅವತಾರಗಳು ಎಷ್ಟು? ಮಹಾತ್ಮನಾದ ಆ ಸ್ವಾಮಿಯ ಅವತಾರಗಳಲ್ಲಿ ಎಷ್ಟು ಕಳೆದಿವೆ ? ಮುಂದೆ ಆಗಬೇಕಾದ ಅವತಾರಗಳು ಎಷ್ಟು? ಅವನು ಯುಗಾಂತರದಲ್ಲಿ ಈ ಬ್ರಹ್ಮಕ್ಷೇತ್ರವಾದ ಭಾರತ ಭೂಮಿಯಲ್ಲಿ ಅವತರಿಸಲು ಕಾರಣವೇನು ? ಅದರಲ್ಲಿಯೂ ಪುನಃ ಪುನಃ ಮನುಷ್ಯರಲ್ಲಿಯೇ ಅವತರಿಸಲು ಕಾರಣಗಳಾವುವು ? ಇವನ್ನು ಕೇಳಲಿಚ್ಛೆಯುಳ್ಳ ನಮಗಾಗಿ ದಯವಿಟ್ಟು ತಿಳಿಸಬೇಕೆಂದು ಕೇಳಿದರು.

೬. ಶತ್ರುನಾಶಕನೂ, ಸರ್ವಜ್ಞನೂ, ಜ್ಞಾನಿಯೂ ಆದ ಶ್ರೀಕೃಷ್ಣನ ಅದ್ಭುತ ಕಾರ್ಯಗಳನ್ನು ವಿಸ್ತಾರವಾಗಿ ಕೇಳಬೇಕೆಂಬ ಕುತೂಹಲವು ನಮಗೆ ಬಹಳವಾಗಿದೆ. ಅವುಗಳನ್ನು ತಿಳಿಸಬೇಕೆಂದರು.

೭. ಎಲೈ ಸೂತಮುನಿಯೇ, ಆ ಸ್ವಾಮಿಯಾದ ಆ ಭಗವಂತನ ಅವತಾರಗಳು ಕ್ರಮವಾಗಿ ನಡೆದ ಅದ್ಭುತವಾದ ಕಾರ್ಯಗಳು ಭಗವದವತಾರಗಳ ಸ್ವಭಾವ ಮಹಾತ್ಮ್ಯಗಳು ಇವುಗಳನ್ನು ನೀನು ಯಥಾಸ್ಥಿತವಾಗಿ ತಿಳಿಸಲು ಶಕ್ತನಾಗಿರುತ್ತೀ.

ಕಥಂ ಸ ಭಗವಾನ್ ವಿಷ್ಣುಃ ಸುರೇಶ್ವರಿನಿಷೂದನಃ ।
ವಸುದೇವಕುಲೇ ಧೀಮಾನ್ ವಾಸುದೇವತ್ವಮಾಗತಃ ॥ ೮ ॥

ಅಮರೈಃ ಸೂತ ಕಿಂ ಪುಣ್ಯಂ ಪುಣ್ಯಕೃದ್ಭಿರಲಂಕೃತಂ ।
ದೇವಲೋಕಂ ಸಮುತ್ಸೃಜ್ಯ ಮರ್ತ್ಯಲೋಕಮಿಹಾಗತಃ ॥ ೯ ॥

ದೇವಮಾನುಷಯೋರ್ನೇತಾ ಭೂರ್ಭುವಃ ಪ್ರಸವೋ ಹರಿಃ ।
ಕಿಮರ್ಥಂ ದಿವ್ಯಮಾತ್ಮಾನಂ ಮಾನುಷೇ ಸಮವೇಶಯತ್ ॥ ೧೦ ॥

ಯಶ್ಚಕ್ರಂ ವರ್ತಯತ್ಯೇಕೋ ಮನುಷ್ಯಾಣಾಂ ಮನೋಮಯಂ ।
ಮನುಷ್ಯೇ ಸ ಕಥಂ ಬುದ್ಧಿಂ ಚಕ್ರೇ ಚಕ್ರಭೃತಾಂ ವರಃ ॥ ೧೧ ॥

---

೮. ಶತ್ರುನಾಶಕನೂ ಸರ್ವಜ್ಞನೂ ಆದ ಆ ಭಗವಂತನು ದೇವತೆಗಳಲ್ಲಿ ಅವತಾರವನ್ನು ಮಾಡದೇ, ಜ್ಞಾನಿಯಾದ ವಸುದೇವನ ಗೃಹದಲ್ಲಿ ಮನುಷ್ಯರೂಪನಾಗಿ ವಾಸುದೇವ ನಾಮದಿಂದ ಅವತರಿಸಲು ಕಾರಣವೇನು ? ಎಂದರು.

೯. ಎಲೈ ಸೂತಮುನಿಯೇ, ಆ ಭಗವಂತನು ಮಹಾಭಾಗ್ಯಶಾಲಿಗಳಾದ ದೇವತೆಗಳಿಂದಲಂಕೃತವೂ ಅತ್ಯಂತ ಪುಣ್ಯಕರವೂ ಆದ ದೇವಲೋಕವನ್ನು ತ್ಯಜಿಸಿ ಈ ಭೂಲೋಕದಲ್ಲಿ ಅವತರಿಸಲು ಕಾರಣವಾವುದು ?

೧೦. ದೇವಮಾನುಷನಿಯಾಮಕನೂ ಭೂಲೋಕ ಭುವರ್ಲೋಕಾದಿಗಳನ್ನು ಸೃಷ್ಟಿಮಾಡುವವನೂ ಆದ ಶ್ರೀಹರಿಯು ತನ್ನ ದಿವ್ಯವಾದ ರೂಪವನ್ನು ತ್ಯಜಿಸಿ ಮನುಷ್ಯಾಕಾರವನ್ನು ಹೊಂದಿ ಈ ಭೂಮಿಯಲ್ಲಿ ಅವತರಿಸಲು ಕಾರಣವು ಆವುದು ? ಎಂದರು.

೧೧. ಚಕ್ರಾಯುಧಧಾರಿಗಳಲ್ಲಿ ಅಗ್ರಗಣ್ಯನೂ, ಷಡ್ಗುಣೈಶ್ವರ್ಯಸಂಪನ್ನನೂ ಆದ ಶ್ರೀಹರಿಯು ಮನುಷ್ಯರ ಮನೋಮಯವಾದ ಚಕ್ರಪ್ರವರ್ತಕನಾಗಿರುವುದರಿಂದ ಮನುಷ್ಯರೂಪಿಯಾಗಿ ಅವತರಿಸಲು ಹೇಗೆ ಮನಸ್ಸುಮಾಡಿದನು ?

**ಗೋಪಾಯನಂ ಯಃ ಕುರುತೇ ಜಗತಾಂ ಸಾರ್ವಲೌಕಿಕಂ।**
**ಸ ಕಥಂ ಗಾಂ ಗತೋ ವಿಷ್ಣುರ್ಗೋಪಮನ್ವಕರೋತ್ಪ್ರಭುಃ ॥ ೧೨ ॥**

**ಮಹಾಭೂತಾನಿ ಭೂತಾತ್ಮಾ ಯೋ ದಧಾರ ಚಕಾರ ಹ।**
**ಶ್ರೀಗರ್ಭಃ ಸ ಕಥಂ ಗರ್ಭೇ ಸ್ತ್ರಿಯಾ ಭೂಚರಯಾ ಧೃತಃ ॥ ೧೩ ॥**

**ಯೇನ ಲೋಕಾನ್ ಕ್ರಮೈರ್ಜಿತ್ವಾ ತ್ರಿಭಿಸ್ತ್ರೀಂಸ್ತ್ರಿದಶೇಪ್ಸಯಾ।**
**ಸ್ಥಾಪಿತಾ ಜಗತೋ ಮಾರ್ಗಾ ಸ್ತ್ರಿವರ್ಗಪ್ರವರಾಸ್ತ್ರಯಃ ॥ ೧೪ ॥**

**ಯೋಽಂತಕಾಲೇ ಜಗತ್ಪೀತ್ವಾ ಕೃತ್ವಾ ತೋಯಮಯಂ ವಪುಃ।**
**ಲೋಕಮೇಕಾರ್ಣವಂ ಚಕ್ರೇ ದೃಶ್ಯಾದೃಶ್ಯೇನ ವರ್ತ್ಮನಾ ॥ ೧೫ ॥**

---

೧೨. ಯಾವ ಶ್ರೀಭಗವಂತನು ಸಮಸ್ತವಾದ ಲೋಕಗಳಿಗೂ ರಕ್ಷಕನಾಗಿರುವನೋ ಅಂತಹ ಮಹಾವಿಷ್ಣುವು ಈ ಭೂಲೋಕದಲ್ಲಿ ಅವತರಿಸಿ ಗೋಪಾಲಕರಿಗೆ ಹೇಗೆ ವಶನಾಗಿದ್ದನು ?

೧೩. ಯಾವ ಭಗವಂತನು ಸಕಲಮಹಾಭೂತಗಳಿಗೆ ನಿಯಾಮಕನೂ, ಧಾರಕನೂ ಆಗಿರುವನೋ ಮತ್ತು ಲಕ್ಷ್ಮೀದೇವಿಗೂ ಆಶ್ರಯನಾಗಿದ್ದನೋ ಅಂತಹ ಶ್ರೀಹರಿಯು ಭೂಚಾರಿಯಾದ ದೇವಕೀದೇವಿಯ ಗರ್ಭದಲ್ಲಿ ಹೇಗೆ ವಾಸವಾಡಿದನು.

೧೪. ಯಾವ ಹರಿಯು ದೇವಕಾರ್ಯಸಾಧನೆಗೋಸ್ಕರ ವಾಮನನಾಗಿ ಅವತರಿಸಿ ಮೂರು ಪಾದಗಳಿಂದ ಸರ್ವಲೋಕಗಳನ್ನೂ ಆಕ್ರಮಿಸಿದನೋ ಮತ್ತು ಧರ್ಮಮಾರ್ಗವನ್ನು ಸ್ಥಾಪಿಸಿದನೋ ಮತ್ತು ದೇವತಾಸ್ತ್ರೀಯರನ್ನು ರಕ್ಷಿಸಿದನೋ ಅಂಥ ಭಗವಂತನು ಹೇಗೆ ಮನುಷ್ಯನಾಗಿ ಅವತರಿಸಿದನು.

೧೫. ಯಾವ ಭಗವಂತನು ಪ್ರಲಯಕಾಲದಲ್ಲಿ ಸಕಲ ಜಗತ್ತನ್ನೂ ಸಂಹರಿಸಿ ಜಲಮಯವಾದ ರೂಪವನ್ನು ಹೊಂದಿ ಸಕಲ ಲೋಕಗಳನ್ನೂ ದೃಶ್ಯಾದೃಶ್ಯವಾದ ರೂಪಗಳಿಂದ ಜಲಮಯವನ್ನಾಗಿ ಮಾಡಿದನೋ,

**ಯಃ ಪುರಾಣೇ ಪುರಾಣಾತ್ಮಾ ವಾರಾಹಂ ವಪುರಾಸ್ಥಿತಃ ।**
**ದದೌ ಜಿತ್ವಾ ವಸುಮತೀಂ ಸುರಾಣಾಂ ಸುರಸತ್ತಮಃ ॥ ೧೬ ॥**

**ಯೇನ ಸೈಂಹಂ ವಪುಃ ಕೃತ್ವಾ ದ್ವಿಧಾ ಕೃತ್ವಾ ಚ ಯತ್ಪುನಃ ।**
**ಪೂರ್ವದೈತ್ಯೋ ಮಹಾವೀರ್ಯೋ ಹಿರಣ್ಯಕಶಿಪುರ್ಹತಃ ॥ ೧೭ ॥**

**ಯಃ ಪುರಾಹ್ಯನಲೋ ಭೂತ್ವಾ ಔರ್ವಃ ಸಂವರ್ತಕೋ ವಿಭುಃ ।**
**ಪಾತಾಲಸ್ಥೋಽರ್ಣವಗತಃ ಪಪೌ ತೋಯಮಯಂ ಹವಿಃ ॥ ೧೮ ॥**

**ಸಹಸ್ರಚರಣಂ ದೇವಂ ಸಹಸ್ರಾಂಶುಂ ಸಹಸ್ರಶಃ ।**
**ಸಹಸ್ರಶಿರಸಂ ದೇವಂ ಯಮಾಹುರ್ವೈ ಯುಗೇ ಯುಗೇ ॥ ೧೯ ॥**

---

೧೬. ಪುರಾಣಪುರುಷನೂ, ದೇವೋತ್ತಮನೂ ಆದ ಯಾವ ಭಗವಂತನು ವರಾಹಾವತಾರವನ್ನು ಮಾಡಿ ರಾಕ್ಷಸರನ್ನು ಸಂಹರಿಸಿ ದೇವಕಾರ್ಯವನ್ನು ನೆರವೇರಿಸಿ ಭೂಮಿಯನ್ನು ಸ್ಥಾಪಿಸಿದನೋ ಅಂತಹ ಭಗವಂತನು ಹೇಗೆ ಭೂಮಿಯಲ್ಲಿ ಅವತಾರ ಮಾಡಿದನು.

೧೭. ಯಾವ ಹರಿಯು ನರಸಿಂಹಾವತಾರವನ್ನು ಮಾಡಿ ಆದಿದೈತ್ಯನೂ, ಮಹಾಶೂರನೂ ಆದ ಹಿರಣ್ಯಕಶಿಪುವನ್ನು ಸೀಳಿ ಸಂಹಾರಮಾಡಿದನೋ ಅವನು ಭೂಮಿಯಲ್ಲಿ ಹೇಗೆ ಅವತರಿಸಿದನು.

೧೮. ಯಾವ ಭಗವಂತನು ಪೂರ್ವದಲ್ಲಿ ಪ್ರಲಯಕಾಲದ ಅಗ್ನಿಯ ಸ್ವರೂಪವಾದ ಬಡವಾಗ್ನಿರೂಪವನ್ನು ಹೊಂದಿ ಸಮುದ್ರಗತವಾದ ಪಾತಾಳವನ್ನು ಹೊಂದಿ ಜಲಮಯವಾದ ಹವಿಸ್ಸನ್ನು ಪಾನಮಾಡಿದನೋ,

೧೯. ಯಾವ ಭಗವಂತನನ್ನು ಜ್ಞಾನಿಗಳು ಪ್ರತಿಯುಗಗಳಲ್ಲಿಯೂ ಸಹಸ್ರಾರು ಪಾದಗಳು, ನೇತ್ರಗಳು, ಶಿರಸ್ಸುಗಳು, ತೇಜಸ್ಸು ಇವುಗಳುಳ್ಳವನನ್ನಾಗಿಯೂ, ದೇವನನ್ನಾಗಿಯೂ ವರ್ಣಿಸುತ್ತಾರೆಯೋ ಅವನು ಹೇಗೆ ಈ ಭೂಮಿಯಲ್ಲಿ ಅವತರಿಸಿದನು.

ನಾಭ್ಯಾರಣ್ಯಾಃ ಸಮುದ್ಭೂತಂ ಯಸ್ಯ ಪೈತಾಮಹಂ ಗೃಹಂ ।
ಏಕಾರ್ಣವಗತೇ ಲೋಕೇ ತತ್ಪಂಕಜಮಪಂಕಜಂ ॥ ೨೦ ॥

ಯೇನ ತೇ ನಿಹತಾ ದೈತ್ಯಾಃ ಸಂಗ್ರಾಮೇ ತಾರಕಾಮಯೇ ।
ಸರ್ವದೇವಮಯಂಕೃತ್ವಾ ಸರ್ವಾಯುಧಧರಂ ವಪುಃ ॥ ೨೧ ॥

ಗರುಡಸ್ಥೇನ ಚೋತ್ಸಿಕ್ತಃ ಕಾಲನೇಮಿರ್ನಿಪಾತಿತಃ ।
ಉತ್ತರಾಂಶೇ ಸಮುದ್ರಸ್ಯ ಕ್ಷೀರೋದಸ್ಯಾಮೃತೋದಧೇಃ ॥
ಯಃ ಶೇತೇ ಶಾಶ್ವತಂ ಯೋಗಮಾಸ್ಥಾಯ ತಿಮಿರಂ ಮಹತ್ ॥ ೨೨ ॥

ಪುರಾರಣೇ ಗರ್ಭಮಧತ್ತ ದಿವ್ಯಂ
ತಪಃಪ್ರಕರ್ಷಾದದಿತಿಃ ಪುರಾ ಯಮಂ ।
ಶಕ್ರಂ ಚ ಯೋ ದೈತ್ಯಗಣಾವರುದ್ಧಂ
ಗರ್ಭಾವಮಾನೇನ ಭೃಶಂ ಚಕಾರ ॥ ೨೩ ॥

---

೨೦. ಯಾವ ಸ್ವಾಮಿಯ ನಾಭಿಯೆಂಬ ಅರಣಿಯಲ್ಲಿ ಬ್ರಹ್ಮದೇವನ ಗೃಹ ರೂಪವಾದ ಕಮಲವು ಉತ್ಪನ್ನವಾಯಿತೋ ಮತ್ತು ಯಾವನು ಪ್ರಲಯೋದಕ ಶಾಯಿಯೂ ಆಗಿರುವನೋ ಅವನು ಹೇಗೆ ಅವತರಿಸಿದನು.

೨೧. ಯಾವ ಪರಮಾತ್ಮನು ತಾರಕಾಮಯನಾದ ರಣರಂಗದಲ್ಲಿ ಸಕಲ ದೇವತಾಸ್ವರೂಪವೂ, ಸಕಲಾಸ್ತ್ರಧಾರಿಯೂ ಆದ ದಿವ್ಯರೂಪವನ್ನು ಧರಿಸಿ ಸಕಲ ರಾಕ್ಷಸರನ್ನೂ ಸಂಹಾರಮಾಡಿದನೋ.

೨೨. ಯಾವ ಹರಿಯು ಉದ್ರೇಕಗೊಂಡು ಗರುಡಾರೂಢನಾಗಿ ಕಾಲನೇಮಿ ಯೆಂಬ ರಾಕ್ಷಸನನ್ನು ಸಂಹರಿಸಿದನೋ ಮತ್ತು ಅಮೃತಮಯವಾದ ಕ್ಷೀರಸಾಗರದ ಉತ್ತರ ದಿಗ್ಭಾಗದ ಅಂಧಕಾರಮಯವಾದ ಲೋಕದಲ್ಲಿ ಯೋಗನಿದ್ರಾರೂಢ ನಾದನೋ.

೨೩. ಪೂರ್ವದಲ್ಲಿ ಅರಣೀ ಮತ್ತು ಅದಿತೀದೇವಿಯರು ಘೋರವಾದ ತಪಸ್ಸನ್ನು ಮಾಡಿ ಪವಿತ್ರನಾದ ಯಾವ ಭಗವಂತನನ್ನು ಗರ್ಭದಲ್ಲಿ ಧರಿಸಿದ್ದರೋ ಮತ್ತು ಯಾವ ಹರಿಯು ಉಪೇಂದ್ರಾವತಾರವನ್ನು ಮಾಡಿ ದೈತ್ಯರಿಂದ ಬದ್ಧನಾದ ದೇವೇಂದ್ರನನ್ನು ಬಂಧನದಿಂದ ವಿಮೋಚನ ಮಾಡಿದನೋ,

ಯದಾನಿಲೋ ಲೋಕಪಾದಾನಿ ಹೃತ್ವಾ
ಚಕಾರ ದೈತ್ಯಾನ್ ಸಲಿಲೇಶಯಾಂಸ್ತ್ವಾ |
ಕೃತ್ವಾದಿದೇವಸ್ತ್ರಿದಿವಸ್ಯ ದೇವಾಂ
ಚಕ್ರೇ ಸುರೇಶಂ ಪುರುಹೂತನೋವ || ೨೪ ||

ಗಾರ್ಹಪತ್ಯೇ ನ ವಿಧಿನಾ ಅನ್ವಾಹಾರ್ಯೇಣ ಕರ್ಮಣಾ |
ಅಗ್ನಿಮಾಹವನೀಯಂ ಚ ವೇದಿಂಚೈವ ಕುಶಸ್ತ್ರುವಂ || ೨೫ ||

ಪ್ರೋಕ್ಷಣೀಯಂ ಸ್ರುವಂಚೈವ ಅವಭೃಥಂ ತಥೈವ ಚ |
ಅಥ ತ್ರೀನಿಹ ಯಸ್ಚಕ್ರೇ ಹವ್ಯಭಾಗಪ್ರದಾನ್ಮಖೇ || ೨೬ ||

ಹವ್ಯಾದಾಂಶ್ಚ ಸುರಾಂಶ್ಚಕ್ರೇ ಕವ್ಯಾದಾಂಶ್ಚ ಪಿತೃನಪಿ |
ಭೋಗಾರ್ಥಂ ಯಜ್ಞವಿಧಿನಾ ಯೋ ಯಜ್ಞೋ ಯಜ್ಞಕರ್ಮಣಿ || ೨೭ ||

೨೪. ಯಾವ ದೈತ್ಯರು ಲೋಕವನ್ನು ಅಪಹರಿಸಿಕೊಂಡು ಸಮುದ್ರೋದಕದಲ್ಲಿ ಮುಳುಗಿ ಇಂದ್ರಾದಿ ದೇವತೆಗಳಿಗೆ ತೊಂದರೆಗಳನ್ನುಂಟುಮಾಡಿದರೋ ಅಂಥ ರಾಕ್ಷಸರನ್ನು ಸಂಹರಿಸಿ ಯಾವ ಹರಿಯು ಇಂದ್ರಾದಿಗಳಿಗೆ ಪುನಃ ಇಂದ್ರಾದಿ ಪದವಿಗಳನ್ನು ದಯಪಾಲಿಸಿದನೋ.

೨೫–೨೬. ಯಾವ ಹರಿಯು ಗಾರ್ಹಪತ್ಯವಿಧಾನದಿಂದಲೂ, ಅನ್ವಾಹಾರ್ಯಕರ್ಮದಿಂದಲೂ, ಆಹವನೀಯಾಗ್ನಿಕಾರ್ಯಗಳಿಂದಲೂ ಮತ್ತು ಜಗಲಿ, ದರ್ಭೆ, ಸ್ರುಕ್, ಸ್ರುವ ಇವುಗಳಿಂದಲೂ ಸಕಲವಿಧವಾದ ಕರ್ಮಗಳನ್ನೂ, ತ್ರಿವಿಧಕಾರ್ಯಗಳನ್ನೂ, ಅವಭೃತಸ್ನಾನವನ್ನೂ ಮಾಡಿ ಸಕಲದೇವರ್ಷಿಗಳಿಗೂ ಆನಂದಪ್ರದನಾದನೋ.

೨೭. ಪೂರ್ವದಲ್ಲಿ ಯಜ್ಞರೂಪಿಯಾದ ಯಾವ ಭಗವಂತನು ಯಾಗಕರ್ಮಗಳಲ್ಲಿ ಶಾಸ್ತ್ರೋಕ್ತವಿಧಾನದಿಂದ ಹೋಮದ್ರವ್ಯಗಳನ್ನು ಸ್ವೀಕರಿಸುವ ದೇವತೆಗಳೇ ಮೊದಲಾದವರನ್ನು ಸೃಷ್ಟಿಸಿದನೋ ಮತ್ತು ಹವ್ಯಗಳನ್ನು ಸ್ವೀಕರಿಸುವರು ದೇವತೆಗಳು ಕವ್ಯಗಳನ್ನು ಸ್ವೀಕರಿಸುವರು ಪಿತೃಗಳು ಎಂದು ವಿಭಾಗವನ್ನು ಏರ್ಪಡಿಸಿದನೋ,

ಯೂಪಾನ್ ಸಮಿತ್ಸ್ರುವಂ ಸೋಮಂ ಪವಿತ್ರಂ ಪರಿಧೀನಪಿ ।
ಯಜ್ಞಿಯಾನಿ ಚ ದ್ರವ್ಯಾಣಿ ಯಜ್ಞೀಯಾಂಶ್ಚ ತಥಾನಲಾನ್ ॥ ೨೮ ॥

ಸದಸ್ಯಾನ್ ಯಜಮಾನಾಂಶ್ಚ ಅಶ್ವಮೇಧಾನ್ ಕ್ರತೂತ್ತಮಾನ್ ।
ವಿಬ್ರಭ್ರಾಜ ಪುರಾ ಯಶ್ಚ ಪಾರಮೇಷ್ಠ್ಯೇನ ಕರ್ಮಣಾ ॥ ೨೯ ॥

ಯುಗಾನುರೂಪಂ ಯಃ ಕೃತ್ವಾ ತ್ರೀನ್ ಲೋಕಾನ್ ಹಿ ಯಥಾಕ್ರಮಂ ।
ಕ್ಷಣಾ ನಿಮೇಷಾಃ ಕಾಷ್ಠಾಶ್ಚ ಕಲಾಸ್ತ್ರೈಕಾಲಮೇವ ಚ ॥ ೩೦ ॥

ಮುಹೂರ್ತಾಸ್ತಿಥಯೋ ಮಾಸಾ ದಿನಸಂವತ್ಸರಾಸ್ತಥಾ ।
ಋತವಃ ಕಾಲಯೋಗಾಶ್ಚ ಪ್ರಮಾಣಂ ತ್ರಿವಿಧಂತಥಾ ॥ ೩೧ ॥

ಆಯುಃ ಕ್ಷೇತ್ರಾಣ್ಯುಪಚಯಂ ಲಕ್ಷಣಂ ರೂಪಸೌಷ್ಠವಂ ।
ಮೇಧಾ ವಿತ್ತಂ ಚ ಶೌರ್ಯಂ ಚ ಶಾಸ್ತ್ರಸ್ಯೈವ ಚ ಪಾರಣಂ ॥ ೩೨ ॥

---

೨೮–೨೯. ಪೂರ್ವದಲ್ಲಿ ಯಾವ ಪರಮಾತ್ಮನು ಯಾಗದಲ್ಲಿ ಮುಖ್ಯ ಯಜಮಾನನಾಗಿ ಯೂಪಸ್ತಂಭ, ಸಮಿತ್ತು, ಸ್ರುವ, ಸೋಮ, ಪವಿತ್ರ, ಅಶ್ವತ್ಥಾದಿಶಾಖೆ, ಯಾಗೋಪಯುಕ್ತದ್ರವ್ಯಗಳು, ಆಹವನೀಯಾದಿ ಅಗ್ನಿಗಳು, ಸದಸ್ಯರು, ಯಜಮಾನರು, ಅಶ್ವಮೇಧಾದಿ ಯಾಗಗಳು ಇವುಗಳನ್ನು ಏರ್ಪಡಿಸಿ (ಸೃಷ್ಟಿಸಿ) ಸರ್ವರನ್ನೂ ರಕ್ಷಿಸಿದನೋ,

೩೦–೩೧. ಯಾವ ನಾರಾಯಣನು ಯುಗಾನುಸಾರವಾಗಿ ಸ್ವರ್ಗ, ಮರ್ತ್ಯ, ಪಾತಾಳಾದಿ ಮೂರು ಲೋಕಗಳನ್ನೂ ಕ್ಷಣ, ನಿಮೇಷ, ಕಾಷ್ಠ, ಕಾಲ, ಮುಹೂರ್ತ, ತಿಥಿ, ದಿನ, ಪಕ್ಷ, ಮಾಸ, ಋತು, ಸಂವತ್ಸರ ಈ ಕಾಲಗಳನ್ನೂ ಭೂತಭವಿಷ್ಯತ್ ವರ್ತಮಾನ ಕಾಲಗಳನ್ನೂ ಸೃಷ್ಟಿಮಾಡಿದನೋ,

೩೨. ಮತ್ತು ಆಯುಸ್ಸು, ಶರೀರ, ಉಪಚಯ (ವೃದ್ಧಿ) ನಾಶ, ಲಕ್ಷಣ, ರೂಪ, ಸೌಂದರ್ಯ, ಬುದ್ಧಿ, ದ್ರವ್ಯ, ಶೌರ್ಯ, ಶಾಸ್ತ್ರ, ಪುರಾಣ ಇವುಗಳನ್ನು ಸೃಷ್ಟಿಸಿದನೋ,

ತ್ರಯೋ ವರ್ಣಾಸ್ತ್ರಯೋ ಲೋಕಾಸ್ತ್ರೈವಿದ್ಯಂ ಪಾವಕಾಸ್ತ್ರಯಃ ।
ತ್ರೈಕಲ್ಯಂ ತ್ರೀಣಿ ಕರ್ಮಾಣಿ ತಿಸ್ರೋ ಮಾಯಾಸ್ತ್ರಯೋ ಗುಣಾಃ ॥ ೩೩ ॥

ಸೃಷ್ಟ್ವಾ ಲೋಕಾಃ ಸುರಾಶ್ಚೈವ ಯೇನಾತ್ಯಂತೇನ ಕರ್ಮಣಾ ।
ಸರ್ವಭೂತಗಣಾಃ ಸೃಷ್ಟಾಃ ಸರ್ವಭೂತಗಣಾತ್ಮನಾ ॥ ೩೪ ॥

ನೃಣಾಮಿಂದ್ರಿಯಪೂರ್ವೇಣ ಯೋಗೇನ ರಮತೇ ಚ ಯಃ ।
ಗತಾಗತಾನಾಂ ಯೋ ನೇತಾ ಸರ್ವತ್ರ ವಿವಿಧೇಶ್ವರಃ ॥ ೩೫ ॥

ಯೋ ಗತಿರ್ಧರ್ಮಯುಕ್ತಾನಾಮಗತಿಃ ಪಾಪಕರ್ಮಣಾಂ ।
ಚಾತುರ್ವರ್ಣ್ಯಸ್ಯ ಪ್ರಭವಶ್ಚಾತುರ್ವರ್ಣ್ಯಸ್ಯ ರಕ್ಷಿತಾ ॥ ೩೬ ॥

---

೩೩. ಯಾವ ಭಗವಂತನು ಮೂರು ವರ್ಣಗಳು, ಮೂರು ಲೋಕಗಳು, ಮೂರು ವಿದ್ಯೆಗಳು, ಮೂರು ಅಗ್ನಿಗಳು, ಮೂರು ಕಾಲಗಳು, ಮೂರು ಕರ್ಮಗಳು, ಮೂರು ಮಾಯೆಗಳು, ಮೂರು ಗುಣಗಳು ಇವುಗಳನ್ನು ಸೃಷ್ಟಿಸಿರುವನೋ,

೩೪. ಸರ್ವಭೂತಸ್ವರೂಪನಾದ ಯಾವ ಪರಮಾತ್ಮನು ಸಪ್ತಲೋಕಗಳು, ಸಮಸ್ತರಾದ ದೇವತೆಗಳು, ಸರ್ವಭೂತಗಣಗಳು ಇವುಗಳನ್ನು ತನ್ನ ಇಚ್ಛಾನುಸಾರವಾಗಿ ಸೃಷ್ಟಿಮಾಡಿದನೋ,

೩೫. ಯಾವ ಭಗವಂತನು ಮನುಷ್ಯರ ಇಂದ್ರಿಯನಿಗ್ರಹರೂಪವಾದ ಯೋಗಾಭ್ಯಾಸದಿಂದ ಜ್ಞೇಯನಾಗಿ ರಮಿಸುವನೋ ಮತ್ತು ಭೂತಭವಿಷ್ಯತ್ ಕಾಲಗಳಲ್ಲಿರುವ ಸರ್ವ ವಸ್ತುಗಳಿಗೂ ನಿಯಾಮಕನೋ ಮತ್ತು ಸರ್ವಗತವಾದ ಪ್ರಾಣಿಗಳಿಗೆ ನಿಯಾಮಕನೋ,

೩೬. ಯಾವನು ಧಾರ್ಮಿಕರಿಗೆ ರಕ್ಷಕನೂ, ಪಾಪಕರ್ಮಿಗಳಾದ ದುಷ್ಟರಿಗೆ ಶಿಕ್ಷಕನೂ, ಬ್ರಾಹ್ಮಣಾದಿ ನಾಲ್ಕು ಜಾತಿಗಳಿಗೂ ಉತ್ಪಾದಕನೂ ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳಿಗೂ ಪಾಲಕನೂ ಆಗಿರುವನೋ,

ಚಾತುರ್ವಿದ್ಯಸ್ಯ ಯೋ ವೇತ್ತಾ ಚತುರಾಶ್ರಮಸಂಶ್ರಯಃ ।
ದಿಗಂತರಂ ನಭೋ ಭೂಮಿರಾಪೋ ವಾಯುರ್ವಿಭಾವಸುಃ || ೩೭ ||

ಚಂದ್ರಸೂರ್ಯದ್ವಯಂ ಜ್ಯೋತಿರ್ಯುಗೇಶಃ ಕ್ಷಣದಾಚರಃ ।
ಯಃ ಪರಃ ಶ್ರೂಯತೇ ದೇವೋ ಯಃ ಪರಂ ಶ್ರೂಯತೇ ತಪಃ || ೩೮ ||

ಯಃ ಪರಂ ತಪಸಃ ಪ್ರಾಹುರ್ಯಃ ಪರಂಪರಮಾತ್ಮವಾನ್ ।
ಆದಿತ್ಯಾದಿಸ್ತು ಯೋ ದೇವೋ ಯಶ್ಚ ದೈತ್ಯಾಂತಕೋ ವಿಭುಃ || ೩೯ ||

ಯುಗಾಂತೇಷ್ವಂತಕೋ ಯಶ್ಚ ಯಶ್ಚ ಲೋಕಾಂತಕಾಂತಕಃ ।
ಸೇತುರ್ಯೋ ಲೋಕಸೂತಾನಾಂ ಮೇಧ್ಯೋ ಯೋ ಮೇಧ್ಯಕರ್ಮಣಾಂ ||

ವೇದ್ಯೋ ಯೋ ವೇದವಿದುಷಾಂ ಪ್ರಭುರ್ಯಃ ಪ್ರಭವಾತ್ಮನಾಂ ।
ಸೋಮಭೂತಸ್ತು ಭೂತಾನಾಂ ಅಗ್ನಿಭೂತೋಽಗ್ನಿವರ್ಚಸಾಂ || ೪೧ ||

---

೩೭–೩೮. ಯಾವನು ನಾಲ್ಕು ವೇದಗಳನ್ನು ತಿಳಿದವನೂ ನಾಲ್ಕು ಆಶ್ರಮಗಳಿಗೂ ಆಶ್ರಯನೂ ದಿಙ್ಮಂಡಲ, ಆಕಾಶ, ಭೂಮಿ, ಜಲ, ವಾಯು, ಅಗ್ನಿ, ಸೂರ್ಯ, ಚಂದ್ರ, ಜ್ಯೋತಿರ್ಮಂಡಲ, ರಾಕ್ಷಸರು ಇವರಿಗೆ ಉತ್ತಮನೆಂದು ವೇದಗಳಲ್ಲಿಯೂ, ಶಾಸ್ತ್ರಗಳಲ್ಲಿಯೂ ಪ್ರಖ್ಯಾತನಾಗಿರುವನೋ,

೩೯. ಯಾವ ಭಗವಂತನು ತಪೋಗಮ್ಯನೂ, ಸರ್ವೋತ್ತಮನೂ, ಕ್ಷೇತ್ರಜ್ಞನೂ, ಸೂರ್ಯಾದಿಪ್ರೇರಕನೂ, ದೈತ್ಯನಾಶಕನೂ, ಸರ್ವತ್ರವ್ಯಾಪ್ತನೂ, ಕ್ರೀಡಾದಿಗುಣವಿಶಿಷ್ಟನೂ ಆಗಿರುವನೋ,

೪೦. ಯಾವ ಪರಮಾತ್ಮನು ಪ್ರಳಯಕಾಲದಲ್ಲಿ ಸರ್ವಭೂತನಾಶಕನೂ ಲೋಕನಾಶಕರಾದ ಯಮಾದಿಗಳಿಗೂ ನಾಶಕನೂ ಲೋಕಾಧಾರಕರಿಗೂ, ಆಶ್ರಯನೂ ಪವಿತ್ರಕರ್ಮಗಳಿಗೆ ಶುದ್ಧಿದಾಯಕನೂ ಆಗಿರುವನೋ,

೪೧–೪೨. ಯಾವ ಶ್ರೀಹರಿಯು ವೇದವೇತ್ತೃಗಳಿಂದ ಜ್ಞೇಯನಾಗಿಯೂ, ಪ್ರಭುಗಳಾದ ಬ್ರಹ್ಮಾದಿಗಳಿಗೆ ಸ್ವಾಮಿಯಾಗಿಯೂ, ಭೂತಗಳಿಗೆ ಚಂದ್ರಸದೃಶನಾಗಿಯೂ ಅಂದರೆ ಆಹ್ಲಾದಕನಾಗಿಯೂ ಬ್ರಹ್ಮಜ್ಞರಿಗೆ ಜ್ಞಾನಪ್ರದನಾಗಿಯೂ,

ಮನುಷ್ಯಾಣಾಂ ಮನೋಭೂತಸ್ತಪೋಭೂತಸ್ತಪಸ್ವಿನಾಂ ।
ವಿನಯೋ ನಯತೃಪ್ತಾನಾಂ ತೇಜಸ್ತೇಜಸ್ವಿನಾಮಪಿ || ೪೨ ||

ವಿಗ್ರಹೋ ವಿಗ್ರಹಾಣಾಂ ಯೋ ಗತಿರ್ಗತಿಮತಾಮಪಿ ।
ಆಕಾಶಪ್ರಭವೋ ವಾಯುರ್ವಾಯುಪ್ರಾಣಾ ಹುತಾಶನಃ || ೪೩ ||

ದಿವಾ ಹುತಾಶನಪ್ರಾಣಾಃ ಪ್ರಾಣೋಗ್ನೇರ್ಮಧುಸೂದನಃ ।
ರಸೋಭವಚ್ಛೋಣಿತಂ ವೈ ಶೋಣಿತಾನ್ಮಾಂಸಮುಚ್ಯತೇ || ೪೪ ||

ಮಾಂಸಾತ್ತು ಮೇದಸೋ ಜನ್ಮ ಮೇದಸೋಽಸ್ಥಿ ನಿರೂಪ್ಯತೇ ।
ಅಸ್ಥ್ನೋ ಮಜ್ಜಾ ಸಮಭವನ್ಮಜ್ಜಾತಃ ಶುಕ್ರಸಂಭವಃ || ೪೫ ||

ಶುಕ್ರಾದ್ಗರ್ಭಃ ಸಮಭವದ್ರಸಮೂಲೇನ ಕರ್ಮಣಾ ।
ತತ್ರಾಪಿ ಪ್ರಥಮಂ ಚಾಪಸ್ತಾಃ ಸೌಮ್ಯರಾಶಿರುಚ್ಯತೇ || ೪೬ ||

ಮನುಜರ ಮನೋನಿಯಾಮಕನಾಗಿಯೂ, ತಪಸ್ವಿಗಳಿಗೆ ಫಲದಾತನಾಗಿಯೂ, ನೀತಿಜ್ಞರಿಗೆ ನಿಯಾಮಕನಾಗಿಯೂ, ತೇಜಸ್ವಿಗಳಿಗೆ ಪ್ರಕಾಶದಾಯಕನಾಗಿಯೂ ಇರುವನೋ,

೪೩. ಯಾವ ಸ್ವಾಮಿಯು ಶರೀರಿಗಳಿಗೆ ಆಶ್ರಯನೂ ಭಕ್ತರಿಗೆ ಗತಿದಾಯಕನೂ, ಆಕಾಶಜನ್ಯವಾದ ವಾಯುವಿಗೆ ಪ್ರೇರಕನೂ, ವಾಯುಜನ್ಯವಾದ ಅಗ್ನಿಗೆ ನಿಯಾಮಕನೂ ಆಗಿರುವನೋ.

೪೪–೪೬. ಹಗಲಲ್ಲಿ ಪ್ರಾಣಗಳು ಅಗ್ನಿಗೆ ಅಧೀನವಾಗಿರುವುವು. ಅಂತಹ ಅಗ್ನಿಗಳಿಗೆ ಶ್ರೀಹರಿಯು ಪ್ರಾಣರೂಪಿಯಾಗಿರುವನು. ರಸದಿಂದ ರಕ್ತವೂ ಆ ರಕ್ತದಿಂದ ಮಾಂಸವೂ ಅದರಿಂದ ಮೇಧಸ್ಸು. ಅದರಿಂದ ಮೂಳೆಗಳೂ ಅವುಗಳಿಂದ ಮಜ್ಜೆಯೂ, ಅದರಿಂದ ಶುಕ್ರವೂ, ಆ ಶುಕ್ರದಿಂದ ಗರ್ಭವೂ ಉಂಟಾಗುವುವು. ಇವಕ್ಕೆಲ್ಲಾ ರಸವೇ ಮೂಲಕಾರಣವು. ಆ ರಸಕ್ಕೆ ಜಲವೇ ಮುಖ್ಯಕಾರಣವು. ಆ ಜಲರಾಶಿಯೇ ಚಂದ್ರನಾಗಿರುವನೆಂದು ತಿಳಿಯಬೇಕು.

ಗರ್ಭೋಽಷ್ಮಸಂಭವೋ ಜ್ಞೇಯೋ ದ್ವಿತೀಯೋ ರಾಶಿರುಚ್ಯತೇ ।
ಶುಕ್ರಂ ಸೋಮಾತ್ಮಕಂ ವಿದ್ಯಾದಾರ್ತವಂ ಪಾವಕಾತ್ಮಕಂ ॥ ೪೭ ॥

ಭಾವೌ ರಸಾನುಗಾವೇತೌ ವೀರ್ಯೇ ಚ ಶಶಿಪಾವಕೌ ।
ಕಫವರ್ಗೇಽಭವಚ್ಛುಕ್ರಂ ಪಿತ್ತವರ್ಗೇ ಚ ಶೋಣಿತಂ ॥ ೪೮ ॥

ಕಫಸ್ಯ ಹೃದಯಂ ಸ್ಥಾನಂ ನಾಭ್ಯಾಂ ಪಿತ್ತಂ ಪ್ರತಿಷ್ಠಿತಂ ।
ದೇಹಸ್ಯ ಮಧ್ಯೇ ಹೃದಯಂ ಸ್ಥಾನಂ ತು ಮನಸಃ ಸ್ಮೃತಂ ॥ ೪೯ ॥

ನಾಭಿಕೋಷ್ಠಾಂತರಂ ಯತ್ತು ತತ್ರ ದೇವೋ ಹುತಾಶನಃ ।
ಮನಃ ಪ್ರಜಾಪತಿರ್ಜ್ಞೇಯಂ ಕಫಃ ಸೋಮೋ ವಿಭಾವ್ಯತೇ ॥ ೫೦ ॥

---

೪೭. ಗರ್ಭವು (ಉಷ್ಣ) ಶಾಖದಿಂದಲೂ ಉಂಟಾಗುವುದು. ಇದು ಉತ್ಪತ್ತಿಯಾಗುವುದು ಎರಡನೆಯ ಕ್ರಮವು. ಇದೇ ಎರಡನೆಯ ರಾಶಿಯು. ಪ್ರಥಮ ಶುಕ್ರ ಮನ್ನು ಚಂದ್ರಾಂಶಸಂಭೂತವೆಂದೂ, ಆರ್ತವನ್ನು ಅಗ್ನಿರೂಪವೆಂದು ತಿಳಿಯಬೇಕು.

೪೮. ಭಾವರೂಪಗಳೂ, ಅಸಾನುಗುಣಗಳೂ ಆದ ಈ ಎರಡು ಶಕ್ತಿಗಳೂ (ವೀರ್ಯಗಳೂ) ಚಂದ್ರಾಗ್ನಿರೂಪಗಳಾಗಿವೆ. ಶುಕ್ರವು ಕಫವರ್ಗಕ್ಕೂ, ಶೋಣಿತವು (ರಕ್ತವು) ಪಿತ್ತವರ್ಗಕ್ಕೂ ಸೇರಿವೆ.

೪೯. ಅಂತಹ ಕಫವು ಹೃದಯದಲ್ಲಿಯೂ. ಪಿತ್ತವು ನಾಭಿಯಲ್ಲಿಯೂ ಇರುವುವು. ಮತ್ತು ಉತ್ಪನ್ನವಾಗುವುವು. ಆ ಹೃದಯವು ಶರೀರದ ಮಧ್ಯಭಾಗ ದಲ್ಲಿರುವುದು. ಅದು ಮನಸ್ಸಿಗೆ ಆಧಾರವಾಗಿರುವುದು.

೫೦. ನಾಭಿ ಮತ್ತು ಒಳಹೊಟ್ಟೆ ಇವುಗಳ ಮಧ್ಯದಲ್ಲಿ ಅಗ್ನಿದೇವನು ಇರುವನು. ಮನಸ್ಸಿಗೆ ಬ್ರಹ್ಮನು ನಿಯಾಮಕನೂ, ಕಫಕ್ಕೆ ಸೋಮನು ಕಾರಣನೂ ಆಗಿರುವರು.

ಪಿತ್ತಮಗ್ನಿಃ ಸ್ಮೃತಾವೇತಾವಗ್ನಿಸೋಮಾತ್ಮಕಂ ಜಗತ್ ।
ಏವಂ ಪ್ರವರ್ತಿತೋ ಗರ್ಭೋ ವರ್ತತೇಽಂಬುದಸನ್ನಿಭಃ ॥ ೫೧ ॥

ವಾಯುಃ ಪ್ರವೇಶನಂ ಚಕ್ರೇ ಸಂಗತಃ ಪರಮಾತ್ಮನಾ ।
ಸ ಪಂಚಧಾ ಶರೀರಸ್ಥೋ ವಿದ್ಯತೇ ವರ್ಧಯೇತ್ ಪುನಃ ॥ ೫೨ ॥

ಪ್ರಾಣಾಪಾನೌ ಸಮಾನಶ್ಚ ಉದಾನೋ ವ್ಯಾನ ಏವ ಚ ।
ಪ್ರಾಣೋಽಸ್ಯ ಪರಮಾತ್ಮಾನಂ ವರ್ಧಯನ್ ಪರಿವರ್ತತೇ ॥ ೫೩ ॥

ಅಪಾನಃ ಪಶ್ಚಿಮಂ ಕಾಯಮುದಾನೋರ್ಧ್ವ ಶರೀರಗಃ ।
ವ್ಯಾನೋ ವ್ಯಾನಸ್ಯತೇ ಯೇನ ಸಮಾನಃ ಸರ್ವಸಂಧಿಷು ॥ ೫೪ ॥

---

೫೧. ಶುಕ್ರಶೋಣಿತ ಸಂಬಂಧದಿಂದ ಜನ್ಯರಾದ ಈ ಜಗತ್ತು ಅಗ್ನಿ ಮತ್ತು ಸೋಮರೂಪವಾಗಿದೆಯೆಂದು ತಿಳಿಯಬೇಕು. ಹೀಗೆ ಶುಕ್ರಶೋಣಿತ ಸಂಪರ್ಕದಿಂದ ಜನ್ಯವಾದ ಗರ್ಭವು ಸವಿ-ಸವಾದ ಮೇಘಕ್ಕೆ ಸಮಾನನಾಗಿರುವುದೆಂದು ಜ್ಞಾನಿಗಳು ಹೇಳುವರು.

೫೨. ಪರಮಾತ್ಮನಿಂದ ಪ್ರೇರಿತನಾದ ವಾಯುದೇವನು ಪರಮಾತ್ಮನ ಸಂಗಡ ಆ ಶರೀರವನ್ನು ಪ್ರವೇಶಿಸುವನು. ಆ ವಾಯುದೇವನು ಪುನಃ ಪ್ರಾಣಾಪಾನಾದಿ ಪಂಚರೂಪಗಳನ್ನು ಪಡೆದು ಶರೀರದಲ್ಲಿದ್ದುಕೊಂಡು ಅದನ್ನು ವೃದ್ಧಿಗೊಳಿಸುವನು.

೫೩. ಆ ವಾಯುದೇವನು ಪ್ರಾಣ, ಅಪಾನ, ಸಮಾನ, ಉದಾನ ಮತ್ತು ವ್ಯಾನವೆಂಬ ಪಂಚರೂಪನಾಗಿ ಆ ಜೀವನಿಗೆ ಆಶ್ರಯನಾಗಿ ಶರೀರವನ್ನೂ ಜೀವನನ್ನೂ ವೃದ್ಧಿಗೊಳಿಸುವನು.

೫೪. ಪುರುಷನ ದೇಹದಲ್ಲಿ ಅಪಾನವಾಯುವು ಶರೀರದ ಪಶ್ಚಿಮಭಾಗದಲ್ಲಿಯೂ ಅಂದರೆ ಕೆಳಭಾಗದಲ್ಲಿಯೂ. ಉದಾನವು ಊರ್ಧ್ವಭಾಗದಲ್ಲಿಯೂ. ವ್ಯಾನವು ಸರ್ವಶರೀರದಲ್ಲಿಯೂ ಸಮಾನವು. ಸರ್ವಸಂಧಿಗಳಲ್ಲಿಯೂ. ಪ್ರಾಣವಾಯುವು ಮಧ್ಯಭಾಗದಲ್ಲಿಯೂ ಇರುವವು.

**ಭೂತಾವಾಪ್ತಿಸ್ತತಸ್ತಸ್ಯ ಜಾಯತೇಂದ್ರಿಯಗೋಚರಾ ।**
**ಪೃಥಿವೀ ವಾಯುರಾಕಾಶಮಾಪೋ ಜ್ಯೋತಿಶ್ಚ ಪಂಚಮಂ ॥ ೫೫ ॥**

**ಸರ್ವೇಂದ್ರಿಯಾ ನಿವಿಷ್ಟಾಸ್ತಂ ಸ್ವಂ ಸ್ವಂ ಯೋಗಂ ಪ್ರಚಕ್ರಿರೇ ।**
**ಪಾರ್ಥಿವಂ ದೇಹಮಾಹುಸ್ತಂ ಪ್ರಾಣಾತ್ಮಾನಂ ಚ ಮಾರುತಂ ॥ ೫೬ ॥**

**ಛಿದ್ರಾಣ್ಯಾಕಾಶಯೋನೀನಿ ಜಲಾಸ್ರಾವಂ ಪ್ರವರ್ತತೇ ।**
**ತೇಜಶ್ಚಕ್ಷುಃಸ್ಥಿತಾ ಜ್ಯೋತ್ಸ್ನಾ ತೇಷಾಂ ಯನ್ನಾಮತಃ ಸ್ಮೃತಂ ॥**
**ಸಂಗ್ರಾಮಾ ವಿಷಯಾಶ್ಚೈವ ಯಸ್ಯ ವೀರ್ಯಾತ್ಪ್ರವರ್ತಿತಾಃ ॥ ೫೭ ॥**

**ಇತ್ಯೇತಾನ್ ಪುರುಷಃ ಸರ್ವಾನ್ ಸೃಜನ್ ಲೋಕಾನ್ ಸನಾತನಃ ।**
**ನೈಧನೇಽಸ್ಮಿನ್ ಕಥಂ ಲೋಕೇ ನರತ್ವಂ ವಿಷ್ಣುರಾಗತಃ ॥ ೫೮ ॥**

---

೫೫. ಅನಂತರ ಇಂತಹ ದೇಹಕ್ಕೆ ಪಂಚಭೂತಗಳ ಸಂಬಂಧವೂ, ಪಂಚೇಂದ್ರಿಯಗಳ ಸಂಪರ್ಕವೂ ಆಗುವುವು. ಪಂಚಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು ಒಟ್ಟು ದಶೇಂದ್ರಿಯಗಳಾಗಿವೆ ಪೃಥಿವೀ, ಭೂಮಿ, ಆಕಾಶ, ವಾಯು, ಜಲ, ಅಗ್ನಿ ಎಂಬಿವೇ ಪಂಚಭೂತಗಳಾಗಿವೆ.

೫೬. ಹೀಗೆ ನೇತ್ರವೇ ಮೊದಲಾದ ಸರ್ವೇಂದ್ರಿಯಗಳೂ ಶರೀರವನ್ನು ಪ್ರವೇಶಿಸಿ ತಮ್ಮ ತಮ್ಮ ವ್ಯಾಪಾರಗಳನ್ನು ಮಾಡುತ್ತವೆ. ಇಂತಹ ಶರೀರವನ್ನು ಪಾರ್ಥಿವ ಶರೀರವೆಂದು ಹೇಳುವರು. ಶರೀರವು ಪಂಚಪ್ರಾಣಮಯವಾಗಿಯೂ ಇರುವುದು.

೫೭. ಈ ಶರೀರದಲ್ಲಿರುವ ರಂಧ್ರಗಳು ಆಕಾಶಜನ್ಯಗಳಾಗಿವೆ. ಆ ರಂಧ್ರಗಳಿಂದ ಶರೀರಜನ್ಯವಾದ ಜಲಮಲಾದಿ ಸಕಲ ಕಶ್ಮಲಗಳೂ ಹೊರಗೆ ಹೋಗುತ್ತವೆ. ನೇತ್ರಗತವಾದ ತೇಜಸ್ಸು ಚಂದ್ರನ ಚಂದ್ರಿಕೆಯಿಂದ ಜನ್ಯವಾಗಿದೆ. ಇಂದ್ರಿಯಗಳು ತಂತಮ್ಮ ವಿಷಯಗಳಲ್ಲಿ ಪ್ರವರ್ತಿಸುತ್ತವೆ. ಇಂದ್ರಿಯವರ್ತನೆಯೇ ಸಂಗ್ರಾಮವು. ಈ ಸಮರವು ಜೀವನ ಶಕ್ತಿಯಿಂದ ಉಂಟಾಗುವುದು.

೫೮. ಪುರಾಣಪುರುಷನಾದ ಭಗವಂತನು ಹೀಗೆ ಸಕಲ ಲೋಕಗಳನ್ನೂ ಸೃಷ್ಟಿಮಾಡುತ್ತಾನೆ. ಹೀಗಿರುವಲ್ಲಿ ಭಗವಂತನಿಂದ ಸೃಷ್ಟವಾದ ಶರೀರವು ನಾಶ ಹೊಂದಲಾಗಿ ಶ್ರೀಮಹಾವಿಷ್ಣುವು ಇಂತಹ ನಶ್ವರವಾದ ಪುರುಷಶರೀರಿಯಾಗಿ (ಹೇಗೆ) ಏಕೆ ಹುಟ್ಟಿದನು. ಇಂತಹ ಅನಿತ್ಯವಾದ ಶರೀರವನ್ನು ಏಕೆ ಧರಿಸುವನು.

ಏಷ ನ ಸಂಶಯೋ ಧೀಮನ್ನೇಷ ವೈ ವಿಸ್ಮಯೋ ಮಹಾನ್ ।
ಕಥಂ ಗತಿರ್ಗತಿಮತಾಮಾಪನ್ನೋ ಮಾನುಷೀಂ ತನುಂ ॥ ೫೯ ॥

ಶ್ರೋತುಮಿಚ್ಛಾಮಹೇ ವಿಷ್ಣೋಃ ಕರ್ಮಾಣಿ ಚ ಯಥಾಕ್ರಮಂ ।
ಆಶ್ಚರ್ಯಾಣಿ ಪರಂ ವಿಷ್ಣುರ್ವೇದದೇವೈಶ್ಚ ಕಥ್ಯತೇ ॥ ೬೦ ॥

ವಿಷ್ಣೋರುತ್ಪತ್ತಿಮಾಶ್ಚರ್ಯಂ ಕಥಯಸ್ವ ಮಹಾಮತೇ ।
ಏತದಾಶ್ಚರ್ಯಮಾಖ್ಯಾನಂ ಕಥ್ಯತಾಂ ವೈ ಸುಖಾವಹಂ ॥ ೬೧ ॥

ಪ್ರಖ್ಯಾತಬಲವೀರ್ಯಸ್ಯ ಪ್ರಾದುರ್ಭಾವಾ ಮಹಾತ್ಮನಃ ।
ಕರ್ಮಣಾಶ್ಚರ್ಯಭೂತಸ್ಯ ವಿಷ್ಣೋಃ ಸತ್ವಮಿಹೋಚ್ಯತಾಂ ॥ ೬೨ ॥

---

೫೯. ಎಲೈ ಜ್ಞಾನಿಯಾದ ಸೂತಪುರಾಣೀಕನೇ, ಈ ವಿಷಯದಲ್ಲಿ ನಮಗೆ ಬಹಳವಾಗಿ ಸಂದೇಹವು ಉಂಟಾಗಿದೆ. ಬಹಳವಾಶ್ಚರ್ಯವಾಗುತ್ತದೆ. ಸರ್ವರಿಗೂ ಮಹಾಪದನಿಯನ್ನು ಕೊಡುವ ಶ್ರೀಭಗವಂತನು ಇಂತಹ ಮನುಷ್ಯ ಶರೀರವನ್ನು ಏಕೆ ಹೊಂದಿದನು.

೬೦. ಆದುದರಿಂದ ಪರಮಾತ್ಮನ ಆಶ್ಚರ್ಯಕರವಾದ ಕರ್ಮಗಳನ್ನು ಕೇಳಲು ಬಯಸುತ್ತೇವೆ. ಸಕಲವಾದ ವೇದಗಳು ಮತ್ತು ದೇವತೆಗಳು ಇವರಿಂದ ವರ್ಣಿತನಾದ ಭಗವಂತನ ಕರ್ಮಗಳನ್ನು ಜ್ಞಾನಿಗಳು ಹೇಗೆ ಹೊಗಳುತ್ತಾರೆ ಎಂದರು.

೬೧. ಎಲೈ ಜ್ಞಾನಿಯಾದ ಸೂತಮುನಿಯೇ, ಆ ಮಹಾವಿಷ್ಣುವಿನ ಆಶ್ಚರ್ಯಕರವೂ ಮೋಹಜನಕವೂ ಆದ ಜನನವನ್ನು ತಿಳಿಸು. ವಿಸ್ಮಯಜನಕವಾದ ಈ ಇತಿಹಾಸವು ಸುಖಕರವಾಗಿರುವುದರಿಂದ ನಿರೂಪಿಸಬೇಕೆಂದು ಕೇಳಿದರು.

೬೨. ಪ್ರಖ್ಯಾತವಾದ ಕೀರ್ತಿ ಮತ್ತು ಶಕ್ತಿ ಇವುಗಳುಳ್ಳವನೂ, ಮಹಾತ್ಮನೂ, ಆಶ್ಚರ್ಯಕರನೂ ಆದ ಶ್ರೀಮಹಾವಿಷ್ಣುವಿನ ಜನನ, ಮಾಹಾತ್ಮ್ಯ, ಅದ್ಭುತಕಾರ್ಯ ಮತ್ತು ಶಕ್ತಿ ಇವುಗಳನ್ನು ನಿರೂಪಿಸಬೇಕೆಂದು ಕೇಳಿದರು.

|| ಸೂತ ಉವಾಚ ||

ಅಹಂಚ ಕೀರ್ತಯಿಷ್ಯಾಮಿ ಪ್ರಾದುರ್ಭಾವಂ ಮಹಾತ್ಮನಃ ।
ಯಥ ಸ ಭಗವಾರ್ನ ಜಾತೋ ಮಾನುಷೇಷು ಮಹಾತಪಾಃ || ೬೩ ||

ಸಪ್ತ ಸಪ್ತ ತಪಃ ಪ್ರೋಕ್ತಾ ಭೃಗುಶಾಪೇನ ಮಾನುಷೇ ।
ಜಾಯತೇ ಚ ಯುಗಾಂತೇಷು ದೇವಕಾರ್ಯಾರ್ಥಸಿದ್ಧಯೇ || ೬೪ ||

ತಸ್ಯ ದಿವ್ಯತನುಂ ವಿಷ್ಣೋರ್ಗದತೋ ಮೇ ನಿಬೋಧತ ।
ಯುಗಧರ್ಮೇ ಪರಾವೃತ್ತೇ ಕಾಲೇ ಚ ಶಿಥಿಲೇ ಪ್ರಭುಃ || ೬೫ ||

ಕರ್ತುಂ ಧರ್ಮವ್ಯವಸ್ಥಾನಂ ಜಾಯತೇ ಮಾನುಷೇಷ್ವಿಹ ।
ಭೃಗೋಃ ಶಾಪನಿಮಿತ್ತೇನ ದೇವಾಸುರಕೃತೇನ ಚ || ೬೬ ||

---

೬೩. ಅನಂತರ ಸೂತಮುನಿಯು ಹೇಳಿದನು :—ಮಹಾತಪಸ್ವಿಯೂ ಮಹಾತ್ಮನೂ ಆದ ಆ ಭಗವಂತನು ಹೇಗೆ ಮನುಷ್ಯರಲ್ಲಿ ಅವತಾರ ಮಾಡಿದನೋ ಆ ವಿಷಯವನ್ನು ವರ್ಣಿಸುವೆನು ಸಾವಧಾನದಿಂದ ಕೇಳಿರೆಂದನು.

೬೪. ಅಸಂಖ್ಯಾತವಾದ ಮಹಾತಪಸ್ಸುಳ್ಳ ಶ್ರೀಹರಿಯು ಭೃಗುಮುನಿಯ ಶಾಪದಿಂದ ದೇವಕಾರ್ಯಸಾಧನೆಗೋಸ್ಕರ ಅನೇಕ ಯುಗಗಳಲ್ಲಿ ಮನುಷ್ಯರೂಪಿಯಾಗಿ ಹೇಗೆ ಅವತರಿಸಿದನೋ ಅದನ್ನು ತಿಳಿಸುವೆನು ಕೇಳಿರೆಂದನು.

೬೫. ಯುಗಧರ್ಮಗಳು ಪರಿವೃತ್ತಗಳಾಗಿ ಕಾಲವು ಶಿಥಿಲವಾಗಲು ಸ್ವಾಮಿಯಾದ ಶ್ರೀಹರಿಯು ಯಾವ ಶರೀರಗಳನ್ನು ಹೊಂದಿ ಅವತರಿಸಿದನೋ ಅವುಗಳನ್ನು ಹೇಳುವೆನು ಕೇಳಿರೆಂದನು.

೬೬. ಆ ಭಗವಂತನು ಭೃಗುಮುನಿಯ ಶಾಪದಿಂದ ಧರ್ಮಗಳನ್ನು ಸ್ಥಾಪಿಸುವುದಕ್ಕಾಗಿಯೂ, ದೇವಾಸುರನಿಮಿತ್ತವಾಗಿಯೂ ಮನುಷ್ಯರಲ್ಲಿ ಅವತರಿಸಿದ ವಿಷಯಗಳನ್ನು ತಿಳಿಸುವೆನು ಕೇಳಿರೆಂದನು.

|| ಋಷಯ ಊಚುಃ ||

ಕಥಂ ದೇವಾಸುರಕೃತೇ ಅಧ್ಯಾಹಾರಮವಾಪ್ನುಯಾತ್ ।
ಏತದ್ವೇದಿತುಮಿಚ್ಛಾಮೋ ವೃತ್ತಂ ದೈವಾಸುರಂ ಕಥಂ || ೬೭ ||

|| ಸೂತ ಉವಾಚ ||

ದೈವಾಸುರಂ ಯಥಾ ವೃತ್ತಂ ಬ್ರುವತಸ್ತನ್ನಿಬೋಧತ ।
ಹಿರಣ್ಯಕಶಿಪುರ್ದೈತ್ಯಸ್ತ್ರೈಲೋಕ್ಯಂ ಪ್ರಾಕ್ ಪ್ರಶಾಸತಿ || ೬೮ ||

ಬಲಿನಾಧಿಷ್ಠಿತಂ ರಾಷ್ಟ್ರಂ ಪುನರ್ಲೋಕತ್ರಯೇ ಕ್ರಮಾತ್ ।
ಸಖ್ಯಮಾಸೀತ್ಪರಂ ತೇಷಾಂ ದೇವಾನಾಮಸುರೈಃ ಸಹ || ೬೯ ||

ಯುಗಂ ವೈ ದಶಸಂಕೀರ್ಣಮಾಸೀದವ್ಯಾಹತಂ ಜಗತ್ ।
ನಿದೇಶಸ್ಥಾಯಿನಶ್ಚೈವ ತಯೋರ್ದೇವಾಸುರಾಭವನ್ || ೭೦ ||

೬೭. ಋಷಿಗಳು ಕೇಳಿದರು:—ಶ್ರೀಹರಿಯು ದೇವದೈತ್ಯರ ನಿಮಿತ್ತವಾಗಿ ಹೇಗೆ ಅವತಾರಗಳನ್ನು ಮಾಡಿದನು? ದೇವಾಸುರರ ವೃತ್ತಾಂತಗಳಾವವು? ಇವುಗಳನ್ನು ಕೇಳಬೇಕೆಂದು ಬಯಸುತ್ತೇವೆ ಎಂದು ಕೇಳಿದರು.

೬೮. ಆಗ ಸೂತಮುನಿಯು ಹೇಳಿದನು:—ಪೂರ್ವಕಾಲದಲ್ಲಿ ಹಿರಣ್ಯಕಶಿಪುವೆಂಬ ದೈತ್ಯನು ಮೂರು ಲೋಕಗಳನ್ನೂ ಆಕ್ರಮಿಸಿಕೊಂಡು ಆಳುತ್ತಿರಲಾಗಿ ನಡೆದ ದೇವಾಸುರರ ವೃತ್ತಾಂತವನ್ನು ಹೇಳುತ್ತೇನೆ ಕೇಳಿರೆಂದನು.

೬೯. ಪೂರ್ವಕಾಲದಲ್ಲಿ ಬಲಿಚಕ್ರವರ್ತಿಯು ಮೂರು ಲೋಕಗಳನ್ನೂ ಆಕ್ರಮಿಸಿಕೊಂಡು ಕ್ರಮವಾಗಿ ರಾಜ್ಯವನ್ನು ಪಾಲಿಸುತ್ತಿದ್ದನು. ಆ ಸಮಯದಲ್ಲಿ ದೇವತೆಗಳಿಗೂ ಅಸುರರಿಗೂ ಸ್ನೇಹವು ಸಂಪೂರ್ಣವಾಗಿದ್ದಿತು.

೭೦. ಆ ಯುಗವು ದಶಾವಸ್ಥೆಗಳಿಂದಲೂ, ಧರ್ಮಗಳಿಂದಲೂ ಪೂರ್ಣವಾಗಿದ್ದುವು. ಲೋಕವು ತಡೆಯಿಲ್ಲದ ಸುಖದಿಂದ ನಿಷ್ಕಂಟಕವಾಗಿದ್ದಿತು. ದೇವಾಸುರರೆಲ್ಲರೂ ಸುಖಸಂತೋಷನಿರತರಾಗಿಯೂ ರಾಜಾಜ್ಞಾಪಾಲಕರಾಗಿಯೂ ಇದ್ದರು.

ಬಲವಾನ್ ವೈ ವಿವಾದೋಽಯಂ ಸಂಪ್ರವೃತ್ತಃ ಸುಧಾರುಣಃ ।
ದೇವಾಸುರಾಣಾಂ ಚ ತದಾ ಘೋರಕ್ಷಯಕರೋ ಮಹಾನ್ ॥ ೭೧ ॥

ತೇಷಾಂ ದಾಯನಿಮಿತ್ತಂ ವೈ ಸಂಗ್ರಾಮಾ ಬಹವೋಽಭವನ್ ।
ವಾರಾಹೇಽಸ್ಮಿನ್ ದಶ ದ್ವೌ ಚ ಷಂಡಾಮಾರ್ಕೋತ್ತರಾಃ ಸ್ಮೃತಾಃ ॥ ೭೨ ॥

ನಾಮತಸ್ತು ಸಮಾಸೇನ ಶೃಣುಧ್ವಂ ತಾನ್ ವಿವಕ್ಷತಃ ।
ಪ್ರಥಮೋ ನಾರಸಿಂಹಸ್ತು ದ್ವಿತೀಯಶ್ಚಾಪಿ ವಾಮನಃ ॥ ೭೩ ॥

ತೃತೀಯಃ ಸ ತು ವಾರಾಹಶ್ಚತುರ್ಥೋಽಮೃತಮಂಥನಃ ।
ಸಂಗ್ರಾಮಃ ಪಂಚಮಶ್ಚೈವ ಸುಘೋರಸ್ತಾರಕಾಮಯಃ ॥ ೭೪ ॥

ಷಷ್ಠೋ ಹ್ಯಾಡೀಬಕಸ್ತೇಷಾಂ ಸಪ್ತಮಸ್ತ್ರೈಪುರಃ ಸ್ಮೃತಃ ।
ಅಂಧಕಾರೋಽಷ್ಟಮಸ್ತೇಷಾಂ ಧ್ವಜಶ್ಚ ನವಮಃ ಸ್ಮೃತಃ ॥ ೭೫ ॥

---

೭೧. ಹೀಗಿರಲಾಗಿ ದೇವಾಸುರರಿಗೆ ಅತಿಪ್ರಬಲವೂ, ಭಯಂಕರವೂ, ಘೋರವೂ, ಕ್ಷಯಕರವೂ, ಮಹತ್ತೂ ಆದ ವಿವಾದವು ವಿಶೇಷವಾಗಿ ಉಂಟಾಯಿತು.

೭೨. ಹನ್ನೆರಡನೆಯ ವರಾಹಕಲ್ಪದಲ್ಲಿ ಷಂಡಾಮರ್ಕಾದಿಗಳು ಕಳೆದು ಹೋಗಲು, ದೇವಾಸುರರಿಗೆ ದಾಯಾದ ನಿಮಿತ್ತವಾಗಿ ಅನೇಕ ಘೋರವಾದ ಯುದ್ಧಗಳು ಉಂಟಾದುವು.

೭೩–೭೪. ಆಗ ಯಾವ ಯಾವ ಯುದ್ಧಗಳಾದುವು ಎಂಬುದನ್ನು ಸಂಕ್ಷೇಪವಾಗಿ ನಾಮನಿರ್ದೇಶಪೂರ್ವಕವಾಗಿ ತಿಳಿಸುತ್ತೇನೆ ಕೇಳಿರಿ. ಅವುಗಳಲ್ಲಿ ನರಸಿಂಹಾವತಾರವು ಮೊದಲನೆಯದು. ಎರಡನೆಯ ಅವತಾರವು ವಾಮನವು. ಮೂರನೆಯದು ವರಾಹಾವತಾರವು. ನಾಲ್ಕನೆಯದು ಅಮೃತ ಮಥನಕಾಲದಲ್ಲಿ ನಡೆದ ಮೋಹಿನಿಯ ಅವತಾರವು. ಐದನೆಯದು ಅತಿಭಯಂಕರವೂ ತಾರಕಾಮಯವೂ ಆದ ಸಂಗ್ರಾಮವು.

೭೫. ಆರನೆಯದು ದೇವತೆಗಳಿಗೂ ಆಡೀಬಕರಿಗೂ ಆದ ಸಂಗ್ರಾಮವು. ಏಳನೆಯದು ತ್ರಿಪುರಾಸುರರಿಗೆ ಉಂಟಾದ ಯುದ್ಧವು. ಎಂಟನೆಯದು ಅಂಧಕಾಸುರ ವಿಷಯಕವಾದ ಸಂಗ್ರಾಮವು. ಒಂಭತ್ತನೆಯದು ಧ್ವಜರಾಕ್ಷಸ ವಿಷಯಕವಾದ ಯುದ್ಧವಾಗಿದೆ.

ವಾರ್ತಶ್ಚ ದಶಮೋ ಜ್ಞೇಯಸ್ತತೋ ಹಾಲಾಹಲಃ ಸ್ಮೃತಃ ।
ಸ್ಮೃತೋ ದ್ವಾದಶಮಸ್ತೇಷಾಂ ಘೋರಕೋಲಾಹಲೋಽಪರಃ ॥ ೭೬ ॥

ಹಿರಣ್ಯಕಶಿಪುರ್ದೈತ್ಯೋ ನರಸಿಂಹೇನ ಸೂದಿತಃ ।
ವಾಮನೇನ ಬಲಿರ್ಬದ್ಧಸ್ತ್ರೈಲೋಕ್ಯಾಕ್ರಮಣೇ ಕೃತೇ ॥ ೭೭ ॥

ಹಿರಣ್ಯಾಕ್ಷೋ ಹತೋ ದ್ವಂದ್ವೇ ಪ್ರತಿವಾದೇ ತು ದೈವತೈಃ ।
ಮಹಾಬಲೋ ಮಹಾಸತ್ವಃ ಸಂಗ್ರಾಮೇಽಷ್ವಪರಾಜಿತಃ ॥ ೭೮ ॥

ದಂಷ್ಟ್ರಾಯಾಂತು ವರಾಹೇಣ ಸಮುದ್ರಾದ್ಭೂರ್ಯದಾ ಕೃತಾ ।
ಪ್ರಾಹ್ಲಾದೋ ನಿರ್ಜಿತೋ ಯುದ್ಧೇ ಇಂದ್ರೇಣಾಮೃತಮಂಥನೇ ॥ ೭೯ ॥

೭೬. ಹತ್ತನೆಯದು ವೃತ್ರಾಸುರಸಂಬಂಧವಾದ ಯುದ್ಧವು. ಹನ್ನೊಂದನೆಯದು ಹಾಲಾಹಲ (ವಿಷ) ಸಂಬಂಧವಾದ ಯುದ್ಧವು. ಹನ್ನೆರಡನೆಯದು ಘೋರವಾದ ಅಮೃತವಿಷಯಕವಾದ ಕೋಲಾಹಲವು. ಹೀಗೆ ದೇವತೆಗಳಿಗೂ. ಅಸುರರಿಗೂ ಹನ್ನೆರಡುಸಲ ಭಯಂಕರವಾದ ಯುದ್ಧವಾಗಿದೆ.

೭೭. ಶ್ರೀಹರಿಯು ಪ್ರಹ್ಲಾದನಿಮಿತ್ತವಾಗಿ ನರಸಿಂಹಾವತಾರವನ್ನು ಮಾಡಿ ಹಿರಣ್ಯಕಶಿಪುವನ್ನು ಸಂಹಾರಮಾಡಿದನು. ಬಲಿಚಕ್ರವರ್ತಿಯು ಮೂರು ಲೋಕಗಳನ್ನು ಆಕ್ರಮಿಸಲಾಗಿ ಹರಿಯು ವಾಮನಾವತಾರಮಾಡಿ ಬಲಿಯನ್ನು ಬಂಧಿಸಿದನು.

೭೮–೭೯. ಮಹಾಬಲಶಾಲಿಯೂ, ಅತಿಪರಾಕ್ರಮಿಯೂ ಯುದ್ಧದಲ್ಲಿ ಅದ್ವಿತೀಯನೂ ಆದ ಹಿರಣ್ಯಾಕ್ಷನಿಗೂ ದೇವತೆಗಳಿಗೂ ಯುದ್ಧವಾಗಲು ಶ್ರೀಹರಿಯು ವರಾಹಾವತಾರವನ್ನು ಮಾಡಿ ಶೂರನಾದ ಹಿರಣ್ಯಾಕ್ಷನನ್ನು ಕೊಂದನು. ಮತ್ತು ಕೋರೆಯ ಹಲ್ಲುಗಳಿಂದ ಜಲದಲ್ಲಿ ಮಗ್ನವಾದ ಭೂಮಿಯನ್ನುದ್ಧರಿಸಿದನು ಅಮೃತ ಮಥನಕಾಲದಲ್ಲಿ ಕಲಹವಾಗಲು ಇಂದ್ರನು ಪ್ರಹ್ಲಾದನೆಂಬ ದೈತ್ಯನನ್ನು (ಸಂಹಾರ ಮಾಡಿದನು) ಜಯಿಸಿದನು.

**ವಿರೋಚನಸ್ತು ಪ್ರಾಹ್ಲಾದಿರ್ನಿತ್ಯಮಿಂದ್ರವಧೋದ್ಯತಃ ।**
**ಇಂದ್ರೇಣೈವ ಸ ವಿಕ್ರಮ್ಯ ನಿಹತಸ್ತಾರಕಾಮಯೇ ॥ ೮೦ ॥**

**ಭವಾದವಧ್ಯತಾಂ ಪ್ರಾಪ್ಯ ವಿಶೇಷಾಸ್ತ್ರಾದಿಭಿಸ್ತು ಯಃ ।**
**ಸಂಜಭೋ ನಿಹತಃ ಷಷ್ಠೇ ಶಕ್ರಾವಿಷ್ಟೇನ ವಿಷ್ಣುನಾ ॥ ೮೧ ॥**

**ಅಶಕ್ನುವಂತೋ ದೇವೇಷು ಪುರಂ ಗೋಪ್ತುಂ ತ್ರಿದೈವತಂ ।**
**ನಿಹತಾ ದಾನವಾಃ ಸರ್ವೇ ತ್ರಿಪುರಸ್ತ್ರ್ಯಂಬಕೇಣ ತು ॥ ೮೨ ॥**

**ಅಷ್ಟಮೇ ತ್ವಸುರಾಶ್ಚೈವಂ ರಾಕ್ಷಸಾಶ್ಚಾಂಧಕಾರಕಾಃ ।**
**ಜಿತದೇವಮನುಷ್ಯೈಸ್ತು ಪಿತೃಭಿಶ್ಚೈವ ಸಂಗತಾನ್ ॥ ೮೩ ॥**

**ಸಂವೃತಾನ್ ದಾನವಾಂಶ್ಚೈವ ಸಂಗತಾನ್ ಕೃತ್ಸ್ನಶಶ್ಚ ತಾನ್ ।**
**ತಥಾ ವಿಷ್ಣುಸಹಾಯೇನ ಮಹೇಂದ್ರೇಣ ನಿಬರ್ಹಿತಾಃ ॥ ೮೪ ॥**

---

೮೦. ಪ್ರಹ್ಲಾದ ಪುತ್ರನಾದ ವಿರೋಚನನು ತಾರಕಾಸುರನ ಯುದ್ಧದ ಸಂದರ್ಭದಲ್ಲಿ ಇಂದ್ರನನ್ನು ಸಂಹರಿಸಲು ಪ್ರಯತ್ನಮಾಡಿ ತಾನೇ ಇಂದ್ರನಿಂದ ಸಂಹೃತನಾದನು.

೮೧. ಸಂಜಭನೆಂಬ ರಾಕ್ಷಸನು ಮಹಾತಪಸ್ಸನ್ನು ಮಾಡಿ ಪರಮೇಶ್ವರನಿಂದ ಮಹಾವರಗಳನ್ನೂ ವಿಶೇಷವಾದ ಮಹಾಸ್ತ್ರಗಳನ್ನೂ ಪಡೆದು ಘೋರವಾದ ಯುದ್ಧವನ್ನು ಮಾಡಲಾಗಿ, ಶ್ರೀಮಹಾವಿಷ್ಣುವು ಇಂದ್ರಾವಿಷ್ಟನಾಗಿ ಆ ದೈತ್ಯನನ್ನು ಸಂಹಾರಮಾಡಿದನು.

೮೨. ತರುವಾಯ ತ್ರಿಪುರಾಸುರನು ಸ್ವರ್ಗವನ್ನು ಲೂಟಿಮಾಡಲು, ದೇವತೆಗಳು ತಮ್ಮ ಸ್ವರ್ಗವನ್ನು ರಕ್ಷಿಸಿಕೊಂಡು ಪಾಲಿಸಲು ಅಶಕ್ತರಾಗಿರಲು, ದಾನವ ಪ್ರಾಬಲ್ಯವನ್ನು ತಿಳಿದ ಈಶ್ವರನು ತ್ರಿಪುರಾಸುರರನ್ನು ಸಂಹರಿಸಿದನು.

೮೩–೮೪. ಎರಡನೆಯಸಲ ಅಂಧಕಾದ್ಯಸುರರೂ, ದಾನವರೂ ಒಟ್ಟುಗೂಡಿ ದೇವತೆಗಳನ್ನು ಜಯಿಸಿ, ಪಿತೃಗಳು, ಋಷಿಗಳು, ಮನುಷ್ಯರು ಇವರನ್ನು ಪೀಡಿಸಲಾಗಿ, ದೇವೇಂದ್ರನು ವಿಷ್ಣುವಿನ ಸಹಾಯದಿಂದ ಐಕ್ಯರಾದ ದೈತ್ಯದಾನವರನ್ನು ಹೊಡೆದು ನಿರ್ನಾಮಮಾಡಿ ಉಳಿದವರನ್ನು ಅಟ್ಟಿದನು.

**ಹತೋ ಧ್ವಜೋ ಮಹೇಂದ್ರೇಣ ಮಾಯಾಚ್ಛನ್ನಶ್ಚ ಯೋಥಯನ್ ।**
**ಧ್ವಜೇ ಲಕ್ಷ್ಯಂ ಸಮಾವಿಶ್ಯ ವಿಪ್ರವರ್ತಿರ್ಮಹಾಭುಜಃ ॥ ೮೫ ॥**

**ದೈತ್ಯಾಂಶ್ಚ ದಾನವಾಂಶ್ಚೈವ ಸಂಹತಾನ್ ಕೃತ್ಸ್ನಶಶ್ಚ ತಾನ್ ।**
**ರಜಿಃ ಕೋಲಾಹಲೇ ಸರ್ವಾನ್ ದೇವೈಃ ಪರಿವೃತೋಽಜಯತ್ ॥**
**ಯಜ್ಞಾ ವೃತೇನ ವಿಜಿತೌ ಷಂಡಾಮರ್ಕೌ ತು ದೈವತೈಃ ॥ ೮೬ ॥**

**ಏತೇ ದೈವಾಸುರಾ ವೃತ್ತಾಃ ಸಂಗ್ರಾಮಾ ದ್ವಾದಶೈವ ತು ।**
**ದೇವಾಸುರಕ್ಷಯಕರಾಃ ಪ್ರಜಾನಾಮಶಿವಾಯ ಚ ॥ ೮೭ ॥**

**ಹಿರಣ್ಯಕಶಿಪೂ ರಾಜಾ ವರ್ಷಾಣಾಮರ್ಬುದಂ ಬಭೌ ।**
**ತಥಾ ಶತಸಹಸ್ರಾಣಿ ಹ್ಯಧಿಕಾನಿ ದ್ವಿಸಪ್ತತಿಃ ।**
**ಅಶೀತೀಂ ಚ ಸಹಸ್ರಾಣಿ ತ್ರೈಲೋಕ್ಯಸ್ಯೈಶ್ವರೋಽಭವತ್ ॥ ೮೮ ॥**

೮೫. ಅನಂತರ ಧ್ವಜಾಸುರನು ಮಾಯಾವಿಯಾಗಿ ಯುದ್ಧಮಾಡಲು, ದೇವೇಂದ್ರನು ಅವನ ಮೇಲೆ ಗುರಿಯಿಟ್ಟು ಹೊಡೆದು ಸಂಗರವನ್ನು ಮಾಡಲು, ಅವನ ಸಹಾಯಕ್ಕಾಗಿಬಂದ ದೈತ್ಯದಾನವರನ್ನು ಸಂಪೂರ್ಣವಾಗಿ ನಾಶಮಾಡಿ ಧ್ವಜಾಸುರನನ್ನೂ ಸಹ ಸಂಹರಿಸಿದನು.

೮೬. ಅನಂತರ ಪುನಃ ಯುದ್ಧಮಾಡಲು ಬಂದ ದೈತ್ಯದಾನವರನ್ನು ಸಂಪೂರ್ಣವಾಗಿ ಇಂದ್ರನು ನಾಶಮಾಡಲು ಆಗ ಕೋಪಗೊಂಡ ರಜಿ ಎಂಬ ದಾನವನು ಸಮಸ್ತದೇವತೆಗಳನ್ನೂ ಸೋಲಿಸಿದನು. ಆಗ ಇಂದ್ರಾದಿ ದೇವತೆಗಳು ಅವನನ್ನು ಜಯಿಸಿ ಯಜ್ಞದ ಅಮೃತದಿಂದ ಶೂರರಾದ ಷಂಡಾಮರ್ಕರನ್ನು ಜಯಿಸಿದರು.

೮೭. ಹೀಗೆ ದೇವಾಸುರರಿಗೆ ಹನ್ನೆರಡಾವೃತ್ತಿ ಭಯಂಕರವಾದ ಯುದ್ಧವು ಸಂಭವಿಸಲು ಅನೇಕ ದೇವಾಸುರಕ್ಷಯವೂ, ಪ್ರಜೆಗಳಿಗೆ ಉಪದ್ರವವೂ ಸಂಭವಿಸಿದುವು. ಆಗ ಶ್ರೀಹರಿಯು ಅವತರಿಸಿ ಲೋಕರಕ್ಷಣೆಯನ್ನು ಮಾಡಿದನು.

೮೮. ಹಿರಣ್ಯಕಶಿಪುವೆಂಬ ಮಹಾರಾಜನು ಅರ್ಬುದ ವರ್ಷಗಳವರೆಗೂ ರಾಜ್ಯವಾಳಿದನು. ಅವನು ತ್ರಿಲೋಕೇಶ್ವರನಾಗಿ ಒಂದು ಕೋಟಿಯ ಎಪ್ಪತ್ತೆರಡು ಲಕ್ಷದ ಎಂಬತ್ತು ಸಹಸ್ರವರ್ಷಗಳು ರಾಜ್ಯವಾಳಿದನು.

ಪರ್ಯಾಯೇಣ ತಸ್ಯ ರಾಜ್ಯಾಸು ಬಲೇರ್ವರ್ಷಾರ್ಬುದಂ ಪ್ರಸಃ ।
ಷಷ್ಟಿಂ ಚೈವ ಸಹಸ್ರಾಣಿ ತ್ರಿಂಶಂ ನಿಯುತಾನಿ ಚ ॥ ೮೯ ॥

ಬಲೇಃ ರಾಜ್ಯಾಧಿಕಾರಸ್ತು ಯಾವತ್ಕಾಲಂ ಬಭೂವ ಹ ।
ಪ್ರಹ್ಲಾದೇನ ಗೃಹೀತೋಽಭೂತ್ತಾವತ್ಕಾಲಂ ತದಾಸುರೈಃ ॥ ೯೦ ॥

ಇಂದ್ರಾಸ್ತ್ರಯಸ್ತೇ ವಿಖ್ಯಾತಾ ಅಸುರಾಣಾಂ ಮಹೌಜಸಃ ।
ದೈತ್ಯಸಂಸ್ಥಮಿದಂ ಸರ್ವಮಾಸೀದ್ದಶಯುಗಂ ಕಿಲ । ॥ ೯೧ ॥

ಅಸಪತ್ನಂ ತತಃ ಸರ್ವಂ ರಾಷ್ಟ್ರಂ ದಶಯುಗಂ ಪುರಾ ।
ತ್ರೈಲೋಕ್ಯಮವ್ಯಯಮಿದಂ ಮಹೇಂದ್ರೇಣ ತು ಪಾಲ್ಯತೇ ॥ ೯೨ ॥

---

೮೯. ತರುವಾಯ ಬಲಿರಾಯನು ಪರ್ಯಾಯಕ್ರಮದಿಂದ ಅರ್ಬುದ ವರ್ಷಗಳು ರಾಜನಾಗಿದ್ದನು. ಮತ್ತು ಅರವತ್ತುಸಾವಿರದ ಮುನ್ನೂರುವರ್ಷಗಳು ರಾಜ್ಯವನ್ನು ಪಾಲಿಸಿದನು.

೯೦. ಬಲಿಚಕ್ರವರ್ತಿಯ ರಾಜ್ಯಾಧಿಕಾರವು ಎಲ್ಲಿಯವರೆಗೂ ಇತ್ತೋ ಅಲ್ಲಿಯವರೆಗೂ ಅಸುರರು ಪ್ರಹ್ಲಾದಮಹಾರಾಯನ ಅಧೀನದಲ್ಲಿ ಇದ್ದರು. ಅವನಿಂದ ಗೃಹೀತರಾಗಿದ್ದರು.

೯೧. ಮಹಾಪರಾಕ್ರಮಿಗಳೂ, ಅಸುರಪುಂಗವರೂ ಆದ ಹಿರಣ್ಯಾಕ್ಷ, ಬಲಿಚಕ್ರವರ್ತಿ, ಪ್ರಹ್ಲಾದರೆಂಬ ಮೂವರು ಅಸುರೇಂದ್ರರು ಪ್ರಖ್ಯಾತರಾಗಿದ್ದರು. ಹೀಗೆ ದೈತ್ಯರ ಸಂಘವು ಹತ್ತು ಯುಗಗಳವರೆಗೂ ವ್ಯಾಪ್ತವಾಗಿತ್ತು.

೯೨. ತದನಂತರದಲ್ಲಿ ದೇವೇಂದ್ರನು ಪೂರ್ವದಲ್ಲಿ ಹತ್ತು ಯುಗಗಳವರೆಗೂ ಸಕಲವಾದ ದೇಶಗಳನ್ನೂ, ಮೂರು ಲೋಕಗಳನ್ನೂ ಕೂಡ ನಿಷ್ಕಂಟಕವಾಗಿ ನಾಶವಿಲ್ಲದೆಯೇ ಸುಖವಾಗಿ ಪಾಲಿಸಿದನು.

ಪ್ರಹ್ಲಾದಸ್ಯ ತತಶ್ಚಾದಸ್ತ್ರೈಲೋಕ್ಯಂ ಕಾಲಪರ್ಯಯಾತ್ ।
ಪರ್ಯಾಯೇಣ ಚ ಸಂಪ್ರಾಪ್ತೇ ತ್ರೈಲೋಕ್ಯೇ ಪಾಕಶಾಸನಃ ॥ ೯೩ ॥

ತತೋಽಸುರಾನ್ ಪರಿತ್ಯಜ್ಯ ಯಜ್ಞೇ ದೇವಾ ಉಪಾಗಮನ್ ।
ಯಜ್ಞೇ ದೇವಾನಥ ಗತೇ ಕಾವ್ಯಂ ತೇ ಹ್ಯಸುರಾಬ್ರುವನ್ ॥ ೯೪ ॥

ಕೃತಂ ನೋ ಮಿಷತಾಂ ರಾಷ್ಟ್ರಂ ತ್ಯಕ್ತ್ವಾ ಯಜ್ಞಂ ಪುನರ್ಗತಾಃ ॥
ಸ್ಥಾತುಂ ನ ಶಕ್ನುಮೋ ಹ್ಯದ್ಯ ಪ್ರವಿಶಾಮೋ ರಸಾತಲಂ ॥ ೯೫ ॥

ಏವಮುಕ್ತೋಽಬ್ರವೀದ್ದೇತಾನ್ ವಿಷಣ್ಣಾಃ ಸಾಂತ್ವಯನ್ ಗಿರಾ ।
ಮಾಭೈಷ್ಟ ಧಾರಯಿಷ್ಯಾಮಿ ತೇಜಸಾ ಸ್ವೇನ ಚಾಸುರಾಃ ॥ ೯೬ ॥

ವೃಷ್ಟಿರೋಷಧಯಶ್ಚೈವ ರಸಾ ವಸು ಚ ಯದ್ವಯಂ ।
ಕೃತ್ಸ್ನಾ ಮಯಿ ಚ ತಿಷ್ಠಂತಿ ಪಾದಸ್ತೇಷಾಂ ಸುರೇಷು ವೈ ॥
ಯುಷ್ಮದರ್ಥಂ ಪ್ರದಾಸ್ಯಾಮಿ ತತ್ಸರ್ವಂ ಧಾರ್ಯತೇ ಮಯಾ ॥ ೯೭ ॥

---

೯೩–೯೪. ಪ್ರಹ್ಲಾದರಾಜನ ತರುವಾಯ ಕಾಲವ್ಯತ್ಯಾಸದಿಂದ ಪ್ರಾಪ್ತವಾದ ಮೂರು ಲೋಕಗಳನ್ನು ಕ್ರಮವಾಗಿ ದೇವೇಂದ್ರನು ಪಾಲಿಸಿದನು. ಅನಂತರ ಇಂದ್ರನು ಅಸುರರನ್ನು ಜಯಿಸಿ ಯಜ್ಞಯಾಗಾದಿಗಳನ್ನು ಪ್ರವರ್ತಿಸುವಂತೆ ಮಾಡಿದನು. ಆಗ ಯಜ್ಞಗಳು ವಿಶೇಷವಾಗಿ ನಡೆದುವು. ದೇವತೆಗಳು ಯಜ್ಞಯಾಗಾದಿಗಳಿಗೆ ಹೋಗಲು ಅಸುರರು ಶುಕ್ರಾಚಾರ್ಯರಿಗೆ ಇಂತೆಂದರು.

೯೫. ಓ ಗುರುಗಳೇ, ತಾವು ನೋಡುತ್ತಿರುವಾಗಲೇ ದೇವತೆಗಳು ನಮ್ಮ ರಾಜ್ಯವನ್ನು ಅಪಹರಿಸಿಕೊಂಡು ಯಜ್ಞಯಾಗಾದಿಗಳಲ್ಲಿ ಸ್ವೇಚ್ಛೆಯಾಗಿ ಭಾಗಗಳಾಗಿರುವರು. ಇನ್ನು ನಾವು ಅವರ ಮುಂದೆ ಬದುಕಿರಲು ಸಾಧ್ಯವಿಲ್ಲ. ಪಾತಾಳ ಲೋಕವನ್ನು ಪ್ರವೇಶಿಸುತ್ತೇವೆಯೆಂದು ದುಃಖದಿಂದ ಹೇಳಿದರು.

೯೬. ಹೀಗೆ ಅಸುರರು ಹೇಳಲು, ಶುಕ್ರಾಚಾರ್ಯರು ಎಲೈ ಅಸುರವರ್ಯರೇ ನೀವು ಹೆದರಬೇಡಿರಿ! ನನ್ನ ಸಾಮರ್ಥ್ಯದಿಂದ ನೀವು ಈ ಭೂಮಿಯಲ್ಲಿಯೇ ವಾಸಿಸುವಂತೆ ಮಾಡುವೆನೆಂದು ಖಿನ್ನರಾದ ಅಸುರರನ್ನು ಸಮಾಧಾನಮಾಡಿದರು.

೯೭. ಎಲೈ ಅಸುರವರ್ಯರೇ, ಮಳೆಬೆಳೆಗಳೂ ರಸದ್ರವ್ಯಗಳೂ ಇವೇ ಮೊದಲಾದ ಸಕಲವಸ್ತುಗಳೂ ನನ್ನಧೀನದಲ್ಲಿವೆ. ನಾಲ್ಕರಲ್ಲೊಂದುಭಾಗಮಾತ್ರ ದೇವತೆಗಳ ಅಧೀನದಲ್ಲಿದೆ. ನನ್ನ ವಶದಲ್ಲಿರುವ ಸರ್ವಸ್ವವನ್ನೂ ನಿಮಗೆ ಕೊಡುತ್ತೇನೆಂದನು.

ತತೋ ದೇವಾಸುರಾನ್ ದೃಷ್ಟ್ವಾ ಧೃತಾನ್ ಕಾವ್ಯೇನ ಧೀಮತಾ ।
ಅಮಂತ್ರಯಂಸ್ತದಾ ತೇ ವೈ ಸಂವಿಗ್ನಾ ವಿಜಿಗೀಷಯಾ || ೯೮ ||

ಏಷ ಕಾವ್ಯ ಇದಂ ಸರ್ವಂ ವ್ಯಾವರ್ತಯತಿನೋ ಬಲಾತ್ ।
ಸಾಧು ಗಚ್ಛಾಮಹೇ ತೂರ್ಣಂ ಕ್ಷೀಣಾನ್ನಾಪ್ಯಾಯಯಸ್ವತಾನ್ ||
ಪ್ರಸಹ್ಯ ಹತ್ವಾ ಶಿಷ್ಟಾನ್ ವೈ ಪಾತಾಲಂ ಪ್ರಾಪಯಾಮಹೇ || ೯೯ ||

ತತೋ ದೇವಾಃ ಸುಸಂರಬ್ಧಾ ದಾನವಾನಭಿಸೃತ್ಯ ವೈ ।
ಜಘ್ನುಸ್ತೈರ್ವಧ್ಯಮಾನಾಸ್ತೇ ಕಾವ್ಯಮೇವಾಭಿದುದ್ರುವುಃ || ೧೦೦ ||

ತತಃ ಕಾವ್ಯಸ್ತು ತಾನ್ ದೃಷ್ಟ್ವಾ ತೂರ್ಣಂ ದೇವೈರಭಿದ್ರುತಾನ್ ।
ಸಮರೇಽಸ್ತ್ರಕ್ಷತಾರ್ತಾಂಸ್ತಾನ್ ದೇವೇಭ್ಯಸ್ತಾನ್ ದಿತೇಃ ಸುತಾನ್ || ೧೦೧ ||

---

೯೮. ಅನಂತರ ದೇವತೆಗಳು ಜ್ಞಾನಿಯಾದ ಶುಕ್ರಾಚಾರ್ಯನ ಸಹಾಯವನ್ನು ಅಸುರರು ಪಡೆದಿರುವುದನ್ನು ತಿಳಿದು ಖಿನ್ನರಾದರು- ತರುವಾಯ ಅಂತಹ ಅಸುರರನ್ನು ಜಯಿಸಲು ಮಂತ್ರಾಲೋಚನೆಯನ್ನು ಮಾಡಿದರು.

೯೯. ಈ ಶುಕ್ರಾಚಾರ್ಯನ ಸ್ವಶಕ್ತಿಯಿಂದ ಅಸುರರಿಗಾಗಿ ನಿಮ್ಮಲ್ಲಿರುವ ಸರ್ವಸ್ವವನ್ನೂ ಸ್ವೀಕರಿಸುತ್ತಿರುತ್ತಾನೆ. ಆದುದರಿಂದ ನಮ್ಮಲ್ಲಿ ಶಕ್ತಿಯಿಲ್ಲದವರಿಗೆ ಸಹಾಯವನ್ನು ಮಾಡಿ ಉಳಿದಿರುವ ಅಸುರರನ್ನು ಪಾತಾಳಕ್ಕೆ ಓಡಿಸೋಣವೆಂದರು.

೧೦೦. ಅನಂತರ ದೇವತೆಗಳು ಯೋಚಿಸಿ ದಾನವರಸಂಗಡ ಘೋರವಾಗಿ ಹೋರಾಡಿ ಅವರನ್ನು ಹೊಡದು ಅಟ್ಟಿದರು. ಹೀಗೆ ಪೀಡಿತರಾದ ಅಸುರರು ಪುನಃ ಗುರುಗಳನ್ನೇ ಮೊರೆಹೊಕ್ಕರು.

೧೦೧. ಅನಂತರ ಶುಕ್ರಾಚಾರ್ಯನು ದೇವತೆಗಳಿಂದ ಪೀಡಿತರಾದ ಅಸುರರನ್ನು ನೋಡಿ ಯೋಚಿಸಿದನು. ದಿತೀದೇವಿಯ ಕುಮಾರರಾದ ದೈತ್ಯರೆಲ್ಲರೂ ಯುದ್ಧ ರಂಗದಲ್ಲಿ ದೇವತೆಗಳ ಶಸ್ತ್ರಾಸ್ತ್ರಗಳಿಂದ ಬಹಳವಾಗಿ ಗಾಯಗೊಂಡು ಪೀಡಿತರಾಗಿರುವರು.

**ಕಾವ್ಯೋ ದೃಷ್ಟ್ವಾ ಸ್ಥಿತಾನ್ ದೇವಾನ್ ತತ್ರ ದೇವೋಭ್ಯಚಿಂತಯತ್ ।**
**ತಾನುವಾಚ ತತೋ ಧ್ಯಾತ್ವಾ ಪೂರ್ವವೃತ್ತಮನುಸ್ಮರನ್ ॥ ೧೦೨ ॥**

**ತ್ರೈಲೋಕ್ಯಂ ವಿಜಿತಂ ಸರ್ವಂ ವಾಮನೇನ ತ್ರಿಭಿಃ ಕ್ರಮೈಃ ।**
**ಬಲಿರ್ಬದ್ಧೋ ಹತೋ ಜಂಬೋ ನಿಹತಶ್ಚ ವಿರೋಚನಃ ॥ ೧೦೩ ॥**

**ಮಹಾಹವೇಷು ದ್ವಾದಶಸು ಸಂಗ್ರಾಮೇಷು ಸುರೈರ್ಹತಾಃ ।**
**ತೈಸ್ತೈರುಪಾಯೈರ್ಭೂಯಿಷ್ಠಾ ನಿಹತಾಯೇ ಪ್ರಧಾನತಃ ॥ ೧೦೪ ॥**

**ಕಿಂಚಿಚ್ಛಿಷ್ಟಾಸ್ತು ವೈ ಯೂಯಂ ಯುದ್ಧೇಷ್ವಂತ್ಯೇಷು ವೈ ಸ್ವಯಂ ।**
**ನೀತಿಂ ವೋ ಹಿ ವಿಧಾಸ್ಯಾಮಿ ಕಾಲಃ ಕಶ್ಚಿತ್ಪ್ರತೀಕ್ಷ್ಯತಾಂ ॥ ೧೦೫ ॥**

---

೧೦೨. ತರುವಾಯ ಶುಕ್ರಾಚಾರ್ಯನು ಜಯಶೀಲರಾಗಿ ನಿಂತಿರುವ ದೇವತೆಗಳನ್ನೂ ನೋಡಿ ಚಿಂತಿಸಿದನು. ಅದರಿಂದ ದೇವತೆಗಳಿಗೆ ಆಲೋಚನೆ ಯುಂಟಾಯಿತು. ಆಗ ಶುಕ್ರನು ಪೂರ್ವವೃತ್ತಮನನ್ನು ಸ್ಮರಿಸಿ ದೇವತೆಗಳಿಗೆ ಇಂತೆಂದು ಹೇಳಿದನು.

೧೦೩. ಪೂರ್ವದಲ್ಲಿ ಶ್ರೀಹರಿಯು ವಾಮನಾವತಾರವನ್ನು ಮಾಡಿ ಮೂರು ಹೆಜ್ಜೆಗಳಿಂದ ಮೂರು ಲೋಕಗಳನ್ನು ಆಕ್ರಮಿಸಿ, ಬಲಿಯನ್ನು ಬಂಧಿಸಿ, ಜಂಭಾಸುರ ನನ್ನೂ ಮತ್ತು ವಿರೋಚನಾಸುರರನ್ನೂ ಸಂಹರಿಸಿದನು.

೧೦೪. ಮಹಾಭಯಂಕರಗಳಾದ ದ್ವಾದಶ ಮಹಾಸಂಗ್ರಾಮಗಳಲ್ಲಿ ಅಸುರರು ದೇವತೆಗಳಿಂದ ಹತರಾದರು. ದೇವತೆಗಳು ಅನೇಕ ಯುಕ್ತಿಗಳಿಂದ ಮುಖ್ಯರಾದ ರಾಕ್ಷಸರನ್ನು ಬಹಳವಾಗಿ ಸಂಹರಿಸಿದರು.

೧೦೫. ಅನಂತರ ಎಲೈ ಅಸುರವರ್ಯರೇ, ಅಂತ್ಯಯುದ್ಧದಲ್ಲಿ ಹತರಾಗದೇ ಉಳಿದಿರುವ ನಿಮ್ಮಗಳ ಸುಖಕ್ಕಾಗಿ ಯುಕ್ತಿಯನ್ನು ಯೋಚಿಸುತ್ತಿರುವೆನು. ಯಾವ ಕೆಲಸಕ್ಕೂ ಕಾಲವು ಒದಗಬೇಕು. ಆದುದರಿಂದ ಸಮಯವನ್ನು ನಿರೀಕ್ಷಿಸಿಕೊಂಡಿರಿ ಎಂದು ಹೇಳಿದನು.

ಯಾಸ್ಯಾಮ್ಯಹಂ ಮಹಾದೇವಂ ಮಂತ್ರಾರ್ಥೇ ವಿಜಯಾಯ ವಃ ।
ಅಗ್ನಿಮಾಪ್ಯಾಯಯೇದ್ಧೋತಾ ಮಂತ್ರೈರೇವ ಬೃಹಸ್ಪತಿಃ ॥ ೧೦೬ ॥

ತತೋ ಯಾಸ್ಯಾಮ್ಯಹಂ ದೇವಂ ಮಂತ್ರಾರ್ಥೇ ನೀಲಲೋಹಿತಂ ।
ಯುಷ್ಮಾನನುಗ್ರಹಿಷ್ಯಾಮಿ ಪುನಃ ಪಶ್ಚಾದಿಹಾಗತಃ ॥ ೧೦೭ ॥

ಯೂಯಂ ತಪಶ್ಚರಧ್ವಂ ವೈ ಸಂವೃತಾ ವಲ್ಕಲೈರ್ವನೇ ।
ನ ವೈ ದೇವಾ ವಧಿಷ್ಯಂತಿ ಯಾವದಾಗಮನಂ ಮಮ ॥ ೧೦೮ ॥

ಅಪ್ರತೀಪಾಂಸ್ತತೋ ಮಂತ್ರಾನ್ ದೇವಾತ್ ಪ್ರಾಪ್ಯಮಹೇಶ್ವರಾತ್ ।
ಯೋತ್ಸ್ಯಾಮಹೇ ಪುನರ್ದೇವಾಂಸ್ತತಃ ಪ್ರಾಪ್ಸ್ಯಥ ವೈ ಜಯಂ ॥ ೧೦೯ ॥

---

೧೦೬ ನಾನು ನಿಮಗೆ ವಿಜಯವು ಲಭಿಸುವುದಕ್ಕಾಗಿ ಈಶ್ವರನ ಬಳಿಗೆ ಹೋಗಿ ಆಲೋಚನೆಯನ್ನು ಮಾಡುವೆನು. ಅಷ್ಟರೊಳಗೆ ಹೋತೃವಾದ ಬೃಹಸ್ಪತಿಯು ಮಂತ್ರಗಳಿಂದ ಅಗ್ನಿಯನ್ನು ವೃದ್ಧಿಗೊಳಿಸಲೆಂದು ಹೇಳಿದನು.

೧೦೭. ಆದುದರಿಂದ ಈಗ ನಾನು ಮಂತ್ರಾಲೋಚನೆಗಾಗಿ ಮಹಾದೇವನ ಬಳಿಗೆ ಹೋಗುವೆನು. ಅನಂತರ ನಾನು ಇಲ್ಲಿಗೆ ಬಂದು ನಿಮಗೆ ಜಯವಾಗುವಂತೆ ಅನುಗ್ರಹಿಸುವೆನೆಂದು ಹೇಳಿದನು.

೧೦೮. ನಾನು ಈಶ್ವರನ ಬಳಿಗೆ ಹೋಗಿ ಬರುವವರೆಗೂ ನೀವು ವನದಲ್ಲಿ ನಾರುವಸ್ತ್ರಧಾರಿಗಳಾಗಿ ತಪಸ್ಸನ್ನು ಮಾಡಿರಿ. ತಪಸ್ಸನ್ನು ಮಾಡುತ್ತಿರುವ ನಿಮ್ಮನ್ನು ದೇವತೆಗಳು ಪೀಡಿಸುವುದಿಲ್ಲವೆಂದನು.

೧೦೯. ನಾನು ಮಹಾದೇವನ ಬಳಿಗೆ ಹೋಗಿ ಸ್ವಾಮಿಯಾದ ಪರಮೇಶ್ವರನಿಂದ ಅಮೂಲ್ಯಗಳಾದ ಮಂತ್ರಗಳನ್ನು ಪಡೆದುಬರುವೆನು ಪುನಃ ದೇವತೆಗಳ ಸಂಗಡ ಯುದ್ಧವನ್ನು ಮಾಡಿ ಜಯವನ್ನು ಪಡೆಯೋಣವೆಂದನು.

ತತಸ್ತೇ ಕೃತಸಂವಾದಾ ದೇವಾನೂಚುಸ್ತತೋಽಸುರಾಃ ।
ನ್ಯಸ್ತವಾದಾ ವಯಂ ಸರ್ವೇ ಲೋಕಾನ್ ಯೂಯಂ ಕ್ರಮಂತು ವೈ ॥

ವಯಂ ತಪಶ್ಚರಿಷ್ಯಾಮಃ ಸಂವೃತ್ತಾ ವಲ್ಕನೈರ್ವನೇ ।
ಪ್ರಹ್ಲಾದಸ್ಯ ವಚಃ ಶ್ರುತ್ವಾ ಸತ್ಯವ್ಯಾಹರಣಂ ತು ತತ್ ॥ ೧೧೧ ॥

ತತೋ ದೇವಾ ನಿವೃತ್ತಾ ವೈ ವಿಜ್ವರಾ ಮುದಿತಾಶ್ಚ ಹ ।
ನ್ಯಸ್ತಶಸ್ತ್ರೇಷು ದೈತ್ಯೇಷು ಸ್ವಾನ್ ವೈ ಜಗ್ಮುರ್ಯಥಾಗತಾನ್ ॥ ೧೧೨ ॥

ತತಸ್ತಾನಬ್ರವೀತ್ಕಾವ್ಯಂ ಕಂಚಿತ್ಕಾಲಮುಪಾಸ್ಯತಾಂ ।
ನಿರುತ್ಸುಕೈಸ್ತಪೋಯುಕ್ತೈಃ ಕಾಲಂ ಕಾರ್ಯಾರ್ಥಸಾಧಕೈಃ ॥
ಪಿತುರ್ಮಮಾಶ್ರಮಸ್ಥಾ ವೈ ಸರ್ವೇ ದೇವಾಃ ಸವಾಸವಾಃ ॥ ೧೧೩ ॥

---

೧೧೦. ಅನಂತರ ಅಸುರರು ದೇವತೆಗಳ ಸಂಗಡ ಸಂಧಿಯನ್ನು ಮಾಡಿಕೊಂಡು, ಓ ದೇವತೆಗಳಿರಾ! ಇನ್ನು ಮೇಲೆ ನಾವು ನಿಮ್ಮಸಂಗಡ ಜಗಳವಾಡುವುದಿಲ್ಲ. ನೀವೇ ಲೋಕಗಳನ್ನು ಆಳಬಹುದೆಂದು ಹೇಳಿದರು.

೧೧೧. ಮತ್ತು ನಾವು ಪ್ರಹ್ಲಾದರಾಯನ ಮಾತಿನಂತೆ ಜಟಾವಲ್ಕಲಧಾರಿಗಳಾಗಿ ವನದಲ್ಲಿ ತಪಸ್ಸನ್ನು ಮಾಡುತ್ತೇವೆ. ಇದನ್ನು ನೀವು ಸತ್ಯವೆಂದು ಭಾವಿಸಿರಿ ಎಂದು ಹೇಳಿದರು.

೧೧೨. ಅನಂತರ ಆ ಮಾತುಗಳನ್ನು ಕೇಳಿದ ದೇವತೆಗಳು ನಿರಾತಂಕರಾಗಿ ಸಂತೋಷದಿಂದ ಹಿಂದಕ್ಕೆ ಬಂದು ತಮ್ಮ ತಮ್ಮ ಸ್ಥಾನಗಳಿಗೆ ಹೋದರು. ಆಗ ದೈತ್ಯರೂ ಕೂಡ ಶಸ್ತ್ರತ್ಯಾಗಮಾಡಿ ತಮ್ಮ ಸ್ಥಾನಗಳಿಗೆ ಹೋದರು.

೧೧೩. ತರುವಾಯ ಶುಕ್ರನು ಅಸುರರನ್ನು ಕುರಿತು ಎಲೈ ಅಸುರವರ್ಯರೇ, ನೀವು ನಿಮ್ಮ ಕಾರ್ಯಸಾಧನೆಯಲ್ಲಿ ಉತ್ಸಾಹಶೂನ್ಯರಾಗಿದ್ದರೂ ನನಗಾಗಿ ತಪಸ್ಸನ್ನು ಮಾಡಿರಿ. ಕಾಲವನ್ನು ನಿರೀಕ್ಷಿಸಿಕೊಂಡಿರಿ. ಆಗ ಇಂದ್ರಾದಿ ದೇವತೆಗಳೆಲ್ಲರೂ ನಮ್ಮ ತಂದೆಗಳ ಆಶ್ರಮದಲ್ಲಿ ಸ್ವಸ್ಥರಾಗಿ ವಾಸಿಸುವರು.

**ಸ ಸಂದಿಶ್ಯಾಸುರಾನ್ ಕಾವ್ಯೋ ಮಹಾದೇವಂ ಪ್ರಪದ್ಯ ಚ ।**
**ಪ್ರಣಮ್ಯೈನಮುವಾಚಾಥ ಜಗತ್ಪ್ರಭವಮೀಶ್ವರಂ || ೧೧೪ ||**

**ಮಂತ್ರಾನಿಚ್ಛಾಮ್ಯಹಂ ದೇವ ಯೇ ನ ಸಂತಿ ಬೃಹಸ್ಪತೌ ।**
**ಪರಾಭವಾಯ ದೇವಾನಾಮಸುರೇಷ್ವಭಯಾವಹಾನ್ || ೧೧೫ ||**

**ಏವಮುಕ್ತೋಽಬ್ರವೀದ್ದೇವೋ ಮಂತ್ರಾನಿಚ್ಛಸಿ ವೈ ದ್ವಿಜ ।**
**ವ್ರತಂ ಚರಮಯೋದ್ದಿಷ್ಟಂ ಬ್ರಹ್ಮಚಾರೀ ಸಮಾಹಿತಃ || ೧೧೬ ||**

**ಪೂರ್ಣಂ ವರ್ಷಸಹಸ್ರಂ ವೈ ಕುಂಡಧೂಮಮವಾಕ್‌ಶಿರಾಃ ।**
**ಯದ್ಯುಪಾಸ್ಯಸಿ ಭದ್ರಂತೇ ಮತ್ತೋ ಮಂತ್ರಮವಾಪ್ಸ್ಯಸಿ || ೧೧೭ ||**

---

೧೧೪. ಶುಕ್ರಾಚಾರ್ಯನು ಅಸುರರಿಗೆ ಈ ರೀತಿಯಾಗಿ ಉಪದೇಶಮಾಡಿ ಈಶ್ವರನ ಬಳಿಗೆ ಹೋಗಿ ಅವನಿಗೆ ವಂದನೆಗಳನ್ನರ್ಪಿಸಿ ಪ್ರಾರ್ಥಿಸಿದನು.

೧೧೫. ಎಲೈ ಸ್ವಾಮಿಯಾದ ಪರಮೇಶ್ವರನೇ, ಯಾವ ಮಂತ್ರಗಳು ದೇವ ಗುರುವಾದ ಬೃಹಸ್ಪತಿಗೆ ತಿಳಿಯುವುದಿಲ್ಲವೋ ಅಂತಹ ಮಂತ್ರಗಳನ್ನು ದೇವತೆಗಳ ಪರಾಜಯಕ್ಕಾಗಿಯೂ, ಅಸುರರ ವಿಜಯಕ್ಕಾಗಿಯೂ ನನಗೆ ಉಪದೇಶಮಾಡ ಬೇಕೆಂದು ಶುಕ್ರನು ಬೇಡಿದನು.

೧೧೬. ಎಲೈ ವಿಪ್ರವರ್ಯನೇ, ನೀನು ಅಂತಹ ಉತ್ತಮವಾದ ಮಂತ್ರ ಗಳನ್ನು ಬೇಡುವನಾದರೆ ನಾನು ತಿಳಿಸುವ ಹಾಗೆ ಬ್ರಹ್ಮಚಾರಿಯೂ, ಸ್ಥಿರಮನಸ್ಕನೂ ಆಗಿ ನಾನು ಹೇಳುವ ವ್ರತವನ್ನಾಚರಿಸುವನಾಗು. ನಿನಗೆ ಸಿದಿ ಯಾಗುವುದು ಎಂದು ಹೇಳಿದನು.

೧೧೭. ಎಲೈ ಮುನಿಯೇ, ನೀನು ಒಂದುಸಹಸ್ರ ವರ್ಷಗಳವರೆಗೂ ಅಧೋಮುಖನಾಗಿ ಕೇವಲ ಧೂಮಪಾನ ಮಾಡಿಕೊಂಡು ಧ್ಯಾನ ತಪಸ್ಸುಗಳನ್ನು ಮಾಡಿದರೆ ಮಂತ್ರಸಿದಿ ಯಾಗುವುದು. ಆಗ ನಾನು ಮಂತ್ರವನ್ನು ಉಪದೇಶಮಾಡುವೆ ನೆಂದನು.

ತಥೋಕ್ತೋ ದೇವದೇವೇನ ಸ ಶಕ್ರಸ್ತು ಮಹಾತಪಾಃ ।
ಪಾದೌ ಸಂಸ್ಪೃಶ್ಯ ದೇವಸ್ಯ ಬಾಢಮಿತ್ಯಭ್ಯಭಾಷತ ॥ ೧೧೮ ॥

ವ್ರತಂ ಚಾರಮಹ್ಯಹಂ ಶೇಷಂ ಯಥೋದ್ದಿಷ್ಟೋಽಸ್ಮಿವೈಪ್ರಭೋ ।
ತತೋ ನಿಯುಕ್ತೋ ದೇವೇನ ಕುಂಡಧಾರೋಽಸ್ಯ ಧೂಮಕೃತ್ ॥ ೧೧೯ ॥

ಅಸುರಾಣಾಂ ಹಿತಾರ್ಥಾಯ ತಸ್ಮಿನ್ ಶುಕ್ರೇ ಗತೇ ತದಾ ।
ಮಂತ್ರಾರ್ಥಂ ತತ್ರ ವಸತಿ ಬ್ರಹ್ಮವರ್ಯೇ ಮಹೇಶ್ವರಃ ॥ ೧೨೦ ॥

ತದ್ಬುದ್ಧ್ವಾ ನಾತಿಪೂರ್ವಂತು ರಾಜ್ಯಂ ನ್ಯಸ್ತಂ ತದಾಸುರೈಃ ।
ತಸ್ಮಿಂಚ್ಛಿದ್ರೇ ತದಾಮರ್ಷಾ ದೇವಾಸ್ತಾನ್ ಸಮಭಿದ್ರವನ್ ॥
ನಿಶಿತಾತ್ತಾಯುಧಾಃ ಸರ್ವೇ ಬೃಹಸ್ಪತಿಪುರೋಗಮಾಃ ॥ ೧೨೧ ॥

೧೧೮. ಹೀಗೆ ಪರಮೇಶ್ವರನು ಹೇಳಲಾಗಿ ಮಹಾತಪಸ್ವಿಯಾದ ಶುಕ್ರಾಚಾರ್ಯನು ಈಶ್ವರನ ಪಾದಗಳಿಗಭಿವಂದಿಸಿ ಹಾಗೆಯೇ ಮಾಡುತ್ತೇನೆಂದು ಹೇಳಿದನು.

೧೧೯. ಓ ಪ್ರಭುವೇ, ನೀನು ಹೇಳುವ ಹಾಗೆಯೇ ಕುಂಡಧೂಮಪಾನವನ್ನು ಮಾಡಿಕೊಂಡು ತಪಸ್ಸನ್ನು ಮಾಡುವೆನೆಂದು ಹೇಳಿ, ಪ್ರಭುವಿನ ಆಜ್ಞೆಯನ್ನು ಸ್ವೀಕರಿಸಿ, ಈಶ್ವರೋಕ್ತಕ್ರಮವಾಗಿ ತಪಸ್ಸನ್ನು ಮಾಡಿದನು.

೧೨೦. ಹೀಗೆ ಶುಕ್ರಾಚಾರ್ಯನು ಅಸುರರ ಹಿತಕ್ಕಾಗಿ ತಪಸ್ಸಿಗೆ ಹೋಗಲಾಗಿ ಈಶ್ವರನೂ ಕೂಡ ಅವನಿಗೆ ಮಂತ್ರೋಪದೇಶವನ್ನು ಮಾಡುವುದಕ್ಕಾಗಿ ಅತ್ಯುತ್ತಮವಾದ ಬ್ರಹ್ಮಾಶ್ರಮದಲ್ಲಿ ವಾಸಿಸುತ್ತಿದ್ದನು.

೧೨೧. ಅನಂತರ ಇಂದ್ರಾದಿ ದೇವತೆಗಳು ಆ ಮರ್ಮವನ್ನರಿತು ಗುರುಗಳಿಗೆ ಇದನ್ನು ತಿಳಿಸಿ ಅವರ ಸಂಗಡ ಆ ವಿಪತ್ತುಗಳನ್ನು ಪರಿಹರಿಸಿಕೊಳ್ಳಲು ಹರಿತವಾದ ಆಯುಧಪಾಣಿಗಳಾಗಿ ಅಸುರರನ್ನು ಮುತ್ತಿದರು.

**ದೃಷ್ಟ್ವಾಸುರಗಣಾ ದೇವಾನ್ ಪ್ರಗೃಹೀತಾಯುತಾನ್ ಪುನಃ ।**
**ಉತ್ಪೇತುಃ ಸಹಸಾ ಸರ್ವೇ ಸಂತ್ರಸ್ತಾಸ್ತೇ ತತೋಽಭವನ್ ॥ ೧೨೨ ॥**

**ನ್ಯಸ್ತಶಸ್ತ್ರೇ ಜಯೇ ದತ್ತೇ ಆಚಾರ್ಯವ್ರತಮಾಸ್ಥಿತೇ ।**
**ಸಂತ್ಯಜ್ಯ ಸಮಯಂ ದೇವಸ್ತೇ ಸಪತ್ನಜಿಘಾಂಸವಃ ॥ ೧೨೩ ॥**

**ಅನಾಚಾರ್ಯಾಸ್ತು ಭದ್ರಂ ವೋ ವಿಶ್ವಸ್ತಾಸ್ತಪಸಿ ಸ್ಥಿತಾಃ ।**
**ಚೀರವಲ್ಕಾಜಿನಧರು ನಿಷ್ಕ್ರಿಯಾ ನಿಷ್ಪರಿಗ್ರಹಾಃ ॥ ೧೨೪ ॥**

**ರಣೇ ವಿಜೇತುಂ ದೇವಾನ್ ವೈ ನ ಶಕ್ಷ್ಯಾಮಃ ಕಥಂಚನ ।**
**ಅಶುದ್ಧೇನ ಪ್ರಪದ್ಯಾಮಃ ಶರಣಂ ಕಾವ್ಯಮಾತರಂ ॥ ೧೨೫ ॥**

---

೧೨೨. ಆಗ ಅಸುರರು ಆಯುಧಪಾಣಿಗಳಾದ ದೇವತೆಗಳನ್ನು ನೋಡಿ ಅತ್ಯಂತ ಭೀತರಾಗಿ ಶೀಘ್ರವಾಗಿ ಓಡಿಹೋದರು.

೧೨೩. ಅಸುರರು ಶಸ್ತ್ರತ್ಯಾಗವಾಡಿ ಜಯವನ್ನು ಬಿಟ್ಟು ಗುರುಗಳು ಹೇಳಿದಂತೆ ವ್ರತವನ್ನು ಮಾಡಲಾಗಿ ದೇವತೆಗಳು ಆ ರಹಸ್ಯವನ್ನು ತಿಳಿದು ಶತ್ರುಸಂಹಾರಕ್ಕಾಗಿ ಯತ್ನಿಸಿದರು.

೧೨೪. ಆಚಾರರಹಿತರೂ, ಕ್ರಿಯಾಭ್ರಷ್ಟರೂ, ಉಪದೇಶರಹಿತರೂ, ಚೀರವಲ್ಕಲ ಕೃಷ್ಣಾಜಿನಧಾರಿಗಳೂ, ವಂಚಕರೂ ಆದ ನಮಗೆ ಈ ಕಪಟತಪಸ್ಸಿನಿಂದ ಒಳ್ಳೆಯದಾಗುವುದಿಲ್ಲವೆಂದು ಯೋಚಿಸಿ ಚಿಂತಾಕ್ರಾಂತರಾದರು.

೧೨೫. ಆಗ ಅಸುರರು ನಾವು ದೇವತೆಗಳನ್ನು ಯುದ್ಧದಲ್ಲಿ ಜಯಿಸಲು ಎಂದಿಗೂ ನಮಗೆ ಸಾಧ್ಯವಿಲ್ಲ. ಏಕೆಂದರೆ ನಾವು ಅಶುದ್ಧರಾಗಿರುವೆವು. ಆದುದರಿಂದ ತಪಸ್ಸು ನಮಗೆ ಸಾಧಕವಾಗಲಾರದು. ನಮ್ಮ ಗುರುಗಳ ತಾಯಿಯ ಬಳಿಗೆ ಹೋಗಿ ಶರಣಾಗತರಾಗೋಣವೆಂದು ಹೇಳಿದರು.

ಜ್ಞಾಪಯಾಮುಸ್ತುಭ್ಯಮಿದಂ ಯಾವದಾಗಮನಂ ಗುರೋಃ ।
ವಿನಿವೃತ್ತೇ ತತಃ ಕಾವ್ಯೇ ಯೋತ್ಸ್ಯಾಮೋ ಯುಧಿತಾನ್ ಸುರಾನ್॥ ೧೨೬ ॥

ಏವಮುಕ್ತ್ವಾ ಸುರಾನ್ ಯೋಗ್ಯಂ ಶರಣಂ ಕಾವ್ಯಮಾತರಂ ।
ಪ್ರಾಪದ್ಯಂತ ತತೋ ಭೀತಾಸ್ತದಾ ಚೈವ ತದಾಽಭಯಂ ॥ ೧೨೭ ॥

ದತ್ತಂತೇಷಾಂತು ಭೀತಾನಾಂ ದೈತ್ಯಾನಾಮಭಯಾರ್ಥಿನಾಂ ।
ನ ಭೇತವ್ಯಂ ನ ಭೇತವ್ಯಂ ಭಯಂತ್ಯಜತ ದಾನವಾಃ ॥ ೧೨೮ ॥

ಮತ್ಸನ್ನಿಧೌ ವರ್ತತಾಂ ವೋ ನ ಭೀರ್ಭವಿತುಮರ್ಹತಿ ।
ಭಯಾಚ್ಛಾಪ್ಯಭಿಪನ್ನಾಂಸ್ತಾನ್ ದೃಷ್ಟ್ವಾ ದೇವಾಸುರಾಂಸ್ತದಾ ॥ ೧೨೯ ॥

---

೧೨೬. ಅನಂತರ ಅಸುರರು ಗುರುಗಳ ತಾಯಿಯ ಬಳಿಗೆ ಹೋಗಿ ಎಲೌ ತಾಯಿಯೇ, ನಮ್ಮ ಗುರುಗಳು ಹೀಗೆ ಹೇಳಿದ್ದರು. ಅವರು ಬಂದನಂತರ ನಾವು ಯುದ್ಧವನ್ನು ಮಾಡಿ ದೇವತೆಗಳನ್ನು ಜಯಿಸುವೆವು. ಅಲ್ಲಿಯವರೆಗೂ ನೀವೇ ನಮಗೆ ದಿಕ್ಕು ನಮ್ಮನ್ನು ರಕ್ಷಿಸಬೇಕೆಂದು ಬೇಡಿಕೊಂಡರು.

೧೨೭. ಅಸುರರು ತಮ್ಮ ಗುರುಗಳ ಮಾತೆಗೆ ಹೀಗೆ ಹೇಳಿ ಅತ್ಯಂತ ಭೀತರಾಗಿ, ಆಕೆಯನ್ನು ಪ್ರಾರ್ಥಿಸಲು ಆಕೆಯು ಅಭಯಪ್ರದಾನಮಾಡಿದಳು.

೧೨೮. ಅನಂತರ ಶುಕ್ರಾಚಾರ್ಯನ ಮಾತೆಯು ಅಭಯಾರ್ಥಿಗಳಾದ ಅಸುರರಿಗೆ ಅಭಯದಾನವನ್ನು ಮಾಡಿದಳು. ಎಲೈ ಅಸುರವರ್ಯರೇ ನೀವು ಹೆದರಬೇಡಿ ಭಯವನ್ನು ಬಿಡಿ ಎಂದು ಸಮಾಧಾನಮಾಡಿದಳು.

೧೨೯. ಓ ಅಸುರರೇ, ನನ್ನ ಬಳಿಯಲ್ಲಿ ವಾಸಿಸುವ ನಿಮಗೆ ಎಂದಿಗೂ ಭಯವು ಉಂಟಾಗದು. ಎಂದು ಸಮಾಧಾನಮಾಡಿದಳು. ಹೀಗೆ ನಿರ್ಭೀತರಾಗಿರುವ ಅಸುರರನ್ನು ನೋಡಿ ದೇವತೆಗಳು ಯೋಚಿಸಿದರು.

**ಅಭಿಜಗ್ಮುಃ ಪ್ರಸಹ್ಯೈತಾನವಿಚಾರ್ಯ ಬಲಾಬಲಂ |**
**ತಾಂಸ್ತ್ರಸ್ತಾನ್ ವಧ್ಯಮಾನಾಂಶ್ಚ ದೇವೈರ್ದೃಷ್ಟ್ವಾಸುರಾಂಸ್ತದಾ || ೧೩೦ ||**

**ದೇವೀ ಕ್ರುದ್ಧಾಬ್ರವೀದೇನಾನನಿಂದ್ರತ್ವಂ ಕರೋಮ್ಯಹಂ |**
**ಸಂಸ್ತಭ್ಯ ಶೀಘ್ರಂ ಸಂರಭಾದಿಂದ್ರಂ ಸಾಽಭ್ಯಚರತ್ತತಃ || ೧೩೧ ||**

**ತತಃ ಸಂಸ್ತಂಭಿತಂ ದೃಷ್ಟ್ವಾ ಶಕ್ರಂ ದೇವಾಸ್ತು ಯೂಪಪತ್ |**
**ವ್ಯದ್ರವಂತ ತತೋ ಭೀತಾ ದೃಷ್ಟ್ವಾ ಶಕ್ರಂ ವಶೀಕೃತಂ || ೧೩೨ ||**

**ಗತೇಷು ಸುರಸಂಘೇಷು ವಿಷ್ಣುರಿಂದ್ರಮಭಾಷತ |**
**ಮಾಂ ತ್ವಂ ಪ್ರವಿಶ ಭದ್ರಂತೇ ನೇಷ್ಯಾಮಿ ತ್ವಾಂ ಸುರೇಶ್ವರ || ೧೩೩ ||**

೧೩೦. ಆಗ ದೇವತೆಗಳು ಬಲಾಬಲಗಳನ್ನು ವಿಚಾರಿಸದೇ ಬಲಾತ್ಕಾರದಿಂದ ಅಸುರರ ಮೇಲೆ ಬಿದ್ದು ಅಸುರರನ್ನು ಸಂಹರಿಸಲು ಯತ್ನವಾಡಿದರು. ಹೀಗೆ ಸುರರಿಂದ ಪೀಡಿತರಾದ ಅಸುರರನ್ನು ನೋಡಿ ಕುಪಿತಳಾದ ಶುಕ್ರನ ತಾಯಿಯು ಹೀಗೆ ಆಲೋಚನೆಮಾಡಿದಳು.

೧೩೧. ಅನಂತರ ಶುಕ್ರನ ಮಾತೆಯು ದೇವತೆಗಳ ಮೇಲೆ ಸಿಟ್ಟಾಗಿ ಲೋಕದಲ್ಲಿ ಇಂದ್ರನೇ ಇಲ್ಲದ ಹಾಗೆ ಮಾಡುತ್ತೇನೆಂದು ದೇವತೆಗಳಿಗೆ ಹೇಳಿ ರೋಷಾವೇಶದಿಂದ ತನ್ನ ಶಕ್ತ್ಯನುಗುಣವಾಗಿ ಇಂದ್ರನನ್ನು ಕಟ್ಟಿಹಾಕಿದಳು.

೧೩೨. ಅನಂತರ ದೇವತೆಗಳು ಯೂಪಸ್ತಂಭಕ್ಕೆ ಕಟ್ಟಿರುವ ಪಶುವಿನಂತೆ ಕಟ್ಟಿಗೆ ಸಿಕ್ಕುಬಿದ್ದ ಇಂದ್ರನನ್ನು ನೋಡಿ ಭೀತರಾಗಿ ಓಡಿಹೋದರು.

೧೩೩. ಹೀಗೆ ದೇವತೆಗಳೆಲ್ಲರೂ ಹೆದರಿಕೊಂಡು ಓಡಿಹೋಗಲಾಗಿ ಶ್ರೀವಿಷ್ಣುವು ಇಂದ್ರನಿಗೆ ಇಂತೆಂದನು—ಓ ದೇವೇಂದ್ರನೇ! ನೀನು ಭಯದಿಂದ ಪಲಾಯನ ಮಾಡಬಾರದು ಅದು ಶೂರರ ಲಕ್ಷಣವಲ್ಲ. ನಿನಗೆ ನಾನು ಸಹಾಯವನ್ನೇ ಮಾಡುತ್ತೇನೆಂದು ಸಮಾಧಾನಮಾಡಿದನು.

**ಏವಮುಕ್ತಸ್ತತೋ ವಿಷ್ಣುಂ ಪ್ರವೇಶ ಪುರಂದರಃ ।**
**ವಿಷ್ಣುನಾ ರಕ್ಷಿತಂ ದೃಷ್ಟ್ವಾ ದೇವೀ ಕ್ರುದ್ಧಾ ವಚೋಽವದತ್ ॥ ೧೩೪ ॥**

**ಏಷಾ ತ್ವಾಂ ವಿಷ್ಣುನಾ ಸಾರ್ಧಂ ದಹಾಮಿ ಮಘವಾನಿವ ।**
**ಮಿಷತಾಂ ಸರ್ವಭೂತಾನಾಂ ದೃಶ್ಯತಾಂ ಮೇ ತಪೋಬಲಂ ॥ ೧೩೫ ॥**

**ತಯಾಭಿಭೂತೌ ತೌ ದೇವಾವಿಂದ್ರವಿಷ್ಣೂ ಜಜಲ್ಪತುಃ ।**
**ಕಥಂ ಮುಚ್ಯೇವ ಸಹಿತೌ ವಿಷ್ಣುರಿಂದ್ರಮಭಾಷತ ॥ ೧೩೬ ॥**

**ಇಂದ್ರೋಽಬ್ರವೀಜ್ಜಹಿ ಹ್ಯೇನಾಂ ಯಾವನ್ನೌ ನ ದಹೇದ್ವಿಭೋ ।**
**ವಿಶೇಷೇಣಾಭಿಭೂತೋಽಹಮತಸ್ತ್ವಂ ಚ ಹಿ ಮಾಚಿರಂ ॥ ೧೩೭ ॥**

೧೩೪. ಹೀಗೆ ಶ್ರೀಹರಿಯು ಹೇಳಲು ಇಂದ್ರನು ಅವನ ಪರನಾದನು. ಅನಂತರ ವಿಷ್ಣುವು ಇಂದ್ರನನ್ನು ರಕ್ಷಿಸಿದನೆಂದು ತಿಳಿದ ಕೂಡಲೇ ದೇವಿಯು ಕೋಪಗೊಂಡು ಹೀಗೆ ಹೇಳಿದಳು.

೧೩೫. ಅನಂತರ ಶುಕ್ರನ ತಾಯಿಯು ಸರ್ವಪ್ರಾಣಿಗಳೂ ನೋಡುತ್ತಿರುವಾಗಲೇ ಎಲ್ಲರಿಗೂ ತಿಳಿಯುವ ಹಾಗೆ ವಿಷ್ಣುವಿನ ಸಂಗಡ ಕೂಡಿರುವ ಇಂದ್ರನನ್ನು ಅಂದರೆ ಇಬ್ಬರನ್ನೂ ನನ್ನ ತಪೋರೂಪಾಗ್ನಿಯಿಂದ ದಹಿಸಿಬಿಡುವೆನು ನೋಡಿರೆಂದು ಸಿಂಹದಂತೆ ಘರ್ಜಿಸಿದಳು.

೧೩೬. ಹೀಗೆ ಶುಕ್ರನ ಮಾತೆಯಿಂದ ಬದ್ಧರಾದ ಇಂದ್ರೋಪೇಂದ್ರರು ಪರಸ್ಪರವಾಗಿ ಮಾತನಾಡಿದರು. ನಾವು ಹೇಗೆ ಮುಕ್ತರಾಗುವೆವು ಎಂದು ಯೋಚಿಸಲಾಗಿ ವಿಷ್ಣುವು ಇಂದ್ರನ ಸಂಗಡ ಮಾತನಾಡಿದನು.

೧೩೭. ಆಗ ಇಂದ್ರನು ಹರಿಯನ್ನು ನೋಡಿ ಓ ಪ್ರಭುವೇ! ಈಕೆಯು ನಮ್ಮನ್ನು ದಹಿಸುವುದಕ್ಕೆ ಮುಂಚಿತವಾಗಿಯೇ ಇವಳನ್ನು ಸಂಹಾರಮಾಡು ಇವಳಿಂದ ನನಗೆ ಬಹಳ ಉಪದ್ರವವು ಉಂಟಾಗಿರುವುದು. ನನ್ನಿಂದ ನಿನಗೂ ಹಿಂಸೆಯಾಗಿದೆ. ಕಾಲವಿಳಂಬವನ್ನು ಮಾಡಬೇಡವೆಂದನು.

ತತಃ ಸಮೀಕ್ಷ್ಯ ತಾಂ ವಿಷ್ಣುಃ ಸ್ತ್ರೀವಧಂ ಕರ್ತುಮಾಸ್ಥಿತಃ ।
ಅಭಿಧ್ಯಾಯ ತತಶ್ಚಕ್ರಮಾಪನ್ನಃ ಸತ್ವರಂ ಪ್ರಭುಃ ॥ ೧೩೮ ॥

ತಸ್ಯಾಃ ಸಾ ತ್ವರಮಾಣಾಯಾಃ ಶೀಘ್ರಕಾರೀ ಸುದಾರಿಹಾ ।
ಸ್ತ್ರಿಯಾ ವಿಷ್ಣುಸ್ತತೋ ದೇವ್ಯಾ ಕ್ರೂರಂ ಬುದ್ಧ್ವಾ ಚಿಕೀರ್ಷಿತಂ ॥
ಕ್ರುದ್ಧಸ್ತದಸ್ತ್ರಮಾವಿಧ್ಯ ಶಿರಶ್ಚಿಚ್ಛೇದ ಮಾಧವಃ ॥ ೧೩೯ ॥

ತಂ ದೃಷ್ಟ್ವಾ ಸ್ತ್ರೀವಿಧಂ ಘೋರಂ ಚುಕೋಪಭೃಗುರೀಶ್ವರಃ ।
ತತೋಽಭಿಶಸ್ತೋ ಭೃಗುಣಾ ವಿಷ್ಣುರ್ಭಾರ್ಯಾವಧೇ ತದಾ ॥ ೧೪೦ ॥

ಯಸ್ಮಾತ್ತೇ ಜಾನತಾ ಧರ್ಮಾನವಧ್ಯಾ ಸ್ತ್ರೀ ನಿಷೂದಿತಾ ।
ತಸ್ಮಾತ್ತ್ವಂ ಸಪ್ತಕೃತ್ವೋ ವೈ ಮಾನುಷೇಷು ಪ್ರಪತ್ಸ್ಯಸಿ ॥ ೧೪೧ ॥

೧೩೮. ಅನಂತರ ಶ್ರೀಹರಿಯು ಸ್ತ್ರೀವಧೆಯನ್ನು ಮಾಡಬೇಕೇ ? (ಕಲ್ಲಾ) ಎಂದು ಯೋಚಿಸಿ, ತನ್ನ ಚಕ್ರಾಯುಧವನ್ನು ಧ್ಯಾನಿಸಿದನು. ತತ್‌ಕ್ಷಣವೇ ಚಕ್ರಾಯುಧವು ಶ್ರೀ ವಿಷ್ಣುವಿನ ವಶವಾಯಿತು.

೧೩೯. ಆಕೆಯು ಸ್ವಕಾರ್ಯವನ್ನು ಕೂಡಲೇ ಮಾಡಬೇಕೆಂದು ಯೋಚಿಸುತ್ತಿರಲಾಗಿ ಶೀಘ್ರವಾಗಿ ಕಾರ್ಯಕಾರಿಯೂ, ಶತ್ರುನಾಶಕನೂ ಆದ ಮಾಧವನು ಆಕೆಯು ಕ್ರೂರಕರ್ಮಿಯೆಂದು ತಿಳಿದು ಕೋಪಗೊಂಡು ಚಕ್ರಾಯುಧದಿಂದ ಅವಳ ಶಿರಸ್ಸನ್ನು ಛೇದಿಸಿದನು.

೧೪೦. ಆಗ ಭೃಗುಮಹರ್ಷಿಯು ಶ್ರೀಹರಿಯು ಸ್ತ್ರೀಹತ್ಯಮಾಡಿದನೆಂದು ಕುಪಿತನಾಗಿ ತನ್ನ ಭಾರ್ಯೆಯನ್ನು ಸಂಹರಿಸಿದ ಶ್ರೀಮಹಾವಿಷ್ಣುವಿಗೆ ಶಾಪವನ್ನು ಕೊಟ್ಟನು.

೧೪೧. ಎಲೈ ಶ್ರೀಹರಿಯೇ ಸ್ತ್ರೀಹತ್ಯವನ್ನು ಮಾಡಬಾರದೆಂಬ ಧರ್ಮವನ್ನು ನೀನು ತಿಳಿದಿದ್ದರೂ ಕೂಡ ಸ್ತ್ರೀಹನನವನ್ನು ನೀನು ಮಾಡಿರುತ್ತೀಯೇ ಆದುದರಿಂದ ನಿನಗೆ ಏಳುಸಲ ಮನುಷ್ಯ ಜನ್ಮವು ಬರಲೆಂದು ಶಾಪಕೊಟ್ಟನು.

**ತತಸ್ತೇನಾಭಿಶಾಪೇನ ನಷ್ಟೇ ಧರ್ಮೇ ಪುನಃ ಪುನಃ ।**
**ಲೋಕೇ ಸರ್ವಹಿತಾರ್ಥಾಯ ಜಾಯತೇ ಮಾನುಷೇಷ್ವಿಹ || ೧೪೨ ||**

**ಅನುವ್ಯಾಹೃತ್ಯ ವಿಷ್ಣುಂ ಸ ತದಾದಾಯ ಶಿರಃ ಸ್ವಯಃ ।**
**ಸಮಾನೀಯ ತತಃ ಕಾಯೇ ಅಪೋ ಗೃಹ್ಯೇದಮಬ್ರವೀತ್ || ೧೪೩ ||**

**ಏಷ ತ್ವಾಂ ವಿಷ್ಣುನಾ ಸತ್ಯೇ ಹತಾಂ ಸಂಜೀವ ಯಾಮ್ಯಹಂ ।**
**ಯದಿ ಕೃತ್ಸ್ನೋ ಮಯಾ ಧರ್ಮಶ್ಚರಿತೋ ಜ್ಞಾಯತೇಪಿ ವಾ ।**
**ತೇನ ಸತ್ಯೇನ ಜೀವಸ್ವ ಯದಿ ಸತ್ಯಂ ಬ್ರವೀಮ್ಯಹಂ || ೧೪೪ ||**

**ಸತ್ಯಾಭಿವ್ಯಾಹೃತಾ ತಸ್ಯ ದೇವೀ ಸಂಜೀವಿತಾ ತದಾ ।**
**ತದಾ ತಾಂ ಪ್ರೋಕ್ಷ್ಯ ಶೀತಾಭಿರದ್ಭಿರ್ಜೀವೇತಿ ಸೋಽಬ್ರವೀತ್ || ೧೪೫ ||**

೧೪೨. ಹೀಗೆ ಭೃಗುಮುನಿಯ ಶಾಪದಿಂದ ಧರ್ಮವು ನಷ್ಟವಾದಾಗಲೆಲ್ಲಾ ಲೋಕದಲ್ಲಿ ಧರ್ಮಗಳನ್ನು ಸ್ಥಾಪಿಸುವುದಕ್ಕಾಗಿಯೂ, ಲೋಕಕಲ್ಯಾಣಕ್ಕಾಗಿಯೂ ಶ್ರೀಹರಿಯು ಪುನಃ ಪುನಃ ಮನುಷ್ಯರೂಪಿಯಾಗಿ ಅವತರಿಸುವನು.

೧೪೩. ಅನಂತರ ಆ ಭೃಗುಮುನಿಯು ಮೇಲೆ ಹೇಳಿದ ಕ್ರಮದಲ್ಲಿ ಶ್ರೀಹರಿಗೆ ಶಾಪವನ್ನು ಕೊಟ್ಟು ತಾನೇ ಸ್ವಂತವಾಗಿ ಆಕೆಯ ಶಿರಸ್ಸನ್ನು ತಂದು ರುಂಡಕ್ಕೆ ಸೇರಿಸಿ ಜಲವನ್ನು ಪ್ರೋಕ್ಷಿಸಿ ಹೀಗೆ ಹೇಳಿದನು.

೧೪೪. ಎಲೌ ಪ್ರಿಯಳಾದ ಸತ್ಯೆಯೇ ವಿಷ್ಣುವಿನಿಂದ ಹತಳಾದ ನಿನ್ನನ್ನು ನಾನು ಬದುಕಿಸುವೆನು. ನಾನು ಮಾಡಿರುವ ಸಂಪೂರ್ಣವಾದ ಧರ್ಮಗಳು ಸತ್ಯವಾಗಿದ್ದರೆ ಆ ಧರ್ಮದಿಂದ ನೀನು ಜೀವವಂತಳಾಗು. ಇದು ಸತ್ಯವಾದ ಮಾತು ಎಂದು ಹೇಳಿದನು.

೧೪೫. ಅನಂತರ ಮಹಾನುಭಾವನಾದ ಆ ಭೃಗುಮುನಿಯ ಸತ್ಯವಾಣಿಯಿಂದ ಆತನ ಪತ್ನಿಯು ಜೀವವಂತಳಾದಳು. ಹೇಗೆಂದರೆ ಆಗ ಅವನು ಶೀತಲವಾದ ಉದಕದಿಂದ ಪ್ರೋಕ್ಷಣೆಮಾಡಿ ಎಲೌ ಪ್ರಿಯಳೇ, ನೀನು ಜೀವವಂತಳಾಗೆಂದು ಹೇಳಲು ಆಕೆಯು ಅದರಂತೆ ಬದುಕಿದಳು.

ತತಸ್ತಾಂ ಸರ್ವಭೂತಾನಿ ದೃಷ್ಟ್ವಾ ಸುಪ್ತೋತ್ಥಿತಾಮಿವ ।
ಸಾಧು ಸಾಧ್ವಿತ್ಯದೃಶ್ಯಾನಾಂ ವಾಚಸ್ತಾಃ ಸಸ್ವರುರ್ದಿಶಃ ॥ ೧೪೬ ॥

ದೃಷ್ಟ್ವಾ ಸಂಜೀವಿತಾಮೇವಂ ದೇವೀಂ ತಾಂ ಭೃಗುಣಾ ತದಾ ।
ಮಿಷತಾಂ ಸರ್ವಭೂತಾನಾಂ ತದದ್ಭುತಮಿವಾಭವತ್ ॥ ೧೪೭ ॥

ಅಸಂಭ್ರಾಂತೇನ ಭೃಗುಣಾ ಪತ್ನೀಂ ಸಂಜೀವಿತಾಂ ತತಃ ।
ದೃಷ್ಟ್ವಾ ಶಕ್ರೋ ನ ಲೇಭೇಽಥ ಶರ್ಮ ಕಾವ್ಯಭಯಾತ್ತತಃ ॥ ೧೪೮ ॥

ಪ್ರಜಾಗರೇ ತತಶ್ಚೇಂದ್ರೋ ಜಯಂತೀಮಾತ್ಮನಃ ಸುತಾಂ ।
ಪ್ರೋವಾಚ ಮತಿಮಾನ್ ವಾಕ್ಯಂ ಸ್ವಾಂ ಕನ್ಯಾಂ ಪಾಕಶಾಸನಃ ॥ ೧೪೯ ॥

---

೧೪೬. ಆಗ ಸಮಸ್ತ ಪ್ರಾಣಿಗಳೂ ಮಲಗಿ ನಿದ್ರಿಸಿ ಎದ್ದವಳಂತೆ ಯಾವ ವಿಕಾರವಿಲ್ಲದೇ ಜೀವಂತಳಾದ ಭೃಗುಮುನಿಯ ಪತ್ನಿಯನ್ನು ನೋಡಿ, ಅವನ ಸತ್ಯಧರ್ಮಗಳಿಗೆ ಮೆಚ್ಚಿದರು. ಭಲರೇ! ಭಲರೇ! ಶಹಬಾಸ್! ಎಂಬುದಾಗಿ ಆಕಾಶವಾಣಿಯಾಯಿತು. ಅದು ಸಮಸ್ತ ದಿಕ್ಕುಗಳನ್ನೂ ವ್ಯಾಪಿಸಿತು.

೧೪೭. ಹೀಗೆ ಸಮಸ್ತ ಪ್ರಾಣಿಗಳೂ ಪ್ರತ್ಯಕ್ಷವಾಗಿ ನೋಡುತ್ತಿರುವಾಗಲೇ ಈ ಕಾರ್ಯವು ನಡೆಯಿತು. ಭೃಗುಮುನಿಯ ಸತ್ಯದಿಂದ ಅವನ ಪತ್ನಿಯು ಬದುಕಿದ ಕೃತ್ಯವನ್ನು ನೋಡಿ ಸರ್ವರಿಗೂ ಆಶ್ಚರ್ಯವುಂಟಾಯಿತು.

೧೪೮. ಅನಂತರ ಭೃಗುಮುನಿಯು ಭ್ರಾಂತನಾಗದೇ ಜಾಗರೂಕನಾಗಿ ತನ್ನ ಪ್ರಿಯಳನ್ನು ಬದುಕಿಸಿದನು. ಅನಂತರ ಇಂದ್ರನು ಈ ವಿಷಯಗಳನ್ನರಿತು, ಶುಕ್ರಾಚಾರ್ಯನಿಂದ ಭಯವನ್ನು ಹೊಂದಿ ಸುಖಿಯಾಗದೇ ದುಃಖಿಯಾದನು.

೧೪೯. ಅನಂತರ ಅತ್ಯಂತ ಜ್ಞಾನಿಯೂ ಪಾಕಶಾಸಕನೂ ಆದ ಇಂದ್ರನು ನಿದ್ರೆ, ಆಹಾರ ಇವು ಇಲ್ಲದೇ ಚಿಂತಿಸುತ್ತಾ, ತನ್ನ ಕುಮಾರಿಯಾದ ಜಯಂತಿಗೆ ಬುದ್ಧಿವಂತಿಕೆಯಿಂದ ಮುಂದೆ ತಿಳಿಸುವಂತೆ ಹೇಳಿದನು.

ಏಷ ಕಾವ್ಯೋ ಹ್ಯನಿಂದ್ರಾಯ ಚರತೇ ದಾರುಣಂ ತಪಃ ।
ತೇನಾಹಂ ವ್ಯಾಕುಲಃ ಪುತ್ರೀ ಕೃತೋ ಧೃತಿಮತಾ ಧೃಢಂ ॥ ೧೫೦ ॥

ಗಚ್ಛ ಸಂಭಾವಯಸ್ವೈನಂ ಶ್ರಮಾಪನಯನೈಃ ಶುಭೈಃ ।
ತೈಸ್ತೈರ್ಮನೋಽನುಕೂಲೈಶ್ಚ ಹ್ಯುಪಚಾರೈರತಂದ್ರಿತಾ ॥ ೧೫೧ ॥

ದೇವೀ ಸಾ ಹೀಂದ್ರದುಹಿತಾ ಜಯಂತೀ ಶುಭಚಾರಿಣೀ ।
ಯುಕ್ತಧ್ಯಾನಂಚ ಶಾನ್ತಂ ತಂದುರ್ಬಲಂ ಧೃತಿಮಾಸ್ಥಿತಂ ॥ ೧೫೨ ॥

ಪಿತ್ರಾ ಯಥೋಕ್ತಂ ಕಾವ್ಯಂ ಸಾ ಕಾವ್ಯೇ ಕೃತವತೀ ತದಾ ।
ಗೀರ್ಭಿಶ್ಚೈವಾನುಕೂಲಾಭಿಃ ಸ್ತುವತೀ ವಲ್ಗುಭಾಷಿಣೀ ॥ ೧೫೩ ॥

ಗಾತ್ರಸಂವಾಹನೈಃ ಕಾಲೇ ಸೇವಮಾನಾ ಸುಖಾವಹೈಃ ।
ಶುಶ್ರೂಷಂತ್ಯನುಕೂಲಾ ಚ ಉವಾಸ ಬಹುಲಾಃ ಸಮಾಃ ॥ ೧೫೪ ॥

೧೫೦. ಎಲೌ ಕುಮಾರಿಯೇ, ಈ ಲೋಕದಲ್ಲಿ ಇಂದ್ರನು ಇರಕೂಡ ದೆಂದು ಇಂದ್ರನು ಇಲ್ಲದಹಾಗೆ ಮಾಡುವುದಕ್ಕಾಗಿ ಭೃಗುಮುನಿಯು ಭಯಂಕರ ವಾದ ತಪಸ್ಸನ್ನು ಮಾಡುತ್ತಿರುತ್ತಾನೆ. ಅವನ ದೃಢವಾದ ಆ ಸಂಕಲ್ಪದಿಂದ ನನಗೆ ಬಹಳ ಭಯವೂ ವ್ಯಾಕುಲತೆಯೂ ಉಂಟಾಗಿವೆ.

೧೫೧. ಆದುದರಿಂದ ಎಲೌ ಪುತ್ರಿಯೇ, ಈಗ ನೀನು ಇಲ್ಲಿಂದ ಹೊರಟು ಅವನ ಬಳಿಗೆ ಹೋಗಿ ಶ್ರಮಪರಿಹಾರಕವೂ, ಉತ್ತಮವೂ, ಮನೋಽನುಕೂಲವೂ ಆದ ಉಪಚಾರಗಳಿಂದ ಜಾಗರೂಕಳಾಗಿ ಅವನಿಗೆ ಶುಶ್ರೂಷೆಯನ್ನು ಮಾಡೆಂದು ಇಂದ್ರನು ಹೇಳಿದನು.

೧೫೨. ಇಂದ್ರ ಕುಮಾರಿಯೂ, ಶುಭಾಚಾರಿಣಿಯೂ, ದೇವಿಯೂ ಆದ ಆ ಜಯಂತಿಯು ಧ್ಯಾನಾಸಕ್ತನೂ, ಶಾಂತನೂ, ದುರ್ಬಲನೂ, ಧೈರ್ಯಶಾಲಿಯೂ, ತಪೋನಿರತನೂ ಆದ ಶುಕ್ರನ ಬಳಿಗೆ ಸೇವೆಗಾಗಿ ಹೋದಳು.

೧೫೩–೧೫೪. ಇಂದ್ರನ ಕುಮಾರಿಯೂ, ಮಂಜುಭಾಷಿಣಿಯೂ ಆದ ಜಯಂತಿಯು ಶುಕ್ರಾಚಾರ್ಯನ ಬಳಿಗೆ ಹೋಗಿ ತಂದೆಯ ಅಪ್ಪಣೆಯಂತೆ ಅನು ಕೂಲವೂ ಹಿತಕರವೂ ಆದ ಮಾತುಗಳಿಂದ ಅವನನ್ನು ಹೊಗಳುತ್ತಲೂ, ಸುಖಕರವೂ, ಅನುಕೂಲವೂ ಆದ ಗಾತ್ರಸಂಮರ್ದನದಿಂದಲೂ ಅನೇಕ ವರ್ಷಗಳು ಮಹರ್ಷಿಗೆ ಸೇವೆಯನ್ನು ಮಾಡುತ್ತಲೂ ಇದ್ದಳು.

ಪೂರ್ಣೇ ಧೂಮ್ರವತೇ ಚಾಪಿ ಘೋರೇ ವರ್ಷಸಹಸ್ರಿಕೇ ।
ವರೇಣಚ್ಛಂದಯಾಮಾಸ ಕಾವ್ಯಂ ಪ್ರೀತೋಽಭವತ್ತದಾ ॥ ೧೫೫ ॥

ಏವಂ ಬ್ರುವಂಸ್ತ್ವಯೈಕೇನ ಚೀರ್ಣಂ ನಾನ್ಯೇನ ಕೇನಚಿತ್ ।
ತಸ್ಮಾತ್ತ್ವಂ ತಪಸಾ ಬುದ್ಧ್ಯಾ ಶ್ರುತೇನ ಚ ಬಲೇನ ಚ ॥ ೧೫೬ ॥

ತೇಜಸಾ ಚಾಪಿ ವಿಬುಧಾನ್ ಸರ್ವಾನಭಿಭವಿಷ್ಯಸಿ ।
ಯಚ್ಚ ಕಿಂಚಿನ್ಮಮ ಬ್ರಹ್ಮನ್ ವಿದ್ಯತೇ ಭೃಗುನಂದನ ॥ ೧೫೭ ॥

ಸಾಂಗಂಚ ಸರಹಸ್ಯಂಚ ಯಜ್ಞೋಽಪನಿಷದರ್ಾ ತಥಾ ।
ಪ್ರತಿಭಾಸ್ಯತಿ ತೇ ಸರ್ವಂ ತಚ್ಚಾದ್ಯಂತಂ ನ ಕಸ್ಯಚಿತ್ ॥ ೧೫೮ ॥

ಸರ್ವಾಭಿಭಾವೀ ತೇನ ತ್ವಂ ದ್ವಿಜಶ್ರೇಷ್ಠೋ ಭವಿಷ್ಯಸಿ ।
ಏವಂ ದತ್ವಾ ವರಾಂಸ್ತಸ್ಮೈ ಭಾರ್ಗವಾಯ ಪುನಃ ಪುನಃ ॥ ೧೫೯ ॥

೧೫೫. ಸಹಸ್ರವರ್ಷಗಳು ಆಚರಣೀಯವೂ ಘೋರರೂಪವೂ ಆದ ಧೂಮವ್ರತವು ಪೂರ್ಣವಾಗಲು, ಆ ತಪಸ್ಸಿನಿಂದ ಪ್ರೀತನಾದ ಪರಮೇಶ್ವರನು ಅವನ ಬಳಿಗೆ ಬಂದು ಬೇಡಿದ ವರಗಳನ್ನು ಕೊಟ್ಟನು.

೧೫೬–೧೫೭. ಎಲೈ ಭೃಗುಕುಮಾರನಾದ ಶುಕ್ರನೇ, ನೀನು ಮಾಡಿರುವ ಘೋರತರವಾದ ಈ ವಿಧವಾದ ತಪಸ್ಸನ್ನು ಹಿಂದೆ ಯಾರೂ ಮಾಡಿರಲಿಲ್ಲ. ಆದುದರಿಂದ ನೀನು ತಪಸ್ಸು, ಬುದ್ಧಿ, ಜ್ಞಾನ, ಬಲ, ತೇಜಸ್ಸು ಇವುಗಳಿಂದ ಸಮಸ್ತರಾದ ದೇವತೆಗಳನ್ನೂ ಅತಿಕ್ರಮಿಸಿರುತ್ತೀಯೆ. ಆದುದರಿಂದ ನಿನಗೆ ಪ್ರೀತನಾಗಿ ಉತ್ತಮ ವರಗಳನ್ನೂ ಮಂತ್ರಗಳನ್ನೂ ಕೊಡುವೆನೆಂದನು.

೧೫೮. ಎಲೈ ವಿಪ್ರನೇ, ಆದುದರಿಂದ ನಿನಗೆ ವೇದಗಳು ಉಪನಿಷತ್ತುಗಳು ಸಾಂಗವಾಗಿಯೂ ರಹಸ್ಯವಾಗಿಯೂ ಪ್ರಕಾಶವಾಗಲಿ. ಅಂದರೆ ತಿಳಿಯಲಿ. ನಿನ್ನಂತೆ ಇತರರಿಗೆ ತಿಳಿಯದಿರಲಿ. ನೀನೇ ಉತ್ತಮನಾಗೆಂದನು.

೧೫೯. ಆದುದರಿಂದ ನೀನು ಸರ್ವರನ್ನೂ ವಿಾರತಕ್ಕ ಶಕ್ತಿಯುಳ್ಳವನೂ, ಬ್ರಾಹ್ಮಣೋತ್ತಮನೂ ಆಗು ಎಂಬುದಾಗಿ ಭೃಗುನಂದನನಾದ ಶುಕ್ರನಿಗೆ ಹೇಳಿ ವರಗಳನ್ನು ಕೊಟ್ಟನು.

**ಅಜೇಯತ್ವಂ ಧನೇಶತ್ವಮವಧ್ಯತ್ವಂ ಚ ವೈ ದದೌ।**
**ಏತಾನ್ ಲಬ್ಧ್ವಾ ವರಾನ್ ಕಾವ್ಯಃ ಸಂಪ್ರಹೃಷ್ಟತನೂರುಹಃ ॥ ೧೬೦ ॥**

**ಹರ್ಷಾತ್ ಪ್ರಾದುರ್ಬಭೌ ತಸ್ಯ ದೇವಸ್ತೋತ್ರಂ ಮಹೇಶ್ವರಂ।**
**ತದಾ ತಿರ್ಯಕ್ ಸ್ಥಿತಸ್ತ್ವೇವಂ ತುಷ್ಟುವೇ ನೀಲಲೋಹಿತಂ ॥ ೧೬೧ ॥**

**ನಮೋಽಸ್ತು ಶಿತಿಕಂಠಾಯ ಸುರಾಪಾಯ ಸುವರ್ಚಸೇ ।**
**ರಿರಿಹಾಣಾಯ ಲೋಪಾಯ ವತ್ಸರಾಯ ಜಗತ್ಪತೇ ॥ ೧೬೨ ॥**

**ಕಪರ್ದಿನೇ ಹ್ಯೂರ್ಧ್ವ ರೋಮ್ಣೇ ಹಯಾಯ ಕರಣಾಯ ಚ ।**
**ಸಂಸ್ಕೃತಾಯ ಸುತೀರ್ಥಾಯ ದೇವದೇವಾಯ ರಂಹಸೇ ॥ ೧೬೩ ॥**

೧೬೦. ಅನಂತರ ಪರಮೇಶ್ವರನು ಭೃಗುಕುಮಾರನಿಗೆ ಇತರರಿಂದ ಜಯಿಸ ಲಶಕ್ಯತೆ, ಧನೇಶ್ವರತ್ವ, ಸಾವಿಲ್ಲದಿರುವಿಕೆ (ಚಿರಂಜೀವಿತನ) ಇವೇ ಮೊದಲಾದ ಅನೇಕ ವರಗಳನ್ನು ಕೊಟ್ಟನು. ಈ ವರಗಳನ್ನು ಪಡೆದ ಶುಕ್ರನು ಸಂತೋಷದಿಂದ ರೋಮಾಂಚಿತನಾದನು.

೧೬೧. ತರುವಾಯ ಭಕ್ತಪರಾಧೀನನಾದ ಪರಮೇಶ್ವರನು ಅವನ ತಪಸ್ಸಿನಿಂದ ಪ್ರೀತನಾಗಿ ಸಂತೋಷದಿಂದ ಅವನಿಗೆ ಪ್ರತ್ಯಕ್ಷನಾದನು. ಆಗ ಶುಕ್ರಾಚಾರ್ಯನು ಆ ಈಶ್ವರನಿಗೆ (ಅಡ್ಡಬಿದ್ದು) ನಮಸ್ಕರಿಸಿದನು. ಮತ್ತು ನೀಲಲೋಹಿತನಾದ ಈಶ್ವರನನ್ನು ಸ್ತೋತ್ರವನ್ನು ಮಾಡಲುಪಕ್ರಮಿಸಿದನು.

೧೬೨–೧೬೩. ಅನಂತರ ಶುಕ್ರಾಚಾರ್ಯನು ಈಶ್ವರನನ್ನು ನೋಡಿ ನೀಲ ಕಂಠನೂ, ಸುಂದರತಮನೂ, ತೇಜೋವಂತನೂ, ಆಸ್ವಾದಕನೂ, ಸಂವತ್ಸರಾಕಾ ರನೂ, ಲೋಪಕಾರಕನೂ, ಜಗತ್ಪತಿಯೂ, ಜಟಾಧಾರಿಯೂ, ಊರ್ಧ್ವಾಕಾರ ಗಳಾದ ರೋಮಗಳುಳ್ಳವನೂ, ಹಯರೂಪಿಯೂ, ಜಗತ್ಕಾರಣನೂ, ಸುಸಂಸ್ಕೃ ತನೂ, ಸುತೀರ್ಥನೂ, ದೇವಾದಿದೇವನೂ, ವೇಗಿಯೂ ಆದ ಈಶ್ವರನಿಗೆ ಅನಂತ ನಮಸ್ಕಾರಗಳೆಂದು ಹೊಗಳಿದನು.

ಉಷ್ಣೀಷಿಣೇ ಸುವಕ್ತ್ರಾಯ ಸಹಸ್ರಾಕ್ಷಾಯ ಮೀಢುಷೇ ।
ವಸುರೇತಾಯ ರುದ್ರಾಯ ತಪಸೇ ಚೀರವಾಸಸೇ ॥ ೧೬೪ ॥

ಹ್ರಸ್ವಾಯ ಮುಕ್ತಕೇಶಾಯ ಸೇನಾನ್ಯೇ ರೋಹಿತಾಯ ಚ ॥ ೧೬೫ ॥

ಕವಯೇ ರಾಜವೃದ್ಧಾಯ ತಕ್ಷಕಕ್ರೀಡನಾಯ ಚ ।
ಗಿರಿಶಾಯಾರ್ಕನೇತ್ರಾಯ ಯತಿನೇ ಜಾಂಬವಾಯ ಚ ॥
ಸುವೃತ್ತಾಯ ಸುಹಸ್ತಾಯ ಧನ್ವಿನೇ ಭಾರ್ಗವಾಯ ಚ ॥ ೧೬೬ ॥

ಸಹಸ್ರಬಾಹವೇ ಚೈವ ಸಹಸ್ರಾಮಲಚಕ್ಷುಷೇ ।
ಸಹಸ್ರಕುಕ್ಷಯೇ ಚೈವ ಸಹಸ್ರಚರಣಾಯ ಚ ॥ ೧೬೭ ॥

ಸಹಸ್ರಶಿರಸೇ ಚೈವ ಬಹುರೂಪಾಯ ವೇಧಸೇ ।
ಭವಾಯ ವಿಶ್ವರೂಪಾಯ ಶ್ವೇತಾಯ ಪುರುಷಾಯ ಚ । ॥ ೧೬೮ ॥

---

೧೬೪–೧೬೫. ಮತ್ತು ಶಿರೋವೇಷ್ಟನವುಳ್ಳವನೂ (ರುಮಾಲುಳ್ಳವನೂ), ಅಥವಾ ಕಿರೀಟಧಾರಿಯೂ, ಸುಂದರವಾದ ಮುಖವುಳ್ಳವನೂ, ಸಹಸ್ರನೇತ್ರವುಳ್ಳವನೂ, ಸುಂದರತಮನೂ, ಹಿರಣ್ಯರೇತಸ್ಸನೂ, ಭಯಂಕರನೂ, ತಪೋನಿಷ್ಠನೂ, ಚೀರವಸ್ತ್ರಧಾರಿಯೂ, ಹ್ರಸ್ವಾಕಾರನೂ, ಬಿಡಲ್ಪಟ್ಟ ಬಿಚ್ಚಿರುವ ಕೇಶಗಳುಳ್ಳವನೂ, ಸೇನಾನಾಯಕನೂ, ರೋಹಿತರೂಪಿಯೂ, ಕವನಶಕ್ತಿಯುಳ್ಳವನೂ, ನೃಪೋತ್ತಮನೂ, ತಕ್ಷಕನ ಜೊತೆಯಲ್ಲಿ ವಿಹಾರಮಾಡಿದವನೂ ಆದ ಈಶ್ವರನಿಗೆ ಅನಂತ ಪ್ರಣಾಮಗಳು.

೧೬೬–೧೬೮. ರಜತಾಚಲವಾಸಿಯೂ, ಸೂರ್ಯನೇ ನೇತ್ರವಾಗಿಯುಳ್ಳವನೂ, ಯತಿಸ್ವರೂಪಿಯೂ, ಪುರಾಣಪುರುಷನೂ, ಒಳ್ಳೆಯ ನಡತೆಯುಳ್ಳವನೂ, ಉತ್ತಮವಾದ ಕೈಗಳುಳ್ಳವನೂ, ಧನುರ್ಧಾರಿಯೂ, ಭೃಗುವಂಶೋತ್ಪನ್ನನೂ, ಸಹಸ್ರಭುಜವುಳ್ಳವನೂ, ಸಾವಿರಾರು ಕುಕ್ಷಿಗಳುಳ್ಳವನೂ, ಸಹಸ್ರ ಚರಣವುಳ್ಳವನೂ, ಸಹಸ್ರ ಶಿರಸ್ಕನೂ, ಬಹುರೂಪಿಯೂ, ಸೃಷ್ಟಿಕರ್ತನೂ, ಉತ್ಪತ್ತಿಶೂನ್ಯನೂ, ವಿಶ್ವರೂಪಿಯೂ, ಶ್ವೇತವರ್ಣವುಳ್ಳವನೂ, ಪುರುಷಸ್ವರೂಪಿಯೂ ಆದ ಈಶ್ವರನಿಗೆ ನಮಸ್ಕಾರಗಳು.

ನಿಷಂಗಿಣೇ ಕವಿಚನೇ ಸೂಕ್ಷ್ಮಾಯ ಕ್ಷಪಣಾಯ ಚ ।
ತಾಮ್ರಾಯ ಚೈವ ಭೀಮಾಯ ಉಗ್ರಾಯ ಚ ಶಿವಾಯ ಚ || ೧೬೯ ||

ಬಭ್ರವೇ ಚ ಪಿಶಂಗಾಯ ಪಿಂಗಲಾಯಾರುಣಾಯ ಚ ।
ಮಹಾದೇವಾಯ ಶರ್ವಾಯ ವಿಶ್ವರೂಪಶಿವಾಯ ಚ || ೧೭೦ ||

ಹಿರಣ್ಯಾಯ ಚ ಶಿಷ್ಟಾಯ ಶ್ರೇಷ್ಠಾಯ ಮಧ್ಯಮಾಯ ಚ ।
ಪಿನಾಕಿನೇ ಚೇಷುಮತೇ ಚಿತ್ರಾಯ ರೋಹಿತಾಯ ಚ || ೧೭೧ ||

ದುಂದುಭ್ಯಾಯೈಕಪಾದಾಯ ಅರ್ಹಾಯ ಬುದ್ಧಯೇ ತಥಾ ।
ಮೃಗವ್ಯಾಧಾಯ ಸರ್ಪಾಯ ಸ್ಥಾಣವೇ ಭೀಷಣಾಯ ಚ || ೧೭೨ ||

ಬಹುರೂಪಾಯ ಚೋಗ್ರಾಯ ತ್ರಿನೇತ್ರಾಯೇಶ್ವರಾಯ ಚ ।
ಕಪಿಲಾಯೈಕವೀರಾಯ ಮೃತ್ಯವೇ ತ್ರ್ಯಂಬಕಾಯ ಚ || ೧೭೩ ||

---

೧೬೯–೧೭೦. ಬತ್ತಳಿಕೆಯುಳ್ಳವನೂ, ಕವಚಧಾರಿಯೂ, ಸೂಕ್ಷ್ಮರೂಪಿಯೂ, ಸನ್ಯಾಸಿಯೂ. ತಾಮ್ರರೂಪಿಯೂ, ಭಯಂಕರರೂಪಿಯೂ, ಉಗ್ರಸ್ವರೂಪನೂ, ಮಂಗಳಕರನೂ, ಹಳದಿಯ ಬಣ್ಣವುಳ್ಳವನೂ, ಪಿಶಂಗರೂಪಿಯೂ, ಗೋರೋಚನ ಬಣ್ಣವುಳ್ಳವನೂ, ಅರುಣಸ್ವರೂಪಿಯೂ, ಮಹಾದೇವನೂ, ಮಂಗಳದಾಯಕನೂ, ವಿಶ್ವರೂಪಿಯೂ, ಶಿವನೂ ಆದ ಭಗವಂತನಿಗೆ ನಮಸ್ಕಾರಗಳು.

೧೭೧–೧೭೨. ದ್ರವ್ಯರೂಪಿಯೂ. ಶಿಷ್ಟಾಚಾರವುಳ್ಳವನೂ, ಶ್ರೇಷ್ಠನೂ, ಮಧ್ಯಮನೂ, ಪಿನಾಕಪಾಣಿಯೂ, ಧನುರ್ಧಾರಿಯೂ, ಚಿತ್ರರೂಪಿಯೂ. ರೋಹಿತಾಂಗನೂ, ದುಂದುಭಿರೂಪಿಯೂ, ಏಕಪಾದನೂ, ಅರ್ಹನೂ, ಬುದ್ಧಿವಂತನೂ, ಕಿರಾತರೂಪಿಯೂ, ಸರ್ಪಾಕಾರನೂ, ಸ್ಥಾಣುರೂಪನೂ, ಭಯಂಕರನೂ ಆದ ಪರಮೇಶ್ವರನಿಗೆ ಅನಂತ ವಂದನೆಗಳು.

೧೭೩. ಅನೇಕ ರೂಪಿಯೂ, ಭಯಂಕರನೂ, ಮುಕ್ಕಣ್ಣನೂ, ಈಶ್ವರ ಸ್ವರೂಪನೂ, ಕಪಿಲರೂಪಿಯೂ, ವೀರಾಗ್ರೇಸರನೂ, ಮೃತ್ಯುರೂಪಿಯೂ, ತ್ರಿಣೇತ್ರನೂ ಆದ ಈಶ್ವರನಿಗೆ ನಮಸ್ಕಾರ.

ವಾತೋಽಷ್ಪತೇ ಪಿನಾಕಾಯ ಶಂಕರಾಯ ಶಿವಾಯ ಚ |
ಆರಣ್ಯಾಯ ಗೃಹಸ್ಥಾಯ ಯತಿನೇ ಬ್ರಹ್ಮಚಾರಿಣೇ || ೧೭೪ ||

ಸಾಂಖ್ಯಾಯ ಚೈವ ಯೋಗಾಯ ಧ್ಯಾನಿನೇ ದೀಕ್ಷಿತಾಯ ಚ |
ಅಂತರ್ಹಿತಾಯ ಶರ್ವಾಯ ಮಾನ್ಯಾಯ ಮಾಲಿನೇ ತಥಾ || ೧೭೫ ||

ಬುದ್ಧಾಯ ಚೈವ ಶುದ್ಧಾಯ ಮುಕ್ತಯೇ ಕೇವಲಾಯ ಚ |
ರೋಧಸೇ ಚೇಕಿತಾನಾಯ ಬ್ರಹ್ಮಿಷ್ಠಾಯ ಮಹರ್ಷಯೇ || ೧೭೬ ||

ಚತುಷ್ಪಾದಾಯ ಮೇಧ್ಯಾಯ ಧರ್ಮಿಣೇ ಶೀಘ್ರಗಾಯ ಚ |
ಶಿಖಂಡಿನೇ ಕಪಾಲಾಯ ದಂಷ್ಟ್ರಿಣೇ ವಿಶ್ವಮೇಧಸೇ || ೧೭೭ ||

ಅಪ್ರತಿಘಾತಾಯ ದೀಪ್ತಾಯ ಭಾಸ್ಕರಾಯ ಸುಮೇಧಸೇ |
ಕ್ರೂರಾಯ ವಿಕೃತಾಯೈವ ಬೀಭತ್ಸಾಯ ಶಿವಾಯ ಚ || ೧೭೮ ||

---

೧೭೪–೧೭೬. ಇಂದ್ರರೂಪಿಯೂ, ಪಿನಾಕಪಾಣಿಯೂ, ಶಂಕರನೂ, ಶಿವನೂ, ಅರಣ್ಯವಾಸಿಯೂ, ಗ್ರಹಸ್ಥನೂ, ಯತಿಯೂ, ಬ್ರಹ್ಮಚಾರಿಯೂ, ಸಾಂಖ್ಯರೂಪನೂ, ಯೋಗಿಯೂ, ಧ್ಯಾನಿಯೂ, ದೀಕ್ಷಿತನೂ, ಅಂತರ್ಹಿತನೂ, ಶರ್ವನೂ, ಮಾನ್ಯನೂ, ಮಾಲಧಾರಿಯೂ, ಬುದ್ಧನೂ, ಶುದ್ಧನೂ, ಮುಕ್ತಿದಾಯಕನೂ, ಕೇವಲ ಸ್ವರೂಪಿಯೂ, ಸೃಷ್ಟಿಕರ್ತನೂ, ಪ್ರತಿಬಂಧಕನೂ, ಬ್ರಹ್ಮಜ್ಞಾನಿಯೂ, ಮಹರ್ಷಿ ರೂಪನೂ, ಪುರಾಣಪುರುಷನೂ ಆದ ಮಹಾದೇವನಿಗೆ ಅನಂತ ಪ್ರಣಾಮಗಳು.

೧೭೭–೧೭೮. ನಾಲ್ಕು ಪಾದಗಳುಳ್ಳವನೂ, ಪವಿತ್ರನೂ, ಧರ್ಮವಂತನೂ, ಶೀಘ್ರಗಾಮಿಯೂ, ಶಿಖಂಡಧಾರಿಯೂ, ಕಪಾಲಪಾಣಿಯೂ, ಕೋರೆ ಹಲ್ಲುಗಳುಳ್ಳವನೂ, ಲೋಕಕ್ಕೆ ಪವಿತ್ರನೂ, ಶತ್ರುಗಳಿಂದ ತಡೆಯಲಶಕ್ಯನೂ, ಪ್ರಕಾಶರೂಪಿಯೂ, ತೇಜೋಮಯನೂ, ಸುಜ್ಞಾನಿಯೂ, ಕ್ರೂರರೂಪಿಯೂ, ವಿಕೃತಾಕಾರನೂ, ಅಸಹ್ಯರೂಪಿಯೂ, ಮಂಗಳಾಂಗನೂ ಆದ ಈಶ್ವರನಿಗೆ ನಮಸ್ಕಾರಗಳು.

ಸೌಮ್ಯಾಯ ಚೈವ ಪುಣ್ಯಾಯ ಧಾರ್ಮಿಕಾಯ ಶುಭಾಯ ಚ ।
ಅವಧ್ಯಾಯ ಮೃತಾಂಗಾಯ ನಿತ್ಯಾಯ ಶಾಶ್ವತಾಯ ಚ ॥ ೧೭೯ ॥

ಸಾಧ್ಯಾಯ ಶರಭಾಯೈವ ಶೂಲಿನೇ ಚ ತ್ರಿಚಕ್ಷುಷೇ ।
ಸೋಮಪಾಯಾಜ್ಯಪಾಯೈವ ಧೂಮಪಾಯೋಷ್ಮಪಾಯ ಚ ॥ ೧೮೦ ॥

ಶುಚಯೇ ಲೇಲಿಹಾನಾಯ ಸದ್ಯೋಜಾತಾಯ ಮೃತ್ಯವೇ ।
ಪಿಶಿತಾಶಾಯ ಖರ್ವಾಯ ಮೇಧಾಯ ವೈದ್ಯುತಾಯ ಚ ॥ ೧೮೧ ॥

ವ್ಯಾಶ್ರಿತಾಯ ಶ್ರವಿಷ್ಠಾಯ ಭಾರತಾಯಾಂತರಿಕ್ಷಯೇ ।
ಕ್ಷಮಾಯ ಸಹ ಮಾನಾಯ ಸತ್ಯಾಯ ತಪನಾಯ ಚ ॥ ೧೮೨ ॥

ತ್ರಿಪುರಘ್ನಾಯ ದೀಪ್ತಾಯ ಚಕ್ರಾಯ ರೋಮಶಾಯ ಚ ।
ತಿಗ್ಮಾಯುಧಾಯ ಮೇಧ್ಯಾಯ ಸಿದ್ಧಾಯ ಚ ಪುಲಸ್ತಯೇ ॥ ೧೮೩ ॥

೧೭೯–೧೮೦. ಶಾಂತಮೂರ್ತಿಯೂ, ಪುಣ್ಯರೂಪಿಯೂ, ಧರ್ಮಾತ್ಮನೂ, ಶುಭಾಂಗನೂ, ನಾಶರಹಿತನೂ, ಅಮೃತಾಂಗನೂ, ನಿತ್ಯನೂ, ಶಾಶ್ವತನೂ, ಆದಿ ವಿಶಿಷ್ಟನೂ, ಶರಭರೂಪಿಯೂ, ಶೂಲಧಾರಿಯೂ, ಮೂರುಕಣ್ಣುಳ್ಳವನೂ, ಸೋಮ ಪಾನವನ್ನು ಮಾಡುವವನೂ, ಆಜ್ಯಪಾಯಿಯೂ, ಧೂಮಪಾಯಿಯೂ, ಊಷ್ಮಪಾಯಿಯೂ ಆದ ಮಹೇಶ್ವರನಿಗೆ ವಂದನೆಗಳು.

೧೮೧–೧೮೩. ಅತಿಪರಿಶುದ್ಧ ಸಾರವಸ್ತುಗಳನ್ನು ಆಸ್ವಾದನೆ ಮಾಡುವವನೂ, ಸದ್ಯೋಜಾತನೂ, ಮೃತ್ಯುರೂಪಿಯೂ, ಮಾಂಸಭಕ್ಷಕನೂ, ಹ್ರಸ್ವರೂಪಿಯೂ, ಮಹಾಜ್ಞಾನಿಯೂ, ಮಿಂಚಿನಂತೆ ಪ್ರಕಾಶಕನೂ, ಭಕ್ತರಿಗೆ ವಿಶೇಷವಾದ ಆಶ್ರಯ ದಾತನೂ, ಶ್ರೇಷ್ಠತಮನೂ, ಭಾರತರೂಪಿಯೂ, ಅಂತರಿಕ್ಷಗತನೂ, ಕ್ಷಮಾವಂತನೂ, ಮಾನವಂತನೂ, ಸತ್ಯರೂಪಿಯೂ, ಶತ್ರುದಾಹಕನೂ, ತ್ರಿಪುರಸಂಹಾರಕನೂ, ಕಾಂತಿಯುಕ್ತನೂ, ಚಕ್ರಧಾರಿಯೂ, ರೋಮರೂಪಿಯೂ, ತೀಕ್ಷ್ಣಾಯುಧವುಳ್ಳವನೂ, ಪವಿತ್ರತಮನೂ, ಸಿದ್ಧರೂಪಿಯೂ, ಪುಲಸ್ತ್ಯರೂಪಿಯೂ ಆದ ಈಶ್ವರನಿಗೆ ನಮಸ್ಕಾರಗಳು.

ರೋಚಮಾನಾಯ ಖಂಡಾಯ ಸ್ಥಿತಾಯ ಋಷಭಾಯ ಚ ।
ಭೋಗಿನೇ ಪುಂಜಮಾನಾಯ ಶಾಂತಾಯೈವೋರ್ಧ್ವರೇತಸೇ ॥ ೧೮೪ ॥

ಅಘಘ್ನಾಯ ಮಖಘ್ನಾಯ ಮೃತ್ಯವೇ ಯಜ್ಞಿಯಾಯ ಚ ।
ಕೃಶಾನೇವ ಪ್ರಚೇತಾಯ ವಹ್ನಯೇ ಕಿಶಲಾಯ ಚ ॥ ೧೮೫ ॥

ಸಿಕತ್ಯಾಯ ಪ್ರಸನ್ನಾಯ ವರೇಣ್ಯಾಯೈವ ಚಕ್ಷುಷೇ ।
ಕ್ಷಿಪ್ರಗವೇ ಸುಧನ್ವಾಯ ಪ್ರಮೋಧ್ಯಾಯ ಪಿಪಾಯ ಚ ॥ ೧೮೬ ॥

ರಕ್ಷೋಘ್ನಾಯ ಪಶುಘ್ನಾಯ ವಿಘ್ನಾಯ ಶಯನಾಯ ಚ ।
ವಿಭ್ರಾಂತಾಯ ಮಹಂತಾಯ ಅಂತಯೇ ದುರ್ಗಮಾಯ ಚ ॥ ೧೮೭ ॥

ದಕ್ಷಾಯ ಚ ಜಘನ್ಯಾಯ ಲೋಕಾನಾಮೀಶ್ವರಾಯ ಚ ।
ಅನಾಮಯಾಯ ಚೋರ್ಧ್ವಾಯ ಸಂಹತ್ಯಾಧಿಷ್ಠಿತಾಯ ಚ ॥ ೧೮೮ ॥

---

೧೮೪–೧೮೫ ಸರ್ವರಿಗೂ ರುಚಿಸುವ ರೂಪವುಳ್ಳವನೂ, ಖಂಡವಾದ ರೂಪವುಳ್ಳವನೂ, ಜ್ಞಾನಿಯೂ, ಸರ್ವಶ್ರೇಷ್ಠನೂ, ಸರ್ಪಭೂಷನೂ, ಅಖಂಡಸ್ವರೂಪನೂ, ಶಾಂತರೂಪಿಯೂ, ಊರ್ಧ್ವರೇತಸ್ಕನೂ, ಪಾಪನಾಶಕನೂ, ದಕ್ಷಯಜ್ಞಧ್ವಂಸಕನೂ, ಮೃತ್ಯುದಾಯಕನೂ, ಯಾಗಶೀಲನೂ, ಅಗ್ನಿ ವರುಣ ಯಮ ಯಜ್ಞ ಇವುಗಳ ಸ್ವರೂಪಿಯೂ ಆದ ಮಹಾದೇವನಿಗೆ ವಂದನೆಗಳು.

೧೮೬–೧೮೭. ನಂದೀರೂಪಿಯೂ, ಪ್ರಸನ್ನಸ್ವರೂಪನೂ, ಶ್ರೇಷ್ಠತಮನೂ, ನೇತ್ರರೂಪಿಯೂ, ಅತಿವೇಗವಂತನೂ. ಧನುರ್ಧಾರಿಯೂ, ಅತಿಪವಿತ್ರನೂ, ಪಾನಕಾರಿಯೂ, ರಾಕ್ಷಸಧ್ವಂಸಕನೂ, ಪಶುಘಾತುಕನೂ, ವಿಘ್ನಪರಿಹಾರಕನೂ, ಶಯನಶೀಲನೂ, ಭ್ರಾಂತಿರಹಿತನೂ, ಕೊನೆಯಿಲ್ಲದವನೂ, ಅಂತಕಾರಿಯೂ, ದುರಧಿಗಮ್ಯನೂ ಆದ ಹರನಿಗೆ ವಂದನೆಗಳು.

೧೮೮. ಅತ್ಯಂತ ಸಮರ್ಥನೂ, ಅಲ್ಪರೂಪಿಯೂ, ಮೂರುಲೋಕಗಳ ಒಡೆಯನೂ, ರೋಗರಹಿತನೂ, ಊರ್ಧ್ವರೂಪಿಯೂ, ಗಣೇಶ್ವರನೂ, ಸರ್ವಜಗತ್ತಿಗೂ ಆಶ್ರಯನೂ ಆದವನಿಗೆ ನಮಸ್ಕಾರಗಳು.

ಹಿರಣ್ಯಬಾಹವೇ ಚೈವ ಸತ್ಯಾಯ ಶಮನಾಯ ಚ ।
ಅಸಿಕಲ್ಯಾಯ ಮಾಘಾಯ ರೀರಿಣ್ಯಾಯೈಕಚಕ್ಷುಷೇ ॥ ೧೮೯ ॥

ಶ್ರೇಷ್ಠಾಯ ವಾಮದೇವಾಯ ಈಶಾನಾಯ ಚ ಧೀಮತೇ ।
ಮಹಾಕಲ್ಪಾಯ ದೀಪ್ತಾಯ ರೋದನಾಯ ಹಸಾಯ ಚ ॥ ೧೯೦ ॥

ವೃತಧನ್ವನೇ ಕವಚಿನೇ ರಥಿನೇ ಚ ವರೂಥಿನೇ ।
ಭೃಗುನಾಥಾಯ ಶುಕ್ರಾಯ ವಹ್ನಿರಿಷ್ಟಾಯ ಧೀಮತೇ ॥ ೧೯೧ ॥

ಅಘಾಯ ಅಯಶಂಸಾಯ ವಿಪ್ರಯಾಯ ಪ್ರಿಯಾಯ ಚ ।
ದಿಗ್ವಾಸಃ ಕೃತ್ತಿವಾಸಾಯ ಭಗಘ್ನಾಯ ನಮೋಽಸ್ತು ತೇ ॥ ೧೯೨ ॥

---

೧೮೯. ಸುವರ್ಣಮಯವಾದ ಬಾಹುಗಳುಳ್ಳವನೂ, ಸತ್ಯಸ್ವರೂಪಿಯೂ ಶಾಂತಾಕಾರನೂ, ಕಡ್ಗದಂತೆ ಅತಿತೀಕ್ಷ್ಣರೂಪಿಯೂ, ಮಾಘಮಾಸಸ್ವರೂಪಿಯೂ, ಸರಿಯುವ ಸ್ವಭಾವವುಳ್ಳವನೂ. ಏಕನೇತ್ರನೂ ಆದ ಪಾರ್ವತೀಪತಿಗೆ ವಂದನೆಗಳು.

೧೯೦. ದೇವೋತ್ತಮನೂ, ವಾಮದೇವಸ್ವರೂಪನೂ, ಸಕಲಜಗದೊಡೆಯನೂ, ಮಹಾಜ್ಞಾನಿಯೂ, ಮಹಾಕಲ್ಪರೂಪಿಯೂ, ಪ್ರಕಾಶಕನೂ, ರೋದನಸ್ವರೂಪಿಯೂ, ಮಂದಹಾಸವುಳ್ಳವನೂ ಆದ ಹರನಿಗೆ ಅನಂತ ಪ್ರಣಾಮಗಳು.

೧೯೧. ಧನುರ್ಧಾರಿಯೂ, ಕವಚಧಾರಿಯೂ, ಮಹಾರಥಿಕನೂ, ಸೇನಾಪತಿಯೂ, ಭೃಗುವಂಶಕ್ಕೆ ಒಡೆಯನೂ, ಶುಕ್ರರೂಪಿಯೂ, ವಹ್ನಿರೂಪಿಯೂ, ಪೂಜ್ಯನೂ, ಜ್ಞಾನಿಯೂ ಆದ ಈಶನಿಗೆ ವಂದನೆಗಳು

೧೯೨. ಪಾಪನಾಶಕನೂ, ಪಾಪಶಂಸಕನೂ, ದುಷ್ಟರಿಗೆ ಅಪ್ರಿಯನೂ, ಸಜ್ಜನರಿಗೆ ಪ್ರಿಯನೂ, ದಿಗಂಬರನೂ, ಚರ್ಮಾಂಬರನೂ, ಶತ್ರುವೀರ್ಯನಾಶಕನೂ ಆದ ನಿನಗೆ ನಮಸ್ಕಾರವೆಂದು ಹೇಳಿದನು.

**ಪಶೂನಾಂ ಪತಯೇ ಚೈವ ಭೂತಾನಾಂ ಪತಯೇ ನಮಃ ।**
**ಪ್ರಣವೇ ಋಗ್ಯಜುಃಸಾಮ್ನೇ ಸ್ವಾಹಾಯೈ ಚ ಸ್ವಧಾಯ ಚ ॥ ೧೯೩ ॥**

**ವಷಟ್ಕಾರತಮಾಯೈವ ತುಭ್ಯಮಂತಾತ್ಮನೇ ನಮಃ ।**
**ಸ್ರಷ್ಟ್ರೇ ಧಾತ್ರೇ ತಥಾ ಹೋತ್ರೇ ಹಂತ್ರೇ ಚ ಕ್ಷಪಣಾಯ ಚ ॥ ೧೯೪ ॥**

**ಭೂತಭವ್ಯಭವಾಯೈವ ತುಭ್ಯಂ ಕಾಲಾತ್ಮನೇ ನಮಃ ।**
**ವಸವೇ ಚೈವ ಸಾಧ್ಯಾಯ ರುದ್ರಾದಿತ್ಯಾಶ್ವಿನಾಯ ಚ ॥ ೧೯೫ ॥**

**ವಿಶ್ವಾಯ ಮರುತೇ ಚೈವ ತುಭ್ಯಂ ದೇವಾತ್ಮನೇ ನಮಃ ।**
**ಅಗ್ನಿಸೋಮರ್ತ್ವಿಗಿಜಾಯ ಪಶುಮಂತ್ರೌಷಧಾಯ ಚ ॥ ೧೯೬ ॥**

**ದಕ್ಷಿಣಾವಭೃಥಾಯೈವ ತುಭ್ಯಂ ಯಜ್ಞಾತ್ಮನೇ ನಮಃ ।**
**ತಪಸೇ ಚೈವ ಸತ್ಯಾಯ ತ್ಯಾಗಾಯ ಚ ಶಮಾಯ ಚ ॥ ೧೯೭ ॥**

---

೧೯೩–೧೯೪. ಪಶುಪತಿಯೂ, ಭೂತಪತಿಯೂ, ಓಂಕಾರಪ್ರತಿಪಾದ್ಯನೂ, ಋಗ್ಯಜುಸ್ಸಾಮರೂಪಿಯೂ, ಸ್ವಾಹಾಕಾರನೂ, ಸ್ವಧಾಕಾರನೂ, ವಷಟ್ಕಾರಮಯನೂ, ಅಂತಕನೂ, ಸೃಷ್ಟಿಕರ್ತರೂ, ಅಂತರಾತ್ಮನೂ, ಹೋತೃವೂ, ಸಂಹಾರಕನೂ, ನಾಶಕನೂ ಆದ ನಿನಗೆ ನಮಸ್ಕಾರಗಳು.

೧೯೫. ಭೂತಭವಿಷ್ಯದ್ವರ್ತಮಾನರೂಪವಾದ ತ್ರಿಕಾಲಜ್ಞನೂ, ಕಾಲರೂಪಿಯೂ, ವಸುರೂಪಿಯೂ, ಸಾಧ್ಯಾತ್ಮನೂ, ರುದ್ರರೂಪಿಯೂ, ಆದಿತ್ಯಸ್ವರೂಪಿಯೂ, ಅಶ್ವಿನೀದೇವತಾರೂಪಿಯೂ ಆದ ಈಶನಿಗೆ ವಂದನೆಗಳು.

೧೯೬. ವಿಶ್ವರೂಪಿಯೂ, ವಾಯುರೂಪಿಯೂ, ದೇವತಾಸ್ವರೂಪನೂ, ಅಗ್ನಿ ಚಂದ್ರ ಋತ್ವಿಕ್ ಯಾಗ ಪಶು ಮಂತ್ರ ಓಷಧಿ ಇವುಗಳ ಸ್ವರೂಪಿಯೂ ಆದ ಈಶ್ವರನಿಗೆ ಅನಂತ ವಂದನೆಗಳು.

೧೯೭. ದಕ್ಷಿಣಾಸ್ವರೂಪಿಯೂ, ಅವಭೃತಸ್ನಾನವಾಡಿದವನೂ, ಯಜ್ಞಫಲಪ್ರದನೂ, ತಪಃಫಲದಾಯಕನೂ, ಸತ್ಯವಂತನೂ, ತ್ಯಾಗಶೀಲನೂ, ಶಾಂತರೂಪಿಯೂ ಆದ ಭಗವಂತನಿಗೆ ನಮಸ್ಕಾರಗಳು.

**ಅಹಿಂಸಾಯಾಪ್ಯಲೋಭಾಯ ಸುವೇಶಾಯಾತಿಶಾಯ ಚ ।**
**ಸರ್ವಭೂತಾತ್ಮಭೂತಾಯ ತುಭ್ಯಂ ಯೋಗಾತ್ಮನೇ ನಮಃ ॥ ೧೯೮ ॥**

**ಪೃಥಿವ್ಯೈ ಚಾಂತರಿಕ್ಷಾಯ ದಿವಾಯ ಚ ಮಹಾಯ ಚ ।**
**ಜನಸ್ತಪಾಯ ಸತ್ಯಾಯ ತುಭ್ಯಂ ಲೋಕಾತ್ಮನೇ ನಮಃ ॥ ೧೯೯ ॥**

**ಅವ್ಯಕ್ತಾಯಾಥ ಮಹತೇ ಭೂತಾಯೈವೇಂದ್ರಿಯಾಯ ಚ ।**
**ತನ್ಮಾತ್ರಾಯ ಮಹಾಂತಾಯ ತುಭ್ಯಂ ತತ್ವಾತ್ಮನೇ ನಮಃ ॥ ೨೦೦ ॥**

**ನಿತ್ಯಾಯ ಚಾರ್ಥಲಿಂಗಾಯ ಸೂಕ್ಷ್ಮಾಯ ಚೇತನಾಯ ಚ ।**
**ಶುದ್ಧಾಯ ವಿಭವೇ ಚೈವ ತುಭ್ಯಂ ನಿತ್ಯಾತ್ಮನೇ ನಮಃ ॥ ೨೦೧ ॥**

**ನಮಸ್ತೇ ತ್ರಿಷು ಲೋಕೇಷು ಸ್ವರಾಂತೇಷು ಭವಾದಿಷು ।**
**ಸತ್ಯಾಂತೇಷು ಮಹಾಂತೇಷು ಚ ತುರ್ಷು ಚನಮೋಸ್ತು ತೇ ॥ ೨೦೨ ॥**

೧೯೮. ಹಿಂಸಾರಹಿತನೂ, ಲೋಭವಿಲ್ಲದವನೂ, ಉತ್ತಮವಾದ ವೇಷವನ್ನು ಧರಿಸಿರುವವನೂ, ಅತಿಶಯವಾದ ರೂಪವುಳ್ಳವನೂ, ಸಕಲಭೂತರೂಪಿಯೂ, ಯೋಗಸ್ವರೂಪಿಯೂ ಆದ ನಿನಗೆ ವಂದನೆಗಳು.

೧೯೯. ಪೃಥಿವಿ, ಅಂತರಿಕ್ಷ, ಆಕಾಶ (ಸ್ವರ್ಗ), ತೇಜಸ್ಸು, ಜನ, ತಪಸ್ಸು, ಸತ್ಯ, ಲೋಕ ಇವುಗಳ ಸ್ವರೂಪಿಯಾದ ನಿನಗೆ ನಮಸ್ಕಾರಗಳು.

೨೦೦. ಅವ್ಯಕ್ತರೂಪಿಯೂ, ಮಹಾತ್ಮನೂ, ಮಹತ್ತತ್ವಾಭಿಮಾನಿಯೂ, ಭೂತರೂಪಿಯೂ, ಇಂದ್ರಿಯಪ್ರೇರಕನೂ, ಮಂತ್ರದ್ರಷ್ಟೃವೂ, ಮಹಾನಾಶಕನೂ, ತತ್ವರೂಪಿಯೂ ಆದ ನಿನಗೆ ಅನಂತ ವಂದನೆಗಳು.

೨೦೧. ನಿತ್ಯನೂ, ಲಿಂಗರೂಪಿಯೂ, ಸೂಕ್ಷ್ಮರೂಪಿಯೂ, ಚೇತನಸ್ವರೂಪಿಯೂ, ಶುದ್ಧರೂಪಿಯೂ, ಶ್ರೀಮಂತನೂ, ನಿತ್ಯಾತ್ಮನೂ ಆದ ನಿನಗೆ ಅನಂತ ವಂದನೆಗಳು.

೨೦೨. ಭೂಲೋಕವೇ ಆದಿಯಾಗಿ ಸ್ವರ್ಲೋಕವೇ ಕೊನೆಯಾದ ಅಂದರೆ ಭೂಲೋಕ, ಭುವರ್ಲೋಕ, ಸ್ವರ್ಗಲೋಕಗಳೆಂಬ ಮೂರು ಲೋಕಗಳಲ್ಲಿರತಕ್ಕವನೂ ಮಹದಾದಿ ಸತ್ಯಲೋಕವೇ ಕೊನೆಯಾದ ಅಂದರೆ ಮಹರ್ಲೋಕ, ಜನಲೋಕ, ತಪೋಲೋಕ, ಸತ್ಯಲೋಕವೆಂಬ ನಾಲ್ಕು ಲೋಕಗತನೂ ಆದ ನಿನಗೆ ನಮಸ್ಕಾರಗಳು.

**ನಮಃ ಸ್ತೋತ್ರೇ ಮಯಾ ಹ್ಯಸ್ಮಿನ್ ಸದಸದ್ವ್ಯಾಹೃತಂ ವಿಭೋ ।**
**ಮದ್ಭಕ್ತ ಇತಿ ಬ್ರಹ್ಮಣ್ಯ ಸರ್ವಂತತ್ ಕ್ಷಂತುಮರ್ಹಸಿ ॥ ೨೦೩ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ “ ವಿಷ್ಣುಮಾಹಾತ್ಮ್ಯೇ ಶಂಭುಸ್ತವಕೀರ್ತನಂ ” ನಾಮ ಪಂಚತ್ರಿಂಶೋಽಧ್ಯಾಯಃ**

---

೨೦೩. ಎಲೈ ಸ್ವಾಮಿಯೇ, ನಾನು ಮಾಡಿರುವ ಈ ಸ್ತೋತ್ರಗಳಲ್ಲಿರುವ ಯುಕ್ತಾಯುಕ್ತಗಳೆಲ್ಲವನ್ನೂ ಅಪರಾಧಗಳನ್ನೂ ನನ್ನ ಭಕ್ತನೂ, ಬ್ರಾಹ್ಮಣನೂ ಆದ ಶಿಷ್ಯನು ಮಾಡಿರುವನೆಂದು ತಿಳಿದು ಕ್ಷಮಿಸಬೇಕು ಮತ್ತು ಪರಮಾನುಗ್ರಹವನ್ನು ಮಾಡಬೇಕು. ಇಂತಹ ಭಕ್ತವತ್ಸಲನಾದ ನಿನಗೆ ನಮಸ್ಕಾರಮಾಡುತ್ತೇನೆಂದು ಶುಕ್ರನು ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಶ್ರೀ ಮಹಾಪುರಾಣದಲ್ಲಿ ವಿಷ್ಣುಮಹಾತ್ಮ್ಯಗಳಲ್ಲಿ
ಈಶ್ವರಸ್ತೋತ್ರಕೀರ್ತನವೆಂಬ ಮೂವತ್ತೈದನೆಯ
ಅಧ್ಯಾಯವು ಮುಗಿದುದು.



ಅಧ್ಯಾಯ ೫೫

## ಐವತ್ತೈದನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ವಿಷ್ಣುವಿನ ಮಹಾಮಹಿಮೆಯೂ. ಈಶ್ವರನ ಸ್ತೋತ್ರವೂ ಉಕ್ತವಾಗಿವೆ. ಶ್ರೀಮನ್ನಾರಾಯಣನು ಈ ಭೂಮಂಡಲದಲ್ಲಿ ಪುನಃ ಪುನಃ ಅವತರಿಸಲು ಕಾರಣವೇನು ? ಭಗವಂತನು ಸಮಸ್ತ ಭೂತಗಳು, ಲೋಕಗಳು, ಶರೀರ. ಜೀವ ಇವೇ ಮೊದಲಾದವುಗಳನ್ನು ತಾನೇ ಸೃಷ್ಟಿಸಿ, ಸಂಹರಿಸಲು ಕಾರಣವು ಯಾವದು ? ಎಂದು ಕೇಳಲು ಸೂತನು ಹೇಳಿದನು.

ರಾಕ್ಷಸಾದಿಗಳ ಪೀಡೆಯು ಅಧಿಕವಾಗಿ ಧರ್ಮಗಳು ಲೋಪವಾಗಲು ಧರ್ಮ ಸ್ಥಾಪನೆಗಾಗಿ ಶ್ರೀಹರಿಯು ನರಸಿಂಹ, ವಾಮನ, ವರಾಹ ಇವೇ ಮೊದಲಾದ ಅವತಾರಗಳನ್ನು ಮಾಡಿ ರಾಕ್ಷಸರನ್ನು ಸಂಹರಿಸಿ ಧರ್ಮಗಳನ್ನು ಸ್ಥಾಪಿಸುವನು. ಹೀಗೆ ಹತಾವಶಿಷ್ಟರಾದ ದೈತ್ಯರು ದೇವತೆಗಳಿಂದ ಪೀಡಿತರಾಗಿ ತಮ್ಮ ಗುರುಗಳಾದ ಶುಕ್ರರನ್ನು ಮೊರೆಹೊಕ್ಕರು.

ಅವರು ನಾನು ಈಶ್ವರನಿಂದ ವರಗಳನ್ನು ಪಡೆದು ಬರುವವರೆಗೂ ನೀವು ತಪಸ್ಸನ್ನು ಮಾಡಿ ಎಂದು ಹೇಳಿ ಹೋದನು. ಈ ರಹಸ್ಯವನ್ನು ತಿಳಿದ ದೇವತೆಗಳು ಆ ಅಸುರರ ಸಂಗಡ ಹೋರಾಡಿ ಅವರನ್ನು ಅಟ್ಟಿದರು. ತರುವಾಯ ಅಸುರರು ಗುರುಗಳ ಮಾತೆಯನ್ನು ಮೊರೆಹೊಕ್ಕರು. ಆಕೆಯು ಅವರ ಪಕ್ಷವನ್ನು ವಹಿಸಿಕೊಂಡು ಲೋಕದಲ್ಲಿ ಇಂದ್ರನು ಇಲ್ಲದಹಾಗೆ ಮಾಡುವೆನೆಂದು ಯತ್ನಿಸಲು ಶ್ರೀಹರಿಯು ಇಂದ್ರನ ಪ್ರಾರ್ಥನೆಯಂತೆ ಅವಳ ಶಿರಚ್ಛೇದನವನ್ನು ಮಾಡಿದನು. ಆಗ ಅವಳ ಪತಿಯಾದ ಭೃಗುಮಹರ್ಷಿಯು ತನ್ನ ತಪಃಪ್ರಭಾವದಿಂದ ಅವಳನ್ನು ಬದುಕಿಸಿ ಸ್ತ್ರೀಹತ್ಯೆಮಾಡಿರುವುದರಿಂದ ಅನೇಕಾವೃತ್ತಿ ಮನುಷ್ಯರೂಪದಲ್ಲಿ ಅವತರಿಸುವಂತೆ ಹರಿಗೆ ಶಾಪಕೊಟ್ಟನು. ಇದರಿಂದ ಧರ್ಮಸ್ಥಾಪನೆಗಾಗಿ ಶ್ರೀಹರಿಯು ಭೂಮಿಯಲ್ಲಿ ಅವತರಿಸಿ ಧರ್ಮರಕ್ಷಣೆಯನ್ನು ಮಾಡಿದನು.

ಅನಂತರ ಇಂದ್ರನು ತನ್ನ ಪುತ್ರಿಯನ್ನು ಶುಕ್ರನ ಸೇವೆಗಾಗಿ ನೇಮಿಸಲು ಅವಳು ಪಾದಸೇವಾದಿಗಳಿಂದ ಗುರುಗಳನ್ನು ಉಪಚರಿಸುತ್ತಿದ್ದಳು. ಆಗ ಶುಕ್ರನು ಧೂಮಪಾನವನ್ನು ಮಾಡುತ್ತಾ ಘೋರತಪಸ್ಸನ್ನು ಮಾಡಿದನು. ಅದರಿಂದ ಈಶ್ವರನು ಪ್ರೀತನಾಗಿ ಪ್ರತ್ಯಕ್ಷವಾಗಲು ಶುಕ್ರನು ಶ್ರೀಹರನನ್ನು ನಾನಾ ರೀತಿಯಾಗಿ ಸಹಸ್ರ ನಾಮಗಳಿಂದ ಹೊಗಳಿದನು. ಇದರಿಂದ ಪ್ರೀತನಾದ ಈಶ್ವರನು ಅವನಿಗೆ ವರಗಳನ್ನು ಕೊಟ್ಟು ಮಾಯವಾದನು.



—॥ ಹರಿಃ ಓಂ ॥—

—॥ ಶ್ರೀ ವೇದವ್ಯಾಸಾಯ ನಮಃ ॥—

# ಶ್ರೀಮದ್ವಾಯು ಮಹಾಪುರಾಣಂ

## ಷಟ್‌ತ್ರಿಂಶೋಽಧ್ಯಾಯಃ

**॥ ಸೂತ ಉವಾಚ ॥**

**ಏವಮಾರಾಧ್ಯ ದೇವೇಶಮೀಶಾನಂ ನೀಲಲೋಹಿತಂ ।**
**ಬ್ರಹ್ಮೇತಿ ಪ್ರಣತಸ್ತಸ್ಮೈ ಪ್ರಾಂಜಲಿರ್ವಾಕ್ಯಮಬ್ರವೀತ್ ॥ ೧ ॥**

**ಕಾವ್ಯಸ್ಯ ಗಾತ್ರಂ ಸಂಸ್ಪೃಶ್ಯ ಹಸ್ತೇನ ಪ್ರೀತಿವಾನ್ ಭವಃ ।**
**ನಿಕಾಮಂ ದರ್ಶನಂ ದತ್ವಾ ತತ್ರೈವಾಂತರಧೀಯತ ॥ ೨ ॥**

**ತತಃ ಸೋಽಂತರ್ಹಿತೇ ತಸ್ಮಿನ್ ದೇವಾಶಾನುಚರೇ ತದಾ ।**
**ತಿಷ್ಠಂತೀಂ ಪ್ರಾಂಜಲಿಭೂರ್ತ್ವಾ ಜಯಂತೀಮಿದಮಬ್ರವೀತ್ ॥ ೩ ॥**

## ಮೂವತ್ತಾರನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :—ಶುಕ್ರಾಚಾರ್ಯನು ಪೂರ್ವೋಕ್ತಕ್ರಮದಲ್ಲಿ ದೇವೇಶನೂ, ನೀಲಲೋಹಿತನೂ, ಬ್ರಹ್ಮರೂಪಿಯೂ ಆದ ಈಶ್ವರನಿಗೆ ನಮಸ್ಕಾರವನ್ನು ಮಾಡಿ ಅಂಜಲಿಬದ್ಧನಾಗಿ ಪ್ರಾರ್ಥಿಸಿಕೊಂಡನು.

೨. ಅನಂತರ ಪರಮೇಶ್ವರನು ಪ್ರೀತನಾಗಿ ತನ್ನ ಹಸ್ತಗಳಿಂದ ಅವನನ್ನು ಸ್ಪರ್ಶಮಾಡಿ ಸ್ವೇಚ್ಛೆಯಾಗಿ ದರ್ಶನವನ್ನು ಕೊಟ್ಟು ಅಲ್ಲಿಯೇ ತಕ್ಷಣದಲ್ಲಿಯೇ ಸಪರಿವಾರವಾಗಿ ಮಾಯವಾದನು.

೩. ಈಶ್ವರನು ಹೀಗೆ ವರಗಳನ್ನು ಕೊಟ್ಟು ಮಾಯವಾಗಲು ಈಶ್ವರನ ಭಕ್ತನಾದ ಶುಕ್ರನು ಅಂಜಲಿಬದ್ಧನಾಗಿ ಪಕ್ಕದಲ್ಲಿ ನಿಂತಿರುವ ಭಕ್ತಳಾದ ಜಯಂತಿಯನ್ನು ನೋಡಿ ಹೀಗೆ ಹೇಳಿದನು.

**ಕಸ್ಯ ತ್ವಂ ಸುಭಗೇ ಕಾ ವಾ ದುಃಖಿತೇ ಮಯಿ ದುಃಖಿತಾ ।**
**ಮಹತಾ ತಪಸಾ ಯುಕ್ತಂ ಮಾಂ ಕಿಮರ್ಥಂ ಜುಗೋಪಸಿ ॥ ೪ ॥**

**ಅನಯಾ ಸತತಂ ಭಕ್ತ್ಯಾ ಪ್ರಶ್ರಯೇಣ ದಮೇನ ಚ ।**
**ಸ್ನೇಹೇನ ಚೈವ ಸುಶ್ರೋಣಿ ಪ್ರೀತೋಽಸ್ಮಿ ವರವರ್ಣಿನಿ ॥ ೫ ॥**

**ಕಿಮಿಚ್ಛಸಿ ವರಾರೋಹೇ ಕಸ್ತೇ ಕಾಮಃ ಸಮೃಧ್ಯತಾಂ ।**
**ತಂ ತೇ ಸಂಪೂರಯಾಮ್ಯದ್ಯ ಯದ್ಯಪಿ ಸ್ಯಾತ್ ಸುದುರ್ಲಭಂ ॥ ೬ ॥**

**ಏವಮುಕ್ತಾಽಬ್ರವೀದೇನಂ ತಪಸಾ ಜ್ಞಾತುಮರ್ಹಸಿ ।**
**ಚಿಕೀರ್ಷಿತಂ ಮೇ ಬ್ರಹ್ಮಿಷ್ಠ ತ್ವಂ ಹಿ ವೇತ್ಥ ಯಥಾತಥಂ ॥ ೭ ॥**

೪. ಓ ಮಂಗಳಾಂಗಿಯೇ, ದುಃಖಿತನಾಗಿ ತಪಸ್ಸನ್ನು ಮಾಡುವ ನನ್ನ ಸಂಗಡ ದುಃಖಪಡುತ್ತಿರುವ ನೀನು ಯಾರು ? ಎಲೌ ಮಂಜುಭಾಷಿಣಿ ಮಹಾ ತಪಸ್ಸಿನಲ್ಲಿ ಮಗ್ನನಾಗಿದ್ದ ನನ್ನನ್ನು ಕಾಪಾಡಿದಂಥ ನೀನು ಯಾರು ? ಹೀಗೆ ಸೇವಿಸಲು ಕಾರಣವೇನೆಂದನು.

೫. ಎಲೌ ಕುಮಾರೀ ಕೋಮಲಾಂಗಿಯೂ, ಸುಂದರಿಯೂ ಆದ ನಿನ್ನ ಈ ಅವಿಚ್ಛಿನ್ನವಾದ ಭಕ್ತಿ, ನಮ್ರತೆ, ವಿನಯ, ಸ್ನೇಹ ಇವುಗಳಿಂದ ನಿನಗೆ ನಾನು ಬಹಳವಾಗಿ ಪ್ರೀತನಾಗಿರುವೆನು ಎಂದನು.

೬. ಹೇ ಕೋಮಲಾಂಗಿ, ನೀನು ಏನನ್ನು ಬಯಸುತ್ತೀ ? ನಿನ್ನ ಕೋರಿಕೆಯು ಯಾವುದು ? ಬೇಡಿಕೋ, ಆ ನಿನ್ನ ಕೋರಿಕೆಯು ಅತ್ಯಂತ ದುರ್ಲಭವಾಗಿದ್ದರೂ ನಾನು ಅದನ್ನು ನೆರವೇರಿಸಿಕೊಡುತ್ತೇನೆ ಎಂದು ಹೇಳಿದನು.

೭. ಹೀಗೆ ಶುಕ್ರನು ಹೇಳಲು ಜಯಂತಿಯು ಬ್ರಹ್ಮಜ್ಞಾನಿಗಳಾದ ಮಹರ್ಷಿಗಳೇ, ತಾವು ತಪಃಶ್ಶಕ್ತಿಯಿಂದ ನನ್ನ ಕೋರಿಕೆಗಳನ್ನು ಯಥಾಸ್ಥಿತವಾಗಿ ತಿಳಿದೇ ಇದ್ದೀರಿ. ಜ್ಞಾನಿಗಳಾದ ತಮಗೆ ನಾನು ಹೇಳುವುದು ಏನಿರುತ್ತದೆ ಎಂದು ತನ್ನ ಮನೋಗತವಾದ ಭಾವವನ್ನು ತಿಳಿಸಿದಳು.

**ಏವಮುಕ್ತೋಽಬ್ರವೀದೇನಾಂ ದೃಷ್ಟ್ವಾ ದಿವ್ಯೇನ ಚಕ್ಷುಷಾ ।**
**ಮಾಹೇಂದ್ರೀ ತ್ವಂ ವರಾರೋಹೇ ಮದ್ಧಿತಾರ್ಥಮಿಹಾಗತಾ ॥ ೮ ॥**

**ಮಯಾ ಸಹ ತ್ವಂ ಸುಶ್ರೋಣಿ ದಶ ವರ್ಷಾಣಿ ಭಾಮಿನಿ ।**
**ಅದೃಶ್ಯಂ ಸರ್ವಭೂತೈಸ್ತು ಸಂಪ್ರಯೋಗಮಿಹೇಚ್ಛಸಿ ॥ ೯ ॥**

**ದೇವೇಂದ್ರಾನಲವರ್ಣಾಭೇ ವರಾರೋಹೇ ಸುಲೋಚನೇ ।**
**ಇಮಂ ವೃಣೀಷ್ವ ಕಾಮಂ ತೇ ಮತ್ತೋ ವೈ ವಲ್ಗುಭಾಷಿಣಿ ॥ ೧೦ ॥**

**ಏವಂ ಭವತು ಗಚ್ಛಾವೋ ಗೃಹಾನ್ ವೈ ಮತ್ತಕಾಶಿನಿ ।**
**ತತಃ ಸ್ವಗೃಹಮಾಗಮ್ಯ ಜಯಂತ್ಯಾ ಸಹಿತಃ ಪ್ರಭುಃ ॥ ೧೧ ॥**

೮. ಹೀಗೆ ಜಯಂತಿಯು ಹೇಳಲಾಗಿ ತಪೋಜನ್ಯವಾದ ದಿವ್ಯಜ್ಞಾನದಿಂದ ಅವಳ ಮನೋಗತವಾದ ಅಭಿಪ್ರಾಯಗಳನ್ನರಿತು ಓ ಸುಂದರಿ. ನೀನು ಇಂದ್ರನ ಕುಮಾರಿಯಾದ ಜಯಂತಿಯಲ್ಲವೇ ? ನನ್ನ ಹಿತಕ್ಕಾಗಿ ಇಲ್ಲಿಗೆ ಬಂದಿರುತ್ತೀಯೇ ಎಂದು ಅವಳಿಗೆ ಹೇಳಿದನು.

೯. ಸುಂದರಿಯಾದ ಎಲೌ ನಾರೀಮಣಿಯೇ, ನೀನು ಹತ್ತು ವರ್ಷಗಳ ವರೆಗೂ ನನ್ನ ಜೊತೆಯಲ್ಲಿಯೇ ಸರ್ವಪ್ರಾಣಿಗಳಿಗೂ ಕಾಣದಂತೆ ಇದ್ದುಕೊಂಡು ಸೇವೆಯನ್ನು ಮಾಡಿರುತ್ತೀಯೇ ಇದಕ್ಕೆ ಪ್ರೀತನಾಗಿರುವೆನೆಂದನು.

೧೦. ಇಂದ್ರನ ಕುಮಾರಿಯೂ, ಅಗ್ನಿಯಂತೆ ತೇಜೋವಂತಳೂ, ಸುಲೋಚನೆಯೂ, ಮಧುರಭಾಷಿಣಿಯೂ, ಸುಂದರಿಯೂ ಆದ ಎಲೌ ನಾರೀಮಣಿಯೇ, ನೀನು ಮಾಡಿದ ಸೇವೆಗೆ ಪ್ರೀತನಾಗಿರುವೆನು. ನಿನ್ನ ಇಷ್ಟಾರ್ಥಗಳನ್ನು ಕೇಳಿಕೋ ಎಂದನು.

೧೧. ಎಲೌ ಹಂಸಗಮನವುಳ್ಳ ಸಾಧ್ವೀಮಣಿಯೇ, ನೀನು ಕೋರಿದಂತೆಯೇ ನಿನ್ನ ಮನೋರಥಗಳೆಲ್ಲವೂ ನೆರವೇರಲಿ. ನಮ್ಮ ಮನೆಗೆ ಹೋಗೋಣ ಬಾ ಎಂದು ಹೇಳಿ ಶುಕ್ರನು ಆ ಜಯಂತಿಯ ಸಂಗಡ ತನ್ನ ಗೃಹಕ್ಕೆ ಹೋದನು.

ಸ ತಯಾ ಸಂವಸದ್ದೇವ್ಯಾ ದಶ ವರ್ಷಾಣಿ ಭಾಗಶಃ ।
ಅದೃಶ್ಯಃ ಸರ್ವಭೂತಾನಾಂ ಮಾಯಯಾ ಸಂವೃತಸ್ತದಾ ॥ ೧೨ ॥

ಕೃತಾರ್ಥಮಾಗತಂ ದೃಷ್ಟ್ವಾ ಕಾವ್ಯಂ ಸರ್ವೇ ದಿತೇಃ ಸುತಾಃ ।
ಅಭಿಜಗ್ಮುರ್ಗೃಹಂ ತಸ್ಯ ಮುದಿತಾಸ್ತೇ ದಿದೃಕ್ಷವಃ ॥ ೧೩ ॥

ಗತಾ ಯದಾ ನ ಪಶ್ಯಂತೋ ಜಯಂತ್ಯಾ ಸಂವೃತಂ ಗುರುಂ ।
ದಾಕ್ಷಿಣ್ಯಂ ತಸ್ಯ ತದ್ಬುಧ್ವಾ ಪ್ರತಿಜಗ್ಮುರ್ಯಥಾಗತಂ ॥ ೧೪ ॥

ಬೃಹಸ್ಪತಿಸ್ತು ಸಂರುದ್ಧಂ ಜ್ಞಾತ್ವಾ ಕಾವ್ಯಂ ಚಕಾರ ಹ ।
ಪಿತ್ರರ್ಥೇ ದಶ ವರ್ಷಾಣಿ ಜಯಂತ್ಯಾ ಹಿತಕಾಮ್ಯಯಾ ॥ ೧೫ ॥

೧೨. ಅನಂತರ ಶುಕ್ರನು ಹತ್ತು ವರ್ಷಗಳವರೆಗೂ ಪ್ರತ್ಯೇಕವಾಗಿ ತನ್ನ ಮಾಯೆಯಿಂದ ಸರ್ವಭೂತಗಳಿಗೂ ಕಾಣಿಸದಂತೆ ಆ ಜಯಂತಿಯ ಸಂಗಡ ಸುಖವಾಗಿ ವಾಸಿಸಿದನು.

೧೩. ಅನಂತರ ದಿತೀದೇವಿಯ ಪುತ್ರರಾದ ಸಮಸ್ತರಾದ ಅಸುರರೂ ಸಂತೋಷಗೊಂಡು ತಪಸ್ಸಿದ್ಧಿಯಿಂದ ಕೃತಾರ್ಥರಾಗಿ ಬಂದಿರುವ ತಮ್ಮ ಗುರುಗಳನ್ನು ನೋಡಲು ಅವರ ಮನೆಗೆ ಹೋದರು.

೧೪. ಅವರು ಬಂದು ಯಾವಾಗ ನೊಡಿದರೋ ಆಗ ಗುರುಗಳು ಜಯಂತಿಯ ಸಂಗಡ ಕೂಡಿ ರಹಸ್ಯವಾಗಿರುವ ವಿಷಯವನ್ನರಿತು ನಮ್ಮ ಗುರುಗಳು ದಾಕ್ಷಿಣ್ಯಕ್ಕೆ ಒಳಗಾದರೆಂದು ತಿಳಿದು ಎಲ್ಲರು ಸುಮ್ಮನೆ ಏನೂ ಹೇಳದೇ ಹಿಂತಿರುಗಿದರು.

೧೫. ಜಯಂತಿಯು ತಮ್ಮ ತಂದೆಯಾದ ಇಂದ್ರನ ಹಿತಕ್ಕಾಗಿ ಹತ್ತು ವರ್ಷಗಳು ಶುಕ್ರಾಚಾರ್ಯನಿಗೆ ಸೇವೆಯನ್ನು ಮಾಡಿದಳೆಂದು ಬೃಹಸ್ಪತಿಗಳು ತಿಳಿದು ಕೋಪಗೊಂಡರು.

**ಬುದ್ಧ್ವಾ ತದಂತರಂ ಸೋಽಥ ದೈತ್ಯಾನಾಮಿವ ಚೋದಿತಃ ।**
**ಕಾವ್ಯಸ್ಯ ರೂಪಮಾಸ್ಥಾಯ ಸೋಽಸುರಾನ್ ಸಮಭಾಷತ ॥ ೧೬ ॥**

**ತತಃ ಸಮಾಗತಾನ್ ದೃಷ್ಟ್ವಾ ಬೃಹಸ್ಪತಿರುವಾಚ ತಾನ್ ।**
**ಸ್ವಾಗತಂ ಮಮ ಯಾಜ್ಯಾನಾಂ ಸಂಪ್ರಾಪ್ತೋಽಸ್ಮಿ ಹಿತಾಯ ಚ ॥ ೧೭ ॥**

**ಅಹಂ ವೋಽಧ್ಯಾಪಯಿಷ್ಯಾಮಿ ಪ್ರಾಪ್ತಾ ವಿದ್ಯಾ ಮಯಾ ಹಿ ಸಾ ।**
**ತತಸ್ತೇ ಹೃಷ್ಟಮನಸೋ ವಿದ್ಯಾರ್ಥಮುಪಪೇದಿರೇ ॥ ೧೮ ॥**

**ಪೂರ್ಣಕಾಮಸ್ತದಾ ತಸ್ಮಿನ್ ಸಮಯೇ ದಶವಾರ್ಷಿಕೇ ।**
**ಯಯೌ ಚ ಸಮಕಾಲಂ ಸ ಸದ್ಯೋಽತ್ಪನ್ನಮತಿಸ್ತದಾ ॥ ೧೯ ॥**

---

೧೬. ಅನಂತರ ಬೃಹಸ್ಪತಿಗಳು ಈ ವಿಷಯವನ್ನು ಚೆನ್ನಾಗಿ ತಿಳಿದು ದೈತ್ಯರಿಂದ ಪ್ರೇರಿತರಾದರೋ ಏನೋ ಎಂಬಂತೆ ಶುಕ್ರನ ರೂಪವನ್ನು ಧರಿಸಿ ಅಸುರರ ಮುಂದೆ ನಿಂತು ವಕ್ಷ್ಯಮಾಣರೀತಿಯಾಗಿ ಹೇಳಿದರು.

೧೭. ಅನಂತರ ಸಮೀಪಕ್ಕೆ ಬಂದಂಥ ಅವರನ್ನು ನೋಡಿ ಬೃಹಸ್ಪತಿಗಳು ಹೇಳಿದ್ದೇನೆಂದರೆ, ಎಲೈ ದೈತ್ಯಪುಂಗವರೇ, ನಿಮಗೆ ಸುಖಾಗಮನವೇ ? ಕ್ಷೇಮವೇ ? ನಿಮ್ಮ ಹಿತಕ್ಕಾಗಿ ನಾನು ಪ್ರಯತ್ನಪಡುತ್ತೇನೆಂದು ಹೇಳಿದನು.

೧೮. ಎಲೈ ದೈತ್ಯವರ್ಯರೇ, ನಾನು ಇಷ್ಟು ದಿವಸಗಳು ತಪಸ್ಸುಮಾಡಿ ಈಶ್ವರನಿಂದ ಯಾವ ವಿದ್ಯೆಯನ್ನು ಕಲಿತಿರುತ್ತೇನೆಯೋ, ಅಂತಹ ವಿದ್ಯೆಯನ್ನು ಉಪದೇಶಿಸುವೆನು ಎಂದನು. ಆಗ ಅವರು ಸಂತುಷ್ಟರಾಗಿ ವಿದ್ಯಾಸಂಪಾದನೆಗಾಗಿ ಸೇವಿಸಿದರು.

೧೯. ಹೀಗೆ ಹತ್ತುವರ್ಷಗಳಕಾಲ ಶುಕ್ರನು ಜಯಂತಿಯೊಡನೆ ಪೂರ್ಣಕಾಮನಾಗಿ ಸುಖಸಲ್ಲಾಪಗಳೊಡನೆ ಇದ್ದನು. ಹೀಗೆ ಆ ಹತ್ತುವರ್ಷಗಳು ಕಳೆಯಲು ತೃಪ್ತಿಯುಂಟಾಯಿತು.

ಸಮಯಾಂತೇ ದೇವಯಾನೀ ಸದ್ಯೋ ಜಾತಾ ಸುತಾ ತದಾ।
ಬುದ್ಧಿಂ ಚಕ್ರೇ ತತಶ್ಚಾಪಿ ಯಾಜ್ಯಾನಾಂ ಪ್ರತ್ಯವೇಕ್ಷಣೇ ॥ ೨೦ ॥

॥ ಶುಕ್ರ ಉವಾಚ ॥

ದೇವಿ ಗಚ್ಛಾಮಹೇ ದ್ರಷ್ಟುಂ ತವ ಯಾಜ್ಯಾನ್ ಶುಚಿಸ್ಮಿತೇ।
ವಿಭ್ರಾಂತಪ್ರೇಕ್ಷಿತೇ ಸಾಧ್ವಿ ತ್ರಿವರ್ಣಾಯತಲೋಚನೇ ॥ ೨೧ ॥

ಏವಮುಕ್ತಾಽಬ್ರವೀದ್ದೇವೀ ಭಜ ಭಕ್ತಾನ್ ಮಹಾವ್ರತ।
ಏಷ ಬ್ರಹ್ಮನ್ ಸತಾಂ ಧರ್ಮೋ ನ ಧರ್ಮಂ ಲೋಪಯಾಮಿ ತೇ ॥ ೨೨ ॥

॥ ಸೂತ ಉವಾಚ ॥

ತತೋ ಗತ್ವಾಸುರಾನ್ ದೃಷ್ಟ್ವಾ ದೇವಾಚಾರ್ಯೇಣ ಧೀಮತಾ।
ವಂಚಿತಾನ್ ಕಾವ್ಯರೂಪೇಣ ವೇಧಸಾಽಸುರಮಬ್ರವೀತ್ ॥ ೨೩ ॥

೨೦. ಹೀಗೆ ಹತ್ತು ವರ್ಷಗಳು ಕಳೆಯಲು ಆ ದಂಪತಿಗಳಿಗೆ ದೇವಯಾನಿಯೆಂಬ ಕುಮಾರಿಯು ಉದ್ಭವಿಸಿದಳು. ತರುವಾಯ ಶುಕ್ರಾಚಾರ್ಯನು ತಮ್ಮ ಶಿಷ್ಯರಾದ ಅಸುರರನ್ನು ವಿಚಾರಿಸಬೇಕೆಂದು ಆಲೋಚಿಸಿದನು.

೨೧. ಶುಕ್ರಾಚಾರ್ಯನು ಹೇಳಿದನು:—ಮಂದಹಾಸಯುಕ್ತಳೂ, ತ್ರಿವರ್ಣವಿರುವ ವಿಶಾಲನೇತ್ರೆಯೂ, ಚಂಚಲಾಕ್ಷಿಯೂ, ಪತಿವ್ರತೆಯೂ, ಭ್ರಾಂತವಾದ ದರ್ಶನವುಳ್ಳವಳೂ ಆದ ಪ್ರಿಯಳೇ, ನನ್ನ ಭಕ್ತರಾದ ಶಿಷ್ಯರನ್ನು ನೋಡಲಿಚ್ಛಿಸುವೆನೆಂದು ಶುಕ್ರನು ಜಯಂತಿಗೆ ಹೇಳಿದನು.

೨೨. ಹೀಗೆ ಹೇಳಿದ ಪತಿಯ ವಾಕ್ಯವನ್ನು ಕೇಳಿದ ಜಯಂತಿಯು ಮಹಾತಪಸ್ವಿಯಾದ ಪ್ರಿಯನೇ ಭಕ್ತರನ್ನು ಉದ್ಧರಿಸು. ಹೀಗೆ ಭಕ್ತರನ್ನು ಸಲಹುವುದೇ ಜ್ಞಾನಿಗಳ ಧರ್ಮವು. ಇಂತಹ ಧರ್ಮವನ್ನು ನಾನು ನಾಶಮಾಡಲಾರೆನು ಎಂದು ಹೇಳಿದಳು.

೨೩. ಸೂತಮುನಿಯು ಹೇಳಿದನು :—ಅನಂತರ ಶುಕ್ರನು ಅಸುರರ ಬಳಿಗೆ ಹೋಗಿ ಅವರನ್ನು ನೋಡಿ ದೇವಗುರುವೂ, ಶುಕ್ರರೂಪಿಯೂ, ಜ್ಞಾನಿಯೂ ಆದ ಬೃಹಸ್ಪತಿಯಿಂದ ಇವರು ವಂಚಿತರಾಗಿರುವರೆಂದು ತಿಳಿದು ಅವರಿಗೆ ಇಂತೆಂದರು

ಕಾವ್ಯಂ ಮಾಂ ತಾತ ಜಾನೀಧ್ವಂ ಏಷ ಹ್ಯಾಂಗಿರಸೋ ಭುವಿ ।
ವಂಚಿತಾ ಬತ ಯೂಯಂ ವೈ ಮಯಿ ಶಕ್ತೇ ತು ದಾನವಾಃ ॥ ೨೪ ॥

ಶ್ರುತ್ವಾ ತಥಾ ಬ್ರುವಾಣಂ ತಂ ಸಂಭ್ರಾಂತಾ ದಿತಿಜಾಸ್ತತಃ ।
ಪ್ರೇಕ್ಷಂತೇ ಸ್ಮ ಹ್ಯುಭೌ ತತ್ರ ಸಿತಾಸೀತ ಶುಚಿಸ್ಮಿತೌ ॥ ೨೫ ॥

ಸಂಪ್ರಮೂಢಾಃ ಸ್ಥಿತಾಃ ಸರ್ವೇ ಪ್ರಾಪದ್ಯಂತ ನ ಕಿಂಚನ ।
ತತಸ್ತೇಷು ಪ್ರಮೂಢೇಷು ಕಾವ್ಯಸ್ತಾರ್ಥ ಪುನರಬ್ರವೀತ್ ॥ ೨೬ ॥

ಆಚಾರ್ಯೋ ವೋ ಹ್ಯಯಂ ಕಾವ್ಯೋ ದೇವಾಚಾರ್ಯೋಽಯಮಂಗಿರಾಃ ।
ಅನುಗಚ್ಛತ ಮಾಂ ಸರ್ವೇ ತ್ಯಜತ್ವೈನಂ ಬೃಹಸ್ಪತಿಂ ॥ ೨೭ ॥

---

೨೪. ಎಲೈ ಪ್ರಿಯ ಶಿಷ್ಯರೇ, ನಾನೇ ನಿಮ್ಮ ಗುರುವಾಗಿರುವೆನು. ಇವರು ನನ್ನಂತೆ ವೇಷಧಾರಿಯಾದ ಬೃಹಸ್ಪತಿಗಳು. ಇವರು ನಿಮ್ಮನ್ನು ವಂಚಿಸಲೋಸ್ಕರ ವಾಗಿ ಹೀಗೆ ಬಂದಿರುತ್ತಾರೆ. ನಾನು ನಿಮ್ಮಿಷ್ಟಗಳನ್ನು ನೆರವೇರಿಸಲು ಬಂದಿರುತ್ತೇನೆ ಎಂದು ಹೇಳಿದನು.

೨೫. ಅನಂತರ ಆ ಅಸುರರು ಅವರ ಮಾತುಗಳನ್ನು ಕೇಳಿ ಭ್ರಾಂತರಾಗಿ, ಸಮಾನರೂಪಿಗಳಾಗಿ ಇರುವ ಇಬ್ಬರು ಗುರುಗಳನ್ನು ನೋಡಿ ಆಶ್ಚರ್ಯಗೊಂಡು ಭ್ರಾಂತರಾದರು.

೨೬. ಆಗ ಆ ಅಸುರರು ಭ್ರಾಂತರಾಗಿ, ಏನುಮಾಡಬೇಕು ? ಇವರಲ್ಲಿ ಯಾರು ನಿಜವಾದ ನಮ್ಮ ಗುರುಗಳಾಗಿರುವರು ಎಂದು ಒಂದೂ ತೋಚದೆ ಸ್ತಬ್ಧರಾಗಿ ಸುಮ್ಮನೆ ನಿಂತರು. ಹೀಗೆ ಏನೂ ತೋರದೆ ಸ್ತಬ್ಧರಾಗಿರುವ ಅವರಿಗೆ ಶುಕ್ರಾಚಾರ್ಯನು ಪುನಃ ಹೇಳಿದನು.

೨೭. ಎಲೈ ಅಸುರಪುಂಗವರೇ, ನಾನು ನಿಮ್ಮ ನಿಜವಾದ ಗುರುವಾದ ಶುಕ್ರ ನಾಗಿರುವೆನು. ಅವರು ದೇವಗುರುವಾದ ಬೃಹಸ್ಪತಿಯು ನೀವು ಖಂಡಿತವಾಗಿಯೂ ಅವರನ್ನು ತ್ಯಜಿಸಿ, ನನ್ನನ್ನೇ ಭಜಿಸಿ. ಇದು ನಿಜವೆಂದು ಶುಕ್ರನು ಹೇಳಿದನು.

ಏವಮುಕ್ತಾಸುರಾಃ ಸರ್ವೇ ತಾವುಭೌ ಸಮವೈಕ್ಷತ ।
ತದಾಽಸುರಾ ವಿಶೇಷಂ ತು ನ ವ್ಯಜಾನಂಸ್ತಯೋರ್ದ್ವಯೋಃ ॥ ೨೮ ॥

ಬೃಹಸ್ಪತಿರುವಾಚೈತಾನಸಂಭ್ರಾಂತೋಽಯಮಂಗಿರಾಃ ।
ಕಾವ್ಯೋಽಹಂ ಯೋ ಗುರುರ್ದೈತ್ಯಾ ಮದ್ರೂಪೋಽಯಂ ಬೃಹಸ್ಪತಿಃ ॥ ೨೯ ॥

ಸ ಮೋಹಯತಿ ರೂಪೇಣ ಮಾಮಕೇನೈಷ ವೋಽಸುರಾಃ ।
ಶ್ರುತ್ವಾ ತಸ್ಯ ತತಸ್ತೇ ವೈ ಸಂಮಂತ್ರ್ಯಾರ್ಥವಚೋಽಬ್ರುವನ್ ॥ ೩೦ ॥

ಅಯನ್ನೋ ದಶ ವರ್ಷಾಣಿ ಸತತಂ ಶಾಸ್ತಿ ವೈ ಪ್ರಭುಃ ।
ಏಷ ವೈ ಗುರುರಸ್ಮಾಕಮಂತರೇಪ್ಸುರಯಂ ದ್ವಿಜಃ ॥ ೩೧ ॥

---

೨೮. ಹೀಗೆ ಶುಕ್ರನು ಹೇಳಲು, ಅಸುರರೆಲ್ಲರೂ ನಿಜವನ್ನು ತಿಳಿಯಬೇಕೆಂದು ಅವರಿಬ್ಬರನ್ನೂ ದೃಷ್ಟಿಸಿ ನೋಡಿದರು. ಕೊನೆಗೂ ಅವರಲ್ಲಿ ಭೇದವು ತೋರದೆ, ಪುನಃ ಭ್ರಾಂತರಾಗಿ ನಿಂತರು.

೨೯. ಆಗ ವೇಷಧಾರಿಯಾದ ಬೃಹಸ್ಪತಿಯು ಅಸುರರನ್ನು ಕುರಿತು ನಾನೇ ನಿಮ್ಮ ಗುರುವಾದ ಶುಕ್ರನು. ಇವನೇ ಬೃಹಸ್ಪತಿಯು. ಇವನು ನನ್ನಂತೆ ರೂಪವನ್ನು ಧರಿಸಿ ನಿಮ್ಮನ್ನು ವಂಚಿಸುತ್ತಿದ್ದಾನೆ. ಅದನ್ನು ನಂಬಿ ಮೂಢರಾಗಬೇಡಿರೆಂದನು.

೩೦. ತರುವಾಯ ಶುಕ್ರನು ಎಲೈ ಅಸುರವರ್ಯರೇ, ಬೃಹಸ್ಪತಿಯು ನನ್ನ ರೂಪವನ್ನು ಧರಿಸಿ ನಿಮ್ಮನ್ನು ವಂಚಿಸುತ್ತಿದ್ದಾನೆ: ಅವನನ್ನು ನಂಬಬೇಡಿರಿ ಎಂದನು. ಆ ಮಾತುಗಳನ್ನು ಕೇಳಿದ ಅವರೆಲ್ಲರೂ ಯೋಚಿಸಿ ಮುಂದೆ ಹೇಳುವಂತೆ ಅವನಿಗೆ ತಿಳಿಸಿದರು.

೩೧. ಅನಂತರ ಅಸುರರು ಸ್ವಾಮಿ, ಇವರು ನಮಗೆ ಹತ್ತು ವರ್ಷಗಳಿಂದಲೂ ಗುರುಗಳಾಗಿ ನಮ್ಮ ಹಿತಚಿಂತಕರಾಗಿರುವರು. ಆದುದರಿಂದ ಬಹುಕಾಲ ನಂಬಿದ ಗುರುಗಳನ್ನು ಬಿಡುವುದು ಯುಕ್ತವಲ್ಲ. ಇದರಿಂದ ಇವರೇ ನಮ್ಮ ಗುರುಗಳಾಗಿರುವರು. ಹೊಸದಾಗಿ ಬಂದ ವಿಪ್ರರು ನಮ್ಮ ಗುರುಗಳಲ್ಲವೆಂದು ಹೇಳಿದರು.

ತತಸ್ತೇ ದಾನವಾಃ ಸರ್ವೇ ಪ್ರಣಿಪತ್ಯಾಭಿವಾದ್ಯ ಚ ।
ವಚನಂ ಜಗೃಹುಸ್ತಸ್ಯ ಚಿರಾಭ್ಯಾಸನೇ ಮೋಹಿತಾಃ ॥ ೩೨ ॥

ಊಚುಸ್ತಮಸುರಾಃ ಸರ್ವೇ ಕ್ರುದ್ಧಾಃ ಸಂರಕ್ತಲೋಚನಾಃ ।
ಅಯಂ ಗುರುರ್ಹಿತೇಽಸ್ಮಾಕಂ ಗಚ್ಛತ್ವಂ ನಾಸಿ ನೋ ಗುರುಃ ॥ ೩೩ ॥

ಭಾರ್ಗವೋಂಗಿರಸೋ ವಾಯುಂ ಭವತ್ವೇ ನೈಷ ನೋ ಗುರುಃ ।
ಸ್ಥಿತಾ ವಯಂ ನಿದೇಶೇಽಸ್ಯ ಗಚ್ಛ ತ್ವಂ ಸಾಧು ಮಾ ಚಿರಂ ॥ ೩೪ ॥

ಏವಮುಕ್ತ್ವಾಸುರಾಃ ಸರ್ವೇ ಪ್ರಾಪದ್ಯಂತ ಬೃಹಸ್ಪತಿಂ।
ಯದಾ ನ ಪ್ರತಿಪದ್ಯಂತೇ ತೇನೋಕ್ತಂ ತನ್ಮಹದ್ಧಿತಂ ॥ ೩೫ ॥

೩೨. ಅನಂತರ ದಾನವರೆಲ್ಲರೂ ಕೂಡಿ ಬೃಹಸ್ಪತಿಗೆ ನಮಸ್ಕರಿಸಿ, ನಮ್ರರಾಗಿ ಬಹುಕಾಲದ ಪರಿಚಯದಿಂದ ಮೋಹಿತರಾಗಿ ಅವರ ಮಾತನ್ನು ಕೇಳ ತೊಡಗಿದರು.

೩೩. ತರುವಾಯ ಆ ದಾನವರೆಲ್ಲರೂ ಏಕೀಭವಿಸಿ ಕೋಪದಿಂದ ರಕ್ತಲೋಚನ ವುಳ್ಳವರಾಗಿ, ಮೊದಲಿನ ಗುರುಗಳೇ ನಮ್ಮ ಹಿತಚಿಂತಕರಾದ ಗುರುಗಳಾಗಿರುವರು. ನೀವು ನಮ್ಮ ಗುರುಗಳಲ್ಲ. ತಾವು ದಯಮಾಡಿಸಬಹುದೆಂದು ನುಡಿದರು.

೩೪. ಇವರು ಭೃಗುಪುತ್ರರೇ ಆಗಿರಲಿ ಅಥವಾ ಬೃಹಸ್ಪತಿಗಳೇ ಆಗಿರಲಿ, ಯಾರಾದರೂ ಸರಿ ಇವರೇ ನಮ್ಮ ಗುರುಗಳಾಗಿರುವರು. ಆದುದರಿಂದ ನಾವೆಲ್ಲರೂ ಇವರ ಆಜ್ಞೆಯನ್ನು ಪರಿಪಾಲಿಸುತ್ತೇವೆ. ನೀವು ತಡಮಾಡದೆ ಹೊರಡಿ ನಿಲ್ಲಬೇಡಿರಿ ಎಂದು ಹೇಳಿದನು.

೩೫. ಅನಂತರ ರಾಕ್ಷಸರೆಲ್ಲರೂ ಹೀಗೆ ಹೇಳಿ ಬೃಹಸ್ಪತಿಗಳನ್ನೇ ಗುರುಗಳ ನ್ನಾಗಿ ಭಾವಿಸಿದರು. ಮತ್ತು ಶುಕ್ರಾಚಾರ್ಯರ ನಿಜವಾದ ಹಿತೋಕ್ತಿಗಳನ್ನೂ ನಂಬಲಿಲ್ಲ.

ಚುಕೋಪ ಭಾರ್ಗವಸ್ತೇಷಾಮವಲೇಪನೇ ವೈ ತದಾ ।
ಬೋಧಿತಾ ಹಿ ಮಯಾ ಯಸ್ಮಾನ್ನ ಮಾಂ ಭಜತ ದಾನವಾಃ || ೩೬ ||

ತಸ್ಮಾತ್ ಪ್ರನಷ್ಟಸಂಜ್ಞಾ ವೈ ಪರಾಭವಂಗಮಿಷ್ಯಥ ।
ಇತಿ ವ್ಯಾಹೃತ್ಯ ತಾ೯ ಕಾವ್ಯೋ ಜಗಾಮಾಥ ಯಥಾಗತಂ || ೩೭ ||

ಜ್ಞಾತ್ವಾಭಿಶಸ್ತಾನಸುರಾನ್ ಕಾವ್ಯೇನ ತು ಬೃಹಸ್ಪತಿಃ ।
ಕೃತಾರ್ಥಃ ಸ ತದಾ ಹೃಷ್ಟಃ ಸ್ವಂ ರೂಪಂ ಪ್ರತ್ಯಪದ್ಯತ ||
ಬುದ್ಧ್ವಾಽಸುರಾಂಸ್ತದಾ ಭ್ರಷ್ಟಾನ್ ಕೃತಾರ್ಥೋಽಂತರಧೀಯತ || ೩೮ ||

ತತಃ ಪ್ರನಷ್ಟೇ ತಸ್ಮಿಂಸ್ತೇ ವಿಭ್ರಾಂತಾ ದಾನವಾಸ್ತದಾ ।
ಅಹೋ ಧಿಗ್ವಂಚಿತಾಃ ಸ್ಮೇಹ ಪರಸ್ಪರಮಥಾಬ್ರುವನ್ || ೩೯ ||

---

೩೬. ಅನಂತರ ಶುಕ್ರಾಚಾರ್ಯನು ನೀವು ಅಜ್ಞಾನದಿಂದ ನನ್ನ ಮಾತುಗಳನ್ನು ನಂಬುವುದಿಲ್ಲ. ನಾನು ಏನು ಹೇಳಿದರೂ ಅದನ್ನು ನೀವು ಕೇಳುವುದಿಲ್ಲ. ಅವರ ಮಾತನ್ನೇ ನಿಜವೆಂದು ನಂಬಿ ಅವರನ್ನೇ ಆಶ್ರಯಿಸುತ್ತೀರೆಂದು ಕೋಪಗೊಂಡನು.

೩೭. ಅನಂತರ ಶುಕ್ರಾಚಾರ್ಯನು ನನ್ನ ಮಾತನ್ನು ಕೇಳದೇ ಇರುವುದರಿಂದ ಜ್ಞಾನಶೂನ್ಯರಾಗಿ ಪರಾಭವವನ್ನು ಹೊಂದಿರಿ ಎಂದು ಶಪಿಸಿ, ಬಂದ ಮಾರ್ಗವನ್ನು ಹಿಡಿದು ಹೊರಟುಹೋದರು.

೩೮. ತರುವಾಯ ಶುಕ್ರಾಚಾರ್ಯನು ಕೋಪಿಸಿಕೊಂಡು ಅಸುರರಿಗೆ ಶಾಪವನ್ನು ಕೊಟ್ಟು ಹೊರಟುಹೋದರೆಂದು ತಿಳಿದು, ಬೃಹಸ್ಪತಿಗಳು ನಾನು ಈಗ ಕೃತಾರ್ಥನಾದೆನು. ನನ್ನ ಕಾರ್ಯವು ಸಿದ್ಧವಾಯಿತೆಂದು ಸಂತೋಷದಿಂದ ತನ್ನ ನಿಜರೂಪವನ್ನು ಪಡೆದು ಅಸುರರು ಭ್ರಷ್ಟರಾದರೆಂದು ಹೇಳಿ ಮಾಯವಾದರು.

೩೯. ಹೀಗೆ ನಂಬಿದ ಗುರುಗಳು ಮಾಯವಾಗಲು, ಭ್ರಾಂತರಾದ ದಾನವರು ಅಯ್ಯೋ, ನಾವು ಇವರಿಂದ ವಂಚಿತರಾದೆವಲ್ಲಾ, ನಮಗೆ ಧಿಕ್ಕಾರವಿರಲಿ. ಎಂದು ಪರಸ್ಪರವಾಗಿ ಭಾಷಣಮಾಡಿದರು.

ಪೃಷ್ಠತೋ ವಿಮುಖಾಶ್ಚೈವ ತಾಡಿತಾ ವೇಧಸಾ ವಯಂ ।
ದಗ್ಧಾಶ್ಚೈವೋಪಯೋಗಾಚ್ಚ ಸ್ವೇ ಸ್ವೇ ಚಾರ್ಥೇಷು ಮಾಯಯಾ ॥ ೪೦ ॥

ತತೋಽಸುರಾಃ ಪರಿತ್ರಸ್ತಾ ದೇವೇಭ್ಯಸ್ತ್ವರಿತಾ ಯಯುಃ ।
ಪ್ರಹ್ಲಾದಮಗ್ರತಃ ಕೃತ್ವಾ ಕಾವ್ಯಸ್ಯಾನುಗಮಂ ಪುನಃ ॥ ೪೧ ॥

ತತಃ ಕಾವ್ಯಂ ಸಮಾಸಾದ್ಯ ಅಭಿತಸ್ಥುರವಾಂಙ್ಮುಖಾಃ ।
ತಾನಾಗತಾನ್ ಪುನರ್ದೃಷ್ಟ್ವಾ ಕಾವ್ಯೋ ಯಾಜ್ಯಾನುವಾಚ ಹ ॥ ೪೨ ॥

ಮಯಾಪಿ ಬೋಧಿತಾಃ ಕಾಲೇ ಯತೋ ಮಾಂ ನಾಭಿನಂದತ ।
ತತಸ್ತೇನಾವಲೇಪೇನ ಗತಾ ಯೂಯಂ ಪರಾಭವಂ ॥ ೪೩ ॥

ಪ್ರಹ್ಲಾದಸ್ತಮುಭೋವಾಚ ಮಾನಂ ತ್ವಂ ತ್ಯಜ ಭಾರ್ಗವ ।
ಸ್ವಾನ್ ಯಾಜ್ಯಾನ್ ಭಜಮಾನಾಂಶ್ಚ ಭಕ್ತಾಂಶ್ಚೈವ ವಿಶೇಷತಃ ॥ ೪೪ ॥

---

೪೦. ಅಯ್ಯೋ ನಮಗೆ ವಿಧಿಯು ವಿಮುಖವಾಗಿರುವನು. ವಿರೋಧಿಯಾದ ದೈವದಿಂದ ನಾವು ಬೆನ್ನಿನ ಮೇಲೆ ಒದೆಯನ್ನು ಹೊಂದಿರುತ್ತೇವೆ. ನಮ್ಮ ಪ್ರಯೋಜನಗಳೆಲ್ಲವೂ ಇವರ ವಂಚನೆಯಿಂದ ನಷ್ಟವಾದುವು ಎಂದು ಖಿನ್ನರಾದರು.

೪೧. ಅನಂತರ ಅಸುರರು ದೇವತೆಗಳಿಗೆ ಬಹಳವಾಗಿ ಹೆದರಿ, ಪ್ರಹ್ಲಾದರಾಯನನ್ನು ಮುಂದಿಟ್ಟುಕೊಂಡು ಬೇಗನೇ ಶುಕ್ರಾಚಾರ್ಯನ ಬಳಿಗೆ ಹೋದರು.

೪೨. ತರುವಾಯ ಅವರು ಶುಕ್ರಾಚಾರ್ಯನನ್ನು ಹೊಂದಿ, ಅವಮಾನದಿಂದ ತಲೆಯನ್ನು ತಗ್ಗಿಸಿಕೊಂಡು ಮೌನದಿಂದ ನಿಂತರು. ಹೀಗೆ ಪುನಃ ಬಂದಂಥ ಶಿಷ್ಯರನ್ನು ನೋಡಿ ಗುರುಗಳಾದ ಶುಕ್ರಾಚಾರ್ಯನು ಹೀಗೆ ಹೇಳಿದನು

೪೩. ನಾನು ಸಕಾಲದಲ್ಲಿ ಹೇಳಿದ್ದರೂ ಕೂಡ ನೀವು ನನ್ನ ಮಾತನ್ನು ಕೇಳದೇ ಇದ್ದುದರಿಂದ ಹೀಗೆ ತಿರಸ್ಕಾರವನ್ನು ಪಡೆದಿರುತ್ತೀರೆಂದು ಹೇಳಿದನು.

೪೪. ಆಗ ಪ್ರಹ್ಲಾದರಾಯನು ಸ್ವಾಮಿ ಗುರುಗಳೇ, ನೀವು ನಮ್ಮ ಕೈಬಿಡಬಾರದು. ನಿಮ್ಮ ಭಕ್ತರೂ, ಶಿಷ್ಯರೂ, ಸೇವಕರೂ, ಬಂಧುಗಳೂ ಆದ ನಮ್ಮನ್ನು ವಿಶೇಷವಾಗಿ ಅನುಗ್ರಹಿಸಬೇಕು ಎಂದು ಪ್ರಾರ್ಥಿಸಿಕೊಂಡನು.

ತ್ವಯಾ ಪೃಷ್ಟಾ ವಯಂ ತೇನ ದೇವಾಚಾರ್ಯೇಣ ಮೋಹಿತಾಃ ।
ಭಕ್ತಾನರ್ಹಸಿ ನಸ್ತ್ರಾತುಂ ಜ್ಞಾತ್ವಾ ದೀರ್ಘೇಣ ಚಕ್ಷುಷಾ ॥ ೪೫ ॥

ಯದಿ ನಸ್ತ್ವಂ ನ ಕುರುಷೇ ಪ್ರಸಾದಂ ಭೃಗುನಂದನ ।
ಅಪಧ್ಯಾತಾಸ್ತ್ವಯಾ ಹ್ಯದ್ಯ ಪ್ರವೇಕ್ಷ್ಯಾಮೋ ರಸಾತಲಂ ॥ ೪೬ ॥

॥ ಸೂತ ಉವಾಚ ॥

ಜ್ಞಾತ್ವಾ ಕಾವ್ಯೋ ಯಥಾತತ್ತ್ವಂ ಕಾರುಣ್ಯೇನಾನುಕಂಪಯಾ ।
ಏವಮುಕ್ತೋಽನುನೀತಃ ಸ ಸ್ತುತಃ ಕೋಪಂ ನ್ಯಯಚ್ಛತ ॥ ೪೭ ॥

ಉವಾಚೇದಂ ನ ಭೇತವ್ಯಂ ನ ಗಂತವ್ಯಂ ರಸಾತಲಂ ।
ಅವಶ್ಯಂಭಾವೀ ಹ್ಯರ್ಥೋಽಯಂ ಪ್ರಾಪ್ತೋ ವೋ ಮಯಿ ಜಾಗ್ರತಿ ॥ ೪೮ ॥

೪೫. ದೇವಗುರುಗಳಾದ ಬೃಹಸ್ಪತಿಗಳಿಂದ ಮೋಹಿತರಾದ ನಾವು ನಿಮ್ಮ ಮಾತುಗಳನ್ನು ಕೇಳದೇ ಕೆಟ್ಟೆವು ಆದರೂ ಭಕ್ತರೂ, ಅಗತಿಕರೂ ಆದ ನಮ್ಮನ್ನು ರಕ್ಷಿಸಲು ಗುರುಗಳಾದ ತಾವೇ ದಿವ್ಯಜ್ಞಾನದಿಂದ ಅರ್ಹರೆಂದು ಹೇಳಿದನು.

೪೬. ಎಲೈ ಭೃಗುಕುಮಾರರೂ, ಹಿತಚಿಂತಕರೂ ಆದ ಗುರುವರ್ಯರೇ, ನಿಮ್ಮ ಮಾತುಗಳನ್ನು ಕೇಳಿ ನಮ್ಮಲ್ಲಿ ಅನುಗ್ರಹಮಾಡದಿದ್ದರೆ ತಮ್ಮಿಂದ ತಿರಸ್ಕೃತರಾದ ನಾವು ಈ ಭೂಲೋಕಗಳನ್ನು ಬಿಟ್ಟು ಈಗಲೇ ಪಾತಾಳಲೋಕಕ್ಕೆ ಹೊರಟು ಹೋಗುತ್ತೇವೆಂದರು.

೪೭. ಸೂತಮುನಿಯು ಹೇಳಿದನು :—ಆಗ ಗುರುಗಳಾದ ಶುಕ್ರರು ವಿನಯದಿಂದ ಪ್ರಾರ್ಥಿಸಿಕೊಂಡ ಪ್ರಹ್ಲಾದಾದಿ ಶಿಷ್ಯರ ಮಾತುಗಳನ್ನು ಕೇಳಿ ದಯಾಪೂರ್ಣರೂ, ಶಿಷ್ಯಪ್ರೇಮಿಗಳೂ ಆದ್ದರಿಂದ ಸಮಾಹಿತಚಿತ್ತರಾಗಿ ಕೋಪವನ್ನು ತ್ಯಜಿಸಿದರು.

೪೮. ಎಲೈ ಅಸುರಪುಂಗವರೇ, ನೀವು ಭಯಪಡಬೇಕಾಗಿಲ್ಲ. ಮತ್ತು ಪಾತಾಳಲೋಕಕ್ಕೂ ಹೋಗಬೇಕಾಗಿಲ್ಲ. ನಾವು ಜಾಗ್ರತೆಯಾಗಿದ್ದರೂ ಆವಶ್ಯಕವಾಗಿ ಅನುಭವಿಸಬೇಕಾದ ವಿಷಯಗಳನ್ನು ಅನುಭವಿಸಲೇ ಬೇಕು. ವಿಧಿವಿಲಸತವನ್ನು ಮೀರಲು ಯಾರಿಗೂ ಸಾಧ್ಯವಿಲ್ಲವೆಂದರು.

ನ ಶಕ್ಯಮನ್ಯಥಾ ಕರ್ತುಂ ದೃಷ್ಟಂ ಹಿ ಬಲವತ್ತರಂ ।
ಸಂಜ್ಞಾ ಪ್ರನಷ್ಟಾ ಯಾ ವೋಽದ್ಯ ಕಾಮಂ ತಾಂ ಪ್ರತಿಲಪ್ಸ್ಯಥ ॥ ೪೯ ॥

ಪ್ರಾಪ್ತಃ ಪರ್ಯಾಯಕಾಲೋ ವ ಇತಿ ಬ್ರಹ್ಮಾಭ್ಯಭಾಷತ ।
ಮತ್ಪ್ರಸಾದಾಚ್ಚ ಯುಷ್ಮಾಭಿರ್ಭುಕ್ತಂ ತ್ರೈಲೋಕ್ಯಮೂರ್ಜಿತಂ ॥ ೫೦ ॥

ಯುಗಾಖ್ಯೋ ದಶ ಸಂಪೂರ್ಣಾ ದೇವಾನಾಕ್ರಮ್ಯ ಮೂರ್ಧನಿ ।
ತಾವಂತಮೇವ ಕಾಲಂ ವೈ ಬ್ರಹ್ಮಾ ರಾಜ್ಯಮಭಾಷತ ॥ ೫೧ ॥

ಸಾವರ್ಣಿಕೇ ಪುನಸ್ತುಭ್ಯಂ ರಾಜ್ಯಂ ಕಿಲ ಭವಿಷ್ಯತಿ ।
ಲೋಕಾನಾಮೀಶ್ವರೋ ಭಾವೀ ಪೌತ್ರಸ್ತವ ಪುನರ್ಬಲಿಃ ॥ ೫೨ ॥

---

೪೯. ಎಲೈ ಅಸುರವರ್ಯರೇ, ದೈವೇಚ್ಛೆಯನ್ನು ಮೀರಲು ಯಾರಿಗೂ ಶಕ್ಯವಿಲ್ಲ. ಏಕೆಂದರೆ ನಿಧಿನಿಯಮವು ಬಲವತ್ತರವಾಗಿರುವುದು. ಆ ಸಮಯಲ್ಲಿ ನಾನು ಎಷ್ಟು ಬಗೆಯಿಂದ ಹೇಳಿದರೂ ನಿಮಗೆ ಜ್ಞಾನೋದಯವಾಗಲಿಲ್ಲ. ನೀವು ಅಜ್ಞಾನದಿಂದ ಭ್ರಾಂತರಾದಿರಿ. ಆದುದರಿಂದ ಅದರ ಫಲವನ್ನು ಅನುಭವಿಸಲೇ ಬೇಕೆಂದು ಹೇಳಿದರು.

೫೦. ಎಲೈ ಅಸುರೋತ್ತಮರೇ, ಇದು ಪರ್ಯಾಯದ (ಸರದಿಯ) ಕಾಲವಾಗಿದೆ. ಇದು ದೇವತೆಗಳ ಸಾಮ್ರಾಜ್ಯಕಾಲ. ನೀವೂ ಕೂಡ ಪೂರ್ವದಲ್ಲಿ ನನ್ನ ಮಹಿಮೆಯಿಂದ (ಅನುಗ್ರಹದಿಂದ) ನೀವು ತ್ರೈಲೋಕ್ಯಸಾಮ್ರಾಜ್ಯವನ್ನು ವಿಜೃಂಭಣೆಯಿಂದ ಅನುಭವಿಸಿರುವಿರಿ. ಈ ವಿಷಯವನ್ನು ಬ್ರಹ್ಮದೇವನೇ ಸಾಕ್ಷಾತ್ತಾಗಿ ಹೇಳಿರುತ್ತಾನೆ ಎಂದು ಶುಕ್ರಮುನಿಯು ಶಿಷ್ಯರಿಗೆ ಹೇಳಿದನು.

೫೧. ಎಲೈ ಅಸುರಪುಂಗವರೇ, ನೀವು ಹತ್ತು ಯುಗಗಳ ಕಾಲ ಸಂಪೂರ್ಣವಾಗಿ ದೇವತೆಗಳ ತಲೆಗಳನ್ನು ತುಳಿದು ವೈಭವದಿಂದ ರಾಜ್ಯವಾಳಿದಿರಿ. ಅಷ್ಟು ಕಾಲವೇ ನಿಮಗೆ ರಾಜ್ಯವಿರತಕ್ಕುದೆಂದು ಬ್ರಹ್ಮದೇವನ ಸಂಕಲ್ಪವಿರುವುದೆಂದು ಹೇಳಿದನು.

೫೨. ಸಾವರ್ಣಿಕಮನ್ವಂತರದಲ್ಲಿ ನಿಮಗೆ ಪುನಃ ರಾಜ್ಯವು ಬರುವುದು. ಆಗ ಲೋಕದ ದೊರೆತನವು ನಿಮಗೆ ಸಂಭವಿಸುವುದು. ಆಗ ಬಲಿಚಕ್ರವರ್ತಿಯು ನಿಮಗೆ ಮೊಮ್ಮಗನಾಗಿ ಪುನಃ ಜನಿಸುವನು. ಎಂದು ಹೇಳಿದನು.

ಏವಂ ಕಿಲಮಹಂ ಪ್ರೋಕ್ತಃ ಪೌತ್ರಸ್ತೇ ಬ್ರಹ್ಮಣಾ ಸ್ವಯಂ ।
ತಥಾಹ್ಯತೇಷು ಲೋಕೇಷು ತಪ್ರೋಽಸ್ಯ ನ ಕಿಲಾಭವತ್ ॥ ೫೩ ॥

ಯಸ್ಮಾತ್ ಪ್ರವೃತ್ತಯಶ್ಚಾಸ್ಯ ನ ಕಾವಮಾನಭಿಸಂಧಿತಾಃ ।
ತಸ್ಮಾದಜೇನ ಪ್ರೀತೇನ ದತ್ತಂ ಸಾವರ್ಣಿಕೇಂತರೇ ॥ ೫೪ ॥

ದೇವರಾಜ್ಯಂ ಬಲೇರ್ಭಾವ್ಯಮಿತೀ ಮಾಮೀಶ್ವರೋಽಬ್ರವೀತ್ ।
ತಸ್ಮಾದದೃಶ್ಯೋ ಭೂತಾನಾಂ ಕಾಲಾಕಾಂಕ್ಷೀ ಸ ತಿಷ್ಠತಿ ॥ ೫೫ ॥

ಪ್ರೀತೇನ ಚಾಮರತ್ವಂ ವೈ ದತ್ತಂ ತುಭ್ಯಂ ಸ್ವಯಂಭುವಾ ।
ತಸ್ಮಾನ್ನಿರುತ್ಸುಕಸ್ತ್ವಂ ವೈ ಪರ್ಯಾಯಂ ಸಹ ಮಾಕುಲಃ ॥ ೫೬ ॥

ನ ಚ ಶಕ್ಯಂ ಮಯಾ ತುಭ್ಯಂ ಪುರಸ್ತಾದ್ವೈ ವಿಸರ್ಪಿತುಂ ।
ಬ್ರಹ್ಮಣಾ ಪ್ರತಿಷಿದ್ಧೋಽಸ್ಮಿ ಭವಿಷ್ಯಂ ಜನತಾ ಪ್ರಭೋ ॥ ೫೭ ॥

---

೫೩. ಈ ರೀತಿಯಾಗಿ ಬ್ರಹ್ಮದೇವನು ಪೂರ್ವದಲ್ಲಿ ತಿಳಿಸಿರುತ್ತಾನೆ. ಆ ರೀತಿಯಲ್ಲಿ ಲೋಕಗಳೆಲ್ಲವೂ ನಷ್ಟವಾಗಲು ತಪಸ್ಸೇ ಮೊದಲಾದುವು ಇರುವುದಿಲ್ಲವಷ್ಟೆ.

೫೪. ಆದುದರಿಂದ ಅವರ ಕಾರ್ಯಗಳು ಅವರಿಗೆ ಇಷ್ಟಾರ್ಥಗಳನ್ನು ಉಂಟುಮಾಡುವುದಾಗಿ ಇರುವುದಿಲ್ಲ. ಆದುದರಿಂದ ಪ್ರೀತನಾದ ಬ್ರಹ್ಮನು ಸಾವರ್ಣಿಕಮನ್ವಂತರದಲ್ಲಿ ಪುನಃ ಅವರಿಗೆ ರಾಜ್ಯವನ್ನು ಹಿಂದಕ್ಕೆ ವಾಪಸ್ಸು ಕೊಟ್ಟನು.

೫೫. ದೇವತೆಗಳ ರಾಜ್ಯವು ಬಲಿಗೆ ಬರತಕ್ಕದೆಂದು ಈಶ್ವರನು ನನಗೆ ಮೊದಲೇ ತಿಳಿಸಿದ್ದಾನೆ. ಆದುದರಿಂದ ಆ ಭಗವಂತನು ಭೂತಗಳಿಗೆ ಕಾಣಿಸದೇ ಕಾಲವನ್ನು ಎದುರು ನೋಡುತ್ತಾ ಇರುವನು.

೫೬. ಪರಮಪ್ರೀತನಾದ ಬ್ರಹ್ಮದೇವನು ದೇವತೆಗಳ ರಾಜ್ಯವನ್ನು ನಿಮಗೆ ಪೂರ್ವದಲ್ಲಿ ಕೊಟ್ಟಿರಲಿಲ್ಲವೇ ? ಆದುದರಿಂದ ನೀವು ನಿರುತ್ಸಾಹಿಗಳಾಗಬೇಡಿರಿ. ಕ್ರಮವಾಗಿ ಸರದಿಯಪ್ರಕಾರ ನಿಮಗೆ ಬರುವುದು. ಅದರಿಂದ ಖಿನ್ನರಾಗಬೇಡಿ ರೆಂದನು.

೫೭. ಆದುದರಿಂದ ಈಗ ನಿಮಗೆ ಆ ರಾಜ್ಯವನ್ನು ಕೊಡಿಸಲು ಸಾಧ್ಯವಿಲ್ಲ. ಭವಿಷ್ಯವನ್ನು ತಿಳಿದ ಬ್ರಹ್ಮನು ನನಗೆ ಈ ರೀತಿಯಾಗಿ ಹೇಳಿರುವುದರಿಂದ ವಿರುದ್ಧವಾಗಿ ನಡೆಯಲು ಸಾಧ್ಯವಿಲ್ಲವೆಂದನು.

ಇಮೌ ಚ ಶಿಷ್ಯೌ ದ್ವೌ ಮಹ್ಯಂ ತುಲ್ಯಾವೇತೌ ಬೃಹಸ್ಪತೇಃ ।
ದೈವತೈಃ ಸಹ ಸಂರಬ್ಧಾನ್ ಸರ್ವಾನ್ ವೋ ಧಾರಯಿಷ್ಯತಃ ॥ ೫೮ ॥

ಏವಮುಕ್ತಸ್ತು ದೈತೇಯಾಃ ಕಾವ್ಯೇನಾಕ್ಲಿಷ್ಟಕರ್ಮಣಾ ।
ತತಸ್ತಾಭ್ಯಾಂ ಯಯುಃ ಸಾರ್ಧಂ ಪ್ರಹ್ಲಾದಪ್ರಮುಖಾಸ್ತದಾ ॥ ೫೯ ॥

ಅವಶ್ಯಂಭಾವಮರ್ಥತ್ವಂ ಶ್ರುತ್ವಾ ಶುಕ್ರಾಚ್ಚ ದಾನವಾಃ ।
ಸಕೃದಾಶಂಸಮಾನಾಸ್ತೇ ಜಯಂ ಕಾವ್ಯೇನ ಭಾಷಿತಂ ॥ ೬೦ ॥

ದಂಶಿತಾಃ ಸಾಯುಧಾಃ ಸರ್ವೇ ತತೋ ದೇವಾನ್ ಸಮಾಹ್ವಯನ್ ।
ಅಥ ದೇವಾಸುರಾನ್ ದೃಷ್ಟ್ವಾ ಸಂಗ್ರಾಮೇ ಸಮುಪಸ್ಥಿತಾನ್ ॥ ೬೧ ॥

---

೫೮. ಈ ಇಬ್ಬರು ಶಿಷ್ಯರೂ ನನಗೂ ಬೃಹಸ್ಪತಿಗೂ ಸಮನಾಗಿರುತ್ತಾರೆ. ಆದುದರಿಂದ ದೇವತೆಗಳೊಡನೆ ಹೋರಾಡುವ ನಿಮ್ಮನ್ನು ಇವರಿಬ್ಬರು ಕಾಪಾಡಲು ಶಕ್ತರಾಗಿರುವರೆಂದು ಹೇಳಿದನು.

೫೯. ಸತ್ಕರ್ಮಾನುಷ್ಠಾನವನ್ನು ಮಾಡುವ ಶುಕ್ರಾಚಾರ್ಯನು ಹೀಗೆ ಹೇಳಲಾಗಿ ದಿತೀದೇವಿಯ ಕುಮಾರರಾದ ಅಸುರರು ಪ್ರಹ್ಲಾದನೊಡನೆಯೂ ಅವರಿಬ್ಬರಿಂದಲೂ ಕೂಡಿ ಹೊರಟುಹೋದರು.

೬೦. ಆಗ ದಾನವರೆಲ್ಲರೂ ಅವಶ್ಯವಾಗಿ ಆಗಬೇಕಾದ ವಿಷಯಗಳನ್ನು ಗುರುಗಳಾದ ಶುಕ್ರರಿಂದ ತಿಳಿದು ಅವರ ಹಿತೋಕ್ತಿಗಳನ್ನು ಸ್ಮರಿಸುತ್ತಾ ಜಯಾಕಾಂಕ್ಷಿಗಳಾಗಿ ಕಾಲವನ್ನು ನಿರೀಕ್ಷಿಸುತ್ತಿದ್ದರು.

೬೧. ಅನಂತರ ಅಸುರರೆಲ್ಲರೂ ತಮ್ಮ ದೊರತನದ ಕಾಲವು ಬಂದಿತೆಂದು ತಿಳಿದು ಶೀಟಿಯಿಂದ ಆಯುಧಪಾಣಿಗಳಾಗಿ ದೇವತೆಗಳನ್ನು ಯುದ್ಧಕ್ಕೆ ಕರೆದರು. ತರುವಾಯ ದೇವತೆಗಳು ಯುದ್ಧಕ್ಕಾಗಿ ಸಿದ್ಧರಾದ ಅಸುರರನ್ನು ನೋಡಿ ತಾವೂ ಕೂಡ ಯುದ್ಧಕ್ಕೆ ಸಿದ್ಧರಾದರು.

ತತಃ ಸಂವೃತ್ತಸನ್ನಾಹಾ ದೇವಾಸ್ತಾನ್ ಸಮಯೋಧಯನ್ ।
ದೈವಾಸುರೇ ತತಸ್ತಸ್ಮಿನ್ ವರ್ತಮಾನೇ ಶತಂ ಸಮಾಃ ॥
ಅಜಯನ್ನಸುರಾ ದೇವಾನ್ ಭಗ್ನಾ ದೇವಾಅಮಂತ್ರಯನ್ ॥ ೬೨ ॥

॥ ದೇವಾ ಊಚುಃ ॥

ಷಂಡಾಮಾರ್ಕಪ್ರಭಾವಂ ನ ಜಾನೀಮಸ್ತ್ವಸುರೈರ್ವಯಂ ।
ತಸ್ಮಾದ್ಯಜ್ಞಂ ಸಮುದ್ದಿಶ್ಯ ಕಾರ್ಯಂ ಚಾತ್ಮಹಿತಂ ಚ ಯತ್ ॥ ೬೩ ॥

ತಜ್ಞಾನಾಪಾಹೃತಾವೇತೌ ಕೃತ್ವಾ ಜೇಷ್ಯಾಮಹೇಽಸುರಾನ್ ।
ಅಥೋಪಾಮಂತ್ರಯನ್ ದೇವಾಃ ಷಂಡಾಮಾರ್ಕೌ ತು ತಾವುಭೌ ॥ ೬೪ ॥

ಯಜ್ಞೇ ಸಮಾಹ್ವಯಿಷ್ಯಾಮಸ್ತ್ಯಜತಮಸುರಾನ್ ದ್ವಿಜೌ ।
ಗ್ರಹಂತಂ ವಾ ಗ್ರಹೀಷ್ಯಾಮೋ ಹ್ಯನುಜಿತ್ಯ ತು ದಾನವಾನ್ ॥ ೬೫ ॥

೬೨. ಹೀಗೆ ಸರ್ವಸನ್ನಾಹಯುಕ್ತರಾದ ದೇವತೆಗಳು ಅಸುರರೊಡನೆ ಹೋರಾಡಿದರು. ಹೀಗೆ ಹೋರಾಟಗಳಿಂದ ನೂರಾರು ವರ್ಷಗಳು ಕಳೆದುಹೋದುವು. ತರುವಾಯ ಅಸುರರು ದೇವತೆಗಳನ್ನು ಗೆದ್ದರು. ಆಗ ಭಗ್ನಾವಶಿಷ್ಟರಾದ ದೇವತೆಗಳು ಒಟ್ಟುಗೂಡಿ ಮಂತ್ರಾಲೋಚನೆ ಮಾಡಿದರು.

೬೩. ದೇವತೆಗಳು ಹೇಳಿದರು :—ನಾವು ಷಂಡಾಮರ್ಕರ ಪ್ರಭಾವವನ್ನು ತಿಳದಿರುವುದಿಲ್ಲ. ಆದುದರಿಂದ ನಾವು ಯುದ್ಧದಲ್ಲಿ ಅಸುರರಿಂದ ಪರಾಜಿತರಾದೆವು. ಆದುದರಿಂದ ಆತ್ಮಹಿತಕ್ಕಾಗಿ ಯಜ್ಞವನ್ನು ನೆರವೇರಿಸಿ ಸ್ವಕಾರ್ಯವನ್ನು ಸಾಧಿಸಿ ಕೊಳ್ಳೋಣವೆಂದು ಯೋಚಿಸಿದರು.

೬೪. ನಾವು ಆ ಷಂಡಾಮರ್ಕರಿಂದ ಜ್ಞಾನವನ್ನು ಸಂಪಾದಿಸಿ ಅಸುರರನ್ನು ಯುದ್ಧದಲ್ಲಿ ಜಯಿಸೋಣ. ಹೀಗೆ ದೇವತೆಗಳೆಲ್ಲರೂ ಆಲೋಚಿಸಿ ಷಂಡಾಮರ್ಕರನ್ನು ಪ್ರಾರ್ಥಿಸಿದರು.

೬೫. ನಾವು ಯಜ್ಞಮಾಡುವಾಗ ಅವರನ್ನು ಕರೆಯೋಣ. ಬಂದ ಮೇಲೆ ಎಲೈ ವಿಪ್ರರೇ, ನೀವು ಅಸುರರನ್ನು ತ್ಯಾಗಮಾಡಿ ನಮ್ಮನ್ನೇ ಅನುಸರಿಸಿ ಅನುಗ್ರಹಿತ ರಾದರು. ನೀವು ಅನುಗ್ರಹಿಸಿದರೆ ನಾವು ದಾನವರನ್ನು ಗೆಲ್ಲುವೆವೆಂದು ಹೇಳಿದರು.

**ಏವಂ ತತ್ಯಜತುಸ್ತೌ ತು ಷಂಡಾಮಾರ್ಕೌ ತದಾಸುರಾನ್ |**
**ತತೋ ದೇವಾ ಜಯಂ ಪ್ರಾಪ್ತಾ ದಾನವಾಶ್ಚ ಪರಾಭವಂ || ೬೬ ||**

**ದೇವಾಸುರಾನ್ ಪರಾಭಾವ್ಯ ಷಂಡಾಮಾರ್ಕಾವ್ಯುಪಾಗಮನ್ |**
**ಕಾವ್ಯಶಾಪಾಭಿಭೂತಾಶ್ಚ ಹ್ಯನಾಧಾರಾಶ್ಚ ತೇ ಪುನಃ || ೬೭ ||**

**ವಧ್ಯಮಾನಾಸ್ತದಾ ದೇವೈರ್ವಿವಿಶುಸ್ತೇ ರಸಾತಲಂ |**
**ಏವಂ ನಿರುದ್ಯಮಾಸ್ತೇ ವೈ ಕೃತಾಃ ಶಕ್ರೇಣ ದಾನವಾಃ ||**
**ತತಃ ಪ್ರಭೃತಿ ಶಾಪೇನ ಭೃಗುನೈಮಿತ್ತಿಕೇನ ಚ || ೬೮ ||**

**ಜಜ್ಞೇ ಪುನಃ ಪುನರ್ವಿಷ್ಣುರ್ಯಜ್ಞೇ ಚ ಶಿಥಿಲೇ ಪ್ರಭುಃ |**
**ಕರ್ತುಂ ಧರ್ಮವ್ಯವಸ್ಥಾನ ತು ಧರ್ಮಸ್ಯ ಚ ನಾಶನಂ || ೬೯ ||**

---

೬೬. ಹೀಗೆ ದೇವತೆಗಳಿಂದ ಪ್ರಾರ್ಥಿತರಾದ ಷಂಡಾಮರ್ಕರಿಬ್ಬರೂ ಅಸುರರ ಪಕ್ಷವನ್ನು ತ್ಯಜಿಸಿ ದೇವತೆಗಳ ಸಂಘವನ್ನು ಸೇರಿದರು. ಅಂದಿನಿಂದ ದೇವತೆಗಳಿಗೆ ಜಯವೂ ಅಸುರರಿಗೆ ಅಪಜಯವೂ ಉಂಟಾದುವು.

೬೭. ತರುವಾಯ ದೇವತೆಗಳು ಅಸುರರನ್ನು ಸೋಲಿಸಿ ಜಯವನ್ನು ಹೊಂದಿ ಷಂಡಾಮರ್ಕರ ಬಳಿಗೆ ಬಂದರು. ಬಳಿಕ ಅಸುರರು ಗುರುಗಳ ಶಾಪಾನುಗುಣವಾಗಿ ಆಶ್ರಯವಿಲ್ಲದೇ ನಿರಾಧಾರಿಗಳಾದರು.

೬೮. ಮೇಲೆ ಹೇಳಿದ ಹಾಗೆ ದೇವತೆಗಳಿಂದ ಪೀಡಿತರಾದ ಅಸುರರು ರಸಾತಲವನ್ನು ಪ್ರವೇಶಿಸಿದರು. ತರುವಾಯ ಇಂದ್ರನು ದಾನವರನ್ನು ನಿರುದ್ಯೋಗಿಗಳನ್ನಾಗಿ ಮಾಡಿದನು. ಅಸುರರು ಪಾತಾಳದಲ್ಲೇ ವಾಸಿಸಿದರು.

೬೯. ಅಂದಿನಿಂದಲೂ ಭೃಗುಮಹರ್ಷಿಯ ಶಾಪದಿಂದಲೂ, ಬೇರೆ ಕಾರಣಗಳಿಂದಲೂ, ಯಜ್ಞಯಾಗಾದಿಗಳು ನಾಶವಾದದ್ದರಿಂದಲೂ ಶ್ರೀಹರಿಯು ಪುನಃ ಪುನಃ ಅವತರಿಸಬೇಕಾಯಿತು. ಹೀಗೆ ವಿಷ್ಣುವು ಧರ್ಮವನ್ನು ಸ್ಥಾಪನೆಮಾಡುವುದಕ್ಕಾಗಿಯೂ, ಅಧರ್ಮವನ್ನು ನಾಶಮಾಡುವುದಕ್ಕಾಗಿಯೂ ಪದೇ ಪದೇ ಭೂಮಿಯಲ್ಲಿ ಅವತರಿಸಿದನು.

ಪ್ರಹ್ಲಾದಸ್ಯ ನಿದೇಶೇ ತು ಯೇಽಸುರಾ ನ ವ್ಯವಸ್ಥಿತಾಃ ।
ಮನುಷ್ಯವಧ್ಯಾಂಸ್ತಾನ್ ಸರ್ವಾನ್ ಬ್ರಹ್ಮಾ ವ್ಯಾಹಾರಯತ್ ಪ್ರಭುಃ ॥ ೭೦ ॥

ಧರ್ಮಾನ್ನಾರಾಯಣಸ್ತಸ್ಮಾತ್ ಸಂಭೂತಶ್ಚಾಕ್ಷುಷೇಂತರೇ ।
ಯಜ್ಞಂ ಪ್ರವರ್ತಯಾಮಾಸ ಚೈತ್ಯೇ ವೈವಸ್ವತೇಂತರೇ ॥ ೭೧ ॥

ಪ್ರಾದುರ್ಭಾವೇ ತದಾನ್ಯಸ್ಯ ಬ್ರಹ್ಮೈವಾಸೀತ್ ಪುರೋಹಿತಃ ।
ಚತುರ್ಥ್ಯಾಂತು ಯುಗಾಖ್ಯಾಯಾಮಾಪನ್ನೇಷ್ವಸುರೇಷ್ವಥ ॥ ೭೨ ॥

ಸಂಭೂತಃ ಸ ಸಮುದ್ರಾಂತರ್ಹಿರಣ್ಯಕಶಿಪೋರ್ವಧೇ ।
ದ್ವಿತೀಯೋ ನರಸಿಂಹೋಽಭೂದ್ರುದ್ರಃ ಸುರಪುರಸ್ಸರಃ ॥ ೭೩ ॥

೭೦. ಹೀಗೆ ಯಾವ ಅಸುರರು ಪ್ರಹ್ಲಾದಮಹಾರಾಯನ ಮಾತನ್ನು ಕೇಳದೇ ಅವನಿಗೆ ವಿರೋಧಿಗಳಾಗಿರುವರೋ ಅಂತಹವರನ್ನು ಸಂಹಾರಮಾಡುವುದಕ್ಕಾಗಿ ಶ್ರೀಭಗವಂತನು ಭೂಮಿಯಲ್ಲಿ ಮನುಷ್ಯರೂಪನಾಗಿ ಅವತರಿಸುವನು.

೭೧. ಹೀಗೆ ಶ್ರೀಮನ್ನಾರಾಯಣನು ಚಾಕ್ಷುಷಮನ್ವಂತರದಲ್ಲಿ ಧರ್ಮಗಳನ್ನು ಸ್ಥಾಪನೆಮಾಡಿದನು. ಚೈತ್ಯವೈವಸ್ವತಮನ್ವಂತರಲ್ಲಿ ಅವತರಿಸಿ ಯಜ್ಞಯಾಗಾದಿಗಳನ್ನು ಸ್ಥಾಪಿಸಿದನು.

೭೨–೭೩. ಹೀಗೆ ಶ್ರೀಹರಿಯು ದೈತ್ಯರಾಕ್ಷಸಪಿಶಾಚಾದಿಗಳು, ದೇವತೆಗಳು ಇವರೇ ಮೊದಲಾದವರು ಅವತಾರಮಾಡುವುದಕ್ಕೆ ಬ್ರಹ್ಮದೇವನೆ ಮುಖ್ಯ ಕಾರಣನಾಗಿರುವನು. ನಾಲ್ಕನೆಯ ಯುಗದಲ್ಲಿ ಅಸುರರೆಲ್ಲರೂ ಜನಿಸಲಾಗಿ ಅವರನ್ನು ಸಂಹರಿಸುವುದಕ್ಕಾಗಿ ಸಮುದ್ರಮಧ್ಯದಲ್ಲಿ ಶ್ರೀಹರಿಯು ಮತ್ಸ್ಯಾದ್ಯವತಾರಗಳನ್ನು ಮಾಡಿದನು. (ಎರಡನೆಯ ತ್ರೇತಾಯುಗದಲ್ಲಿ) ತರುವಾಯ ಹಿರಣ್ಯಕಶಿಪುವನ್ನು ಸಂಹರಿಸಲು ಹರಿಯು ರುದ್ರದೇವನೇ ಮೊದಲಾದ ದೇವತೆಗಳಿಂದ ಕೂಡಿ ಭಯಂಕರವಾದ ನರಸಿಂಹಾವತಾರವನ್ನು ಮಾಡಿದನು.

**ಬಲಿಸಂಸ್ಥೇಷು ಲೋಕೇಷು ತ್ರೇತಾಯಾಂ ಸ್ತಪಮೇಯುಗೇ ।**
**ದೈತ್ಯೈಸ್ತ್ರೈಲೋಕ್ಯ ಆಕ್ರಾಂತೇ ತೃತೀಯೋ ವಾಮನೋಭವತ್ ॥ ೭೪ ॥**

**ಸಂಕ್ಷಿಪ್ಯಾತ್ಮಾನಮಂಗೇಷು ಬೃಹಸ್ಪತಿಪುರಸ್ಸರಂ ।**
**ಯಜಮಾನಂ ತು ದೈತ್ಯೇಂದ್ರಮಾದಿತ್ಯಾಃ ಕುಲನಂದನಃ ।**
**ದ್ವಿಜೋ ಭೂತ್ವಾ ಶುಭೇ ಕಾಲೇ ಬಲಿಂ ವೈರೋಚನಂ ಪುರಾ ॥ ೭೫ ॥**

**ತ್ರೈಲೋಕ್ಯಸ್ಯ ಭವಾನ್ ರಾಜಾ ತ್ವಯಿ ಸರ್ವಂ ಪ್ರತಿಷ್ಠಿತಂ ।**
**ದಾತುಮರ್ಹಸಿ ಮೇ ರಾಜನ್ ವಿಕ್ರಮಾಂಸ್ತ್ರೀನಿತಿ ಪ್ರಭುಃ ॥ ೭೬ ॥**

**ದದಾಮೀತ್ಯೇವ ತಂ ರಾಜಾ ಬಲಿರ್ವೈರೋಚನೋಽಬ್ರವೀತ್ ।**
**ವಾಮನಂ ತಂ ಚ ವಿಜ್ಞಾಯ ತತೋಽನುಮುದಿತಃ ಸ್ವಯಂ ॥ ೭೭ ॥**

---

೭೪. ಏಳನೆಯ ತ್ರೇತಾಯುಗದಲ್ಲಿ ಬಲಿರಾಯನು ಸಕಲರಾದ ದೈತ್ಯರೊಡನೆ ಸಮಸ್ತಲೋಕಗಳನ್ನೂ ಆಕ್ರಮಿಸಿಕೊಳ್ಳಲು ಶ್ರೀಹರಿಯು ಮೂರನೆಯದಾದ ವಾಮನಾವತಾರವನ್ನು ಮಾಡಿದನು.

೭೫–೭೬. ತರುವಾಯ ಶ್ರೀಹರಿಯು ವಾಮನನಾಗಿ ಬೃಹಸ್ಪತಿಯ ಸಂಗಡ ದೈತ್ಯೇಂದ್ರನೂ, ದಿತಿದೇವಿಯ ಕುಮಾರನೂ, ಚಕ್ರವರ್ತಿಯೂ ಆದ ಬಲಿರಾಯನ ಬಳಿಗೆ ಬ್ರಾಹ್ಮಣರೂಪವನ್ನು ಧರಿಸಿಕೊಂಡು ಮಂಗಳಕಾಲದಲ್ಲಿ ಬಂದನು. ತರುವಾಯ ವಿರೋಚನನ ಕುಮಾರನಾದ ಬಲಿರಾಯನನ್ನು ನೋಡಿ ಎಲೈ ಬಲಿಮಹಾರಾಜನೇ, ನೀನು ಮೂರು ಲೋಕಾಧಿಪತಿಯಾಗಿರುತ್ತೀಯೆ. ನಿನ್ನಲ್ಲಿ ಸರ್ವವಸ್ತುಗಳೂ ಇವೆ. ಮತ್ತು ನಿನ್ನಂತಹ ದಾನಿಗಳು ಲೋಕದಲ್ಲಿ ಯಾರೂ ಇಲ್ಲ. ಆದುದರಿಂದ ಮಹಾದಾನಿಯೂ, ಪ್ರಭುವೂ ಆದ ನೀನು ದಯಪಾಲಿಸಿ ನನಗೆ ಮೂರು ಪಾದಗಳಷ್ಟು ಭೂಮಿಯನ್ನು ಮಾತ್ರ ಕೊಡಲು ಅರ್ಹನಾಗಿರುತ್ತಿ. ಅಷ್ಟು ಮಾತ್ರ ಕೊಡಬೇಕೆಂದು ಕೇಳಿದನು.

೭೭. ವಿರೋಚನನ ಕುಮಾರನಾದ ಬಲಿಚಕ್ರವರ್ತಿಯು ಹಾಗೆಯೇ ಆಗಲಿ. ಮೂರುಪಾದದಷ್ಟು ಭೂಮಿಗಳನ್ನು ಕೊಡುತ್ತೇನೆಂದನು. ಈ ವಿಪ್ರನು ಬಹಳ ಕುಳ್ಳನಾಗಿರುವನು. ಅವನ ಮೂರು ಪಾದಗಳ ಭೂಮಿಯು ಎಷ್ಟಾದೀತು ಎಂದು ಅವನ ಕಪಟವನ್ನರಿಯದೆ ಎಲೈ ವಿಪ್ರೋತ್ತಮರೇ ಹಾಗೆಯೇ ಆಗಲಿ. ತಾವು ಬೇಡಿದ್ದನ್ನು ಕೊಡುತ್ತೇನೆಂದು ಹೇಳಿದನು.

ಸ ವಾಮನೋ ದಿವಂ ಖಂ ಚ ಪೃಥಿವೀಂ ಚ ದ್ವಿಜೋತ್ತಮಾಃ ।
ತ್ರಿಭಿಃ ಕ್ರಮೈರ್ವಿಶ್ವಮಿದಂ ಜಗದಾಕ್ರಮತ ಪ್ರಭುಃ ॥ ೭೮ ॥

ಅತ್ಯರಿಚ್ಯತ ಭೂತಾತ್ಮಾ ಭಾಸ್ಕರಂ ಸ್ವೇನ ತೇಜಸಾ ।
ಪ್ರಕಾಶಯನ್ ದಿಶಃ ಸರ್ವಾಃ ಪ್ರದಿಶಶ್ಚ ಮಹಾಯಶಾಃ ॥ ೭೯ ॥

ಶುಶುಭೇ ಸ ಮಹಾಬಾಹುಃ ಸರ್ವಲೋಕಾನ್ ಪ್ರಕಾಶಯನ್ ।
ಆಸುರೀಂ ಶ್ರಿಯಮಾಹೃತ್ಯ ತ್ರೀಲ್ಲೋಕಾಂಶ್ಚ ಜನಾರ್ದನಃ ॥
ಸಪುತ್ರಪೌತ್ರಾನಸುರಾನ್ ಪಾತಾಲತಲಮಾನಯತ್ ॥ ೮೦ ॥

ನಮುಚಿಃ ಶಂಬರಶ್ಚೈವ ಪ್ರಹ್ಲಾದಶ್ಚೈವ ವಿಷ್ಣುನಾ ।
ಕ್ರೂರಾ ಹತಾ ವಿನಿರ್ಧೂತಾ ದಿಶಃ ಸಂಪ್ರತಿಪೇದಿರೇ ॥ ೮೧ ॥

---

೭೮. ಎಲೈ ವಿಪ್ರೋತ್ತಮರೇ! ಬಲಿಯು ಹೀಗೆ ಅನುಮೋದಿಸಲಾಗಿ ಸ್ವಾಮಿಯಾದ ಆ ವಾಮನನು ತನ್ನ ಮೂರುಪಾದಗಳಿಂದ ಸ್ವರ್ಗಲೋಕ, ಅಂತರಿಕ್ಷ ಮತ್ತು ಭೂಮಿಯೆಂಬ ಸಮಸ್ತಲೋಕಗಳನ್ನೂ ಆಕ್ರಮಿಸಿದನು.

೭೯. ಆಗ ಮಹಾತೇಜಸ್ವಿಯೂ, ಸಕಲಾಂತರ್ಯಾಮಿಯೂ ಆದ ವಾಮನನು ತನ್ನ ದಿವ್ಯ ತೇಜಸ್ಸಿನಿಂದ ಸೂರ್ಯನನ್ನು ಅತಿಕ್ರಮಿಸಿ ಸಮಸ್ತ ದಿಕ್ಕುಗಳನ್ನೂ, ವಿದಿಕ್ಕುಗಳನ್ನೂ ಪ್ರಕಾಶಗೊಳಿಸಿದನು.

೮೦. ತರುವಾಯ ಮಹಾಬಾಹುವೂ, ಜನಾರ್ದನನೂ ಆದ ಶ್ರೀಹರಿಯು ಸಮಸ್ತಲೋಕಗಳನ್ನು ಆಕ್ರಮಿಸಿ ಸೂರ್ಯದೇವನಂತೆ ಪ್ರಕಾಶಿಸಿದನು. ಹೀಗೆ ಭಗವಂತನು ಮೂರುಪಾದಗಳಿಂದ ಮೂರು ಲೋಕಗಳನ್ನೂ ಆಕ್ರಮಿಸಿ ಅಸುರರ ಸಂಪತ್ತುಗಳನ್ನು ಪಡೆದು ಪುತ್ರಪೌತ್ರಾದಿಬಂಧುಮಿತ್ರರಿಂದ ಸಮೇತನೂ, ಅಸುರ ಪುಂಗವನೂ ಆದ ಬಲಿಮಹಾರಾಜನನ್ನು ಪಾತಾಳಲೋಕಕ್ಕೆ ಕಳುಹಿಸಿದನು.

೮೧. ತರುವಾಯ ಯುದ್ಧಸನ್ನದ್ಧರೂ, ಮಹಾಬಲಶಾಲಿಗಳೂ, ಅತಿ ಕ್ರೂರರೂ ಆದ ನಮುಚಿ, ಶಂಬರ ಮತ್ತು ಪ್ರಹ್ಲಾದರೆಂಬ ಅಸುರರನ್ನು ಶ್ರೀಹರಿಯು ಹೊಡೆದು ಅಟ್ಟಿ ದಿಗ್ಭ್ರಾಂತರನ್ನಾಗಿಮಾಡಿ ದಿಗಂತಗಳಿಗೆ ಕಳುಹಿಸಿದನು.

**ಮಹಾಭೂತಾನಿ ಭೂತಾತ್ಮಾ ಸವಿಶೇಷಾಣಿ ಮಾಧವಃ ।**
**ಕಾಲಂ ಚ ಸಕಲಂ ವಿಪ್ರಾಂಸ್ತತ್ರಾಪಶ್ಯತಮುದರ್ಶಯತ್ ॥ ೮೨ ॥**

**ತಸ್ಯ ಗಾತ್ರೇ ಜಗತ್ಸರ್ವಮಾತ್ಮಾನಮನುಪಶ್ಯತಿ ।**
**ನ ಕಿಂಚಿದಸ್ತಿ ಲೋಕೇಷು ಯದವ್ಯಾಪ್ತಂ ಮಹಾತ್ಮನಾ ॥ ೮೩ ॥**

**ತದ್ವೈ ರೂಪಮುಪೇಂದ್ರಸ್ಯ ದೇವದಾನವಮಾನವಾಃ ।**
**ದೃಷ್ಟ್ವಾ ಸಮ್ಮುಮುಹುಃ ಸರ್ವೇ ವಿಷ್ಣುತೇಜೋ ವಿಮೋಹಿತಾಃ ॥ ೮೪ ॥**

**ಬಲಿಃ ಸಿತೋ ಮಹಾಪಾಶೈಃ ಸಬಂಧುಃ ಸಸುಹೃದ್ಗಣಃ ।**
**ವಿರೋಚನಕುಲಂ ಸರ್ವಂ ಪಾತಾಲೇ ಸನ್ನಿವೇಶಿತಂ ॥ ೮೫ ॥**

**ತತಃ ಸರ್ವಾಮರೈಶ್ವರ್ಯಂ ದತ್ವೇಂದ್ರಾಯ ಮಹಾತ್ಮನೇ ।**
**ಮಾನುಷೇಷು ಮಹಾಬಾಹುಃ ಪ್ರಾದುರಾಸೀಜ್ಜನಾರ್ದನಃ ॥ ೮೬ ॥**

---

೮೨. ಆಗ ಸರ್ವಾತ್ಮಕನಾದ ಭಗವಂತನು ತನ್ನುದರದಲ್ಲಿ ಸರ್ವಭೂತಗಳು, ಸಕಲವಸ್ತುಗಳು, ಕಾಲ, ಸಕಲಪುರುಷರು ಮತ್ತು ಬ್ರಾಹ್ಮಣರು ಇವರೇ ಮೊದಲಾದ ಸಮಸ್ತಲೋಕಗಳನ್ನೂ ತೋರ್ಪಡಿಸಿದನು. ಅದು ಬಹಳ ಆಶ್ಚರ್ಯಕರವಾಗಿತ್ತು.

೮೩. ಆ ಭಗವಂತನು ತನ್ನ ಶರೀರದಲ್ಲಿ ಸರ್ವಭೂತಗಳನ್ನೂ ತೋರಿಸಿದನು. ಈ ಮೂರು ಲೋಕಗಳಲ್ಲಿಯೂ ಮಹಾತ್ಮನಾದ ಭಗವಂತನ ವ್ಯಾಪ್ತಿಯಿಲ್ಲದ ಪ್ರದೇಶವು ಯಾವುದೂ ಇರುವುದಿಲ್ಲ.

೮೪. ದೈತ್ಯರೂ, ದಾನವರೂ, ದೇವತೆಗಳೂ, ಮನುಷ್ಯರೂ ಕೂಡ ಆ ಮಹಾಸ್ವಾಮಿಯ ಉಪೇಂದ್ರಾವತಾರವನ್ನೂ ಆ ಪ್ರಭುವಿನ ದಿವ್ಯತೇಜಸ್ಸನ್ನೂ ನೋಡಿ ಮೋಹಿತರೂ, ಸ್ತಬ್ಧರೂ ಆಗಿ ನಿಂತರು.

೮೫. ಆಗ ಬಲಿಚಕ್ರವರ್ತಿಯು ತನ್ನ ಅಸುರವರ್ಗದೊಡನೆ ಮಹಾಪಾಶದಿಂದ ಬದ್ಧನಾಗಿ ಪಾತಾಳಲೋಕಕ್ಕೆ ಹೋದನು. ತರುವಾಯ ವಿರೋಚನನ ಸಮಸ್ತವಾದ ವಸ್ತುಗಳೂ ಪಾತಾಳಲೋಕದಲ್ಲಿಯೇ ಸ್ಥಾಪಿತವಾಯಿತು.

೮೬. ಅನಂತರ ಮಹಾಶೂರನಾದ ಪರಮಾತ್ಮನು ಹೀಗೆ ಅಸುರರ ಸಮಸ್ತವಾದ ಸಂಪತ್ತುಗಳನ್ನೂ ಮಹಾತ್ಮನಾದ ಇಂದ್ರನಿಗೆ ಕೊಟ್ಟು ಪುನಃ ಮನುಷ್ಯನಾಗಿ ಅವತರಿಸಿದನು.

ಏತಾಸ್ತಿಸ್ರಃ ಸ್ಮೃತಾಸ್ತಸ್ಯ ದಿವ್ಯಾಃ ಸಂಭೂತಯಃ ಶುಭಾಃ ।
ಮಾನುಷ್ಯಾಃ ಸಪ್ತ ಯಾಸ್ತಸ್ಯ ಶಾಪಜಾಂಸ್ತಾನ್ನಿಬೋಧತ ॥ ೮೭ ॥

ತ್ರೇತಾಯುಗೇ ತು ದಶಮೇ ದತ್ತಾತ್ರೇಯೋ ಬಭೂವ ಹ ।
ನಷ್ಟೇ ಧರ್ಮೇ ಚತುರ್ಥಶ್ಚ ಮಾರ್ಕಂಡೇಯಪುರಃಸರಃ ॥ ೮೮ ॥

ಪಂಚಮಃ ಪಂಚದಶ್ಯಾಂ ತು ತ್ರೇತಾಯಾಂ ಸಂಬಭೂವ ಹ ।
ಮಾಂಧಾತುಶ್ಚಕ್ರವರ್ತಿತ್ವೇ ತಸ್ಥೌ ತಥ್ಯಪುರಃಸರಃ ॥ ೮೯ ॥

ಏಕೋನವಿಂಶೇ ತ್ರೇತಾಯಾಂ ಸರ್ವಕ್ಷತ್ರಾಂತಕೋಽಭವತ್ ।
ಜಾಮದಗ್ನ್ಯಸ್ತದಾ ಷಷ್ಠೋ ವಿಶ್ವಾಮಿತ್ರಪುರಃಸರಃ ॥ ೯೦ ॥

---

೮೭. ಪರಮಾತ್ಮನ ಈ ಮೂರು ಅವತಾರಗಳು ದಿವ್ಯಕರವಾಗಿಯೂ, ಮಂಗಳಕರವಾಗಿಯೂ, ಐಶ್ವರ್ಯದಾಯಕವಾಗಿಯೂ, ಧರ್ಮಸ್ಥಾಪಕಗಳಾಗಿಯೂ ಇವೆಯೆಂದು ಜ್ಞಾನಿಗಳು ಹೇಳುವರು. ಈಗ ಪರಮಾತ್ಮನ ಉಳಿದ ಶಾಪಜನ್ಯವಾದ ಏಳು ಅವತಾರಗಳನ್ನೂ ಹೇಳುವೆನು ಕೇಳಿರೆಂದನು.

೮೮. ಹತ್ತನೆಯ ತ್ರೇತಾಯುಗವು ಪ್ರಾರಂಭವಾಗಲು ಶ್ರೀಭಗವಂತನು ಮಾರ್ಕಂಡೇಯನೊಡನೆ ನಷ್ಟವಾದ ಸನಾತನಧರ್ಮಗಳನ್ನು ಸ್ಥಾಪಿಸುವುದಕ್ಕೋಸ್ಕರ ನಾಲ್ಕನೆಯ ದತ್ತಾತ್ರೇಯಾವತಾರವನ್ನು ಮಾಡಿ ಧರ್ಮಸ್ಥಾಪನೆಮಾಡಿದನು.

೮೯. ತರುವಾಯ ಶ್ರೀಭಗವಂತನು ಹದಿನೈದನೆಯ ತ್ರೇತಾಯುಗದಲ್ಲಿ ಸತ್ಯಧರ್ಮಗಳನ್ನು ಸ್ಥಾಪಿಸುವುದಕ್ಕಾಗಿ ಮಾಂಧಾತಚಕ್ರವರ್ತಿಯಾಗಿ ಐದನೆಯ ಅವತಾರವನ್ನು ಮಾಡಿದನು.

೯೦. ಹತ್ತೊಂಬತ್ತನೆಯ ತ್ರೇತಾಯುಗದಲ್ಲಿ ಶ್ರೀಹರಿಯು ವಿಶ್ವಾಮಿತ್ರಾದಿ ಮುನಿಗಳಿಂದ ಸಹಿತನಾಗಿ ಆರನೆಯವನೂ, ಜಮದಗ್ನಿಯ ಕುಮಾರನೂ ಆದ ಪರಶುರಾಮಾವತಾರವನ್ನು ಮಾಡಿ ಸಮಸ್ತರಾದ ಕ್ಷತ್ರಿಯರನ್ನೂ ಇಪ್ಪತ್ತೊಂದುಸಲ ನಿರ್ಮೂಲಮಾಡಿದನು.

**ಚತುರ್ವಿಂಶೇ ಯುಗೇ ರಾಮೋ ವಸಿಷ್ಠೇನ ಪುರೋಧಸಾ ।**
**ಸಪ್ತಮೋ ರಾವಣಸ್ಯಾರ್ಥೇ ಯಜ್ಞೇ ದಶರಥಾತ್ಮಜಃ ॥ ೯೧ ॥**

**ಅಷ್ಟಮೋ ದ್ವಾಪರೇ ವಿಷ್ಣುರಷ್ಟಾವಿಂಶೇ ಪರಾಶರಾತ್ ।**
**ವೇದವ್ಯಾಸಸ್ತತೋ ಜಜ್ಞೇ ಜಾತೂಕರ್ಣಪುರಃಸರಃ ॥ ೯೨ ॥**

**ತಥೈವ ನವಮೋ ವಿಷ್ಣುರದಿತ್ಯಾಃ ಕಶ್ಯಪಾತ್ಮಜಃ ।**
**ದೇವಕ್ಯಾಂ ವಸುದೇವಾತ್ತು ಬ್ರಹ್ಮಗಾರ್ಗ್ಯಪುರಃ ಸರಃ ॥ ೯೩ ॥**

**ಅಪ್ರಮೇಯೋ ನಿಯೋಜ್ಯಶ್ಚ ಯತ್ರ ಕಾಮಚರೋ ವಶೀ ।**
**ಕ್ರೀಡತೇ ಭಗವಾನ್ ಲೋಕೇ ಬಾಲಃ ಕ್ರೀಡನಕೈರಿವ ॥ ೯೪ ॥**

**ನ ಪ್ರಮಾತುಂ ಮಹಾಬಾಹುಃ ಶಕ್ಯೋಽಸೌ ಮಧುಸೂದನಃ ।**
**ಪರಂ ಪರಮಮೇತಸ್ಮಾದ್ವಿಶ್ವರೂಪಾನ್ನ ವಿದ್ಯತೇ ॥ ೯೫ ॥**

---

೯೧. ಇಪ್ಪತ್ತನೆಯ ತ್ರೇತಾಯುಗದಲ್ಲಿ ಶ್ರೀಹರಿಯು ಪುರೋಹಿತರಾದ ವಸಿಷ್ಠರಿಂದ ಸಹಿತನೂ, ದಶರಥಕುಮಾರನೂ ಆದ ಏಳನೆಯ ರಾಮಾವತಾರವನ್ನು ಮಾಡಲು ರಾವಣಸಂಹಾರಕ್ಕಾಗಿ ದಶರಥನ ಯಾಗಶಾಲೆಯಲ್ಲಿ ಅವತರಿಸಿದನು.

೯೨. ಇದರಂತೆಯೇ ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ಮಹಾವಿಷ್ಣುವು ಜಾತೂಕರ್ಣಾದಿ ಮುನಿಗಳೊಡನೆ ಪರಾಶರರ ಪತ್ನಿಯಾದ ಸತ್ಯವತೀದೇವಿಯಲ್ಲಿ ವ್ಯಾಸಾವತಾರಮಾಡಿ ವೇದಗಳನ್ನು ಉದ್ಧರಿಸಿದನು

೯೩. ಪೂರ್ವದಲ್ಲಿ ಅದಿತಿ ಕಶ್ಯಪರಿಂದ ಪುತ್ರತ್ವೇನ ಅವತರಿಸಬೇಕೆಂದು ಪ್ರಾರ್ಥಿತನಾದ ಶ್ರೀಹರಿಯು ಅವರು ದೇವಕೀವಸುದೇವರಾಗಿ ಜನಿಸಲು ಗರ್ಗಾಚಾರ್ಯರೊಡನೆ ಧರ್ಮರಕ್ಷಣೆಗಾಗಿ ಅವರಲ್ಲಿ ಕೃಷ್ಣನಾಗಿ ಅವತರಿಸಿದನು.

೯೪. ಶ್ರೀಕೃಷ್ಣಾವತಾರದಲ್ಲಿ ಅಪ್ರಮೇಯನಾದ ಶ್ರೀಭಗವಂತನು ಸ್ವತಂತ್ರನೂ, ಸ್ವೇಚ್ಛಾಚಾರಿಯೂ ಆಗಿ ಬಾಲಕರಂತೆ ವಿವಿಧಕ್ರೀಡೆಗಳಿಂದ ಭಕ್ತಾದಿಗಳನ್ನು ಮೋಹಗೊಳಿಸಿದನು.

೯೫. ಮಹಾಬಾಹುವೂ, ಮಧುನಾಶಕನೂ, ಅಪ್ರಮೇಯನೂ ಆದ ಈ ಪರಮಾತ್ಮನ ಮಹಿಮೆಯನ್ನು ಇಷ್ಟೆಂದು ತಿಳಿಯಲು ಯಾರಿಗೂ ಸಾಧ್ಯವಿಲ್ಲ. ಆ ಪರಮಾತ್ಮನ ರೂಪವು ವಿಶ್ವರೂಪಕ್ಕಿಂತಲೂ ಬೇರೆಯಲ್ಲವೆಂದು ತಿಳಿಯಬೇಕು.

ಅಷ್ಟಾವಿಂಶತಿಮೇ ತದ್ವದ್ವಾಪರಸ್ಯಾಂಶಸಂಕ್ಷಯೇ ।
ನಷ್ಟೇ ಧರ್ಮೇ ತದಾ ಜಜ್ಞೇ ವಿಷ್ಣುರ್ವೃಷ್ಣಿಕುಲೇ ಪ್ರಭುಃ ॥ ೯೬ ॥

ಕರ್ತುಂ ಧರ್ಮವ್ಯವಸ್ಥಾನಮಸುರಾಣಾಂ ಪ್ರಣಾಶನಂ ।
ಮೋಹಯನ್ ಸರ್ವಭೂತಾನಿ ಯೋಗಾತ್ಮಾ ಯೋಗಮಾಯಯಾ ॥ ೯೭ ॥

ಪ್ರವಿಷ್ಟೋ ಮಾನುಷೀಂ ಯೋನಿಂ ಪ್ರಚ್ಛನ್ನಶ್ಚರತೇ ಮಹೀಂ ।
ವಿಹಾರಾರ್ಥಂ ಮನುಷ್ಯೇಷು ಸಾಂದೀಪನಿಪುರಃಸರಂ ॥ ೯೮ ॥

ಯತ್ರ ಕಂಸಂ ಚ ಶಾಲ್ವಂ ಚ ದ್ವಿವಿದಂ ಚ ಮಹಾಸುರಂ ।
ಅರಿಷ್ಟಂ ವೃಷಭಂ ಚೈವ ಪೂತನಾಂ ಕೇಶಿನಂ ಹಯಂ ॥ ೯೯ ॥

ನಾಗಂ ಕುವಲಯಾಪೀಡಂ ಮಲ್ಲರಾಜಗೃಹಾಧಿಪಂ ।
ದೈತ್ಯಾನ್ ಮಾನುಷದೇಹಸ್ಥಾನ್ ಸೂದಯಾಮಾಸ ವೀರ್ಯವಾನ್ ॥ ೧೦೦ ॥

---

೯೬. ಹಾಗೆಯೇ ಇಪ್ಪತ್ತೆಂಟನೆಯ ದ್ವಾಪರಯುಗದ ಕೊನೆಯಲ್ಲಿ ಮಹಾ ಪ್ರಭುವಾದ ಶ್ರೀಹರಿಯು ನಷ್ಟವಾದ ಧರ್ಮಗಳನ್ನು ಸ್ಥಾಪಿಸುವುದಕ್ಕಾಗಿ ವೃಷ್ಣಿ ವಂಶದಲ್ಲಿ ಅವತರಿಸಿದನು.

೯೭. ಯೋಗರೂಪಿಯಾದ ಶ್ರೀಪರಮಾತ್ಮನು ಧರ್ಮವ್ಯವಸ್ಥೆಯನ್ನೂ ರಾಕ್ಷಸರ ಸಂಹಾರವನ್ನೂ ಮಾಡುವುದಕ್ಕಾಗಿ ತನ್ನ ಯೋಗಮಹಿಮೆಗಳಿಂದ ಸಕಲ ಭೂತಗಳನ್ನೂ ಮೋಹಗೊಳಿಸಿದನು.

೯೮. ಹೀಗೆ ಭಗವಂತನು ಮನುಷ್ಯರೂಪನಾಗಿ ಅವತರಿಸಿ ಪ್ರಚ್ಛನ್ನವಾಗಿ ಭೂಮಿಯಲ್ಲಿ ಸಂಚರಿಸುತ್ತಾ ಸಾಂದೀಪನ್ಯಾಚಾರ್ಯರೊಡನೆ ವಿನೋದದಿಂದ ಕಾಲವನ್ನು ಕಳೆದನು.

೯೯–೧೦೦. ಹೀಗೆ ಶ್ರೀಮನ್ನಾರಾಯಣನು ಕೃಷ್ಣಾವತಾರವನ್ನು ಮಾಡಿ ಶೂರರಾದ ಕಂಸ, ಶಾಲ್ವ, ದ್ವಿವಿದ, ಅರಿಷ್ಟ, ವೃಷಭ, ಪೂತನೆ, ಕೇಶಿ, ಹಯ, ಕಾಲಿಯಸರ್ಪ, ಕುವಲಯಾಪೀಡ, ಮಲ್ಲರಾಜ ಇವರೇ ಮೊದಲಾದ ಮಾನುಷ್ಯ ಶರೀರವನ್ನು ಹೊಂದಿದ ದೈತ್ಯರನ್ನು ಸಂಹರಿಸಿ ಧರ್ಮವನ್ನು ಸ್ಥಾಪಿಸಿನು.

**ಚ್ಛಿನ್ನಂ ಬಾಹುಸಹಸ್ರಂ ಚ ಬಾಣಸ್ಯಾದ್ಭುತಕರ್ಮಣಃ ।**
**ನರಕಶ್ಚ ಹತಃ ಸಂಖ್ಯೇ ಯವನಶ್ಚ ಮಹಾಬಲಃ ॥ ೧೦೧ ॥**

**ಹೃತಾನಿ ಚ ಮಹೀಪಾನಾಂ ಸರ್ವರತ್ನಾನಿ ತೇಜಸಾ ।**
**ದುರಾಚಾರಾಶ್ಚ ನಿಹತಾಃ ಪಾರ್ಥಿವಾ ಯೇ ರಸಾತಲೇ ॥ ೧೦೨ ॥**

**ಏತೇ ಲೋಕಹಿತಾರ್ಥಾಯ ಪ್ರಾದುರ್ಭಾವಾ ಮಹಾತ್ಮನಃ ।**
**ಅಸ್ಮಿನ್ನೇವ ಯುಗೇ ಕ್ಷೀಣೇ ಸಂಧ್ಯಾಶ್ಲಿಷ್ಟೇ ಭವಿಷ್ಯತಿ ॥ ೧೦೩ ॥**

**ಕಲ್ಕಿರ್ವಿಷ್ಣುರ್ಯಶಾ ನಾಮ ಪಾರಾಶರ್ಯಃ ಪ್ರತಾಪವಾನ್ ।**
**ದಶಮೋ ಭಾವ್ಯಸಂಭೂತೋ ಯಾಜ್ಞವಲ್ಕ್ಯಪುರಃಸರಃ ॥ ೧೦೪ ॥**

---

೧೦೧. ವಸುದೇವಕುಮಾರನಾದ ಶ್ರೀಕೃಷ್ಣನು ಅದ್ಭುತವಾದ ಕಾರ್ಯವುಳ್ಳ ಬಾಣಾಸುರನ ಸಹಸ್ರಬಾಹುಗಳನ್ನು ಛೇದಿಸಿದನು. ಮತ್ತು ಮಹಾಬಲಿಷ್ಠನಾದ ನರಕಾಸುರನನ್ನೂ, ಯವನನನ್ನೂ ಸಂಹರಿಸಿದನು.

೧೦೨. ಶ್ರೀಕೃಷ್ಣನು ಸಮಸ್ತರಾದ ದುಷ್ಟಕ್ಷತ್ರಿಯರಲ್ಲಿರುವ ಸಮಸ್ತ ರತ್ನಗಳನ್ನೂ ಅಪಹರಿಸಿದನು. ಮತ್ತು ಈ ಭೂಮಂಡಲದಲ್ಲಿರುವ ಲೋಕಕಂಟಕರಾದ ಸಮಸ್ತ ರಾಜರನ್ನೂ ಧ್ವಂಸಮಾಡಿ ಧರ್ಮಗಳನ್ನು ಸ್ಥಾಪಿಸಿದನು.

೧೦೩. ಮಹಾತ್ಮನಾದ ಪರಮಾತ್ಮನ ಈ ಅವತಾರಗಳೆಲ್ಲವೂ ಲೋಕಕಲ್ಯಾಣಕ್ಕಾಗಿ ಆದುವು. ಹೀಗೆ ಧರ್ಮಸ್ಥಾಪನೆಯಾಗಿ ಆ ಯುಗವು ಕಳೆಯಲು ಸಂಧಿಕಾಲವು ಪ್ರಾಪ್ತವಾಗುವುದು.

೧೦೪. ಅನಂತರ ಶ್ರೀಹರಿಯು ಯಾಜ್ಞವಲ್ಕ್ಯರ ಸಂಗಡ ಪರಾಶರರ ಪುತ್ರನೂ ಪ್ರತಾಪಶಾಲಿಯೂ, ವಿಷ್ಣುಯಶಾನಾಮಕನೂ. ಹತ್ತನೆಯವನೂ ಆದ ಕಲ್ಕಿಯ ಅವತಾರವನ್ನು ಮಾಡಿ ದುಷ್ಟನಿಗ್ರಹ, ಶಿಷ್ಟಪರಿಪಾಲನೆಯನ್ನು ಮಾಡುವನು.

ಅನುಕರ್ಷನ್ ಸರ್ವಸೇನಾಂ ಹಸ್ತ್ಯಶ್ವರಥಸಂಕುಲಾಂ ।
ಪ್ರಗೃಹೀತಾಯುಧೈರ್ವಿಪ್ರೈರ್ವೃತಃ ಶತಸಹಸ್ರಶಃ ॥ ೧೦೫ ॥

ನಾತ್ಯರ್ಥಂ ಧಾರ್ಮಿಕಾ ಯೇ ಚ ಯೇ ಚ ಧರ್ಮದ್ವಿಷಃ ಕ್ವಚಿತ್ ।
ಉದೀಚ್ಯಾನ್ಮಧ್ಯದೇಶಾಂಶ್ಚ ತಥಾ ವಿಂಧ್ಯಾಪರಾಂತಿಕಾನ್ ॥ ೧೦೬ ॥

ತಥೈವ ದಾಕ್ಷಿಣಾತ್ಯಾಂಶ್ಚ ದ್ರವಿಡಾನ್ ಸಿಂಹಲೈಃ ಸಹ ।
ಗಾಂಧಾರಾನ್ ಪಾರದಾಂಶ್ಚೈವ ಪಹ್ಲವಾನ್ ಯವನಾಂಛ್ಛಕಾನ್ ॥ ೧೦೭ ॥

ತುಷಾರಾನ್ ಬರ್ಬರಾಂಶ್ಚೈವ ಪುಲಿಂದಾನ್ ದರದಾನ್ ಖಸಾನ್ ।
ಲಂಪಾಕಾನಂಧಕಾನ್ ರುದ್ರಾನ್ ಕಿರಾತಾಂಶ್ಚೈವ ಸ ಪ್ರಭುಃ ॥ ೧೦೮ ॥

ಪ್ರವೃತ್ತಚಕ್ರೋ ಬಲವಾನ್ ಮ್ಲೇಚ್ಛಾನಾಮಂತಕೃದ್ಬಲೀ ।
ಅದೃಶ್ಯಃ ಸರ್ವಭೂತಾನಾಂ ಪೃಥಿವೀಂ ವಿಚರಿಷ್ಯತಿ ॥ ೧೦೯ ॥

---

೧೦೫. ಹೀಗೆ ಶ್ರೀಹರಿಯು ಕಲ್ಕಿಯ ಅವತಾರವನ್ನು ಮಾಡಿ ಗಜಗಳು, ಅಶ್ವಗಳು, ರಥಗಳು ಇವುಗಳಿಂದ ವ್ಯಾಪ್ತವೂ, ಆಯುಧಪಾಣಿಗಳೂ, (ಸಹಸ್ರಾರು ಸಂಖ್ಯಾಕರೂ) ಲಕ್ಷಸಂಖ್ಯಾಕರೂ ಆದ ಬ್ರಾಹ್ಮಣರಿಂದ ಸಹಿತವೂ ಆದ ಸೇನೆಯನ್ನು ಸ್ವೀಕರಿಸಿ ದುಷ್ಟನಿಗ್ರಹಕ್ಕಾಗಿ ಹೊರಡುವನು.

೧೦೬–೧೦೯. ಸಮುಸ್ತವಾದ ಸೈನ್ಯದಿಂದ ಸಹಿತನಾದ ಆ ಕಲ್ಕಿಯು, ಯಾರು ಅತ್ಯಂತ ಅಧಾರ್ಮಿಕರೂ, ಧರ್ಮದ್ವೇಷಿಗಳೂ ಆಗಿರುವರೋ ಅಂತಹ ಉದೀಚ್ಯರೂ, ಮಧ್ಯದೇಶದವರೂ, ವಿಂಧ್ಯನಿವಾಸಿಗಳೂ, ದಾಕ್ಷಿಣಾತ್ಯರೂ, ದ್ರಾವಿಡರೂ, ಸಿಂಹಳರೂ, ಗಾಂಧಾರರೂ, ಪಾರದರೂ, ಪಲ್ಲವರೂ, ಯವನರೂ, ಶಕರೂ, ತುಷಾರರೂ, ಬರ್ಬರೂ, ಪುಲಿಂದರೂ. ದಾರದರೂ, ಖಸರೂ, ಲಂಪಾಕರೂ, ಅಂಧಕರೂ, ರುದ್ರರೂ, ಕಿರಾತರೂ ಇವರೇ ಮೊದಲಾದವರನ್ನು ಶಿಕ್ಷಿಸುತ್ತಲೂ, ಚಕ್ರಪಾಣಿಯೂ, ಬಲಿಷ್ಠನೂ ಆಗಿ ಮ್ಲೇಚ್ಛಾದಿಗಳನ್ನು ಸಂಹರಿಸುತ್ತ ಸರ್ವಪ್ರಾಣಿಯುಗಳಿಗೂ ತಿಳಿಯದಹಾಗೆ ಭೂಮಂಡಲದಲ್ಲಿ ಸಂಚರಿಸುವನು.

ಮಾನವಃ ಸ ತು ಸಂಜಜ್ಞೇ ದೇವಸ್ಯಾಂಶೇನ ಧೀಮತಃ ।
ಪೂರ್ವಜನ್ಮನಿ ವಿಷ್ಣುರ್ಯಃ ಪ್ರಮಿತಿರ್ನಾಮ ವೀರ್ಯವಾನ್ ॥ ೧೧೦ ॥

ಗೋತ್ರೇಣ ವೈ ಚಂದ್ರಮಸಃ ಪೂರ್ಣೇ ಕಲಿಯುಗೇಽಭವತ್ ।
ಇತ್ಯೇತಾಸ್ತಸ್ಯ ದೇವಸ್ಯ ದಶ ಸಂಭೂತಯಃ ಸ್ಮೃತಾಃ ॥ ೧೧೧ ॥

ತಂ ತಂ ಕಾಲಂ ಚ ಕಾರ್ಯಂ ಚ ತತ್ತದುದ್ದಿಶ್ಯ ಕಾರಣಂ ।
ಅಂಶೇನ ತ್ರಿಷು ಲೋಕೇಷು ತಾಸ್ತಾಯೋನೀಃ ಪ್ರಪತ್ಸ್ಯತೇ ॥ ೧೧೨ ॥

ಪಂಚವಿಂಶೋತ್ಥಿತೇ ಕಲ್ಪೇ ಪಂಚವಿಂಶತಿ ವೈ ಸಮಾಃ ।
ವಿನಿಘ್ನನ್ ಸರ್ವಭೂತಾನಿ ಮಾನುಷಾನೇವ ಸರ್ವಶಃ ॥ ೧೧೩ ॥

ಕೃತ್ವಾ ಬೀಜಾವಶೇಷಾಂ ತು ಮಹೀಂ ಕ್ರೂರೇಣ ಕರ್ಮಣಾ ।
ಸಂಶಾತಯಿತ್ವಾ ವೃಷಲಾನ್ ಪ್ರಾಯಶಸ್ತಾನಧಾರ್ಮಿಕಾನ್ ॥ ೧೧೪ ॥

---

೧೧೦–೧೧೧. ಜ್ಞಾನಿಯಾದ ಆ ಭಗವಂತನು ದೇವಾಂಶದಿಂದ ಸಂಭೂತನಾಗಿ ಮನುಷ್ಯರೂಪದಿಂದ ಭೂಮಿಯಲ್ಲಿ ಸಂಚರಿಸುವನು. ಆ ಶ್ರೀಮಹಾವಿಷ್ಣುವೇ ಪೂರ್ವ ಜನ್ಮದಲ್ಲಿ ಶಕ್ತಿವಂತನೂ, ಚಂದ್ರವಂಶಸಂಭೂತನೂ ಆದ ಪ್ರಮಿತಿನಾಮಕ ವಿಪ್ರನಾಗಿ ಜನಿಸಿದನು. ಅವನು ಹುಟ್ಟಿದ ವಂಶವು ಚಂದ್ರವಂಶವಾಗಿತ್ತು. ಹೀಗೆ ಧರ್ಮವು ಸ್ಥಾಪಿತವಾದ ತರುವಾಯ ಕಲಿಯುಗವು ಪೂರ್ಣವಾಗುವುದು. ಹೀಗೆ ನಿರೂಪಿಸಿರುವ ಹತ್ತು ಅವತಾರಗಳೂ ಆ ಭಗವಂತನಿಗೆ ಉಂಟಾದುವು.

೧೧೨. ಹೀಗೆ ಶ್ರೀಮನ್ನಾರಾಯಣನು ಧರ್ಮಸ್ಥಾಪನೆಗಾಗಿ ಕಾರಣಾನುಗುಣವಾಗಿಯೂ, ಉದ್ದೇಶ್ಯಾನುಸಾರವಾಗಿಯೂ ಮೂರು ಲೋಕಗಳಲ್ಲಿಯೂ ತನ್ನ ಅಂಶಗಳಿಂದ ನಾನಾಯೋನಿಗಳಲ್ಲಿ ಅವತರಿಸುವನು.

೧೧೩. ಹೀಗೆ ಶ್ರೀಮನ್ನಾರಾಯಣನು ಇಪ್ಪತ್ತೈದನೆಯ ಕಲ್ಪದಲ್ಲಿ ಇಪ್ಪತ್ತೈದು ವರ್ಷಗಳು ಸಂಪೂರ್ಣವಾಗಿ ಸರ್ವಭೂತಗಳನ್ನೂ ಸಕಲರಾದ ಮನುಜರನ್ನೂ ಸಂಹರಿಸುವನು.

೧೧೪. ಮತ್ತು ಶ್ರೀಹರಿಯು ಕ್ರೂರಕರ್ಮಿಗಳೂ, ಅಧಾರ್ಮಿಕರೂ, ದುಷ್ಟರೂ ಆದ ಶೂದ್ರರನ್ನು ನಾಶಾವಶೇಷವನ್ನಾಗಿಮಾಡಿ ಭೂಮಿಯನ್ನು ಬೀಜಾವಶೇಷವನ್ನಾಗಿಮಾಡಿ ಕೃತಕೃತ್ಯನಾಗುವನು.

ತತಃ ಸ ವೈ ತದಾ ಕಲ್ಕಿಶ್ಚರಿತಾರ್ಥಃ ಸಸೈನಿಕಃ ।
ಕರ್ಮಣಾ ನಿಹತಾ ಯೇ ತು ಸಿದ್ಧಾಸ್ತೇ ತು ಪುನಃ ಸ್ವಯಂ ॥ ೧೧೫ ॥

ಅಕಸ್ಮಾತ್ ಕುಪಿತಾನ್ಯೋನ್ಯಂ ಭವಿಷ್ಯಂತಿ ಚ ಮೋಹಿತಾಃ ।
ಕ್ಷಪಯಿತ್ವಾ ತು ತಾನ್ ಸರ್ವಾನ್ ಭಾವಿನಾರ್ಥೇನ ಚೋದಿತಾನ್ ॥ ೧೧೬ ॥

ಗಂಗಾಯಮುನಯೋರ್ಮಧ್ಯೇ ನಿಷ್ಠಾಂ ಪ್ರಾಪ್ಸ್ಯತಿ ಸಾನುಗಃ ।
ತತೋ ವ್ಯತೀತೇ ಕಲ್ಕೌ ತು ಸಾಮಾತ್ಯೈಃ ಸಹ ಸೈನಿಕೈಃ ॥ ೧೧೭ ॥

ನೃಪೇಷ್ವಥ ವಿನಷ್ಟೇಷು ತದಾ ತ್ವಪ್ರಗ್ರಹಾಃ ಪ್ರಜಾಃ ।
ರಕ್ಷಣೇ ವಿನಿವೃತ್ತೇ ತು ಹತ್ವಾ ಚಾನ್ಯೋನ್ಯಮಾಹವೇ ॥ ೧೧೮ ॥

ಪರಸ್ಪರಹೃತಾಶ್ವಾಸಾ ನಿರಾಕ್ರಂದಾಃ ಸುದುಃಖಿತಾಃ ।
ಪುರಾಣಿ ಹತ್ವಾ ಗ್ರಾಮಾಂಶ್ಚ ತುಲ್ಯಾಸ್ತಾ ನಿಷ್ಪರಿಗ್ರಹಾಃ ॥ ೧೧೯ ॥

---

೧೧೫. ಅನಂತರ ಕಲ್ಕಿಯ ರೂಪಿಯಾದ ಶ್ರೀಹರಿಯು ಸೈನಿಕರಿಂದ ಸಹಿತನಾಗಿ ಕೃತಾರ್ಥನಾದನು. ಯಾವನು ಸ್ವಕರ್ಮಗಳಿಂದ ಹತರಾದರೋ ಅವರು ಪುನಃ ಭೂಮಿಯಲ್ಲಿ ಜನಿಸಲು ಸಿದ್ಧರಾಗುವರು

೧೧೬–೧೧೭. ಅನಂತರ ಮುಂದಿನ ಕಾರ್ಯಾನುಗುಣವಾಗಿ ಅವರು ನಿಷ್ಕಾರಣವಾಗಿ ಪರಸ್ಪರಕುಪಿತರಾಗಿ ಹೊಡೆದಾಡಿದರು. ತರುವಾಯ ಕಲ್ಕಿಯು ಸೈನಿಕರೊಡನೆ ಗಂಗಾಯಮುನೆಗಳ ಮಧ್ಯಭಾಗದಲ್ಲಿ ಸ್ಥಿರವಾಗಿ ನಿಂತರು. ತರುವಾಯ ಸಾಮಾನ್ಯಸೈನಿಕರಿಂದ ಸಹಿತನಾದ ಕಲ್ಕಿಯವತಾರದ ಕಾಲವು ಮುಗಿಯುವುದು.

೧೧೮. ತರುವಾಯ ರಾಜರೆಲ್ಲರೂ ನಷ್ಟವಾಗಲು ಪ್ರಜೆಗಳು ಅರಾಜಕರಾಗುವರು. ದೇಶವು ಅರಾಜಕವಾಗಿ ಪ್ರಜೆಗಳಿಗೆ ಆಶ್ರಯವಿಲ್ಲದೆ ಅನ್ಯೋನ್ಯವಾಗಿ ಕಲಹದಿಂದ, ಯುದ್ಧದಿಂದ ಮೃತರಾಗುವರು.

೧೧೯. ಹೀಗೆ ದೇಶವು ಅರಾಜಕವಾಗಿ ಪ್ರಜೆಗಳು ಪರಸ್ಪರ ದ್ರವ್ಯಗಳನ್ನು ಅಪಹರಿಸುವುದರಿಂದ ದುಃಖದಿಂದ ಅಳುತ್ತಾ ದೇಶಗ್ರಾಮಗಳನ್ನೂ, ನಗರಗಳನ್ನೂ ತ್ಯಜಿಸಿ ಆಶ್ರಯವಿಲ್ಲದೆ ಪರಿದಾಡುವರು.

ಪ್ರನಷ್ಟಶ್ರುತಿಧರ್ಮಾಶ್ಚ ನಷ್ಟಧರ್ಮಾಶ್ರಮಾಸ್ತಥಾ ।
ಹ್ರಸ್ವಾ ಅಲ್ಪಾಯುಷಶ್ಚೈವ ವನೌಕಸ ಇಮೇ ಸ್ಮೃತಾಃ ॥ ೧೨೦ ॥

ಸರಿತ್ಪರ್ವತಸೇವಿನ್ಯಃ ಪತ್ರಮೂಲಫಲಾಶನಾಃ ।
ಚೀರಪತ್ರಾಜಿನಧರಾಃ ಸಂಕರಂ ಘೋರಮಾಸ್ಥಿತಾಃ ॥ ೧೨೧ ॥

ಅಲ್ಪಾಯುಷೋ ನಷ್ಟವಾರ್ತಾ ಬಹ್ವಾಬಾಧಾಃ ಸುದುಃಖಿತಾಃ ।
ಏವಂ ಕಷ್ಟಮನುಪ್ರಾಪ್ತಾಃ ಕಲಿಸಂಧ್ಯಂಶಕೇ ತದಾ ॥ ೧೨೨ ॥

ಪ್ರಜಾಃ ಕ್ಷಯಂ ಪ್ರಯಾಸ್ಯಂತಿ ಸಾರ್ದ್ಧಂ ಕಲಿಯುಗೇನ ತು ।
ಕ್ಷೀಣೇ ಕಲಿಯುಗೇ ತಸ್ಮಿನ್ ಪ್ರವೃತ್ತೇ ಚ ಕೃತೇ ಪುನಃ ॥ ೧೨೩ ॥

ಪ್ರಪತ್ಸ್ಯಂತೇ ಯಥಾನ್ಯಾಯಂ ಸ್ವಾಭಾವಾದೇವ ನಾನ್ಯಥ ।
ಇತ್ಯೇತತ್ ಕೀರ್ತಿತಂ ಸರ್ವಂ ದೇವಾಸುರವಿಚೇಷ್ಟಿತಂ ॥ ೧೨೪ ॥

---

೧೨೦. ಹೀಗೆ ವೇದಗಳು, ಸ್ಮೃತಿಗಳು, ಧರ್ಮಾಶ್ರಮಗಳು ನಷ್ಟವಾಗಲು ವಾಮನರೂ, ಅಲ್ಪಾಯುಷ್ಯವಂತರೂ ಆದ ಪ್ರಜೆಗಳು ವನವಾಸಿಗಳಂತೆ ಅರಣ್ಯಗಳಲ್ಲಿ ಅಲೆದಾಡುವರು.

೧೨೧–೧೨೨. ಹೀಗೆ ಜನಗಳು ಕಲಿಯುಗದ ಅಂದರೆ ಸಂಧಿಕಾಲದಲ್ಲಿ, ಕೊನೆಯಕಾಲದಲ್ಲಿ, ಮನೆಮಠಗಳಲ್ಲಿ ಆಶ್ರಯವಿಲ್ಲದೆ ನದಿಗಳು, ಪರ್ವತಗಳು, ಅರಣ್ಯಗಳು ಇವುಗಳನ್ನು ಹೊಂದಿ ಎಲೆ, ಗೆಡ್ಡೆ, ಗೆಣಸು, ಹಣ್ಣು, ಹಂಪಲುಗಳನ್ನು ಭಕ್ಷಿಸುತ್ತಾ ಚಿಂದಿ ಎಲೆ, ಅಜಿನ ಇವುಗಳನ್ನು ಧರಿಸಿಕೊಂಡು ಅಲ್ಪಾಯುಷ್ಕರೂ ನಷ್ಟವೃತ್ತಿಗಳೂ, ಬಹುಪೀಡಿತರೂ, ಮಹಾದುಃಖಿಗಳೂ ಆಗಿ ಅತ್ಯಂತ ಖಿನ್ನರಾಗುವರು.

೧೨೩. ಹೀಗೆ ಕಲಿಯುಗದ ಜೊತೆಯಲ್ಲಿ ಕಲಿಕಾಲದ ಪುರುಷರೂ ಸಹ ಕ್ಷಯವನ್ನು ಹೊಂದುವರು. ಇಂತಹ ಕಲಿಯುಗವು ಕ್ಷಯಿಸಲಾಗಿ ಕೃತಯುಗವು ಪುನಃ ಪ್ರಾರಂಭವಾಗುವುದು.

೧೨೪. ಹೀಗೆ ಪ್ರಜೆಗಳೆಲ್ಲರೂ ಸ್ವಾಭಾವಿಕವಾಗಿ ಪೂರ್ವದ ಹಾಗೆ ಬದಲಾವಣೆ ಇಲ್ಲದೆ ಪುನಃ ಜನಿಸುವರು. ಎಲೈ ವಿಪ್ರೋತ್ತಮರೇ. ಈ ರೀತಿಯಲ್ಲಿ ನಿಮಗಾಗಿ ದೇವಾಸುರರ ವೃತ್ತಾಂತವೆಲ್ಲವನ್ನೂ ನಿರೂಪಿಸಿರುವೆನು.

**ಯದುವಂಶಪ್ರಸಂಗೇನ ಮಹದ್ದೋ ವೈಷ್ಣವಂ ಯಶಃ ।**
**ತುರ್ವಸೋಸ್ತು ಪ್ರವಕ್ಷ್ಯಾಮಿ ಪೂರೋರ್ದ್ರುಹ್ಯೋರನೋಸ್ತಥಾ ॥ ೧೨೫ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ವಿಷ್ಣುಮಾಹಾತ್ಮ್ಯಕಥನಂ " ನಾಮ ಷಟ್ತ್ರಿಂಶೋಽಧ್ಯಾಯಃ**

---

೧೨೫. ಯದುಮಹಾರಾಜನ ವಂಶವನ್ನು ವರ್ಣಿಸುವ ಸಂದರ್ಭದಲ್ಲಿ ಶ್ರೀಮಹಾವಿಷ್ಣುವಿನ ಮಹತ್ತಾದ ಕೀರ್ತಿಯನ್ನು ವರ್ಣಿಸಿರುವೆನು. ಈಗ ತುರ್ವಸು, ಪೂರು, ದ್ರುಹ್ಯ, ಅನು, ಊರು, (ಇವರ) ಈ ಮಹಾರಾಜರ ವಂಶವನ್ನು ವಿಸ್ತಾರವಾಗಿ ವರ್ಣಿಸುವೆನು ಕೇಳಿರೆಂದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ವಿಷ್ಣುಮಾಹಾತ್ಮ್ಯವೆಂಬ " ಮೂವತ್ತಾರನೆಯ ಅಧ್ಯಾಯವು ಮುಗಿದುದು.



## ಮೂವತ್ತಾರನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ವಿಷ್ಣುವಿನ ಮಹಿಮೆಯು ವಿಶೇಷವಾಗಿ ವರ್ಣಿತವಗಿದೆ. ಪೂರ್ವಾಧ್ಯಾಯದಲ್ಲಿ ಶುಕ್ರನು ಈಶ್ವರನನ್ನು ಕುರಿತು ತಪಸ್ಸನ್ನು ಮಾಡಿದನೆಂದು ಉಕ್ತವಾಗಿದೆ. ಅವನ ತಪಸ್ಸಿನಿಂದ ಪ್ರೀತನಾದ ಈಶ್ವರನು ಪ್ರತ್ಯಕ್ಷನಾಗಿ ವರಗಳನ್ನು ಕೊಟ್ಟು ಮಾಯವಾದನು. ತರುವಾಯ ಶುಕ್ರನು ತನ್ನನ್ನು ಸೇವಿಸುತ್ತಿದ್ದ ನಾರೀಮಣಿಯನ್ನು ಜಯಂತಿಯೆಂದು ತಿಳಿದು ಪ್ರೀತನಾಗಿ ಆಕೆಯೊಡನೆ ಬಹುಕಾಲ ಸುಖವಾಗಿದ್ದನು. ಇಷ್ಟರಲ್ಲಿ ಬೃಹಸ್ಪತಿಗಳು ಶುಕ್ರಾಚಾರ್ಯನ ವೇಷದಿಂದ ಅಸುರರನ್ನು ವಂಚಿಸಿದರು. ಆಗ ಶುಕ್ರನು ಬಂದು ಎಷ್ಟು ಹೇಳಿದರೂ ಕೇಳದೇ ಇದ್ದುದರಿಂದ ಅವರಿಗೆ ಶಾಪವನ್ನು ಕೊಟ್ಟು ಹೊರಟನು. ಆಗ ಬೃಹಸ್ಪತಿಯು ಕೃತಾರ್ಥನಾಗಿ ಹೊರಡಲು ದೇವತೆಗಳು ಅಸುರರನ್ನು ಪಾತಾಳಲೋಕಕ್ಕೆ ಅಟ್ಟಿದರು.

ತರುವಾಯ ದೇವತೆಗಳ ಕಾಲವೂ ಕಳೆಯಲು ಅಸುರರ ಪರ್ಯಾಯಕಾಲವು ಒದಗಿ ಧರ್ಮಗಳು ನಷ್ಟವಾದುವು. ಆ ಶ್ರೀಹರಿಯು ಭೃಗುಮುನಿಯ ಶಾಪದಿಂದ ಮತ್ಸ್ಯಾದಿದಶಾತಾರಗಳನ್ನು ಮಾಡಿ ದುಷ್ಟಶಿಕ್ಷಣೆ. ಶಿಷ್ಟರಪರಿಪಾಲನೆಯನ್ನು ಮಾಡಿದನು. ಹೀಗೆ ಕಲಿಯುಗದ ಕೊನೆಯಲ್ಲಿ ಕಲ್ಕಿಯ ಅವತಾರವಮಾಡಿ ಆಯುಧಪಾಣಿಗಳಾದ ವಿಪ್ರರಸಂಗಡಸೇರಿ ಧರ್ಮದ್ವೇಷಿಗಳೂ, ದುಷ್ಟರೂ ಆದ ಉದೀಚ್ಯರು, ಪಾಶ್ಚಿಮಾತ್ಯರು, ದಾಕ್ಷಿಣಾತ್ಯರು, ಸಿಂಹಳರು ಇವರೇ ಮೊದಲಾದವರನ್ನು ಸಂಹರಿಸಿ ಧರ್ಮವನ್ನು ಸ್ಥಾಪಿಸಿದನು.

ಹೀಗೆ ಕಲಿಯುಗವು ಕಳೆದು ಸಂಧಿಕಾಲವು ಪ್ರಾಪ್ತವಾಗಲು ದೇಶವು ಅರಾಜಕವಾಗಿ ಪ್ರಜೆಗಳು ರಕ್ಷಕರಿಲ್ಲದೆ ಗ್ರಾಮನಗರಾದಿಗಳನ್ನು ಬಿಟ್ಟು ಬೆಟ್ಟಗುಡ್ಡಗಳನ್ನು ಹೊಂದಿ ಅನ್ನಾಹಾರಾದಿಗಳಿಲ್ಲದೆ ಮಹಾದುಃಖಗಳಿಗೆ ಭಾಗಿಯಾಗುವರು. ಆ ಸಂಧಿಕಾಲವು ಕಳೆದುಹೋಗಲು ಪುನಃ ಕೃತಯುಗವು ಸಂಭವಿಸಿ ಧರ್ಮಸ್ಥಾಪನೆಯಾಗುವುದು. ಎಂಬ ವಿಷಯಗಳು ಈ ಅಧ್ಯಾಯದಲ್ಲಿ ಉಕ್ತವಾಗಿವೆ.



